# ಕರಾವಳಿ ಕರ್ನಾಟಕದಲ್ಲಿ ಕೃಷಿ ಸಂಸ್ಕೃತಿಯ ಪಲ್ಲಟ ಮತ್ತು ಅದರ ಸಾಹಿತ್ಯಿಕ ಅಭಿವ್ಯಕ್ತಿ

(ಪಿ ಎಚ್.ಡಿ ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ಮಹಾಪ್ರಬಂಧ)


ಸಂಶೋಧಕರು

**ಜ್ಯೋತಿ**

ಮಾರ್ಗದರ್ಶಕರು

**ಡಾ. ಎ. ಸುಬ್ಬಣ್ಣ ರೈ**

ಪ್ರಾಧ್ಯಾಪಕರು




Kannada University Logo


ದ್ರಾವಿಡ ಸಂಸ್ಕೃತಿ ಅಧ್ಯಯನ ವಿಭಾಗ

ಭಾಷಾ ನಿಕಾಯ

ಕನ್ನಡ ವಿಶ್ವವಿದ್ಯಾಲಯ – ಹಂಪಿ

ವಿದ್ಯಾರಣ್ಯ– ೫೮೩೨೭೬



೨೦೧೮

# ಕರಾವಳಿ ಕರ್ನಾಟಕದಲ್ಲಿ ಕೃಷಿ ಸಂಸ್ಕೃತಿಯ ಪಲ್ಲಟ ಮತ್ತು ಅದರ ಸಾಹಿತ್ಯಿಕ ಅಭಿವ್ಯಕ್ತಿ

(ಪಿ ಎಚ್.ಡಿ ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ಮಹಾಪ್ರಬಂಧ)


ಸಂಶೋಧಕರು
ಜ್ಯೋತಿ

ಮಾರ್ಗದರ್ಶಕರು
ಡಾ. ಎ. ಸುಬ್ಬಣ್ಣ ರೈ
ಪ್ರಾಧ್ಯಾಪಕರು






Kannada University Logo


ದ್ರಾವಿಡ ಸಂಸ್ಕೃತಿ ಅಧ್ಯಯನ ವಿಭಾಗ
ಭಾಷಾ ನಿಕಾಯ
ಕನ್ನಡ ವಿಶ್ವವಿದ್ಯಾಲಯ – ಹಂಪಿ
ವಿದ್ಯಾರಣ್ಯ– ೫೮೩೨೭೬



೨೦೧೮

## ಸಂಶೋಧಕರ ಘೋಷಣಾ ಪತ್ರ

**ಕರಾವಳಿ ಕರ್ನಾಟಕದಲ್ಲಿ ಕೃಷಿ ಸಂಸ್ಕೃತಿಯ ಪಲ್ಲಟ ಮತ್ತು ಅದರ ಸಾಹಿತ್ಯಿಕ ಅಭಿವ್ಯಕ್ತಿ** ಎಂಬ ಮಹಾಪ್ರಬಂಧವನ್ನು ಕನ್ನಡ ವಿಶ್ವವಿದ್ಯಾಲಯಕ್ಕೆ ಪಿಎಚ್.ಡಿ ಪದವಿಗಾಗಿ **ಡಾ.ಎ.ಸುಬ್ಬಣ್ಣರೈ** ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ ದ್ರಾವಿಡ ಸಂಸ್ಕೃತಿ ಅಧ್ಯಯನ ವಿಭಾಗಕ್ಕೆ ಸಲ್ಲಿಸುತ್ತಿದ್ದೇನೆ. ಪ್ರಸ್ತುತ ಮಹಾಪ್ರಬಂಧವು ನನ್ನ ಸ್ವಂತ ಪರಿಶ್ರಮದ ಫಲವಾಗಿದ್ದು ಈ ಮೊದಲು ಇದನ್ನು ಇನ್ನಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲ ಎಂದು ಪ್ರಮಾಣೀಕರಿಸುತ್ತೇನೆ.

**ದಿನಾಂಕ :** ೨೦/೯/೨೦೧೮
**ಸ್ಥಳ: ವಿದ್ಯಾರಣ್ಯ**

**ಶ್ರೀಮತಿ ಜ್ಯೋತಿ**
**ಸಂಶೋಧಕರು**
**ದ್ರಾವಿಡ ಸಂಸ್ಕೃತಿ ಅಧ್ಯಯನ ವಿಭಾಗ**
**ಕನ್ನಡ ವಿಶ್ವವಿದ್ಯಾಲಯ ಹಂಪಿ**

## ಮಾರ್ಗದರ್ಶಕರ ದೃಢೀಕರಣ ಪತ್ರ

ಶ್ರೀಮತಿ ಜ್ಯೋತಿಯವರು **ಕರಾವಳಿ ಕರ್ನಾಟಕದಲ್ಲಿ ಕೃಷಿ ಸಂಸ್ಕೃತಿಯ ಪಲ್ಲಟ ಮತ್ತು ಅದರ ಸಾಹಿತ್ಯಿಕ ಅಭಿವ್ಯಕ್ತಿ** ಎಂಬ ಮಹಾಪ್ರಬಂಧವನ್ನು ಕನ್ನಡ ವಿಶ್ವವಿದ್ಯಾಲಯಕ್ಕೆ ಪಿ ಎಚ್.ಡಿ ಪದವಿಗಾಗಿ ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ ದ್ರಾವಿಡ ಸಂಸ್ಕೃತಿ ಅಧ್ಯಯನ ವಿಭಾಗಕ್ಕೆ ಸಲ್ಲಿಸುತ್ತಿದ್ದಾರೆ. ಪ್ರಸ್ತುತ ಮಹಾಪ್ರಬಂಧವು ಅವರ ಸ್ವಂತ ಪರಿಶ್ರಮದ ಫಲವಾಗಿದ್ದು ಈ ಮೊದಲು ಇದನ್ನು ಇನ್ನಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

**ಡಾ.ಎ ಸುಬ್ಬಣ್ಣ ರೈ**
ಪ್ರಾಧ್ಯಾಪಕರು
ದ್ರಾವಿಡ ಸಂಸ್ಕೃತಿ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ

ದಿನಾಂಕ [illegible]
ಸ್ಥಳ: ವಿದ್ಯಾರಣ್ಯ

ಡಾ. ಎ. ಸುಬ್ಬಣ್ಣ ರೈ ಪ್ರಾಧ್ಯಾಪಕರು
ದ್ರಾವಿಡ ಸಂಸ್ಕೃತಿ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ ಹಂಪಿ

# ಪರಿವಿಡಿ

ಅಧ್ಯಾಯ :- ೧

# ಅಧ್ಯಯನ ಉದ್ದೇಶ ವ್ಯಾಪ್ತಿ ಮತ್ತು ವೈಧಾನಿಕತೆ

೧.೧. ಉದ್ದೇಶ

೧.೨. ವ್ಯಾಪ್ತಿ ಮತ್ತು ಆಕರಗಳ ಸ್ವರೂಪ

೧.೩. ವೈಧಾನಿಕತೆ

## ೧.೧ ಉದ್ದೇಶ

ಕರಾವಳಿ ಕರ್ನಾಟಕದಲ್ಲಿ ಕೃಷಿ ಸಂಸ್ಕೃತಿಯ ಪಲ್ಲಟ ಮತ್ತು ಅದರ ಸಾಹಿತ್ಯಿಕ ಅಭಿವ್ಯಕ್ತಿ ಎನ್ನುವ ಈ ಅಧ್ಯಯನವನ್ನು ಕೈಗೊಂಡಿರುವ ಉದ್ದೇಶ ಸಾಹಿತ್ಯ ಮತ್ತು ಸಂಸ್ಕೃತಿಯ ಅನುಬಂಧದೊಳಗಿರುವ ಕರಾವಳಿಯ ಮನೋಧರ್ಮದ ಮೌಲ್ಯಗಳನ್ನು ಅರ್ಥೈಸುವುದು ಮತ್ತು ಸ್ಥಿತ್ಯಂತರಗೊಳ್ಳುತ್ತ ಹೋಗುತ್ತಿರುವ ಕೃಷಿ ಜಗತ್ತನ್ನು ಅರ್ಥೈಸುವುದು. ಕೃಷಿ ಸಂಸ್ಕೃತಿಯ ನೂರಾರು ಎಳೆಗಳೊಂದಿಗೆ ಮನುಷ್ಯ ಸಮಾಜದಲ್ಲಿ ಆಗುತ್ತಿರುವ ಬದಲಾವಣೆಗಳ ಕಾರಣಗಳನ್ನು ಅನ್ವೇಷಿಸುವುದು ಪ್ರಬಂಧದ ಮುಖ್ಯ ಉದ್ದೇಶ. ಸಂವೇದನಾಶೀಲ ಮನಸ್ಸುಗಳು ಈ ಪ್ರಕ್ರಿಯೆ ಹೇಗೆ ಗ್ರಹಿಸಿವೆ ಮತ್ತು ಪ್ರತಿಕ್ರಿಯಿಸಿವೆ ಎನ್ನುವುದು ಬಹಳ ಮುಖ್ಯವಾದ ಅಧ್ಯಯನ. ಸಾಹಿತ್ಯ ರಚನೆ ಮಾಡಿದವರು ಯಾರು ಮತ್ತು ಅವರು ಅದನ್ನು ಒಂದು ಸಾಮಾಜಿಕ ಸ್ಥಿತ್ಯಂತರದ ಸವಾಲಾಗಿ ಹೇಗೆ ಗ್ರಹಿಸಿದ್ದಾರೆ ಎನ್ನುವುದೂ ಬಹಳ ಮುಖ್ಯವಾದ ಪ್ರಶ್ನೆ.

ಈ ವಿಷಯವನ್ನು ಏಕೆ ಆರಿಸಿಕೊಳ್ಳಲಾಗಿದೆ ಎಂಬ ಪ್ರಶ್ನೆ ಬಹಳ ಮುಖ್ಯವಾದುದು. ಕೃಷಿ ಸಂಸ್ಕೃತಿಯನ್ನು ಸಾಮಾಜಿಕ ನೆಲೆಯಲ್ಲಿ ತಿಳಿಯಲು ಸಾಧ್ಯವೇ ಎಂಬ ಸಮಾಜಮುಖಿ ಚಿಂತನೆಯೊಂದಿಗೆ ಸಾರ್ವಕಾಲಿಕವಾದ ಈ ನೆಲೆಯನ್ನು ಅರ್ಥೈಸಿಕೊಳ್ಳುವುದು ಬಹಳ ಮುಖ್ಯ ಚಿಂತನೆ.

ಸಾಮಾನ್ಯ ಗ್ರಹಿಕೆಯಲ್ಲಿ ಕೃಷಿಯೆಂದರೆ ಜ್ಞಾನವೂ ಅಲ್ಲ. ವಿಜ್ಞಾನವೂ ಅಲ್ಲ. ಹೊಸ ಶೋಧವೂ ಅಲ್ಲ. ಬಿತ್ತಿದ್ದನ್ನು ಬೆಳೆಯುವುದು, ಬೆಳೆದದ್ದನ್ನು ಸಂಗ್ರಹಿಸಿ ಕಾಪಿಡುವುದು ಯಾವ ಮಹಾ ಕಾರ್ಯ ಎನ್ನಿಸಿತ್ತು. ಬೆಳೆದುದ್ದನ್ನು ಬಳಸುವುದು ಮತ್ತು ಬಾಳುವುದು ಜೀವನದ ರೀತಿಯಾಗಿತ್ತು. ಅದರೊಂದಿಗೆ ಬದುಕಿನ ರೀತಿ ನೀತಿಗಳು, ವಿಧಿ ನಿಷೇಧಗಳು, ನಂಬಿಕೆ, ಕಟ್ಟುಪಾಡು, ಆರಾಧನೆ, ಆಚರಣೆ ಎಲ್ಲವೂ ಹುಟ್ಟಿಕೊಂಡವು. ಒಂದು ಬೆಳೆಯನ್ನು ಬೆಳೆಯುವ ಹಂತದಿಂದ ಕಟಾವಿನ ಹಂತದ ತಿಳುವಳಿಕೆ ಇವೆಲ್ಲವನ್ನು ಒಟ್ಟಾಗಿ ಗ್ರಹಿಸಲು ಕೃಷಿ ಸಂಸ್ಕೃತಿಯಲ್ಲಿ ಸಾಧ್ಯವಾಗಿದೆ.

ಬದಲಾಗುತ್ತಿರುವ ಸಾಮಾಜಿಕ ವ್ಯವಸ್ಥೆಯಲ್ಲಿ ಹಲವಾರು ಸ್ಥಿತ್ಯಂತರಗಳು ಕಣ್ಣಿಗೆ ಕಟ್ಟುವಂತೆ ಗೋಚರಿಸುತ್ತಿವೆ. ಬೆವರು ಹರಿಸಿ, ಬೆನ್ನು ಬಾಗಿಸಿ ದುಡಿಯುತ್ತಿದ್ದ ರೈತಾಪಿ ವರ್ಗ ತಾವು ಬೆಳೆ ಮಾಡುವ ಗದ್ದೆಯನ್ನು ಅತ್ಯಂತ ಪೂಜನೀಯವಾದ ದೃಷ್ಟಿಯಿಂದ ನೋಡುತ್ತಾ ಬಾಳುತ್ತಿದ್ದರು. ಅವರ ಬದುಕಿನ ಒಂದು ಭಾಗವಾಗಿದ್ದ ಈ ಮಣ್ಣು ಬರಿಯ 'ನೆಲ' ವಾಗಿರಲಿಲ್ಲ. ಅಲ್ಲಿ ಜನರ ಬದುಕು, ಕನಸು ಭವಿಷ್ಯ ಎಲ್ಲವೂ ಅಡಗಿತ್ತು. ವಿಸ್ತಾರವಾದ ಭೂಮಿಗೆ ಒಡೆಯರಾಗುವುದು ಒಂದು ಕಾಲದ ಸಾಮಾಜಿಕ ಪ್ರತಿಷ್ಠೆಯ ಅಂಶವೂ ಆಗಿತ್ತು. ಬೆವರು ಸುರಿಸಿ ದುಡಿಯುವ ಜನರು ಬೆನ್ನು ಬಾಗಿಸಿ ಮಣ್ಣಲ್ಲಿ ಮಣ್ಣಾಗಿ ದುಡಿಯುತ್ತಿದ್ದರು. ದುಡಿಮೆಯೇ ಮಂತ್ರವಾಗಿದ್ದ ಅವರಿಗೆ ಬೇರೆ ಯಾವ ಸಂಗತಿಗಳೂ ಮುಖ್ಯವಾಗಿರಲಿಲ್ಲ. ಶ್ರಮಿಕರಾಗಿಯೇ ಬಾಳುತ್ತಿದ್ದ ಇವರಿಗೆ ತಮ್ಮಲ್ಲಿ ಭೂಮಿ ಇಲ್ಲದಿದ್ದರೆ ಬೇರೆಯವರ ಗದ್ದೆಗಳಲ್ಲಿ ಕೂಲಿಯಾಳುಗಳಾಗಿ ದುಡಿಯಬೇಕಿತ್ತು. ಹಾಗಿದ್ದರೂ ದುಡಿಮೆಯು ತಪ್ಪಲಿಲ್ಲ. ದುಡಿಮೆಯೇ ಆದರ್ಶ ಮೌಲ್ಯವೂ ಆಗಿ ಚರಿತ್ರೆಯ ಕಾಲದಿಂದ ತೊಡಗಿದ ತೀರಾ ಇತ್ತೀಚಿನವರೆಗೆ ಬಾಳಿದ ಕೃಷಿ ಜಗತ್ತು ಕ್ರಮೇಣ ಬದಲಾಗುತ್ತಾ ಬಂತು.

ಸಾಮಾಜಿಕ, ರಾಜಕೀಯ, ಆರ್ಥಿಕ ಕಾರಣಗಳಲ್ಲದೆ ಸಾಂಸ್ಕೃತಿಕವಾಗಿಯೂ ಇದು ಬಹಳ ಮುಖ್ಯ ಅಂಶ. ಆಧುನಿಕತೆ ಮತ್ತು ನಾಗರಿಕತೆಗಳ ಹೆಸರಿನಲ್ಲಿಯೂ ವಲಸೆ, ದುಡಿಮೆಯ, ಸ್ವರೂಪಗಳೂ ಬದಲಾಗುತ್ತಾ ಸಾಗಿತ್ತು. ಕರಾವಳಿಯು ವಸಾಹತೀಕರಣಕ್ಕೆ ಬಹಳ ಮುಕ್ತವಾಗಿ ತೆರೆದುಕೊಂಡದ್ದರಿಂದ ಸ್ಥಿತ್ಯಂತರಗಳು ಕಣ್ಣಿಗೆ ರಾಚುವಂತೆ ಗೋಚರಿಸುತ್ತಿದ್ದವು. ಬದಲಾದ 'ದುಡಿಮೆ' ಯ ಪರಿಕಲ್ಪನೆಯೂ "ಕೈ ಕೆಸರಾದರೆ ಬಾಯಿ ಮೊಸರು" ಎಂಬ ಭ್ರಮೆ, ಸವಲತ್ತಿನ ಬದುಕೇ ಸುಖದ ಬದುಕು ಎಂಬ ಚಿಂತನೆಯೂ ಇದಕ್ಕೆ ಪೂರಕವಾಗಿತ್ತು.

ಚಾರಿತ್ರಿಕವಾಗಿಯೂ ನಾವು ಗಮನಿಸಿದರೆ ಭೂಮಿ ಸಂಪತ್ತಿನ ಭಾಗವಾಗಿ ದೇವಸ್ಥಾನ, ಮಠಗಳು, ಗುತ್ತುಗಳು, ಬಲ್ಲಾಳರು, ಬೀಡಿನವರು ಹೀಗೆ ಸಾಮಾಜಿಕ ಶ್ರೇಣೀಕರಣವು ಇತ್ತು. ಭೂಮಿ ಇಲ್ಲದ ಬಡವರು ಕೃಷಿ ಕೂಲಿ ಕಾರ್ಮಿಕರಾಗಿ ದುಡಿಯುತ್ತಿದ್ದರು. ತಾನು ಸ್ವಂತವಾಗಿ ಗದ್ದೆ ಸಾಗುವಳಿ ಮಾಡಬೇಕೆಂಬ ಇಚ್ಛೆಯವರು ವರ್ಷಕ್ಕೆ ಇಂತಿಷ್ಟು ಫಸಲನ್ನು ನೀಡುವೆನೆಂಬ ನಿಗದಿತವಾದ ಒಂದು ಒಪ್ಪಂದವನ್ನು"ಗೇಣಿ" ಎನ್ನುತ್ತಿದ್ದರು. ಈ ಲೆಕ್ಕಾಚಾರದಲ್ಲಿ ಮೂಲಗೇಣಿ, ಚಾಲುಗೇಣಿ, ಬಿಡಿ ಒಕ್ಕಲು ಮತ್ತು ವರ್ಗದ ಜಮೀನಿನವರು ಎಂಬ ವ್ಯತ್ಯಾಸಗಳು ಇದ್ದವು. ಧಣಿಗಳ ಭೂಮಿಯಲ್ಲಿ ಖಾಯಮ್ಮಾಗಿ ಗೇಣಿದಾರರಾಗಿ ಇರುವವರು ಮೂಲ ಗೇಣಿಯವರಾಗಿದ್ದರೆ , ಚಾಲುಗೇಣಿಯಲ್ಲಿ ವರ್ಷಂಪ್ರತಿ ಗೇಣಿಯನ್ನು ನಿಗದಿತ ಸಮಯಕ್ಕೆ ನೀಡಬೇಕು. ಗೇಣಿ ಚೀಟಿಯನ್ನು ನವೀಕರಿಸಬೇಕು. ಇಲ್ಲದೆ ಹೋದರೆ ಅವರನ್ನು ಒಕ್ಕಲು ಎಬ್ಬಿಸುತ್ತಿದ್ದರು. ಬಿಡಿ ಒಕ್ಕಲು, ಭೂ ರಹಿತ ಕೃಷಿ ಕೂಲಿ ಕಾರ್ಮಿಕರಾಗಿದ್ದು, ಅವರು ಧಣಿಗಳ ಮನೆಯ ಪ್ರತಿಯೊಂದು ಕೆಲಸವನ್ನು ಮಾಡಬೇಕು. ಅವರು ಕೊಟ್ಟದ್ದನ್ನು ಪಡಕೊಳ್ಳಬೇಕು. ವರ್ಗದಾರರೆಂದರೆ ಭೂಮಿಯನ್ನು ಕಾಸು ಕೊಟ್ಟು ಖರೀದಿಸಿದ ಭೂಮಿಯ ಒಡೆಯರು. ಎಲ್ಲರೂ ಸಾಗುವಳಿಗಾಗಿಯೇ ಕೃಷಿ ಮಾಡುತ್ತಿದ್ದರು. ಈ ಸಾಮಾಜಿಕ ವ್ಯವಸ್ಥೆ ಹೀಗೆ ಶಾಶ್ವತವಾಗಿ ಉಳಿಯಲಿಲ್ಲ. ಬದಲಾವಣೆ ಜಗದ ನಿಯಮ ಎಂಬಂತೆ ಚಾರಿತ್ರಿಕವಾದ ಕಾರಣಗಳಲ್ಲಿ ಬೇರೆ ಬೇರೆ ರಾಜರ ಆಡಳಿತಕ್ಕೆ ಒಳಪಟ್ಟಾಗ ಆಡಳಿತದಲ್ಲಿ ಆದ ಪಲ್ಲಟಗಳು ಭೂಮಿಯ ಒಡೆತನದಲ್ಲೂ ಸ್ಥಿತ್ಯಂತರಗಳನ್ನು ತಂದವು. ವಸಾಹತುಶಾಹಿ ಆಡಳಿತ, ಇಂಗ್ಲಿಷ್ ಶಿಕ್ಷಣ ಜನರ ಬದುಕಿನ ದೃಷ್ಟಿಕೋನವನ್ನು ಬದಲಾಯಿಸಿತು. ವಸಹಾತ್ತೋತ್ತರ ಕಾಲದ ಸ್ವಾತಂತ್ರ್ಯ ನಂತರದ ದಿನಗಳಲ್ಲಿ ರಾಜಕೀಯ ಉದ್ದೇಶಗಳೊಂದಿಗೆ ಬಂದ ಸಮಾಜ ಸುಧಾರಣಾ ಚಳುವಳಿಯಾಗಿ ಒಕ್ಕಲು ಮಸೂದೆ ಕಾನೂನು ಜಾರಿಗೆ ಬಂತು. ದಣಿ ಒಕ್ಕಲುಗಳ ಭಾವನಾತ್ಮಕ ಸಂಬಂಧಗಳೊಂದಿಗೆ ಅಧಿಕಾರದ ಹಿನ್ನೆಲೆಯಲ್ಲಿಯೂ ಚಾಲ್ತಿಗೆ ಬಂದ ಸರಕಾರದ ಕಾನೂನು 'ಉಳುವವನೇ ಹೊಲದೊಡೆಯ' ಎಂಬ ಹೆಗ್ಗಳಿಕೆಗೆ ಪಾತ್ರವಾಯಿತು. ಇಡೀ ಸಾಮಾಜಿಕ ಸಂರಚನೆ ಆರ್ಥಿಕ ಚಿಂತನೆಯಲ್ಲಿಯೇ ಬದಲಾವಣೆಗೆ ಕಾರಣವಾಗಿದೆ.

ಒಕ್ಕಲು ಮಸೂದೆ ಕಾನೂನಿಂದ ಬಡ ಹಿಡುವಳಿದಾರರಿಗೆ ಭೂಮಿ ಉಚಿತವಾಗಿ ಲಭಿಸಿತು. ಒಂದು ತಲೆಮಾರಿನ ಮಂದಿ ತಾವು ಭೂಮಿಯ ಒಡೆಯರಾಗುವುದಕ್ಕೆ ಬಹಳ ಕಷ್ಟ ಹಿಂಸೆಗಳನ್ನು ಪಟ್ಟರು. ಕರಾವಳಿಯಲ್ಲೂ ಜಮೀನ್ದಾರರು ಬಲಿಷ್ಠರು, ಒರಟರು, ದಯ ದಾಕ್ಷಿಣ್ಯವಿಲ್ಲದವರು ಅಷ್ಟು ಸುಲಭವಾಗಿ ಈ ಬದಲಾವಣೆಗೆ ಒಪ್ಪಿಕೊಳ್ಳಲೂ ಇಲ್ಲ. ಬಡ ಒಕ್ಕಲಿಗೆ ಭೂಮಿ ನೀಡಿದ್ದು ಇಲ್ಲ. ಇಂದಿಗೂ ಉತ್ತರ

ಕರಾವಳಿಯಲ್ಲಿ ಜಮೀನ್ದಾರರ ಸಂಖ್ಯೆ ಹೆಚ್ಚಿದ್ದರೆ ದಕ್ಷಿಣ ಕರಾವಳಿಯಲ್ಲಿ ಹಿಡುವಳಿದಾರರ ಸಂಖ್ಯೆ ಹೆಚ್ಚಿದೆ. ಮೊದಲ ತಲೆಮಾರಿನ ಮಂದಿ ಕಷ್ಟ ಪಟ್ಟು ದುಡಿದು ತಮ್ಮ ಮಕ್ಕಳನ್ನು ಸುಶಿಕ್ಷಿತರನ್ನಾಗಿ ಮಾಡಿದರು. ಶಾಲೆಗೆ ತೆರಳಿದ ತಲೆಮಾರಿನ ಮಂದಿ ಶಿಕ್ಷಣ ಪಡೆದು ಉದ್ಯೋಗ ಗಳಿಸುವುದೇ ಆದರ್ಶವಾಗಿತ್ತು. ಒಮ್ಮೆ ಶಾಲೆಗೆ ತೆರಳಿದವರು ಮರಳಿ ಗದ್ದೆಗೆ ಇಳಿಯದೇ ಹೋದುದರಿಂದ ಕೃಷಿ ಕೆಲಸ ಮಾಡುವವರ ಸಂಖ್ಯೆ ಕಡಿಮೆಯಾಯಿತು. ಮನೆ ತುಂಬ ಮಕ್ಕಳಿದ್ದಾಗ ಒಬ್ಬರೋ ಇಬ್ಬರೋ ಮನೆಯ ಕೃಷಿಯ ಜವಾಬ್ದಾರಿಯನ್ನು ವಹಿಸಿಕೊಂಡರೆ ಎರಡನೇ ತಲೆಮಾರಿನಲ್ಲಿ ಇರುವ ಇಬ್ಬರು ಮಕ್ಕಳು ಓದು ಬರಹ ಕಲಿತು ಉದ್ಯೋಗ ಪಡೆಯುವ ಉತ್ಸಾಹದಲ್ಲಿದ್ದಾಗ ಕೃಷಿಯ ಆಸಕ್ತಿಯೇ ಕಡಿಮೆಯಾಯಿತು. ಕೃಷಿಯನ್ನು ಕೂಲಿಯಳುಗಳನ್ನೇ ನೆಚ್ಚಿಕೊಂಡು ಮಾಡಲು ಪ್ರಯತ್ನಿಸಿದ್ದು ಸ್ವಲ್ಪ ಕಾಲ. ಕಾಲಾಂತರದಲ್ಲಿ ಕೃಷಿ ಕೂಲಿ ಕಾರ್ಮಿಕರ ಮಕ್ಕಳು ವಿದ್ಯಾವಂತರಾಗಿ ಸಾಗುವಳಿಯ ಕೆಲಸದ ನೈಪುಣ್ಯವಿರುವವರು ಲಭಿಸುವುದೇ ತ್ರಾಸದಾಯಕವಾಯಿತು. ಬಂದ ಬೆಳೆಗಿಂತ ಮಾಡುವ ಖರ್ಚು ಹೆಚ್ಚಾದಾಗ ಕೃಷಿ ಲಾಭದಾಯಕವಲ್ಲ ಎಂಬುವುದೇ ಎಲ್ಲರ ಸಾಮೂಹಿಕ ಗೋಳು. ವಿಸ್ತಾರವಾದ ಗದ್ದೆಗಳು, ಕೈ ತುಂಬಾ ಕೂಲಿಯಾಳುಗಳು ಒಕ್ಕಲುಗಳಾಗಿದ್ದಾಗ ಸುಲಭವಾಗಿ, ಸಹಜವಾಗಿದ್ದ ಕೃಷಿ ಚಟುವಟಿಕೆಗಳು ಬಡ ಹಿಡುವಳಿದಾರನ ಕೈಗೆ ಬಂದಾಗ ಸುಲಭವಾಗಿರಲಿಲ್ಲ. ಒಂದು ಜೊತೆ ಕೋಣವೋ ಎತ್ತನ್ನೋ ಸಾಕುವ ಖರ್ಚು ,ಸಾಗುವಳಿಯ ಖರ್ಚುಗಳು ಅಷ್ಟು ಸುಲಭವಾಗಿ ನಿಭಾಯಿಸಲಾಗಲಿಲ್ಲ. 'ಉರಬಡ್ಡಿಗೆ' ಕೋಣ ತಂದು ಗದ್ದೆ ಉಳುಮೆ ಮಾಡಿ ಬೀಜವನ್ನೂ ಸಾಲ ತಂದು ಬಿತ್ತಿದರೆ ಅವನಿಗೆ ಉಳಿಯುವುದೇನು? ಹಾಗಾಗಿಯೇ ರೂಢಿಯಲ್ಲಿ ಬಂದ ಮಾತು – "ಎರು ಬಿತ್ತ್ ಮಾರ್ ತಿಂದಿನಾಯೆ" (ಕೋಣ ಮತ್ತು ಬಿತ್ತನೆಯ ಬೀಜವನ್ನು ಮಾರಿ ತಿಂದವನು) ಒಂದು ರೀತಿಯ ಬೈಗುಳವೂ, ಅವಮಾನವೂ ಹೌದು. ತ್ರಾಸದಾಯಕವೆಂದು ಗ್ರಹಸಿದ ಕೃಷಿಯನ್ನು ಮೂರನೆಯ ತಲೆಮಾರು ದೂರವೇ ಇರಿಸಿತು.

ಹೆಚ್ಚಿದ ನಗರೀಕರಣ ಮತ್ತು ಜಾಗತೀಕರಣದ ಸವಾಲುಗಳನ್ನು ಎದುರಿಸುವುದು ತಮ್ಮ ಅಸ್ಮಿತೆಯನ್ನು ಉಳಿಸಿಕೊಳ್ಳುವುದೂ ಮುಖ್ಯವಾಗಿತ್ತು. ಕೃಷಿಯು ಆಹಾರದ ಬೆಳೆಯಿಂದ ವಾಣಿಜ್ಯ ಬೆಳೆಗೆ ಸ್ಥಿತ್ಯಂತರ ಹೊಂದಿ ಕರಾವಳಿಯಲ್ಲಿ ಕೈಗಾರಿಕೆಗಳು ಸ್ಥಾಪನೆಗೊಂಡವು. ದುಡಿಮೆಯ ಪರಿಕಲ್ಪನೆ ಬದಲಾಗಿ ಕೃಷಿ ಕೂಲಿ ಕಾರ್ಮಿಕರ ಕೊರತೆಯ ಕಾರಣಕ್ಕೆ ಯಂತ್ರಗಳ ಅವಲಂಬನೆ ಅನಿವಾರ್ಯವಾಯಿತು. ಕೃಷಿಯ ಸ್ವರೂಪದಲ್ಲಿ ಆದ ಬದಲಾವಣೆಗಳು ಸಾಮಾಜಿಕ ಬದುಕಿನಲ್ಲೂ ಪ್ರತಿಫಲನಗೊಳ್ಳುವುದಕ್ಕೆ ಕಾರಣವಾಯಿತು. ಈ ಎಲ್ಲ ಬದಲಾವಣೆಗಳನ್ನು ಪಲ್ಲಟದ ಸ್ಥಿತ್ಯಂತರವನ್ನು ತಿಳಿಯಲು ಸಾಧ್ಯವೇ ಎಂಬ ಸಮಾಜಮುಖಿ ಚಿಂತನೆಯೊಂದಿಗೆ ಸಾರ್ವಕಾಲಿಕವಾದ ಚಿಂತನೆಯನ್ನು ಅರ್ಥೈಸಿಕೊಳ್ಳುವುದುಬಹಳ ಮುಖ್ಯ ಪ್ರಶ್ನೆಯಾಗಿ ಸಮಸ್ಯೀಕರಣಗೊಳಿಸಲಾಗಿದೆ. ಬದಲಾವಣೆಗಳನ್ನು ಚಾರಿತ್ರಿಕವಾಗಿ ಮಾತ್ರ ಗ್ರಹಿಸದೆ ದಾಖಲೆಗೊಳಿಸಿ ಚರಿತ್ರೆಯಾಗಿಸದೆ ಸಾಹಿತ್ಯದ ಓದಿನಿಂದ ಸಮಾಜವನ್ನು ಅರ್ಥೈಸಲು ಸಾಧ್ಯವೇ ಎಂಬುದು ಪ್ರಮುಖ ಪ್ರಶ್ನೆಯಾಗಿದೆ.

### ೧.೨ ವ್ಯಾಪ್ತಿ ಮತ್ತು ಆಕರಗಳ ಸ್ವರೂಪ :-

ಕರಾವಳಿ ಕರ್ನಾಟಕ ಎಂಬ ವ್ಯಾಪ್ತಿಯನ್ನು ಅಧ್ಯಯನಕ್ಕೆ ಹಾಕಿಕೊಳ್ಳಲಾಗಿದೆ. ಕರ್ನಾಟಕಕ್ಕೆ ೪೦೦ ಕಿ.ಮೀ ಉದ್ದದ ಕರಾವಳಿ ಅಂಕೋಲದಿಂದ ತಲಪಾಡಿಯವರೆಗೆ ಹಬ್ಬಿದೆ. ಇಲ್ಲಿ ಅಧ್ಯಯನಕ್ಕೆ ಆಯ್ದುಕೊಂಡ ವ್ಯಾಪ್ತಿಯು ತುಳುನಾಡು, ಅವಿಭಜಿತ ದಕ್ಷಿಣ ಕನ್ನಡ ಮತ್ತು ಕಾಸರಗೋಡು ತಾಲೂಕನ್ನು ಭೌಗೋಳಿಕ ಮಿತಿಯನ್ನಾಗಿ ಹಾಕಿಕೊಳ್ಳಲಾಗಿದೆ.

ಕರಾವಳಿ ಕರ್ನಾಟಕದ ಸಾಹಿತ್ಯಿಕ ಅಭಿವ್ಯಕ್ತಿ ಎನ್ನುವಾಗ ಕರಾವಳಿ ಬಹುಭಾಷಾ ಪರಿಸರದಿಂದ ಒಗ್ಗೂಡಿರುವಂತಹುದು. ಮಾತೃ ಭಾಷೆಯಾಗಿ ಪ್ರಾದೇಶಿಕವಾಗಿರುವ ತುಳು, ಕೊಂಕಣಿ, ಬ್ಯಾರಿ ಭಾಷೆ, ಶಾಲೆಯಲ್ಲಿ ಕಲಿಯುವ ಕನ್ನಡ, ಈ ಬಹು ಭಾಷಾ ಪರಿಸರದಲ್ಲಿ ಅಧ್ಯಯನಕ್ಕೆ ಆಯ್ಕೆ ಮಾಡಿಕೊಂಡಿರುವುದು ತುಳು ಮತ್ತು ಕನ್ನಡ ಭಾಷಾ ಸಾಹಿತ್ಯದ ಕೃತಿಗಳನ್ನು ಆಕರಗಳಾಗಿ ಅನುಲಕ್ಷಿಸಲಾಗಿದೆ.. ಕರಾವಳಿಯ ಸಾಹಿತ್ಯದಲ್ಲಿ ಕೊಂಕಣಿ, ಬ್ಯಾರಿ ಭಾಷೆಗಳಿದ್ದರೂ ಆ ಭಾಷೆಗಳ ಓದು ಪರಿಚಿತವಲ್ಲವಾಗಿ ಸಾಧ್ಯವಿಲ್ಲವಾದ ಕಾರಣ ಮುಖ್ಯವಾಗಿ ಕನ್ನಡ ಸಾಹಿತ್ಯ ಮತ್ತು ತುಳು ಸಾಹಿತ್ಯ ಮತ್ತು ಇವುಗಳಿಗೆ ಹಿನ್ನೆಲೆಯಾಗಿ ತುಳು ಜನಪದ ಸಾಹಿತ್ಯವನ್ನು ಪರಿಭಾವಿಸಲಾಗಿದೆ.

ಕರಾವಳಿಯಲ್ಲಿ ಬರಿದಾಗುತ್ತಿರುವ ಅನ್ನದ ಬಟ್ಟಲು ಜನರ ಜೀವನ ಕ್ರಮ ಮತ್ತು ಆಲೋಚನೆಯ ಗ್ರಹಿಕೆಗಳಲ್ಲಿ ಹೇಗೆ ವ್ಯತ್ಯಾಸಗಳನ್ನು ತಂದಿದೆ ಎನ್ನುವುದನ್ನು ಗಮನಿಸುವುದು ಇಲ್ಲಿ ಮುಖ್ಯವಾಗಿದೆ. ಆ ಮೂಲಕ ಕರಾವಳಿಯ ಚಲನಶೀಲವಾದ ಬದುಕಿನ ಮಗ್ಗುಲುಗಳನ್ನು ಗ್ರಹಿಸುವುದರಿಂದ ಸಂಸ್ಕೃತಿ ಚಿಂತನೆಯ ಆಳವನ್ನು ಗ್ರಹಿಸಲು ಪ್ರಯತ್ನಿಸಬಹುದಾಗಿದೆ.

ಸಂಸ್ಕೃತಿಯಲ್ಲಿ ಮನುಷ್ಯರು ಬೆಳೆದು ಬಂದ ಹಾಗೆಲ್ಲ ಶಿಲಾಯುಗದಿಂದ ಆಧುನಿಕತೆಯೆಡೆಗೆ ಸಾಗಿದ್ದನ್ನು ಈಗಾಗಲೇ ಸಂಸ್ಕೃತಿ ಚಿಂತಕರು ಗಮನಿಸಿ ದಾಖಲುಗೊಳಿಸಿದ್ದಾರೆ. ಬೇಟೆಯಾಡುತ್ತಲೇ ತಮ್ಮ ಹೊಟ್ಟೆಯ ಹಸಿವನ್ನು ನೀಗಿಸಿಕೊಳ್ಳುತ್ತಿದ್ದವರು ಪಶುಪಾಲನೆಯನ್ನು ಆರಂಭಿಸಿದರು. ಕೆಲವು ಸಮುದಾಯಗಳು ಒಂದೆಡೆ ನೆಲೆ ನಿಲ್ಲುವ ಆಶಯವನ್ನು ಹೊಂದಿ ಕೃಷಿಯನ್ನು ಅನ್ವೇಷಿಸಿದರು. ಕೃಷಿ ಸಂಸ್ಕೃತಿಯಲ್ಲಿ ಹುಟ್ಟಿಕೊಂಡ ಅನ್ವೇಷಣೆಗಳು ಆಹಾರದ ಮೂಲವನ್ನು ಗುರುತಿಸಿಕೊಂಡಿತು. ಆಹಾರದ ಮೂಲವೂ ಹೊಸ ದಾರಿಗಳನ್ನು ಹೇಗೆ ತೆರೆದುಕೊಂಡಿತು ಎನ್ನುವುದು ಮುಖ್ಯ.

ಇಂತಹ ಅಧ್ಯಯನದ ಮಾದರಿಗಳಾಗಿ ಕೃಷಿ ಸಂಸ್ಕೃತಿಯ ಪಲ್ಲಟಗಳನ್ನು ಸಮಾಜಶಾಸ್ತ್ರ, ಮಾನವಶಾಸ್ತ್ರ, ಅರ್ಥಶಾಸ್ತ್ರದ ನೆಲೆಯಲ್ಲಿ ಕೆಲವು ಅಧ್ಯಯನಗಳು ಈಗಾಗಲೇ ನಡೆದಿದೆ ಎಂದು ಆಕರಗಳನ್ನು ಗುರುತಿಸುವುದು. ಈ ಎಲ್ಲ ಶಿಸ್ತುಗಳ ಆನ್ವಯಿಕತೆಯನ್ನು ಸಾಹಿತ್ಯಿಕ ಹಿನ್ನೆಲೆಯಲ್ಲಿ ವಿಶ್ಲೇಷಿಸುವುದರೊಂದಿಗೆ ಸಂಸ್ಕೃತಿ ಚಿಂತನೆಯನ್ನು ಅನ್ವೇಷಿಸುವ ವಿಧಾನವನ್ನು ಇಲ್ಲಿ ಅನುಸರಿಸಲಾಗಿದೆ. ಜೊತೆಗೆ ಪೂರಕವಾಗಿ ಸೈದ್ಧಾಂತಿಕ ಸ್ಪಷ್ಟತೆಗಾಗಿ, ಸಂಶೋಧನಾ ಗ್ರಂಥ ಮತ್ತು ಈ ಸಂಪನ್ಮೂಲಗಳನ್ನು ಬಳಸಿಕೊಳ್ಳಲಾಗಿದೆ.

ತುಳು ಸಾಹಿತ್ಯದ ಬರಹಗಾರರಾದ ಡಿ.ಕೆ ಚೌಟ, ಜಾನಕಿ ಬ್ರಹ್ಮಾವರ, ಜಯಮ್ಮ ಚೆಟ್ಟಿಮಾಡ, ಮಹಾಲಿಂಗ ಇವರ ಕೃತಿಗಳನ್ನು ಅಧ್ಯಯನಕ್ಕೆ ಆಯ್ದುಕೊಳ್ಳಲಾಗಿದೆ.

ಕರಾವಳಿ ಕರ್ನಾಟಕ ಎನ್ನುವ ಭೌಗೋಳಿಕ ವ್ಯಾಪ್ತಿಯಿಂದ ಅಧ್ಯಯನಕ್ಕೆ ಆಧುನಿಕ ಪೂರ್ವದ ಸಾಹಿತ್ಯ ಕೃತಿಗಳನ್ನು ಆಯ್ಕೆ ಮಾಡಿಕೊಂಡಿಲ್ಲ. ನಡುಗನ್ನಡದ ಕವಿ ರತ್ನಾಕರವರ್ಣಿ ತನ್ನ ಕಾವ್ಯವನ್ನು 'ಅಯ್ಯಯ್ಯ ಎಂಚ ಪೊರ್ಲಾಂಡ್ ಎಂದು ತುಳುವರು ಮೈಯುಬ್ಬಿ ಕೇಳಬೇಕಣ್ಣ' ಎಂದು ಉಲ್ಲೇಖಿಸಿದವನು. ಅವನ ಕಾವ್ಯದ ವಸ್ತುವಿನಲ್ಲಿ ಕೃಷಿ ಜಗತ್ತು ಎಲ್ಲೂ ದಾಖಲಾಗದೆ ಇರುವುದರಿಂದ ಅಲ್ಲಿ ಸಾಹಿತ್ಯಿಕ ಅಭಿವ್ಯಗಕ್ತಿಗಳನ್ನು ಗುರುತಿಸಲಾಗಿಲ್ಲ. ಸಾಂಗತ್ಯ ಕೃತಿಯಾದ "ಭರತೇಶ ವೈಭವ"ವು ಜೈನ ಧರ್ಮದ ಚಿಂತನೆಗಳನ್ನು ತ್ಯಾಗ– ಭೋಗದ ಸಮನ್ವಯ ದೃಷ್ಟಿಯಿಂದ ವಿಶ್ಲೇಷಿಸುತ್ತದೆ. ಆತನು ರಚಿಸಿದ ಇತರ ಕೃತಿಗಳಲ್ಲೂ ಈ ಬಗೆಗಿನ ವಿವರಗಳು ಇಲ್ಲದೆ ಇರುವುದರಿಂದ ಉಲ್ಲೇಖಿಸಲಾಗಿಲ್ಲ.

ಆಧುನಿಕ ಪೂರ್ವದ ಮತ್ತೋರ್ವ ಪ್ರಮುಖ ಕವಿ ಮುದ್ದಣ. ಕರಾವಳಿಯವನಾದರೂ ಅವನ ಕೃತಿಗಳಲ್ಲೂ ಕೃಷಿ ಲೋಕದ ನಿರೂಪಣೆಗಳಿಲ್ಲ. ಪುರಾಣವನ್ನು ವಸ್ತುವಾಗಿಸಿ ಪ್ರಯೋಗಶೀಲತೆಯಿಂದ ಕೃತಿ ರಚಿಸಿದ ಮುದ್ದಣ ವಿಮರ್ಶಾ ಪ್ರಜ್ಞೆಯ ಮೂಲಕ "ರಾಮಾಶ್ವಮೇಧ"ವನ್ನು ರಚಿಸಿದ್ದಾನೆ. ಅವನ ಯಕ್ಷಗಾನ ಕೃತಿಗಳಿಗೂ ರಾಮಾಯಣ ಮಹಾಭಾರತ ಕಥಾ ಪ್ರಸಂಗಗಳೇ ಆಕರಗಳಾಗಿವೆ. ಮುದ್ದಣನ ಕೃತಿಯು ಮಳೆಗಾಲದ ವರ್ಣನೆಗೆ ಉಲ್ಲೇಖಾರ್ಹವಾಗಿದೆಯೇ ಹೊರತು ಕೃಷಿ ಜಗತ್ತಿನ ನಿರ್ವಚನಗಳಿಲ್ಲ.

ಆಧುನಿಕ ಕನ್ನಡ ಸಾಹಿತ್ಯವನ್ನು ಜಾಗತೀಕರಣ ಪೂರ್ವ ಮತ್ತು ಜಾಗತೀಕರಣ ನಂತರದ ಸಾಹಿತ್ಯಿಕ ಅಭಿವ್ಯಕ್ತಿ ಎಂಬ ವಿಭಾಗ ಕ್ರಮದಲ್ಲಿ ಅಧ್ಯಯನ ನಡೆಸಲಾಗಿದೆ. ಕಾರಂತರ ಕಾದಂಬರಿಗಳನ್ನು ಚಾರಿತ್ರಿಕ ಅಭಿವ್ಯಕ್ತಿಯ ನೆಲೆಯಲ್ಲಿ ಗಮನಿಸಿ, ಪರಿಕಲ್ಪನಾತ್ಮಕ ನೆಲೆಗಳನ್ನು ನಂತರದಲ್ಲಿ ವಿಶ್ಲೇಷಿಸಲಾಗಿದೆ. ಕರಾವಳಿ ಕರ್ನಾಟಕದ ಸಾಹಿತ್ಯಿಕ ಕೊಡುಗೆ ಕನ್ನಡ ಭಾಷೆಗೆ ಬಹಳ ಮುಖ್ಯವಾದುದು. ಇಲ್ಲಿಯೂ ಸಾಹಿತ್ಯದ ಒಂದು ಪ್ರಕಾರವಾದ ಕಾದಂಬರಿಯನ್ನು ಮಾತ್ರ ಆಯ್ಕೆ ಮಾಡಿಕೊಳ್ಳಲಾಗಿದೆ. ಕಾದಂಬರಿಯು ಸಮಾಜಶಾಸ್ತ್ರೀಯ ಅಧ್ಯಯನಕ್ಕೆ ಮುಖ್ಯ ಆಕರವಾಗಿರುವುದರಿಂದ ಮತ್ತು ಸಾಹಿತ್ಯಿಕವಾಗಿ ಬಹಳ ಸೂಕ್ಷ್ಮವಾದ ವಿವರಣಾತ್ಮಕ ಅಂಶಗಳು ಇಲ್ಲಿ ದಾಖಲಾಗಿರುವುದರಿಂದ ಕಾದಂಬರಿಯನ್ನೇ ಆಯ್ಕೆ ಮಾಡಿಕೊಳ್ಳಲಾಗಿದೆ. ಇದಕ್ಕೆ ಕಾರಣವೂ ಇದೆ. "ವಾಸ್ತವಿಕತೆ ಕಾದಂಬರಿ ಪ್ರಕಾರದ ಪ್ರಮುಖ ಲಕ್ಷಣ. ಇತರ ಯಾವುದೇ ಸಾಹಿತ್ಯ ಪ್ರಕಾರಕ್ಕಿಂತ ಹೆಚ್ಚು ಸ್ಪಷ್ಟವಾಗಿ ಮನುಷ್ಯನನ್ನು ಭೌತಿಕ ಜಗತ್ತಿನ ಪರಿಸರದಲ್ಲಿ ಸೃಷ್ಟಿಸಿ, ಅದರ ನಡುವೆ ಹಿನ್ನೆಲೆಯಲ್ಲಿ ನೋಡುತ್ತದೆ. ವಾಸ್ತವಿಕತೆಯನ್ನು ಕುರಿತ ಸಿದ್ಧಾಂತಗಳೆಲ್ಲ ಕಾದಂಬರಿ ವಾಸ್ತವವನ್ನು ಅನುಕರಿಸುತ್ತದೆ. ಪೂರ್ವಗ್ರಹಿಕೆಯನ್ನೇ ಹೊಂದಿದೆ ಮತ್ತು ಈ ವಾಸ್ತವ ಹೆಚ್ಚು ಕಡಿಮೆ ಸ್ಥಿರವಾಗಿದ್ದು." (ನಾಗಭೂಷಣ ಸ್ವಾಮಿ.ಒ.ಎಲ್. ೧೯೮೩. ಪು ೩೧೩)

ನವೋದಯ ಹೊಸಗನ್ನಡ ಅರುಣೋದಯದ ಕಾಲದಲ್ಲೂ ಹೆಚ್ಚು ರಚನೆಯಾಗಿರುವುದು ಕಾದಂಬರಿಯ ಪ್ರಕಾರವೇ ಆಗಿದೆ. ಸಾಮಾಜಿಕ ಚಳುವಳಿಯ ಸ್ವರೂಪದಲ್ಲಿ ವಿಧವಾ ವಿವಾಹವನ್ನೇ ಮುಖ್ಯ

ವಸ್ತುವಾಗಿರಿಸಿ ಬರೆದ ಬರವಣಿಗೆಗಳು ನಡೆದಿರುವುದು ಗಮನಾರ್ಹವಾದುದು ಕನ್ನಡದ ಮೊದಲ ಕಾದಂಬರಿಯ ಕೊಡುಗೆಯೂ ಕರಾವಳಿ ಕರ್ನಾಟಕದ್ದು.

ಕಾದಂಬರಿಯ ಭಾಷೆಯ ಬಳಕೆಯಲ್ಲಿ ಕಾವ್ಯಗುಣವನ್ನು ಪಾತ್ರ, ಸಂಭಾಷಣೆ, ಕಥಾ ಸಂವಿಧಾನ ಇತ್ಯಾದಿಗಳಲ್ಲಿ ನಾಟಕದ ಗುಣವನ್ನು ಕಾದಂಬರಿ ಅರಗಿಸಿಕೊಂಡಿದೆ. ವಾಸ್ತವಿಕತೆಯೊಡನೆ ನಿಕಟ ಸಂಬಂಧವಿದ್ದು, ವೈಚಾರಿಕತೆಗೆ ಪ್ರಾಧಾನ್ಯ ನೀಡಿದೆ. ಕಾದಂಬರಿಯ ವಸ್ತು ಖಗೋಳಶಾಸ್ತ್ರದಿಂದ ಹಿಡಿದು ವ್ಯಕ್ತಿಯ ಅಂತರಂಗದ ವಿಶ್ಲೇಷಣೆಯವರೆಗೆ ಏನೂ ಬೇಕಾದರೂ ಆಗಿರಬಹುದು. ತಕ್ಕ ಮಟ್ಟಿನ ದೀರ್ಘತೆಯುಳ್ಳ ನಿಜವಾದ ಬದುಕನ್ನು ಪ್ರತಿನಿಧಿಸುವ ಪಾತ್ರಗಳು ಮತ್ತು ಕ್ರಿಯೆಯಿಂದ ಕೂಡಿದ ಹೆಚ್ಚು ಅಥವಾ ಕಡಿಮೆ ಸಂಕೀರ್ಣವಾದ ಕಥಾ ಸಂವಿಧಾನವುಳ್ಳ ಗದ್ಯ ನಿರೂಪಣೆಯೂ ಕಾದಂಬರಿಯಾಗುತ್ತದೆ ಎಂಬ ನಾಗಭೂಷಣ ಸ್ವಾಮಿಯವರ ವಿವರಣೆಯನ್ನು ಅರ್ಥೈಸುವುದು ಮುಖ್ಯ.

ಕಾದಂಬರಿಯ ವಿಷಯ ವಸ್ತುವು ಕರಾವಳಿಯ ಕೃಷಿ ಬದುಕಿನ ನಿರೂಪಣೆಗಳನ್ನು ಹೊಂದಿದ್ದು, ಅವುಗಳನ್ನು ಪ್ರಮುಖ ಆಕರವಾಗಿ ಇರಿಸಿಕೊಳ್ಳಲಾಗಿದೆ. ಕೃಷಿ ಸಂಸ್ಕೃತಿ ಪಲ್ಲಟದ ಹಂತಗಳನ್ನು ಚಾರಿತ್ರಿಕವಾಗಿ ಗಮನಿಸುವುದರೊಂದಿಗೆ ಪಲ್ಲಟದ ತಾತ್ವಿಕತೆಯನ್ನು ಅರ್ಥೈಸಿಕೊಳ್ಳುವುದು ಪ್ರಮುಖ ಅಂಶವಾಗಿದೆ. ಈ ದಾಖಲಾತಿಯ ಮೈಲುಗಲ್ಲುಗಳನ್ನು ಗುರುತಿಸಲು ಬರಿಯ ಗ್ರಂಥಸ್ಥ ಸಾಹಿತ್ಯಿಕ ರಚನೆಗಳಲ್ಲದೆ ಮೌಖಿಕ ಸಾಹಿತ್ಯದ ಕಡೆಗೂ ಗಮನ ಹರಿಸುವುದು ಅಧ್ಯಯನದ ವ್ಯಾಪ್ತಿಯೂ ಆಗಿದೆ.

ಕರಾವಳಿಯು ಭೌಗೋಳಿಕವಾಗಿ ಬಹುಭಾಷಾ ಸಂಪರ್ಕದಲ್ಲಿದ್ದರೂ ವ್ಯವಹಾರದ, ಸಂಪರ್ಕದ ಭಾಷೆಯಾಗಿ ಅತಿ ಹೆಚ್ಚು ಬಳಕೆಯಲ್ಲಿರುವುದು ತುಳು ಭಾಷೆ. ಈ ಭಾಷೆಯೂ ಮೌಖಿಕ ಸಾಹಿತ್ಯದ ಪರಂಪರೆಯಲ್ಲಿ ಅತ್ಯಂತ ಶ್ರೀಮಂತವಾಗಿದೆ. ಗಾದೆ, ಒಗಟು, ಎದುರುಕತೆ, ಕಬಿತೆ, ಪಾಡ್ದನ, ಕತೆ, ಸಂಧಿ, ಉರಲ್, ಜೋಕುಲೆ ಪದೊಕುಲು, ಹೀಗೆ ತುಂಬಾ ಪ್ರಕಾರದಲ್ಲಿ ಅತ್ಯಂತ ಅಧ್ಯಯನಶೀಲವಾಗಿ ಗೋಚರಿಸುತ್ತದೆ. ಇಲ್ಲಿಯೂ ಸಾಹಿತ್ಯವು ಬದುಕಿನ ಎಲ್ಲ ಆಯಾಮಗಳನ್ನು ಒಳಗೊಂಡಿರುವಂಥದು. ಅಲ್ಲದೆ, ಪಾಡ್ದನ, ಸಂಧಿ ಉರಲ್, ಕಬಿತೆಗಳನ್ನು ಗದ್ದೆ ಸಾಗುವಳಿಯ ವಿವಿಧ ಚಟುವಟಿಕೆಗಳ ಸಂಧರ್ಭಗಳಲ್ಲಿ ಹಾಡಲಾಗುತ್ತದೆ. ಅಲ್ಲದೆ ಕಬಿತೆಯ, ಉರಲಿನ ಪಾಡ್ದನ ವಿಷಯ ವಸ್ತುವೂ ಕೃಷಿಯೇ ಆಗಿರುತ್ತದೆ. ವಸ್ತು, ಆಶಯ, ಹಾಡುವ ಸಂದರ್ಭ ಈ ಮೂರು ಅಂಶಗಳು ಕೃಷಿ ಸಂಸ್ಕೃತಿಯ ಒಂದು ಭಾಗವೇ ಆಗಿದೆ. ಅತ್ಯಂತ ಅಗಾಧವಾಗಿರುವ ಮೌಖಿಕ ಸಾಹಿತ್ಯದಲ್ಲೂ ಎಲ್ಲವನ್ನು ಆಯ್ಕೆ ಮಾಡಿಕೊಳ್ಳಲಾಗಿಲ್ಲ. ಬದುಕಿನ ಒಂದು ಭಾಗವೇ ಆಗಿದ್ದು ವ್ಯವಸಾಯದ ಲೋಕವನ್ನು ಅನಾವರಣಗೊಳಿಸುವ ಜನಪದ ಸಾಹಿತ್ಯವನ್ನು ಒಂದು ಮಿತಿಯ ಒಳಗಡೆ ಬಳಸಿಕೊಳ್ಳಲಾಗಿದೆ. ಕೆಲವು ಹಂತದಲ್ಲಿ ಮನುಷ್ಯನ ಬದುಕಿಗೆ ಹತ್ತಿರವಾಗಿರುವ ಜನಮಾನಸದ ಅಲೋಚನೆಗಳನ್ನು ಪ್ರತಿಬಿಂಬಿಸುವ ನೆಲೆಯಲ್ಲಿ ಇದನ್ನು ಆಯ್ಕೆ ಮಾಡಿಕೊಳ್ಳಲಾಗಿದೆ. ಕೃಷಿ ಸಂಸ್ಕೃತಿಯ ಪಲ್ಲಟದ ನಿರೂಪಣೆಗೆ ಆಕರಗಳಾಗಿ ಇದನ್ನು ಬಳಸಿಕೊಳ್ಳಲಾಗಿದೆ. ಕೃಷಿ ಸಂಸ್ಕೃತಿಯ ಪಲ್ಲಟದ ಗ್ರಹಿಕೆಗೆ ಇದು ಮುಖ್ಯ ಆಕರವಾಗಿದೆ.

ಚಾರಿತ್ರಿಕವಾಗಿ ಈಗಾಗಲೇ ದಾಖಲೀಕರಣಗೊಂಡಿರುವ ಅಧ್ಯಯನಗಳು, ವಿಶ್ಲೇಷಣೆಗಳು ಕರಾವಳಿ ಕರ್ನಾಟಕದ ಇತಿಹಾಸವನ್ನು ಹೇಳುತ್ತವೆ. ಕಳೆದ ನಿನ್ನೆಯ ಬಗ್ಗೆ ನಿರೂಪಿಸುವಾಗಲೇ ಇರುವ ವರ್ತಮಾನವನ್ನು ಅರ್ಥೈಸಲು ಇಲ್ಲಿ ಸಾಧ್ಯ. ಮಿಶನರಿಗಳು ಅಕ್ಷರ ಜಗತ್ತಿನಲ್ಲಿ ಕಾಯ್ದಿಟ್ಟ ವಿವರಗಳು, ಶಾಸನಗಳು, ಉಲ್ಲೇಖಗಳು ಚರಿತ್ರೆಯ ಕೃತಿಗಳು ಕೃಷಿ ಬೆಳೆದು ಬಂದ ರೀತಿಯನ್ನು ಹೇಳುತ್ತವೆಯೇ ಎಂದು ಅನ್ವೇಷಿಸಲಾಗಿದೆ. ಅಧ್ಯಯನದಲ್ಲಿ ನೀಡುವ ವಿಶ್ಲೇಷಣೆಗೆ ಅವು ತಥ್ಯಗಳನ್ನು ನೀಡುತ್ತದೆ. ಅಧ್ಯಯನಕ್ಕೆ ಇವು ಅನುಷಂಗಿಕ ಆಕರವಾಗಿವೆ. ಚರಿತ್ರೆಯನ್ನು ಚರಿತ್ರೆಯಾಗಿಸದೆ ನೋಡುವ ದೃಷ್ಟಿಕೋನ ಅಧ್ಯಯನಕ್ಕೆ ವಿಸ್ತರಣೆಯನ್ನು ನೀಡುತ್ತದೆ. ಇತಿಹಾಸವನ್ನು ಅರ್ಥೈಸುವ ಮೂಲಕ ಸಾಹಿತ್ಯಿಕ ಅಭಿವ್ಯಕ್ತಿಯ ಮಜಲುಗಳ ಒಳನೋಟಗಳನ್ನು ವಿಶ್ಲೇಷಿಸುವುದು ಪ್ರಮುಖ ಅಂಶವಾಗಿದೆ.

ಜಾಗತೀಕರಣ ಪೂರ್ವದ ಸಾಹಿತ್ಯಿಕ ಅಭಿವ್ಯಕ್ತಿಗಾಗಿ ಕಾರಂತರ ಕಾದಂಬರಿಗಳನ್ನು ಆಯ್ಕೆ ಮಾಡಿಕೊಳ್ಳಲಾಗಿದೆ. ಪ್ರಮುಖ ನಾಲ್ಕು ಹಂತಗಳನ್ನು ಗುರುತಿಸುವಂತೆ ಕುಡಿಯರ ಕೂಸು, ಬೆಟ್ಟದ ಜೀವ, ಮರಳಿಮಣ್ಣಿಗೆ, ಚೋಮನ ದುಡಿ ಕಾದಂಬರಿಗಳನ್ನು ಮುಖ್ಯ ಆಕರಗಳನ್ನಾಗಿ ಬಳಸಿಕೊಳ್ಳಲಾಗಿದೆ. ಜಾಗತೀಕರಣ ನಂತರದ ಸಾಹಿತ್ಯಿಕ ಅಭಿವ್ಯಕ್ತಿಯನ್ನು ಗುರುತಿಸುವಾಗ ನಾ. ಮೊಗಸಾಲೆಯವರ ಉಲ್ಲಂಘನೆ, ಬೋಳ ಚಿತ್ತರಂಜನ ಶೆಟ್ಟಿಯವರ ಅಳಿದುಳಿದವರು, ಎಚ್ ನಾಗವೇಣಿಯವರ ಗಾಂಧಿ ಬಂಧ ಕೃತಿಗಳನ್ನು ಪ್ರಮುಖವಾಗಿ ಗಮನಿಸಲಾಗಿದೆ. ಪರಿಕಲ್ಪನಾತ್ಮಕ ನೆಲೆಯ ಅಧ್ಯಯನಕ್ಕೆ ಕರಾವಳಿ ಕರ್ನಾಟಕದ ಪ್ರಮುಖ ಲೇಖಕರಾದ ವಿಶುಕುಮಾರ್, ಕಾರಂತರು, ನಾ.ಮೊಗಸಾಲೆ, ಬೋಳ ಚಿತ್ತರಂಜನ್ ಶೆಟ್ಟಿ, ಎಚ್. ನಾಗವೇಣಿ, ಜಾನಕಿ ಬ್ರಹ್ಮಾವರ, ಡಿ.ಕೆ ಚೌಟ,ಮಹಾಲಿಂಗ, ಜಯಮ್ಮ ಚೆಟ್ಟಿಮಾಡ ತುಳು ಕನ್ನಡದ ಬರಹಗಾರರ ಕೃತಿಗಳನ್ನು ಗಮನಿಸಲಾಗಿದೆ. ತುಳುವಿನ ನೆಲಮೂಲದ ಸತ್ಯಗಳನ್ನು ಅರಿಯಲು ಡಿ.ಕೆ.ಚೌಟರ ಮಿತ್ತ ಬೈಲ್ ಯಮುನಕ್ಕೆ, ಜಾನಕಿ ಬ್ರಹ್ಮಾವರ ಅವರ ಕುದುರುದ ಕೇದಗೆ, ಕಪ್ಪುಗಿಡಿ, ರುಕ್ಕು, ಜಯಮ್ಮ ಚೆಟ್ಟಿಮಾಡ ಅವರ ಪರಬಾಳ್ತ ಪರಿಪಾಳೆಲ್, ಕೃತಿಗಳನ್ನು ಆಯ್ಕೆ ಮಾಡಿಕೊಳ್ಳಲಾಗಿದೆ.

### ೧.೩ ವೈಧಾನಿಕತೆ

ಕರಾವಳಿ ಕರ್ನಾಟಕದ ಕೃಷಿ ಸಂಸ್ಕೃತಿ ಪಲ್ಲಟ ಮತ್ತು ಸಾಹಿತ್ಯಿಕ ಅಭಿವ್ಯಕ್ತಿ ಎನ್ನುವ ಈ ಅಧ್ಯಯನದಲ್ಲಿ ಎರಡು ಪರಿಕಲ್ಪನೆಗಳ ಚರ್ಚೆಗಳಿವೆ. ಒಂದು ಕೃಷಿ ಸಂಸ್ಕೃತಿ ಇನ್ನೊಂದು ಸಾಹಿತ್ಯಿಕ ಅಭಿವ್ಯಕ್ತಿ. ಕೃಷಿ ಮತ್ತು ಸಂಸ್ಕೃತಿ ಚಾರಿತ್ರಿಕ ಮತ್ತು ಸಮಾಜಶಾಸ್ತ್ರೀಯ ನೆಲೆಯ ಅಧ್ಯಯನವಾಗಿದೆ. ಒಂದು ಇನ್ನೊಂದರ ಜತೆ ಸೇರಿ 'ಕೃಷಿ ಸಂಸ್ಕೃತಿ' ಎನ್ನುವ ಪರಿಭಾಷೆ ಪರಿಕಲ್ಪನಾತ್ಮಕ ನೆಲೆಯ ಚಿಂತನೆಯನ್ನು ಹುಟ್ಟು ಹಾಕಿದೆ. ಕೃಷಿಯಿಂದ ಸಂಸ್ಕೃತಿ ಬೆಳೆಯಿತೋ ಸಂಸ್ಕೃತಿ ವಿಕಾಸದಿಂದ ಕೃಷಿಯ ವಿಕಾಸವೂ ಆಯಿತೇ ಎನ್ನುವುದು ಬೀಜ ವೃಕ್ಷ ನ್ಯಾಯದಂತಿದೆ. ನಾವು ಹೇಗಿದ್ದೇವೆ ಎನ್ನುವ ವಿವರಗಳನ್ನು ಸಂಸ್ಕೃತಿಯು ವಿವರಿಸಿದರೆ ನಾವು ಎಲ್ಲಿ ಬಂದು ತಲುಪಿದ್ದೇವೆ ಎನ್ನುವುದನ್ನು ನಾಗರಿಕತೆ ಹೇಳುತ್ತದೆ.

ಮನುಷ್ಯ ಬದುಕಿನ ಬಿಕ್ಕಟ್ಟುಗಳನ್ನು ಸಡಿಲಗೊಳಿಸಲು ಸಂಸ್ಕೃತಿಯ ವಿಕಾಸದ ಹೆಜ್ಜೆಗಳು ಅವಶ್ಯ. ಸಂಸ್ಕೃತಿ ಎನ್ನುವುದು ಸರಳ ರೇಖಾತ್ಮಕವಾಗಿ ನಿರೂಪಣೆಗೊಳ್ಳುವಂತಹುದಲ್ಲ. ಕಪ್ಪು ಬಿಳುಪಿನ ಚಿತ್ರಗಳ

ಕಾಲದಲ್ಲಿ ವ್ಯಕ್ತಿವಾದವು ಅವ್ಯಕ್ತವಾಗುವುದಿಲ್ಲ. ಸಾಹಿತ್ಯ, ಸಮಾಜ, ಮತ್ತು ಸಂಸ್ಕೃತಿಯನ್ನು ಬೆಸೆಯುವ ಹಂತದಲ್ಲಿ ಈ ಅಧ್ಯಯನವಿದೆ. ಕೃಷಿ ಸಂಸ್ಕೃತಿ ಎನ್ನುವ ಚಿಂತನೆಯನ್ನು ಸಮಾಜಶಾಸ್ತ್ರೀಯ ಮತ್ತು ಚಾರಿತ್ರಿಕ ನೆಲೆಯಲ್ಲಿ ವಿಶ್ಲೇಷಿಸುವಾಗ ವರ್ತಮಾನದ ಅನುಭವ ಜನ್ಯ ದಾಖಲಾತಿಗಳೂ ಮುಖ್ಯವಾಗುತ್ತದೆ. ಕೃಷಿಯೊಂದಿಗೆ ಬೆರೆತುಕೊಂಡಿರುವ ಎಲ್ಲಾ ಕೃಷಿ ಸಂಬಂಧಿ ಚಟುವಟಿಕೆಗಳನ್ನು ಒಟ್ಟಾಗಿ ಕ್ರಷಿ ಸಂಸ್ಕೃತಿ ಎಂದು ಪರಿಭಾವಿಸಲಾಗಿದೆ. ಕೃಷಿ ಚಟುವಟಿಕೆಗಳು ಮತ್ತು ಕೃಷಿ ಜಾನಪದವನ್ನು ಸಮನ್ವಯಗೊಳಿಸಿ ಕೃಷಿ ಸಂಸ್ಕೃತಿ ಎಂದು ಹೇಳಬಹುದು. ಸಂಸ್ಕೃತಿಯ ಪ್ರಮುಖ ಆಕರ ಮತ್ತು ಆಶಯ ಸಮಾಜವಾಗಿರುವಂತೆ ಸಾಹಿತ್ಯದ ಆಕರವೂ ಆಗಿದೆ. ಸಮಾಜ ಮತ್ತು ಸಾಹಿತ್ಯದ ಪರಸ್ಪರ ಕೊಳುಕೊಡುವಿಕೆಯಲ್ಲಿ ಲೇಖಕರ ಅಭಿವ್ಯಕ್ತಿಯ ಮಾಧ್ಯಮವಾಗಿ ಕೃಷಿ ಜಗತ್ತು ದಾಖಲಾದ ರೀತಿಯೂ ಮುಖ್ಯವಾಗುತ್ತದೆ. ಸಮಾಜ, ಸಾಹಿತ್ಯ, ಸಂಸ್ಕೃತಿಗಳ ತ್ರಿಕೋನ ಸಂಬಂಧದ ಮೂಲಕ ಅಭಿವ್ಯಕ್ತವಾಗುವ ತಾತ್ವಿಕತೆ ಯಾವುದು ಎಂದು ಬಹುಮುಖಿ ಚಿಂತನೆಗಳ ಅಧ್ಯಯನದ ಸ್ವರೂಪದಲ್ಲಿ ಗ್ರಹಿಸಲಾಗಿದೆ.

ಸಾಹಿತ್ಯ ಕೃತಿಗಳನ್ನೇ ಪ್ರಮುಖ ಆಕರಗಳನ್ನಾಗಿ ಇರಿಸಿಕೊಂಡಿರುವುದರಿಂದ ಇದು ಆಕರ ಮುಖಿ ಸಂಶೋಧನೆಯೂ ಹೌದು, ಸಾಹಿತ್ಯ ಎನ್ನುವಾಗ ಬರಿಯ ಲಿಖಿತ ಸಾಹಿತ್ಯವನ್ನಲ್ಲದೆ ಮೌಖಿಕ ಸಾಹಿತ್ಯವೂ ಪ್ರಮುಖ ಆಕರವಾಗಿದೆ. ಒಂದರ್ಥದಲ್ಲಿ ಕೃಷಿಯ ಬಗೆಗಿರುವ ಜನಪದ ಸಾಹಿತ್ಯ ಮತ್ತು ಸೃಜನಶೀಲ ಬರಹಗಳು, ಚಾರಿತ್ರಿಕತೆಯನ್ನು ಗುರುತಿಸಲು ಸಾಧ್ಯವಾಗುತ್ತದೆ. ಇದಲ್ಲದೆ ಶಾಸನಗಳು, ಚಾರಿತ್ರಿಕ ದಾಖಲೆಗಳು ಇವುಗಳನ್ನು ಅನುಷಂಗಿಕ ಆಕರಗಳನ್ನಾಗಿ ಗುರುತಿಸಲಾಗಿದೆ. ವರ್ತಮಾನದಲ್ಲಿ ಇರುವ ವ್ಯವಸಾಯದ ಜಗತ್ತು ಅರ್ಥೈಸಿಕೊಳ್ಳಬೇಕಾದರೆ ಸಾಗಿ ಬಂದ ದಾರಿಯ ತಿಳುವಳಿಕೆಯೂ ಅವಶ್ಯ. ಪೂರಕ ಪಠ್ಯಗಳಾಗಿ ಸಿಗುವ ಸಂಸ್ಕೃತಿ ಚಿಂತನೆಯ ಬರಹಗಳು ವಿಷಯ ವಸ್ತುವನ್ನು ಗ್ರಹಿಸಲು ಮತ್ತು ವಿಶ್ಲೇಷಿಸಲು ಅಗತ್ಯ. ಸಂಸ್ಕೃತಿ ಚಿಂತನೆಯ ಅಧ್ಯಯನಗಳನ್ನು ಮಾಡುವ ಮೂಲಕ ಮನುಷ್ಯ ಸಮಾಜವನ್ನು ಅರ್ಥೈಸುವುದು ಎಷ್ಟು ಅವಶ್ಯವೋ, ಸಾಹಿತ್ಯದ ಓದಿನ ಉದ್ದೇಶವೂ ಮಾನವನ ಅರಿಯುವಿಕೆಯೇ ಆಗಿದೆ. ಇವೆರಡರ ಕೊನೆಯ ತುದಿಯೂ ಮನುಜರೇ ಆಗಿದ್ದು, ನಮ್ಮೊಳಗಿನ ಗ್ರಹಿಕೆಗಳನ್ನು ವಿಸ್ತರಿಸಿಕೊಳ್ಳುವುದೇ ಆಗಿದೆ. ಪಠ್ಯ ಕೇಂದ್ರೀಕರಿಸಿಕೊಳ್ಳುವುದರೊಂದಿಗೆ ಸಂಸ್ಕೃತಿ ಕೇಂದ್ರೀಕರಿಸಿಕೊಳ್ಳುವುದು ಅವಶ್ಯವೆನಿಸುವ ವಿಧಾನವಾಗಿದೆ. ಒಂದು ಅರ್ಥದಲ್ಲಿ ಕೃಷಿ ಸಂಸ್ಕೃತಿ ಎನ್ನುವುದು ಸಮಾಜ ಮತ್ತು ಸಾಹಿತ್ಯದ ಅಂತರ್ ಶಿಸ್ತಿಯ ಅಧ್ಯಯನವು ಆಗುತ್ತದೆ.

ಅಧ್ಯಾಯ –೨

# ಪ್ರಸ್ತಾವನೆ–ವಿಷಯ ಪ್ರವೇಶ

೨.೧ ಇದುವರೆಗೆ ನಡೆದ ಅಧ್ಯಯನಗಳ ಸಮೀಕ್ಷೆ

೨.೨ ಅಧ್ಯಯನ ವಿಷಯದ ತಾತ್ವಿಕ ಸ್ವರೂಪ– ಕೃಷಿ ಮತ್ತು ಸಂಸ್ಕೃತಿ ಹಾಗೂ "ಕೃಷಿ ಸಂಸ್ಕೃತಿ" ನಿರ್ವಚನ

೨.೩ ಕರಾವಳಿ ಕರ್ನಾಟಕದ ಕೃಷಿ ಸಂಸ್ಕೃತಿಯ ಐತಿಹಾಸಿಕ ಹಿನ್ನೋಟ

## ೨ ಪ್ರಸ್ತಾವನೆ ; –ವಿಷಯ ಪ್ರವೇಶ

ಭೂಮಿಯಲ್ಲಿ ಹಾಕಿದ ಬೀಜ ಭೂಮಿಯಾಳದಲ್ಲಿ ಹೂತು ಹೋಗದೆ ಮೊಳಕೆಯೊಡೆದು ಹೊಸ ಜೀವಕ್ಕೆ ಸೃಷ್ಟಿ ನೀಡುವ ವಿಸ್ಮಯಗಳು ಗಮನಿಸಿದ್ದರಿಂದಲೇ ಕೃಷಿ ಹುಟ್ಟಿಕೊಂಡಿದೆ. ಒಂದು ಎರಡಾಗುತ್ತಾ ಹಲವು ಸಾವಿರವಾಗುತ್ತಾ ಹೋಗುವುದು ಇದರೊಳಗಿನ ಮರ್ಮ. ಸೃಷ್ಟಿಯ ಈ ಸೃಜನಶೀಲ ಪ್ರಕ್ರಿಯೆಯನ್ನು ಮನುಷ್ಯ ಜಗತ್ತು ಅರಗಿಸಿಕೊಳ್ಳುತ್ತ ತನ್ನದಾಗಿಸುತ್ತ ಇಟ್ಟ ಧೃಡ ಹೆಜ್ಜೆಯೇ ಕೃಷಿ ಪರಂಪರೆ.

ಸಂಸ್ಕೃತಿಯ ವಿಕಾಸ ಮತ್ತು ಬೆಳವಣಿಗೆಯಲ್ಲಿ ಅಲೆಮಾರಿಯಾಗಿ ಬೇಟೆಯಾಡುತ್ತಿದ್ದ ಮನುಷ್ಯರು ಒಂದು ಕಡೆ ನೆಲೆ ನಿಂತು ಕೃಷಿಯನ್ನು ಆರಂಭಿಸಿದರು ಮತ್ತು ನಾಗರಿಕತೆಯಲ್ಲಿ ಒಂದು ಹೊಸ ಬೆಳವಣಿಗೆ ಅಭಿವೃದ್ಧಿ ಹುಟ್ಟುಹಾಕಿದರು. ಮನುಷ್ಯರು ತಾವು ವಾಸವಾಗಿರುವ ಸ್ಥಳದ ನೀರು ಮತ್ತು ಮಣ್ಣು ಹಾಗೂ ಹವಾಮಾನವನ್ನು ಗಮನಿಸಿದರು. ಅದಕ್ಕೆ ಹೊಂದಿಕೆಯಾಗಿ ಯಾವ ಬೆಳೆಯನ್ನು ಬೆಳೆಯಬಹುದು ಎಂದು ಪ್ರಯೋಗಶೀಲತೆಯನ್ನು ನಡೆಸಿದಾಗ ಪ್ರಾದೇಶಿಕವಾಗಿ ಬೆಳೆಯುವ ಬೆಳೆ ವ್ಯತ್ಯಯವಾಗುತ್ತಾ ಹೊಸತನಗಳು ಕಾಣಿಸಿಕೊಂಡವು.

ಬೆಳೆದ ಬೆಳೆಗಳೊಂದಿಗೆ ಬದುಕು ಕಟ್ಟಿದ ಜನರ ಜೀವನ ಕ್ರಮ ಮತ್ತು ಜೀವನ ಧರ್ಮ ಹೊಸ ಆಯಾಮಗಳನ್ನು ಪಡೆದುಕೊಂಡ ವೈಶಿಷ್ಟ್ಯ ಅಧ್ಯಯನ ಯೋಗ್ಯವಾದುದು. ಹಸಿವೆಯ ಮೂಲವಾಗಿದ್ದ ಕೃಷಿಯ ಅನ್ವೇಷಣೆ ನಿರ್ವಹಣೆಗಳೂ ಮುಖ್ಯ, ಲಭ್ಯ ಸಂಪನ್ಮೂಲಗಳಿಂದಲೇ ಪಡೆಯುತ್ತಿದ್ದ ಇಳುವರಿಯೊಂದಿಗೆ ಅದನ್ನು ಪಡೆದು ಪಸರಿಸಿದ ವೈವಿಧ್ಯತೆಯೊಂದಿಗೆ, ಪ್ರಯೋಗಶೀಲತೆಗಳೂ ನಡೆದವು.

ಬಹಳ ದೀರ್ಘವಾದ ಚರಿತ್ರೆಯನ್ನು ಹೊಂದಿರುವ ಕರಾವಳಿ ಮತ್ತು ಕರಾವಳಿಯ ಕೃಷಿ ಸಂಸ್ಕೃತಿ ಭೌಗೋಳಿಕವಾಗಿ, ಸಾಂಸ್ಕೃತಿಕವಾಗಿ, ಕರ್ನಾಟಕ ಕೃಷಿಗಿಂತ ಭಿನ್ನವಾಗಿ ನಿಲ್ಲುತ್ತದೆ. ಇಂತಹ ವೈಶಿಷ್ಟ್ಯತೆಯನ್ನು ಗುರುತಿಸುವುದೂ ಪ್ರಮುಖ ಅಂಶವಾಗಿದೆ. ಪಾರಂಪರಿಕ ಕೃಷಿ ಜಗತ್ತನ್ನು ದಾಖಲುಗೊಳಿಸುತ್ತಲೇ ಅಲ್ಲಿ ಆದ ವ್ಯತ್ಯಯಗಳನ್ನು ಗಮನಿಸುವುದೂ ಬಹಳ ಮುಖ್ಯವಾಗಿರುತ್ತದೆ. ಪಾರಂಪರಿಕ ಕೃಷಿ ಲೋಕದ ಶ್ರಮವನ್ನು ಉಲ್ಲೇಖಿಸುತ್ತಲೇ ಅಲ್ಲಿರುವ ಮೂಲ ಉದ್ದೇಶ ಅನ್ನ ಮತ್ತು ಆರೋಗ್ಯ ಮಾತ್ರವಾಗಿತ್ತು. ದುಡ್ಡು ಆಗಿರಲಿಲ್ಲ. ಆರ್ಥಿಕತೆ ಯಾವಾಗ ಕಾಲಿರಿಸಿತೋ ಆಗ ವಸ್ತು ವಿನಿಮಯ ಪದ್ಧತಿಯಿಂದ ವ್ಯವಹಾರಗಳು ದುಡ್ಡಿನ ಮೂಲವಾದಾಗ ಅದನ್ನು ಹೇಗೆ ಗ್ರಹಿಸಲಾಯಿತು ಎನ್ನುವುದು ಮುಖ್ಯವೆನಿಸುತ್ತದೆ.

ಕರಾವಳಿಯ ಕೃಷಿ ಸಂಸ್ಕೃತಿ "ಉನಲಾತ್ ನುಪ್ಪು, ಬೆನಲಾತ್ ಬೇಲೆ ಇತ್ತಿ ರಾಜ್ಯ ಓಲುಂಡು? (ಹೊಟ್ಟೆ ತುಂಬಾ ಅನ್ನ ಕೈತುಂಬಾ ಕೆಲಸ ಇರುವ ನಾಡು ಎಲ್ಲಿದೆ?) ಎಂಬ ಪ್ರಶ್ನೆಯನ್ನು ಇಟ್ಟುಕೊಂಡು ಕಟ್ಟಿದ ಕೃಷಿ ಪರಂಪರೆಯ ಕರಾವಳಿಯಲ್ಲಿ ಕೃಷಿ ಉಳಿದಿದೆಯೇ?ಎಂಬುದೇ ಪ್ರಶ್ನೆ. ಕೃಷಿ ಸಂಸ್ಕೃತಿಯು ಹಿಂದಿನಿಂದಲೂ ಹಾಗೆಯೇ ಇತ್ತೇ? ಬದಲಾವಣೆಗಳು ಸ್ಥಿತ್ಯಂತರಗಳು ನಡೆದಿಲ್ಲವೇ? ಬದಲಾವಣೆ ಪ್ರಗತಿಯ ಲಕ್ಷಣ ಎಂದು ಸಾರಸಗಟಾಗಿ ಒಪ್ಪಿಕೊಂಡಿರುವ ನಾವು ಆಗಿರುವ ಬದಲಾವಣೆಗಳನ್ನು ಹೇಗೆ ಗ್ರಹಿಸಿದ್ದೇವೆ? ಮತ್ತು ಹೇಗೆ ಸ್ವೀಕರಿಸಿದ್ದೇವೆ ಎಂಬ ಚಿಂತನೆಯೂ ಇಲ್ಲಿದೆ.

"ಸಂಸ್ಕೃತಿ ಎಂಬುದು ಒಂದು ಸಮುದಾಯವು ಬದುಕುವ ಸಮಸ್ತ ಆಯಾಮಗಳನ್ನು ಒಳಗೊಳ್ಳುವ ಒಂದು ಪರಿಭಾಷೆ. ಸಮುದಾಯ ಎಂದಾಗ ಒಂದು ಗುಂಪಲ್ಲ. ಹಲವಾರು ಗುಂಪುಗಳಿರುತ್ತವೆ. ಈಯೆಲ್ಲ ಗುಂಪುಗಳ ನಂಬಿಕೆ ಆಚರಣೆಗಳು ಒಟ್ಟು ಸೇರಿಯೇ ಅದ ಸಂಸ್ಕೃತಿ." **(ರಹಮತ್ ತರಿಕೆರೆ; ೨೦೦೮ ; ಪುಟ ೭)**

ಸಂಸ್ಕೃತಿ ಎಂದರೆ ಜನರ ಜೀವನ ಕ್ರಮವೆಂದು ಸರಳೀಕರಿಸುವುದಾದರೆ, ದುಡಿದರೆ ತಿನ್ನಬಹುದು ಎಂಬ ಪಡೆ ನುಡಿಗೆ ಪರ್ಯಾಯವಾಗಿದೆ. ದುಡಿಮೆಯ ಪರಿಭಾಷೆ ಮತ್ತು ಸಂಪತ್ತಿನ ಪರಿಭಾಷೆಗಳು ಬದಲಾಗುವುದರೊಂದಿಗೆ ಜನರ ಜೀವನ ಕ್ರಮದಲ್ಲಿ ಆದ ವ್ಯತ್ಯಯಗಳೇನು ಎನ್ನುವುದನ್ನು ಗಮನಿಸುವುದು ಮುಖ್ಯ ಪ್ರಶ್ನೆ. ಸಂಸ್ಕೃತಿ ನಿರ್ವಚನೆಯಲ್ಲಿ ಸಾಹಿತ್ಯಿಕವಾಗಿ ಅದು ಅಭಿವ್ಯಕ್ತವಾದ ಸ್ವರೂಪಗಳೇನು? ಎಂಬ ಗಂಭೀರವಾದ ಪ್ರಶ್ನೆಗೆ ಉತ್ತರವನ್ನು ಅನ್ವೇಷಿಸುವುದು. ಈ ನಿರ್ವಚನ ದಾಖಲಾದ ರೀತಿ ಯಾವುದು ಮತ್ತು ಯಾಕೆ? ಕೃಷಿ ಪಲ್ಲಟ ಯಾಕಾಯಿತು? ಎಂಬ ಪ್ರಾಥಮಿಕ ಪ್ರಶ್ನೆಯೇ ಅಧ್ಯಯನದ ಅನ್ವೇಷಣೆಯ ಮೊದಲ ಹೆಜ್ಜೆ. ಇಂತಹ ಪಲ್ಲಟಗಳು ಜೀವನ ಕ್ರಮ ಮತ್ತು ಜೀವನ ಧರ್ಮದಲ್ಲಿ ತಂದ ಪಲ್ಲಟಗಳೇನು? ಸಾಮಾಜಿಕ ವ್ಯವಸ್ಥೆಯಲ್ಲಿ ಆದ ಪಲ್ಲಟಗಳೇನು? ಮೌಲ್ಯಗಳಲ್ಲಿ ಆದ ಪಲ್ಲಟಗಳೇನು? ಆರಾಧನೆ ಆಚರಣೆಗಳು ಹೇಗೆ ಪಲ್ಲಡಗೊಂಡವು ಎನ್ನುವ ಪ್ರಶ್ನೆಗೆ ಉತ್ತರ ಹುಡುಕುವ ಪ್ರಯತ್ನ ಮಾಡುವುದು.

ಕರಾವಳಿಯ ಕ್ರಿಯಾಶೀಲ ಜನತೆ ಆಧುನಿಕತೆಯ ಎಲ್ಲ ಆಗುಗಳಿಗೆ ತಮ್ಮನ್ನು ಮುಕ್ತವಾಗಿ ತೆರೆದುಕೊಂಡವರು ಕೃಷಿ ಕ್ಷೇತ್ರದಲ್ಲಿ ಆದ ಬದಲಾವಣೆಯನ್ನು ಹೇಗೆ ಗ್ರಹಿಸಿದ್ದೇವೆ ಎನ್ನುವುದು ಮುಖ್ಯ. ಸಾಹಿತ್ಯವು ಸಮಾಜದ ಪ್ರತಿಬಿಂಬವಾಗಿರುವಾಗ ಕಲಾತ್ಮಕ ಕೃತಿಯು ಒಡಮೂಡುತ್ತಲೇ ತನ್ನ ಅನನ್ಯತೆಯನ್ನು ಹೇಗೆ ಕಾಯ್ದುಕೊಂಡಿದೆ? ಸಾಹಿತ್ಯಿಕ ಅಭಿವ್ಯಕ್ತಿಯ ನಿರ್ವಚನವನ್ನು ಮಾಡುತ್ತಲೇ ಜಾಗತೀಕರಣ ಪೂರ್ವದ ಅಭಿವ್ಯಕ್ತಿ ಮತ್ತು ಜಾಗತೀಕರಣ ನಂತರದ ಅಭಿವ್ಯಕ್ತಿಗಳನ್ನು ಗುರುತಿಸುವುದು. ಚಾರಿತ್ರಿಕವಾಗಿ ಕೃಷಿ ಜಗತ್ತು ಸಾಹಿತ್ಯಿಕವಾಗಿ ದಾಖಲಾಗಿ ಬಂದ ಸ್ವರೂಪಗಳು ಯಾವುವು? ಸಾಹಿತ್ಯದ ಪ್ರಕಾರವಾದ ಕಾದಂಬರಿಗಳನ್ನು ಮುಖ್ಯ ಆಕರವಾಗಿ ಇರಿಸಿಕೊಳ್ಳಲಾಗಿದೆ.

**೨.೧ ಇದುವರೆಗೆ ನಡೆದ ಅಧ್ಯಯನಗಳ ಸಮೀಕ್ಷೆ**

ಈ ವಿಷಯದ ಸಮಗ್ರ ಸಂಶೋಧನಾತ್ಮಕ ಅಧ್ಯಯನಗಳು ನಡೆದಿಲ್ಲ. ಕರಾವಳಿ ಕರ್ನಾಟಕದ ಕೃಷಿ ಸಂಸ್ಕೃತಿ ಪಲ್ಲಟ ಮತ್ತು ಸಾಹಿತ್ಯಿಕ ಅಭಿವ್ಯಕ್ತಿಯ ಬಗೆಗೆ ಯಾವುದೇ ಬಿಡಿ ಲೇಖನಗಳು ಲಭ್ಯವಾಗಿಲ್ಲ. ಸಾಹಿತ್ಯವನ್ನಾಗಲೀ ಸಂಸ್ಕೃತಿಯನ್ನಾಗಲೀ ಈ ದೃಷ್ಟಿಕೋನದಿಂದ ವಿಶ್ಲೇಷಿಸಿದ ಬರಹಗಳು ಲಭ್ಯವಿಲ್ಲ. ಕೃಷಿಯನ್ನು ಅದರದೇ ಆದ ಶಿಸ್ತಿನಿಂದ ಮತ್ತು ಜಾನಪದ ಅರ್ಥಶಾಸ್ತ್ರ, ಸಮಾಜಶಾಸ್ತ್ರ, ವಾಣಿಜ್ಯ ಶಾಸ್ತ್ರಕ್ಕೆ ಅಳವಡಿಸಿ ನಡೆಸಿರುವ ವಿಷಯವನ್ನು ಗ್ರಹಿಸಲು ಮತ್ತು ವಿಶ್ಲೇಷಿಸಲು ಅನುಷಂಗಿಕ ಆಕರಗಳಾಗಿ ಸಾಧ್ಯವಾಗಿದೆ. ವ್ಯವಸಾಯದ ವಿವಿಧ ಮಗ್ಗುಲುಗಳನ್ನು ಅರ್ಥೈಸಲು ಸಾಧ್ಯವಾಗಿದೆ.

ಸಂಶೋಧನಾ ಕ್ಷೇತ್ರದ ವಿಸ್ತಾರದಲ್ಲಿ ಕರಾವಳಿಯ ಕೃಷಿ ಸಂಸ್ಕೃತಿ ಮತ್ತು ಕರ್ನಾಟಕದ ಕೃಷಿ ಸಂಸ್ಕೃತಿಯ ಬಗೆಗೆ ವಿವಿಧ ಜ್ಞಾನ ಶಿಸ್ತುಗಳ, ನೆಲೆಯಲ್ಲಿ ಅಧ್ಯಯನ ನಡೆಸಿದ ಬರಹಗಳು ಸಾಮಾನ್ಯ

ಗ್ರಹಿಕೆಗಳನ್ನು ವಿಸ್ತರಿಸಿದೆ. ಯಾವುದೇ ಜ್ಞಾನ ಕ್ಷೇತ್ರಕ್ಕೂ ಅದರದ್ದೇ ಆದ ಮಿತಿಗಳಿದ್ದು ಶಾಸ್ತ್ರೀಯವಾದ ಚಿಂತನೆಯ ಮಿತಿಗಿಂತ ಭಿನ್ನವಾದ ನೆಲೆಯನ್ನು ಗ್ರಹಿಸುವುದೂ ಪ್ರಮುಖವಾಗಿ ಜ್ಞಾನದ ವಿಸ್ತರಣೆಯೇ ಆಗುತ್ತದೆ. ಕೃಷಿಯನ್ನು ಪೂರಕ ಪಠ್ಯವಾಗಿ ತಮ್ಮ ಅಧ್ಯಯನದ ಒಂದು ಭಾಗವಾಗಿ ವಿಶ್ಲೇಷಿಸಿದ್ದು ಬಹಳ ಮುಖ್ಯವಾಗಿದೆ.

"ತುಳು ಜನಪದ ಸಾಹಿತ್ಯ" ಬಿ.ಎ ವಿವೇಕ ರೈಯವರ ಪ್ರಸ್ತುತ ಸಂಶೋಧನಾ ಪ್ರಬಂಧದಲ್ಲಿ ಕರಾವಳಿ ಕರ್ನಾಟಕದ ಎಲ್ಲ ಪ್ರಕಾರದ ಜನಪದಸಾಹಿತ್ಯವನ್ನು ಸಂಗ್ರಹಿಸಿ ವಿಶ್ಲೇಷಣೆ ನಡೆಸಲಾಗಿದೆ. ಜಾನಪದವು ಕೃಷಿ ಜಗತ್ತಿನ ಒಂದು ಭಾಗವಾಗಿದ್ದು, ಕೃಷಿ ಲೋಕವನ್ನು ವಿಸ್ತರಿಸಲೂ ಸಾಧ್ಯವಾಗಿದೆ. ವ್ಯವಸಾಯ ಜಾನಪದ ಎಂದು ಅರ್ಥೈಸಲು ಸಾಧ್ಯವಾಗಿದೆ. ಮೌಖಿಕ ಪಠ್ಯವಾಗಿದ್ದ ಜನಪದ ಸಾಹಿತ್ಯವನ್ನು ಸಂಗ್ರಹಿಸಿ ವಿಭಿನ್ನ ನೆಲೆಯಲ್ಲಿ ವಿಶ್ಲೇಷಣೆ ನಡೆಸಿದ್ದಾರೆ. ಜಾನಪದವನ್ನೇ ಕೇಂದ್ರವಾಗಿರಿಸಿ ಹಲವು ಪಠ್ಯಗಳ ಮೂಲಕ ತುಳುನಾಡಿನ ಚರಿತ್ರೆ, ಜನ ಜೀವನದ ಕ್ರಮಗಳು, ಜೀವನ ಮೌಲ್ಯಗಳು, ವ್ಯವಸಾಯದ ವಿವರಗಳು, ಆರಾಧನೆ, ಮತ್ತು ನಂಬಿಕೆಯ ಕುರಿತಾದ ವಿವರಗಳು, ಭೌಗೋಳಿಕತೆ, ಆಹಾರ ಕ್ರಮ, ಆಚರಣೆಗಳು ಹೀಗೆ ಪ್ರತಿಯೊಂದು ಅಂಶದ ಬಗೆಗೂ ವಿವರಣೆಗಳಿವೆ.

ಜನಪದ ಹಾಡುಗಳನ್ನು ಕೃಷಿ ಕಾರ್ಯದ ಆಯಾಸ ಪರಿಹಾರಕ್ಕಾಗಿ ಹಾಡುತ್ತಿದ್ದರು. ಕೃಷಿ ಅವರ ಬದುಕಿನ ಭಾಗವಾಗಿರುವುದರ ಜೊತೆಗೆ ಅದರ ಮೂಲಕ ಕಟ್ಟಿಕೊಂಡಿರುವ ಜೀವನ ಮೌಲ್ಯಗಳ ವಿಸ್ತಾರವೂ ಆಗಿದೆ. ಮೂಲ ಆಕರಗಳಾದ ಪಾಡ್ದನ, ಕಬಿತೆ, ಸಂಧಿ, ಒಗಟು ಗಾದೆಗಳನ್ನು ವಿಭಾಗ ಕ್ರಮಗಳಾಗಿಸಿ ಕೃತಿಯು ವಿಶ್ಲೇಷಿಸುವುದರೊಂದಿಗೆ ಸಂಸ್ಕೃತಿ ಪರಿಚಯದ ಪರಂಪರೆಯ ಬಗೆಗೆ ತಿಳಿಯುತ್ತದೆ. ಪ್ರಸ್ತುತ ಪ್ರಬಂಧದ ಮೌಖಿಕ ಸಾಹಿತ್ಯದ ಅಧ್ಯಯನಕ್ಕೆ ಪೂರಕ ಆಕರವಾಗಿದೆ. ಕೃಷಿ ಸಂಸ್ಕೃತಿಯು ಅದರ ಒಂದು ಭಾಗವಾಗಿದೆ. ತುಳು ಸಂಸ್ಕೃತಿಯ ಅಧ್ಯಯನದೊಂದಿಗೆ ಭೌಗೋಳಿಕಯ ವಿವರಗಳು ಇಲ್ಲಿವೆ. ವಿವೇಕ ರೈ ಯವರ ಅಧ್ಯಯನವು ಕ್ಷೇತ್ರ ಕಾರ್ಯ ಸಂಬಂಧಿ ಅಧ್ಯಯನವಾಗಿದ್ದು ಪ್ರತಿಯೊಂದು ಜನಪದ ಸಾಹಿತ್ಯದ ಪ್ರಕಾರಗಳ ಹಲವು ಪಠ್ಯಗಳನ್ನು ಇರಿಸಿಕೊಂಡು ಒಂದು ತಾತ್ವಿಕ ಚರ್ಚೆಯನ್ನು ನಡೆಸುತ್ತದೆ. ಪಾಡ್ದನ, ಕತೆ, ಸಂಧಿ, ಗಾದೆ, ಆಟಗಳು, ಒಗಟುಗಳು ಎಲ್ಲವೂ ಮುಖ್ಯವಾಗಿವೆ. ಕ್ಷೇತ್ರ ಕಾರ್ಯದ ವಿಸ್ತಾರ ಹರವನ್ನು ಹೊಂದಿರುವ ಈ ಅಧ್ಯಯನ ಜನಪದದ , ಮೌಖಿಕ ಸಾಹಿತ್ಯದ ಹಲವು ಪಠ್ಯಗಳ ಮೂಲಕ ಸಂಸ್ಕೃತಿ ಚಿಂತನೆ ನಡೆಸುತ್ತದೆ.

ರಾಜಶ್ರೀಯವರ "ತುಳು ಜನಪದ ಕಾವ್ಯ ಇಹ ಪರ ಲೋಕದೃಷ್ಟಿ" ಎಂಬ ಸಂಶೋಧನಾ ಪ್ರಬಂಧವು ಮೌಖಿಕ ಸಾಹಿತ್ಯವನ್ನು ಮೂಲ ಆಕರಗಳಾಗಿ ಇಟ್ಟು ಲೋಕದೃಷ್ಟಿಯನ್ನು ವಿಶ್ಲೇಷಣೆ ಮಾಡಲಾಗಿದೆ. ಇಡೀ ಪ್ರಬಂಧದಲ್ಲಿ ಬದುಕಿನ ಎಲ್ಲ ಅಂಶಗಳೂ ಮುಖ್ಯವಾದರೂ ಬೇರೆ ಬೇರೆ ನೆಲೆಯಲ್ಲಿ ಬದುಕಿನ ಲೋಕದೃಷ್ಟಿಯನ್ನು ಅಭ್ಯಸಿಸಿದ್ದಾರೆ. ತುಳು ಜನಪದ ಸಾಹಿತ್ಯದ ಹೆಚ್ಚಿನ ಪ್ರಕಾರಗಳನ್ನು ಈ ಅಧ್ಯಯನಕ್ಕೆ ಆಯ್ಕೆ ಮಾಡಿಕೊಂಡಿದ್ದು ಜನರ ಜೀವನ ಕ್ರಮದ ಆಲೋಚನೆಗಳನ್ನು ವಿಶ್ಲೇಷಿಸಲಾಗಿದೆ. ಮೌಖಿಕ ಸಾಹಿತ್ಯದ ಪಠ್ಯವನ್ನು ಬೇರೆ ಬೇರೆ ನೆಲೆಯಲ್ಲಿ ಅರ್ಥೈಸುವಂತೆ ಇಲ್ಲಿಯೂ ಬೇರೆ ಬೇರೆ

ಅಧ್ಯಾಯಗಳಲ್ಲಿ ವಿಶ್ಲೇಷಣೆ ನಡೆಸಲಾಗಿದೆ. ಜನಪದರಿಗೆ 'ಇಹ'ದ ಬಗೆಗಿರುವ ಚಿಂತನೆಗಳಲ್ಲದೆ ಸತ್ತ ನಂತರದ 'ಪರ' ದ ಬಗೆಗಿನ ಕಲ್ಪನೆಯ ಆಶಯಗಳನ್ನು ನಿರೂಪಿಸಿದ್ದಾರೆ. ಪ್ರಸ್ತುತ ಅಧ್ಯಯನಕ್ಕೆ ಪೂರಕವೆನ್ನಬಹುದಾದ ಒಂದು ಭಾಗದಲ್ಲಿ ಕೃಷಿಯ ಬಗೆಗೆ ತುಳುವರ ಲೋಕ ದೃಷ್ಟಿಯನ್ನು ವಿಶ್ಲೇಷಿಸುತ್ತದೆ.

ತುಳು ಮಹಾ ಕಾವ್ಯ "ಮಂದಾರ ರಾಮಾಯಣ ಸ್ವರೂಪ ಮತ್ತು ಅನನ್ಯತೆ"ಎಂಬ ಅಧ್ಯಯನ ಗ್ರಂಥದಲ್ಲಿ ನಿಕೇತನ ಅವರು ಕಾವ್ಯದ ವಿಷಯ ವಸ್ತುಗಳ ಮೂಲಕ ಕೃತಿಯ ಅನನ್ಯತೆಯನ್ನು ಗುರುತಿಸಿದ್ದಾರೆ. ತುಳು ಸಂಸ್ಕೃತಿಯ ಸೂಕ್ಷ್ಮ ಎಳೆಗಳನ್ನು ಕೃತಿ ಶಿಲ್ಪದಲ್ಲಿ ಗುರುತಿಸಿ ಅಧ್ಯಯನ ಯೋಗ್ಯವಾಗಿಸಿದ್ದಾರೆ. ಉಳಿದ ಭಾಷೆಗಳ ರಾಮಾಯಣ ಕೃತಿಗಳೊಂದಿಗೆ ಕಾವ್ಯವನ್ನು ಸಮೀಕರಿಸಿ ತುಳುವಿನ ಕೃತಿ ಹೇಗೆ ಮತ್ತು ಯಾಕೆ ಭಿನ್ನ ಎಂಬ ಕಾರಣಗಳನ್ನು ಹುಡುಕಿದ್ದಾರೆ. ಒಂದು ಸಣ್ಣ ಉಪ ಅಧ್ಯಾಯದಲ್ಲಿ ನಿರೂಪಣೆಗೊಂಡಿರುವ ವ್ಯವಸಾಯದ ಉಲ್ಲೇಖಗಳು ಇವೆ. ಉಳಿದಂತೆ ಕಾವ್ಯ ತೌಲನಿಕ ಅಧ್ಯಯನವು ನಡೆದಿದ್ದು ತುಳುವಿನ ಕೃತಿಯ ವೈಶಿಷ್ಟ್ಯ ಮತ್ತು ವಿಭಿನ್ನತೆಯನ್ನು ನಿರೂಪಿಸಿದ್ದಾರೆ.

ಸುಂದರ ಕೇನಾಜೆಯವರು ಕಲ್ಲಿಕೋಟೆ ವಿಶ್ವವಿದ್ಯಾನಿಲಯಕ್ಕೆ ಸಲ್ಲಿಸಿದ ಪ್ರೌಢ ಪ್ರಬಂಧ " ಭತ್ತ ಒಂದು ಅಧ್ಯಯನ' ವು ಭತ್ತದ ಚಾರಿತ್ರಿಕ ಮತ್ತು ಸಾಂಸ್ಕೃತಿಕ ವಿವರಗಳನ್ನು ನಿರೂಪಿಸುತ್ತದೆ. ವ್ಯವಸಾಯದ ಕುರಿತಾದ ಅಧ್ಯಯನದೊಂದಿಗೆ ಭತ್ತದ ವಿಭಿನ್ನ ತಳಿಗಳು ಬೆಳೆಸುವ ರೀತಿ, ಬೆಳೆಯ ಹಿನ್ನೆಲೆಯಲ್ಲಿರುವ ನಂಬಿಕೆ ಆಚರಣೆಗಳನ್ನು ವಿಶ್ಲೇಷಿಸುತ್ತದೆ. ತುಳುನಾಡಿನ ಬೇಸಾಯ ಜಾನಪದ ಅಧ್ಯಯನ ಎಂಬ ಪ್ರಬಂಧದಲ್ಲಿ ಭತ್ತದ ಬೇಸಾಯ, ಭತ್ತ ಬೇಸಾಯದ ಕ್ರೀಯಾ ಸ್ವರೂಪ, ಬೇಸಾಯ ಜಾನಪದ, ಬೇಸಾಯ ಸಂಬಂಧಿ ಆಚರಣೆಗಳು, ಬೇಸಾಯ ಮತ್ತು ಭೌತಿಕ ಸಂಸ್ಕೃತಿ, ಬೇಸಾಯ ಮತ್ತು ತುಳು ಸಂಸ್ಕೃತಿ, ಬೇಸಾಯ ಮತ್ತು ಆಧುನಿಕತೆ ಎಂಬ ಅಧ್ಯಾಯಗಳಲ್ಲಿ ಭತ್ತವನ್ನು ಕೇಂದ್ರೀಕರಿಸಿ ಅಧ್ಯಯನ ನಡೆಸಲಾಗಿದೆ. ಸಾಹಿತ್ಯದ ಉಲ್ಲೇಖ ಈ ಪ್ರಬಂಧದ ಮಿತಿಯೊಳಗಿಲ್ಲ. ಸಾಂಸ್ಕೃತಿಕ ಚಿಂತನೆಯ ಹಿನ್ನೆಲೆಯಲ್ಲಿ ಅಧ್ಯಯನವನ್ನು ನಡೆಸಲಾಗಿದೆ.

'ಕನ್ನಡ ಕಥನ ಸಾಹಿತ್ಯ ಮತ್ತು ಗ್ರಾಮ ಸಮಾಜ' ಎಂಬ ಅಧ್ಯಯನ ನಡೆಸಿರುವ ಸೂರಮ್ಮನ ಹಳ್ಳಿ ಉಮೇಶ ಅವರು ಗ್ರಾಮ ಸಮಾಜದ ಸಂಕಥನವನ್ನು ಬೇರೆ ಬೇರೆ ನೆಲೆಯಲ್ಲಿ ವಿಶ್ಲೇಷಿಸಿದ್ದಾರೆ. ಆಧುನಿಕ ಕನ್ನಡ ಸಾಹಿತ್ಯದಲ್ಲಿ ಚಾರಿತ್ರಿಕ ಮತ್ತು ಸಾಮಾಜಿಕ ಆಯಾಮಗಳ ಹಿನ್ನೆಲೆಯಲ್ಲಿ ಸಾಹಿತ್ಯ ಪಂಥಗಳನ್ನು ಗುರುತಿಸಿದ್ದಾರೆ. ಗ್ರಾಮ ಸಮಾಜದ ವಿವಿಧ ನೆಲೆಗಳನ್ನು ವಿಶ್ಲೇಷಿಸುವಾಗ ಜಮೀನ್ದಾರಿ ವ್ಯವಸ್ಥೆಯಲ್ಲಿ ಜಾತಿ-ಜೀತ-ಭೂಮಿ ಸಂಬಂಧಗಳನ್ನು ಅನ್ವೇಷಿಸಿದ್ದಾರೆ. ಕೃಷಿಯ ಹಿನ್ನೆಲೆಯಲ್ಲಿ ಈ ಒಂದು ಸಣ್ಣ ಅಧ್ಯಯನವಿದೆ. ಗ್ರಾಮ ಸಮಾಜದ ಹಿನ್ನೆಲೆಯಲ್ಲಿ ಈ ಅಧ್ಯಯನವನ್ನು ನಡೆಸಲಾಗಿದೆ.

ಎಂ. ಚಂದ್ರ ಪೂಜಾರಿಯವರ"ಯಾಕೀಗ ಭೂಮಿ ಪ್ರಶ್ನೆ" ಎಂಬ ಅಧ್ಯಯನವು ಅರ್ಥಶಾಸ್ತ್ರದ ಹಿನ್ನೆಲೆಯಲ್ಲಿ ವಿಚಾರಗಳನ್ನು ಚರ್ಚಿಸಿವೆ. ಸಾಮಾಜಿಕವಾಗಿ ಕರಾವಳಿ ಕರ್ನಾಟಕದಲ್ಲಿ ಆಗುತ್ತಿರುವ ಸ್ಥಿತ್ಯಂತರಗಳ ಬಗೆಗೆ ಪ್ರಮೇಯ ಒಂದನ್ನು ನಿರೂಪಿಸುತ್ತದೆ. ಕರ್ನಾಟಕದ ಭೂ ಸುದಾರಣಾ ಮಸೂದೆಗಳು, ಮಸೂದೆಗಳಿಂದ ಭೂ ಸುದಾರಣೆ ಆಗಿದೆಯೇ, ಯಾರ್ಯಾರಿಗೆ ಎಷ್ಟೆಷ್ಟು? ಯಾಕೆ ಹೀಗಾಯಿತು ಎಂಬ ಪ್ರಶ್ನೆಗಳೊಂದಿಗೆ ವರ್ತಮಾನದ ಕೃಷಿ ಜಗತ್ತನ್ನು ಪರಾಮರ್ಶಿಸುವುದರೊಂದಿಗೆ ಸಾಮಾಜಿಕವಾಗಿ ಆದ

ಬದಲಾವಣೆಗಳನ್ನು ಚರ್ಚಿಸುತ್ತದೆ. ಭೂಮಿಯ ಒಡೆತನದ ಬಗೆಗಿನ ಪ್ರಶ್ನೆಯ ಮೂಲಕ ಸಾಮಾಜಿಕ ಚಿಂತನೆಯೊಂದನ್ನು ಅಂಕಿ ಅಂಶಗಳೊಂದಿಗೆ ನಡೆಸಿದ್ದಾರೆ.

ಉಡುಪಿ ಜಿಲ್ಲೆಯ ತರಕಾರಿ ಮಾರುಕಟ್ಟೆಯ ಸ್ವರೂಪ ಮತ್ತು ಸಮಸ್ಯೆ (ಮಟ್ಟುಗುಳ್ಳದ ಅಧ್ಯಯನದ ಹಿನ್ನೆಲೆಯಲ್ಲಿ) ಎಂಬ ಸಂಶೋಧನಾ ಪ್ರಬಂಧವನ್ನು ಬರೆದ ಪ್ರಕಾಶ್. ರಾವ್.ಎ ಅವರು ವಾಣಿಜ್ಯಶಾಸ್ತ್ರ ಮತ್ತು ಅರ್ಥಶಾಸ್ತ್ರದ ಹಿನ್ನೆಲೆಯಲ್ಲಿ ಅಧ್ಯಯನ ನಡೆಸಿದ್ದಾರೆ. ಅಂಕಿ ಅಂಶಗಳು ಮತ್ತು ಮಾಹಿತಿಯನ್ವಯ ಅಧ್ಯಯನ ನಡೆಸಿದ್ದಾರೆ. ಚರಿತ್ರೆ, ಅರ್ಥಶಾಸ್ತ್ರ, ವಾಣಿಜ್ಯ ಶಾಸ್ತ್ರಗಳ ಆನ್ವಯಿಕತೆಯ ಶಿಸ್ತಿನಿಂದ ಹಲವಾರು ಅಧ್ಯಯನಗಳು ನಡೆದಿವೆ. ಬೇರೆ ಬೇರೆ ಬೆಳೆಗಳನ್ನು ಈ ಹಿನ್ನೆಲೆಯಲ್ಲಿ ಅಧ್ಯಯನ ನಡೆಸಲಾಗಿದೆ. ಶಂಕರ ಪಾಟಾಳಿ ವೈ ಅವರ ಪುಷ್ಪೋದ್ಯಮ ಮಲ್ಲಿಗೆ ಕೃಷಿ ವರ್ತಮಾನ ಮತ್ತು ಭವಿಷ್ಯ, ಶ್ರೀ ಭಾಸ್ಕರ ಶೆಟ್ಟಿ ಅವರ 'ವಸಾಹತು ಶಾಹಿ ಆಳ್ವಿಕೆಯಲ್ಲಿ ಭೂ ನಿಯಂತ್ರಣ ಮತ್ತು ಸಮಾಜ ರಚನೆ ಚಾರಿತ್ರಿಕ ಮತ್ತು ಸಾಮಾಜಿಕ ಸಂರಚನೆಗಳ ಹಿನ್ನೆಲೆಯಲ್ಲಿ ಅಧ್ಯಯನವನ್ನು ನಡೆಸುತ್ತಾರೆ. ಈ ಅಧ್ಯಯನವು ಕೃಷಿಗೆ ಸಂಬಂಧಪಟ್ಟದಲ್ಲವಾದರೂ ವಸಾಹತುಶಾಹಿ ಕಾಲದ ಭೂಮಿಯ ವ್ಯತ್ಯಾಸಗಳ ಸ್ಥಿತ್ಯಂತರಗಳು ಬಹಳ ಪ್ರಮುಖವಾದವು. ಭೂಮಿಯ ಬಗೆಗಿನ ದಾಖಲಾತಿಯೂ ಮೊದಲ ಬಾರಿಗೆ ಅತಿ ವಿಶಿಷ್ಟವಾಗಿ ದಾಖಲುಗೊಂಡ ವಿವರಗಳು ಭೂಮಿಯ ಮಾಪನದ ವಿವರಗಳನ್ನು ಬೇರೆ ಬೇರೆ ದಾಖಲಾತಿಗಳ ಮೂಲಕ ಸಂಗ್ರಹಿಸಿ ಆಕರ ಮುಖಿ ಅಧ್ಯಯನ ನಡೆಸಿದ್ದಾರೆ. ಭೂಮಿಯ ದೃಷ್ಟಿಕೋನ ಬದಲಾದ ಬಗೆಯನ್ನು ಈ ಅಧ್ಯಯನ ತಥ್ಯಗಳು ನಿರೂಪಿಸುತ್ತದೆ.

ವಸಾಹತುಶಾಹಿ ಮತ್ತು ದೇಸೀಯ ಆರ್ಥಿಕತೆಗಳ ಮುಖಾಮುಖಿ, 'ಕೊಡಗು –ಕೆನರಾ ಆರ್ಥಿಕ ಬಂಡಾಯ' ಎಂಬ ಪ್ರೌಢ ಪ್ರಬಂಧ ಪ್ರತಿಮಾ ಪಿ.ಎಸ್ ಅವರದ್ದು. ದಕ್ಷಿಣ ಕನ್ನಡದಲ್ಲಿ ನಡೆದ ರೈತ ಚಳುವಳಿಯ ಪ್ರತಿಭಟನೆಯ ಅಂಶಗಳನ್ನು ಇಲ್ಲಿ ಚಾರಿತ್ರಿಕವಾಗಿ ದಾಖಲಿಸಲಾಗಿದೆ. ಕರಾವಳಿ ಕರ್ನಾಟಕದಲ್ಲಿ ವ್ಯವಸಾಯ ಮತ್ತು ಆರ್ಥಿಕತೆಯ ಮೂಲಕ ಆದ ಬದಲಾವಣೆಗಳನ್ನು ಆರ್ಥಿಕ ಅಂಕಿ ಅಂಶಗಳ ಮೂಲಕ ವಿಶ್ಲೇಷಿಸಲಾಗಿದೆ. ವಸಾಹತುಶಾಹಿ ಆಡಳಿತದ ಹಿನ್ನೆಲೆಯಲ್ಲಿ ಕೃಷಿಯಲ್ಲಿ ಆದ ಬದಲಾದ ಸ್ವರೂಪಗಳನ್ನು ಚಾರಿತ್ರಿಕವಾಗಿ ಇಲ್ಲಿ ದಾಖಲುಗೊಳಿಸಿದ್ದಾರೆ. ಕೊಡಗಿನ ರಾಜ ಕಲ್ಯಾಣಪ್ಪನ ಹೆಸರಿನಲ್ಲಿ ನಡೆದ ದಂಗೆಯ ಸತ್ಯಾಸತ್ಯತೆಯನ್ನು ಮತ್ತು ಈ ಘಟನೆಯ ಹಿಂದಿರುವ ಚಾರಿತ್ರಿಕ ಸತ್ಯವನ್ನು ಇಲ್ಲಿ ಮುಖ್ಯವಾಗಿ ಗಮನಿಸಲಾಗಿದೆ. ಚರಿತ್ರೆಯಲ್ಲಿ ದಾಖಲಾಗದೆ ಹೋದ ಜನರ ರೂಢಿಯಲ್ಲಿ 'ಅಮರ ಸುಳ್ಯದ ದಂಗೆ' ಎಂದೇ ಪ್ರಸಿದ್ಧವಾಗಿದೆ. ಈ ಚಾರಿತ್ರಿಕ ಘಟನೆಗಳನ್ನು ಉಲ್ಲೇಖಿಸುತ್ತ ರಾಜರ ಆಡಳಿತ, ವಸಾಹತುಶಾಹಿ ಆಡಳಿತ ಇವೆರಡರ ಮಧ್ಯದ ವ್ಯತ್ಯಾಸದಿಂದ ರೈತರೇ ಯಾಕೆ ದಂಗೆ ಎದ್ದರು ಎಂಬ ಚಾರಿತ್ರಿಕ ಸತ್ಯವನ್ನು ಈ ಪ್ರಬಂಧದಲ್ಲಿ ಅನ್ವೇಷಿಸಲಾಗಿದೆ. ಆರ್ಥಿಕತೆಯ ಪರಿಭಾಷೆಗಳು ಬದಲಾದ ಕಾರಣ ಈ ರೀತಿಯ ಒಂದು ಸ್ಥಿತ್ಯಂತರವನ್ನು ಇಲ್ಲಿ ಗುರುತಿಸಲಾಗಿದೆ. ಕರಾವಳಿಯಲ್ಲಿ ಪ್ರಾದೇಶಿಕವಾಗಿ ನಡೆದ ಈ ಘಟನೆ ಚಾರಿತ್ರಿಕವಾಗಿಯೂ, ಆರ್ಥಿಕವಾಗಿಯೂ ಪ್ರಮುಖವಾದ ಅಂಶವಾಗಿದೆ.

"ತುಳುನಾಡಿನ ಆಚರಣೆಗಳು– ವಾರ್ಷಿಕ ಆವರ್ತನದ ಸಾಂಸ್ಕೃತಿಕ ಅಧ್ಯಯನ" ಎಂಬ ಪ್ರೌಢ ಪ್ರಬಂಧವನ್ನು ರಚಿಸಿರುವ ದಿವಾಕರ. ಕೆ ಅವರು ಆಚರಣೆಗಳು ಕೃಷಿ ಬದುಕಿನ ಭಾಗವಾಗಿರುವ ಸತ್ಯಗಳನ್ನು

ದಾಖಲಿಸುತ್ತಾರೆ. ವಾರ್ಷಿಕ ಆವರ್ತನದಲ್ಲಿ ಕಾರ್ತಿ ತಿಂಗಳಲ್ಲಿರುವ ಆಚರಣೆಗಳೊಂದಿಗೆ ಇಡೀ ವರ್ಷದ ಕಾಲಚಕ್ರವನ್ನು ಗುರುತಿಸುವುದರೊಂದಿಗೆ ವ್ಯವಸಾಯದ ಚಕ್ರವನ್ನು ವಿಶ್ಲೇಷಿಸುತ್ತಾರೆ. ಕ್ಷೇತ್ರಕಾರ್ಯ ಸಂಬಂಧಿಯಾದ ಈ ಬರಹ ಆಚರಣೆಗಳನ್ನು ವಿವರಣಾತ್ಮಕವಾಗಿ ವಿವರಿಸುತ್ತದೆ. ಆಚರಣೆಗೂ ವ್ಯವಸಾಯಕ್ಕೂ ಇರುವ ಸಂಬಂಧಗಳೊಂದಿಗೆ ಮನುಷ್ಯನ ಜೀವನ ಆವರ್ತನ ಮತ್ತು ವಾರ್ಷಿಕ ಆವರ್ತನದಲ್ಲೂ ಇದು ವಿವರಣೆಯನ್ನು ನೀಡುತ್ತದೆ.

"ಕಾರ್ಮಿಕ ಕಲ್ಯಾಣ – ದಕ್ಷಿಣ ಕನ್ನಡ ಜಿಲ್ಲೆಯ ಸಂಘಟಿತ ಮತ್ತು ಅಸಂಘಟಿತ ದುಡಿಮೆಯ ತೌಲನಿಕ ಅಧ್ಯಯನ" ಎಂಬ ಅಧ್ಯಯನವನ್ನು ನಡೆಸಿದವರು ಕ್ಯಾನ್ಯೂಟ್ ಬರ್ಬೋಜ್ ವಾಣಿಜ್ಯ ಶಾಸ್ತ್ರದ ಹಿನ್ನೆಲೆಯಲ್ಲಿ ನಡೆಸಿದ ಈ ಅಧ್ಯಯನ ಅರ್ಥಶಾಸ್ತ್ರದ ನೆಲೆಯ ಅಂಕಿ ಅಂಶಗಳ ಮೂಲಕ ಅರ್ಥೈಸಲಾಗಿದೆ. ಬದಲಾದ ದುಡಿಮೆಯ ಜತೆಗೆ ಕಾರ್ಮಿಕ ಕಲ್ಯಾಣ ಯೋಜನೆಗಳ ಚರ್ಚೆಯನ್ನು ನಡೆಸುತ್ತದೆ. ಸಂಘಟಿತ ಮತ್ತು ಅಸಂಘಟಿತ ವಲಯದ ವ್ಯತ್ಯಾಸವನ್ನು ಅಧ್ಯಯನ ವಿಶ್ಲೇಷಿಸುತ್ತದೆ. ಅರ್ಥಶಾಸ್ತ್ರ ಮತ್ತು ವ್ಯವಹಾರ ಅಧ್ಯಯನದ ತಾತ್ವಿಕತೆಗಳು ಇಲ್ಲಿ ಪ್ರಮುಖ ಅಂಕಿ ಅಂಶಗಳಾಗಿವೆ. ಕೃಷಿ ಸಂಸ್ಕೃತಿಗೆ ಪೂರಕವಾಗಿರುವ ಕೃಷಿ ಕೂಲಿ ಕಾರ್ಮಿಕರ ಕೆಲಸ ದುಡಿಮೆ ಇಂದಿಗೂ ಸಂಘಟಿತ ವಲಯದಲ್ಲಿ ಸೇರ್ಪಡೆಗೊಂಡಿಲ್ಲ ಎಂಬ ಸತ್ಯವನ್ನು ಸ್ಪಷ್ಟವಾಗಿ ಸ್ಪಷ್ಟಸಿಕೊಳ್ಳಬಹುದು.

ಮೋಹನ ಗೌಡ. ಎಚ್ ಅವರ 'ದ.ಕ ಜಿಲ್ಲೆಯ ಮಲೆಕುಡಿಯರ ಸಮಾಜೋ ಸಾಂಸ್ಕೃತಿಕ ಅಧ್ಯಯನ' ಎನ್ನುವ ಪ್ರಬಂಧವು ಕರಾವಳಿಯ ವ್ಯವಸಾಯ ಸಮುದಾಯವೊಂದರ ಜನಾಂಗಿಕ ಅಧ್ಯಯನವನ್ನು ನಡೆಸುತ್ತದೆ. ಸಂಸ್ಕೃತಿಯ ಅಧ್ಯಯನವೂ ಇದು ಆಗಿದ್ದು ಮಲೆಕುಡಿಯರ ಕೃಷಿ ಜಗತ್ತಿನ ಅಧ್ಯಯನದ ಪುಟ್ಟ ಭಾಗವಾಗಿದೆ. ಸಾಂಸ್ಕೃತಿಕ ಅಧ್ಯಯನದಲ್ಲಿ ಸಮುದಾಯದ ಬದುಕಿನ ಗ್ರಹಿಕೆಯ ಉಳಿದ ಅಂಶಗಳ ಕಡೆಗೆ ಹೆಚ್ಚು ಗಮನ ಹರಿಸಲಾಗಿದೆ.

'ಕೃಷಿ ಜಾನಪದ ಮತ್ತು ಮಹಿಳೆ' ಸುಮಂಗಲಾ ಜತ್ತಿಯ ಅಧ್ಯಯನವು ಹಾವೇರಿ ಜಿಲ್ಲೆಯನ್ನು ಕೇಂದ್ರವಾಗಿರಿಸಿಕೊಂಡು ನಡೆಸಿದ ಅಧ್ಯಯನವಾಗಿದೆ. ಅಧ್ಯಯನದ ಕೇಂದ್ರದಲ್ಲಿರುವ ಮಹಿಳೆಯನ್ನು ಎಲ್ಲ ಆಯಾಮಗಳ ಮೂಲಕ ಸಂಗ್ರಹಿಸುವ ಪ್ರಯತ್ನ ನಡೆಸಲಾಗಿದೆ. ಆಕೆಯ ಭಾಗವಹಿಸುವಿಕೆ ಮತ್ತು ಕೃಷಿಯ ಪಾತ್ರವಾದ ಹಿನ್ನೆಲೆಯನ್ನು ವಿಶ್ಲೇಷಿಸಲಾಗಿದೆ. ಅಧ್ಯಯನವನ್ನು ಹಾವೇರಿ ಜಿಲ್ಲೆಗೆ ನಿರ್ದಿಷ್ಟಪಡಿಸಿದರೂ ಮಹಿಳೆ ಮತ್ತು ಕೃಷಿಯ ಒಡನಾಟದ ಬಗೆಗಿನ ಚರ್ಚೆಯನ್ನು ಚರಿತ್ರೆ ಮತ್ತು ಸಂಸ್ಕೃತಿಯ ಹಿನ್ನೆಲೆಯಲ್ಲಿ ಚರ್ಚಿಸಲಾಗಿದೆ. ಕೃಷಿ ಸಂಬಂಧಿ ಆಚರಣೆ ನಂಬಿಕೆಗಳನ್ನಲ್ಲದೆ ಜನಪದ ಸಾಹಿತ್ಯದಲ್ಲಿ ಕೃಷಿ ಮಹಿಳೆಯ ಚಿತ್ರಣವನ್ನು ವಿವರಿಸಲಾಗಿದೆ. ಕೃಷಿ ಮಹಿಳೆಯ ಸಮಕಾಲೀನ ಜಗತ್ತಿನಲ್ಲಿ ಆಧುನಿಕತೆಯ ಭರಾಟೆಯಲ್ಲಿ ಹೇಗೆ ಬದಲಾಗುತ್ತ ಸಾಗಿದ್ದಾಳೆ ಎಂಬ ಪ್ರಶ್ನೆಯನ್ನಿರಿಸಿಕೊಂಡು ಉತ್ತರಿಸುವ ಯತ್ನವನ್ನು ಮಾಡಲಾಗಿದೆ.

'ಕೃಷಿ ನಿರಂತರತೆಯಲ್ಲಿ ಮಾನವ ಸಂಪನ್ಮೂಲದ ಪಾತ್ರ' ಎಂಬ ಅಧ್ಯಯನವನ್ನು ನಡೆಸಿದವರು ಶಶಿಧರ ಕೆ.ಸಿಯವರು. ಮನುಷ್ಯ ಶ್ರಮಕ್ಕೆ ಒತ್ತು ಕೊಟ್ಟು ಕೃಷಿ ನಿರಂತರತೆಯ ಮಹತ್ವವನ್ನು ಉಲ್ಲೇಖಿಸಿದ್ದಾರೆ. 'ಕನ್ನಡದಲ್ಲಿ ಕೃಷಿ ವಿಜ್ಞಾನ ಸಾಹಿತ್ಯ ಮತ್ತು ಕೃಷಿಕರ ಮೇಲೆ ಅದರ ಪ್ರಭಾವ ಒಂದು ಅಧ್ಯಯನ' ಶ್ರೀ

ಬಾಲಕೃಷ್ಣ ಜೆ ಅವರದು ಚಾರಿತ್ರಿಕತೆ ಮತ್ತು ಅಭಿವೃದ್ಧಿಯ ನೆಲೆಯಲ್ಲಿ ಈ ಅಧ್ಯಯನವನ್ನು ಅರ್ಥೈಸಲಾಗಿದೆ. ಜ್ಯೋತ್ಸ್ನಾ ಚಂದ್ರಕಾಂತ ಅವರ 'ಭೂ ಒಡೆತನ ಮತ್ತು ಮಹಿಳೆ' ಎಂಬ ಅಧ್ಯಯನವು ಸಮಾಜಶಾಸ್ತ್ರೀಯ ಮತ್ತು ಸ್ತ್ರೀವಾದಿ ನೆಲೆಯಲ್ಲಿ ಹೆಣ್ಣಿನ ಭೂಮಿ ಒಡೆತನದ ಬಗೆಗಿನ ವಾದಗಳನ್ನು ಮುಂದಿಡುತ್ತದೆ. ಹೆಣ್ಣಿಗೆ ಸಿಕ್ಕಿಲ್ಲದ ಮತ್ತು ಸಿಕ್ಕಿದ ಒಡೆತನಗಳಿಗೆ ಕಾರಣವಾದ ಕುಟುಂಬ ವ್ಯವಸ್ಥೆ ಸಾಮಾಜಿಕ ಸಂರಚನೆಗಳ ಕುರಿತಾದ ಅಧ್ಯಯನದ ಶಿಸ್ತಿದೆ.

"ಕೃಷಿ ಸಂಪನ್ಮೂಲ ಮಾರುಕಟ್ಟೆಯಲ್ಲಿ ರಸಗೊಬ್ಬರಗಳು–ಕೋಲಾರ ಜಿಲ್ಲೆಯ ಒಂದು ಅಧ್ಯಯನ" ವು ಎಚ್. ಸೋಮಶೇಖರ್ ಅವರದು. ಅಭಿವೃದ್ಧಿ ಅಧ್ಯಯನದ ಅಂಕಿ ಅಂಶಗಳ ಹಿನ್ನೆಲೆಯಲ್ಲಿ ವಿಚಾರಗಳನ್ನು ಇಲ್ಲಿ ಮಂಡಿಸಲಾಗಿದೆ. 'ಕನ್ನಡದಲ್ಲಿ ಕೃಷಿ ಶಾಸ್ತ್ರ ಸಾಹಿತ್ಯ' ಎಂಬ ಪ್ರಬಂಧವು ಎಚ್.ಎಸ್ ವಿರೂಪಾಕ್ಷಪ್ಪ ಅವರದು. ಶಾಸ್ತ್ರ ಸಾಹಿತ್ಯದ ಪರಿಭಾಷೆಯಲ್ಲಿ ಹಸ್ತಪ್ರತಿಗಳ ನೆಲೆಯಲ್ಲಿ ಅಧ್ಯಯನ ನಡೆಸಿದ್ದಾರೆ. 'ಗ್ರಾಮಾಭಿವೃದ್ಧಿ ಮತ್ತು ಅಡಿಕೆ ಮಾರುಕಟ್ಟೆ ವ್ಯವಸ್ಥೆಯಲ್ಲಿ 'ಮಾಸ್'ನ ಪಾತ್ರ' ಎಂಬ ಅಧ್ಯಯನ ನಡೆಸಿದವರು ಶ್ರೀ ಅರುಣ್ ಪ್ರಕಾಶ್. ವಾಣಿಜ್ಯ ಶಾಸ್ತ್ರದ ಹಿನ್ನೆಲೆಯಲ್ಲಿ ಮಾರುಕಟ್ಟೆ ವ್ಯವಸ್ಥೆಯ ಮೂಲಕ ಅಡಿಕೆಯ ಬೆಲೆ ನಿಗದಿ, ಇಳುವರಿ, ಲಾಭ–ನಷ್ಟ ಮೊದಲಾದ ಸಂಗತಿಗಳನ್ನು ಗಮನಿಸಿದ್ದಾರೆ.

"ದ.ಕ ಜಿಲ್ಲೆಯ ಸಾಮಾಜಿಕ ಬದಲಾವಣೆಯಲ್ಲಿ ಕ್ರೈಸ್ತ ಸಂಸ್ಥೆಗಳ ಪಾತ್ರ ಎಂಬ ಅಧ್ಯಯನ" ನಡೆಸಿದವರು ನೋಬರ್ಟ್ ಮಸ್ಕರೇನಸ್. ಕ್ರಿ.ಶ ೧೮೩೪ ರಿಂದ ೨೦೦೮ ರವರೆಗೆ ಕಾಲಮಿತಿಯನ್ನು ಹಾಕಿಕೊಂಡು ಈ ಅಧ್ಯಯನವನ್ನು ಚಾರಿತ್ರಿಕವಾಗಿ ಮತ್ತು ಸಾಮಾಜಿಕ ನೆಲೆಯ ಸ್ಥಿತ್ಯಂತರಗಳನ್ನು ಗಮನಿಸಲಾಗಿದೆ. ಅರ್ಥಶಾಸ್ತ್ರದ ಹಿನ್ನೆಲೆಯಲ್ಲಿ ನಡೆಸಿದ ಈ ಅಧ್ಯಯನ ಮಾರುಕಟ್ಟೆಯ ನಿಗ್ರಹವನ್ನು ಕೃಷಿ ಚಟುವಟಿಕೆಯ ಮೇಲಾಗುವ ಪರಿಣಾಮವನ್ನು ನಿರೂಪಿಸುತ್ತದೆ. ವಾಣಿಜ್ಯ ಬೆಳೆಯಾದ ಮೆಣಸು ಮತ್ತು ಹೊಗೆಸೊಪ್ಪುವನ್ನು ಮೂಲವಾಗಿ ಇರಿಸಿಕೊಳ್ಳಲಾಗಿದೆ.

"ಆಧುನಿಕ ಕಥನ ಸಾಹಿತ್ಯದಲ್ಲಿ ಭೂ ಹೋರಾಟದ ಪ್ರತಿನಿಧೀಕರಣ" (ಭೂಮಿಯ ಒಡೆತನ ಮತ್ತು ರೈತರ ಹೋರಾಟ) ಎಂಬ ಅಧ್ಯಯನವನ್ನು ನಡೆಸಿರುವ ಎಂ.ಸಿ ಮಲ್ಲಿಕಾರ್ಜುನ ಅವರು ಕಥನ ಸಾಹಿತ್ಯದ ಹಿನ್ನೆಲೆಯಲ್ಲಿ ಭೂಮಿಯ ಒಡೆತನಕ್ಕಾಗಿ ನಡೆದ ಹೋರಾಟಗಳು ದಾಖಲುಗೊಂಡಿವೆ ಎನ್ನುವುದನ್ನು ಅರ್ಥೈಸಲು ಸಾಧ್ಯವಾಗಿದೆ. ಒಡೆತನದ ಪ್ರಶ್ನೆಗಿಂತಲೂ ಹೆಚ್ಚಾಗಿ ನಡೆಸಿದ ಹೋರಾಟವನ್ನು ಅಭಿವ್ಯಕ್ತಿಗೊಳಿಸಿದ ರೀತಿಯೂ ಮುಖ್ಯವಾಗಿದೆ. ಭೂಮಿಯ ಒಡೆತನಕ್ಕಾಗಿ ನಡೆದ ಹೋರಾಟ ಚಾರಿತ್ರಿಕವಾಗಿ ದಾಖಲಾದುದು ವಿರಳವಾದರೂ ಕಥನ ಸಾಹಿತ್ಯದ ಹಿನ್ನೆಲೆಯಲ್ಲಿ ವಿವರಿಸುತ್ತಾರೆ. ಭೂಮಿಯ ಕುರಿತಾದ ಚಿಂತನೆಗಳು ಬದಲಾದ ಸ್ಥಿತಿಯನ್ನು ಇಲ್ಲಿ ಅರ್ಥೈಸಿಕೊಳ್ಳಬಹುದು.

ಎಂ.ಜಿ. ಈಶ್ವರಪ್ಪನವರು ೧೯೮೩ ರಲ್ಲಿ ಕೃಷಿ ಜಾನಪದ ಎಂಬ ಲೇಖನವನ್ನು ಬರೆದು ನಂತರ ಮೈಸೂರು ವಿಶ್ವವಿದ್ಯಾನಿಲಯದಲ್ಲಿ 'ಚಿತ್ರದುರ್ಗ ಜಿಲ್ಲೆಯ ವ್ಯವಸಾಯ ಜಾನಪದ' ಎಂಬ ವಿಷಯವನ್ನು ಕುರಿತು ಸಂಶೋಧನಾ ಪ್ರಬಂಧ ಮಂಡಿಸಿದರು. ಜಾನಪದದ ಹಿನ್ನೆಲೆಯಲ್ಲಿ ಕ್ಷೇತ್ರಕಾರ್ಯ ಸಂಬಂಧಿ ಅಧ್ಯಯನವಾದ ಈ ಪ್ರಬಂಧವು ಕೃಷಿಯ ಮೂಲದ ಮತ್ತು ಜಾನಪದದ ಚರ್ಚೆಯೊಂದಿಗೆ

ಭೌಗೋಳಿಕತೆಯನ್ನು ಚಿತ್ರದುರ್ಗ ಜಿಲ್ಲೆಗೆ ಸೀಮಿತಗೊಳಿಸಿಕೊಂಡಿದ್ದಾರೆ. ಜಿಲ್ಲೆಯೇ ಕೇಂದ್ರವಾದರೂ ಭೌಗೋಳಿಕತೆಯ ವೈಶಿಷ್ಟ್ಯದೊಂದಿಗೆ ವ್ಯವಸಾಯದ ಪದ್ಧತಿಗಳ ವಿವಿಧ ಹಂತಗಳನ್ನು ಬಿತ್ತನೆಯ ಕಟಾವಿನವರೆಗೆ ಚರ್ಚಿಸಿದ್ದಾರೆ. ವ್ಯವಸಾಯಕ್ಕೆ ಸಂಬಂಧಿಸಿದ ಜನಪದರ ನಂಬಿಕೆ, ಆಚರಣೆ, ವಿಧಿ ನಿಷೇಧಗಳನ್ನು ಹೇಳುವುದರೊಂದಿಗೆ ಕೃಷಿ ಜಗತ್ತಿನ ಪಾರಂಪರಿಕ ಜ್ಞಾನವನ್ನು ದಾಖಲಿಸಿದ್ದಾರೆ. ಬದಲಾಗುತ್ತಿರುವ ಆಧುನಿಕ ವ್ಯವಸಾಯ ಪದ್ಧತಿಯ ಬಗೆಗಿನ ಚರ್ಚೆಯೂ ಪ್ರಸ್ತುತತೆಯನ್ನು ವ್ಯಕ್ತಪಡಿಸುತ್ತದೆ.

ಬಾಸೆಲ್ ಮಿಷನ್ ಸಂಸ್ಥೆಯು ೧೯೧೦-೧೧ ನೇ ಇಸವಿಯಲ್ಲಿ ಪ್ರಕಟಿಸಿದ 'ವ್ಯಾವಸಾಯಿಕ ಪಂಚಾಂಗ' ಎಂಬ ಕಿರು ಹೊತ್ತಗೆ ಕೃಷಿ ಜಗತ್ತಿನ ಕೆಲವು ದಾಖಲೆಗಳನ್ನು ನೀಡುತ್ತದೆ. ಕೃಷಿಗೆ ಸಂಬಂಧಪಟ್ಟ ಗಾದೆಗಳು, ಮಳೆಗಳ, ನಕ್ಷತ್ರಗಳ ಹೆಸರು, ಗದ್ದೆಯ ಹೆಸರು ಅಲ್ಲಲ್ಲಿ ದಾಖಲಾಗಿವೆ. ಕರಾವಳಿಯಲ್ಲಿ ಶೇಂಗಾ ಬೆಳೆಸಲು ಮಾಡಿದ ಖರ್ಚುವೆಚ್ಚಗಳ ವಿವರ ಸಿಕ್ಕ ಲಾಭ ಇವೆಲ್ಲವೂ ಇಲ್ಲಿ ದಾಖಲಾಗಿದೆ. ಗದ್ದೆಗಳನ್ನಲ್ಲದೆ ಭತ್ತದ ತಳಿಗಳನ್ನು ಕೆಲವನ್ನು ಹೆಸರಿಸುತ್ತಾರೆ. ತಿಂಗಳಿನ ಕ್ಯಾಲೆಂಡರ್‌ನಂತೆ ಬೆಳೆಯ ಕ್ಯಾಲೆಂಡರ್ ಕೂಡಾ ಇಲ್ಲಿದೆ.

೧೮೯೪ ರಲ್ಲಿ ರಚಿಸಿದ ಜೆ.ಸ್ಟುಬರ್ಕ್ ರಚಿಸಿದ ಸೌತ್ ಕೆನರಾ ಮ್ಯಾನ್ಯುವಲ್ ಕೃತಿಯಲ್ಲಿ ದ.ಕನ್ನಡದಲ್ಲಿರುವ ಭೂಮಿಯ ವಿಸ್ತಾರ, ವ್ಯವಸಾಯ ಯೋಗ್ಯವಾದ ಪ್ರದೇಶ ಅದರಲ್ಲಿರುವ ಖಾಸಗಿ ಭೂಮಿ ಮತ್ತು ಸರಕಾರಿ ಭೂಮಿಗಳ ಅಂಕಿ ಅಂಶಗಳನ್ನು ನೀಡುತ್ತಾರೆ. ಇಲ್ಲಿಯೂ ಬಳಕೆಯಲ್ಲಿರುವ ಕೆಲವು ಭತ್ತದ ತಳಿಗಳ ಉಲ್ಲೇಖವಿದೆ. ಕೃಷಿ ಸಲಕರಣೆಗಳು ಅವುಗಳ ಹೆಸರು, ರೇಖಾಚಿತ್ರಗಳು ಇಲ್ಲಿವೆ. ತಾವು ಕಣ್ಣಾರೆ ಕಂಡ ವಿಚಾರಗಳನ್ನು ದಿನಚರಿಯ ಪುಟಗಳಂತೆ ನಿರೂಪಿಸದ ರೀತಿ ಸೊಗಸಾಗಿದೆ.

ಬುಕನನ್ "ಎ ಜರ್ನಿ ಫ್ರಮ್ ಗೋವಾ ಥ್ರು ಕೊಚ್ಚಿನ್" ಗೋವಾದಿಂದ ದ.ಕರಾವಳಿಯಲ್ಲಿ ಹಾದು ಹೋಗಿ ನಡೆಸಿದ ಪ್ರವಾಸ ಗ್ರಂಥವೂ ಕೃಷಿ ಜಗತ್ತಿನ ಬಗೆಗೆ ಕೆಲವು ವಿವರಗಳನ್ನು ನೀಡುತ್ತದೆ. ತಾನು ದಾರಿಯಲ್ಲಿ ಕಂಡ ಭತ್ತದ ಗದ್ದೆಗಳು, ಕರುವಿನ ವಿವರಣೆ ಎಲ್ಲವನ್ನು ಗ್ರಹಿಸಿ ದಾಖಲಿಸಿದ ಅಂಶಗಳು ಮುಖ್ಯವಾಗಿವೆ.

ಪೀಟರ್ ವಿಲ್ಸನ್ ಪ್ರಭಾಕರ್ ಅವರು ೧೯೮೮ ರಲ್ಲಿ 'ಬಾಸೆಲ್ ಮಿಶನ್ ಇನ್ ಸೌತ್ ಕೆನರಾ' ಎಂಬ ಸಂಶೋಧನಾ ಪ್ರಬಂಧವನ್ನು ಮಂಗಳೂರು ವಿವಿ ಗೆ ಸಲ್ಲಿಸಿದ್ದಾರೆ. ಬಾಸೆಲ್ ಮಿಶನರಿ ಸಂಸ್ಥೆ ಕರಾವಳಿಯಲ್ಲಿ ಮಾಡಿದ ಎಲ್ಲ ಕಾರ್ಯ ಚಟುವಟಿಕೆಗಳ ಸಂಕಲನವಾಗಿ ಈ ಕೃತಿ ಇದೆ. ಶಿಕ್ಷಣ, ಆರೋಗ್ಯ, ಕಾರ್ಖನೆಗಳು, ಮತ ಪ್ರಚಾರ ಚರ್ಚ್‌ಗಳ ಸ್ಥಾಪನೆ, ಕೃಷಿ ಕೈಗಾರಿಕೆ, ಸಾಹಿತ್ಯಿಕ ಕಾರ್ಯಗಳು ಇವನ್ನೆಲ್ಲ ಒಟ್ಟಾಗಿ ಸಂಕಲಿಸಿದ್ದಾರೆ. ಮಿಶನರಿಗಳು ನಡೆಸಿರುವ ಕಾರ್ಯಗಳ ಹಿನ್ನೆಲೆಯಲ್ಲಿ ಈ ಅಧ್ಯಯನ ನಡೆದಿದೆ.

ಲಭ್ಯ ಎಂ.ಫಿಲ್ ಅಧ್ಯಯನದ ಕೆಲವು ಪ್ರಬಂಧಗಳು ಕೃಷಿ ಸಂಸ್ಕೃತಿಗೆ ಪೂರಕವಾಗಿದೆ. ಕೃಷಿಯನ್ನು ಕೇಂದ್ರವಾಗಿರಿಸಿಕೊಂಡು ಬೇರೆ ಬೇರೆ ಶಿಸ್ತುಗಳಲ್ಲಿ ಈ ಅಧ್ಯಯನಗಳು ಸಾಗಿವೆ. "ಕೃಷಿಯ ಮೇಲೆ ಕೈಗಾರಿಕೀಕರಣದ ಪ್ರಭಾವ" (ಮಂಗಳೂರು ತಾಲೂಕಿನಲ್ಲಿ ಪ್ರಕರಣದ ಅಧ್ಯಯನ) ವನ್ನು ೨೦೧೩ ರಲ್ಲಿ

ನಡೆಸಿದವರು ಪ್ರೀತಮ್ ಶೆಟ್ಟಿ. ವಾಣಿಜ್ಯ ಶಾಸ್ತ್ರದ ಹಿನ್ನೆಲೆಯಲ್ಲಿ ಕೈಗಾರಿಕೆ ಮತ್ತು ಕೃಷಿಯನ್ನು ವಿಶ್ಲೇಷಿಸಲಾಗಿದೆ. ಕೈಗಾರಿಕೆಗಳಿಂದ ಕೃಷಿ ನಾಶವಾಗುತ್ತಿರುವ ವಿವರಗಳು ಅಂಕಿ ಅಂಶಗಳು ಇಲ್ಲಿವೆ.

"ಕುಗ್ಗುತ್ತಿರುವ ಕೃಷಿ ಚಟುವಟಿಕೆಗಳಿಂದಾಗಿ ಜನ ಜೀವನದ ಮೇಲಾಗುತ್ತಿರುವ ಆರ್ಥಿಕ ಸಾಮಾಜಿಕ ಪರಿಣಾಮಗಳು"- ಬ್ರಹ್ಮಾವರದ ಎಂಟು ಗ್ರಾಮ ಅಧ್ಯಯನ ನಡೆಸಿದವರು ಶ್ರೀಮತಿ ಸುಶೀಲ. ಆಯ್ದ ಗ್ರಾಮಗಳನ್ನು ದೃಷ್ಟಿಯಲ್ಲಿರಿಸಿಕೊಂಡು ಅರ್ಥಶಾಸ್ತ್ರದ ಹಿನ್ನೆಲೆಯಲ್ಲಿ ನಡೆಸಿರುವ ಈ ಅಧ್ಯಯನ ಕೃಷಿ ಚಟುವಟಿಕೆಗಳಿಗೂ ಮನುಷ್ಯ ಜೀವನಕ್ಕೂ ಇರುವ ಪರಸ್ಪರ ಸಂಬಂಧಗಳನ್ನು ನಿರೂಪಿಸುವುದರೊಂದಿಗೆ ಅಂಕಿ ಅಂಶಗಳನ್ನು ಪ್ರಸ್ತುತಪಡಿಸುತ್ತದೆ.

ಶಿವಪ್ಪ .ಕೆ. ಅವರ "ವೀರತ್ವ ಮತ್ತು ಕೃಷಿ ಸಮಾಜ", ಸೋಮಶೇಖರ ಅವರ "ಗಣಿಗಾರಿಕೆಯಿಂದ ಕೃಷಿ ಮೇಲಾಗುವ ಪರಿಣಾಮಗಳು", ಮಹಾದೇವ ಎಂ. ನಿಂಬುರಗಿ ಅವರ 'ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿ ಅಭಿವೃದ್ಧಿ ಅಧ್ಯಯನ' ಎಂಬ ಸಂಶೋಧನಾ ಪ್ರಬಂಧವು ಕೃಷಿ ಮತ್ತು ಮಾರುಕಟ್ಟೆಯ ಕುರಿತಾದ ವಿಚಾರಗಳನ್ನು ಮಾರುಕಟ್ಟೆ ಸಮಿತಿಯ ಹಿನ್ನೆಲೆಯಲ್ಲಿ ವಿಶ್ಲೇಷಿಸಲಾಗಿದೆ.

ಇವಲ್ಲದೆ ಪ್ರಧಾನ ಆಕರಗಳಾದ ಪ್ರಸ್ತುತ ಅಧ್ಯಯನಕ್ಕೆ ಪ್ರಧಾನ ಆಕರಗಳಾಗಿ ಬಳಸಿಕೊಳ್ಳಲಾದ ಕನ್ನಡ, ತುಳು ಕಾದಂಬರಿಗಳ ಕುರಿತು ಬೇರೆ ಬೇರೆ ದೃಷ್ಟಿಕೋನಗಳಲ್ಲಿ ಅಧ್ಯಯನಗಳು ನಡೆದಿರುತ್ತವೆ. ಅಂತಹ ಅಧ್ಯಯನಗಳು ಪ್ರಸ್ತುತ ಪ್ರಬಂಧದ ಪರಿಕಲ್ಪನೆಗೆ ನೇರವಾಗಿ ಸಂಬಂಧ ಪಡದೆ ಇರುವುದರಿಂದ ಅವುಗಳನ್ನು ಇಲ್ಲಿ ಸಮೀಕ್ಷೆಗೆ ಒಳಪಡಿಸಿಲ್ಲ. ಇವಲ್ಲದೆ ಕರಾವಳಿ ಕರ್ನಾಟಕದ ಕೃಷಿಯ ಬಗೆಗೆ ಬೇರೆ ಬೇರೆ ಶಿಸ್ತುಗಳಲ್ಲಿ ನಡೆಸಿದ ಅಧ್ಯಯನಗಳನ್ನು ಸ್ಥೂಲವಾಗಿ ಗಮನಿಸಲಾಗಿದೆ.

ಬಿಜಾಪುರದ ಮಹಿಳಾ ವಿಶ್ವ ವಿದ್ಯಾಲಯವು ಪ್ರಕಟಿಸಿರುವ ಮಹಿಳಾ ಸಾಂಸ್ಕೃತಿಕ ಕೋಶದ ಸಂಪುಟದಲ್ಲಿ 'ವ್ಯವಸಾಯ' ಸಂಪುಟ-೧ (೨೦೦೩) ಮೊದಲನೆಯದಾಗಿದೆ. ಕೃಷಿ ಜಗತ್ತನ್ನು ಅನ್ವೇಷಣೆಯ ಸ್ಥಾನದಲ್ಲಿರುವ ಹೆಣ್ಣು ಕಟ್ಟಿ ಬೆಳೆಸಿದ ಪರಿ ಎಲ್ಲೂ ದಾಖಲಾಗದೆ ಇರುವುದರಿಂದ ಅವಳ ಪಾರಂಪರಿಕ ಜ್ಞಾನವನ್ನು ದಾಖಲುಗೊಳಿಸುವುದು ಈ ಅಧ್ಯಯನದ ಉದ್ದೇಶವಾಗಿದೆ. ಮಹಿಳೆಯ ಸಂಸ್ಕೃತಿಯನ್ನು ಉಳಿಸಿ ಬೆಳೆಸುವಲ್ಲಿ ಮತ್ತು ಪೋಷಿಸುವಲ್ಲಿ ತೋರಿದ ಆಸ್ಥೆ, ಶ್ರದ್ಧೆ ಮತ್ತು ತಲ್ಲೀನತೆಯು ಅಪಾರವಾದದ್ದು. ಅವಳ ಈ ಕೌಶಲ್ಯ ನಿಪುಣತೆಯು ಜೀವ ಕಟ್ಟುವ ಕೆಲಸವಾಗಿದ್ದು ಇದನ್ನು ಪರಿಚಯಿಸುವ ಕೆಲಸವನ್ನು ಮಹಿಳಾ ಸಾಂಸ್ಕೃತಿಕ ಕೋಶ ಮಾಡಿದೆ. ಬೆಳೆಯೊಂದನ್ನು ಬೆಳೆಯುವಲ್ಲಿ ಹೆಣ್ಣಿನ ಶ್ರಮವನ್ನು ಸೂಕ್ಷ್ಮವಾಗಿ ಗ್ರಹಿಸಿ ವಿವರಿಸಲಾಗಿದೆ. ಬೆಳೆಯ ಮೊಳಕೆಯ ಫಸಲು ಕೈಗೆ ಬಂದು ಅದನ್ನು ಸಂರಕ್ಷಣೆ, ಒಕ್ಕಣೆ, ತ್ಯಾಜ್ಯ ನಿರ್ವಹಣೆ ಮಾಡುವ ವಿವರಗಳೊಂದಿಗೆ ಕೃಷಿ ಸಂಬಂಧಿ ಆಚರಣೆಗಳನ್ನು ವಿಶ್ಲೇಷಿಸಲಾಗಿದೆ, ಹಿತ್ತಲನ್ನು ನಿರ್ವಹಿಸುವ ಹೆಣ್ಣಿನ ಜಾಣ್ಮೆಯೊಂದಿಗೆ ಪಾರಿಭಾಷಿಕ ಪದಕೋಶ ಮತ್ತು ಅಳತೆ ಮಾಪನಗಳನ್ನು ವಿವರಿಸಿದ್ದಾರೆ. ಮಹಿಳಾ ವಿ.ವಿ ಯ ಪ್ರಸಾರಾಂಗವು ಪ್ರಕಟಿಸಿರುವ ಈ ಕೃತಿಯ ಸಂಪಾದಕರು ಪ್ರೊ. ಸಬಿಹಾ.

ಕೃಷಿ ಬದುಕಿನಲ್ಲಿ ಕಾಣೆಯಾಗುತ್ತಿರುವ ಪದಗಳನ್ನು ದಾಖಲು ಮಾಡುವ ಕೆಲಸವನ್ನು ಕ್ಷೇತ್ರಕಾರ್ಯವನ್ನು ಆಧರಿಸಿ ಸಂಗ್ರಹಿಸಿ ಹಂಪಿ ಕನ್ನಡ ವಿಶ್ವವಿದ್ಯಾಲಯದಿಂದ ೧೯೯೯ ರಲ್ಲಿ ಕೃಷಿ ಪದಕೋಶ ಪ್ರಕಟಗೊಂಡಿದೆ. ಈ ಕೋಶದ ಸಂಕಲನ ಮತ್ತು ಸಂಯೋಜನೆ ಕೆ.ವಿ. ನಾರಾಯಣ, ಅಶೋಕ ಕುಮಾರ ರೆಂಜಿರೆ, ಸುಜ್ಞಾನಮೂರ್ತಿ ವೃತ್ತಿ ಪದಕೋಶದ ಒಂದು ಸಂಚಿಕೆಯಾಗಿ ಪ್ರಕಟಗೊಂಡಿರುವ ಈ ಕೋಶ ಹದಿನೈದು ಅಧ್ಯಾಯಗಳಲ್ಲಿ ಪದಗಳನ್ನು ಸಂಗ್ರಹಿಸಿ ವಿವರಿಸಲಾಗಿದೆ. ಈ ಪದಗಳ ಹಿನ್ನೆಲೆಯಲ್ಲಿ ಕೃಷಿ ಸಂಸ್ಕೃತಿಯ ಕುರಿತಾದ ಚಿಂತನೆಯನ್ನು ನಡೆಸಬಹುದಾಗಿದೆ.

ಸಂಸ್ಕೃತಿ ಚಿಂತನೆಯ ಬರಹಗಳು, ಸಾಹಿತ್ಯದ ಬರವಣಿಗೆಯ ಒಳನೋಟಗಳಲ್ಲದೆ ಕರಾವಳಿ ಜಾನಪದಕ್ಕೆ ಸಂಬಂಧ ಪಟ್ಟಂತೆ ಹಲವಾರು ಬರಹಗಳು, ಬಿಡಿ ಲೇಖನಗಳಿವೆ. ಪಾರ್ಶ್ವಿಕವಾಗಿ ಅಲ್ಲಲ್ಲಿ ಪ್ರಾಸ್ತಾವಿಕವಾಗಿ ಕೃಷಿ ಮತ್ತು ಸಂಸ್ಕೃತಿಯ ಬಗೆಗೆ ಈ ಲೇಖನಗಳು ಚರ್ಚೆ ನಡೆಸಿ ವಿಸ್ತೃತ ಓದಿಗೆ ಸಹಾಯಕವಾಗಿದೆ. ಕರಾವಳಿಯ ಕೃಷಿ ಲೋಕ ಮತ್ತು ಕೃಷಿ ಸಂಸ್ಕೃತಿಯ ಹಿನ್ನೆಲೆಯಲ್ಲಿ ಬಂದ ಲೇಖನಗಳು ವಿರಳ. ೨೦೦೯ ಪ್ರಜಾವಾಣಿ ದಿನ ಪತ್ರಿಕೆಯ ಕರಾವಳಿ ಸಂಚಿಕೆಯಲ್ಲಿ ನರೇಂದ್ರ ರೈ ದೇರ್ಲ ಅವರು ಬರೆಯುತ್ತಿದ್ದ ಅಂಕಣ ಬರಹ ಒಟ್ಟಾರೆಯಾಗಿ ಕೃಷಿಲೋಕದ ಬಗೆಗೆ ಚರ್ಚೆ ನಡೆಸಿದೆ. ಜಾಗತೀಕರಣ ಮತ್ತು ಆಧುನಿಕತೆಯ ಸವಾಲುಗಳಿಗೆ ಕೃಷಿ ಮುಖಾಮುಖಿಯಾಗುತ್ತ ಕಾಣೆಯಾಗುತ್ತಿರುವ ಕೃಷಿ ಲೋಕದ ಕುರಿತ ಕಾಳಜಿ ಈ ಬರಹಗಳಲ್ಲಿದೆ. ವಿಜಯವಾಣಿ ದಿನ ಪತ್ರಿಕೆಯಲ್ಲಿ ೨೦೧೪ ರಲ್ಲಿ ಬರೆಯಿತ್ತಿದ್ದ ಅಂಕಣವೂ ಈ ಹಿನ್ನೆಲೆಯ ಯೋಚನೆಗಳ ಮುಂದುವರಿದ ಭಾಗವೇ ಆಗಿದೆ. ಕೃಷಿಯ ಕಷ್ಟ ನಷ್ಟಗಳು, ರೈತರು ಅನುಭವಿಸುವ ಯಾತನೆಗಳನ್ನು ವ್ಯಯಕ್ತಿಕತೆ ಮತ್ತು ಸಾರ್ವತ್ರಿಕತೆಯ ನೆಲೆಯಲ್ಲಿ ನಿರೂಪಿಸಿದ್ದಾರೆ. ನೀರು ಗೊಬ್ಬರ, ತಳಿಗಳು, ಬೆಳೆಯನ್ನು ಬೆಳೆಯ ಬೇಕಾದ ಶ್ರಮಗಳನ್ನೇ ಇಲ್ಲಿ ವಿವರಿಸಲಾಗಿದೆ. ಕೃಷಿಯ ಪ್ರಾಮುಖ್ಯತೆ ಮತ್ತು ಅನನ್ಯತೆಗಳೊಂದಿಗೆ ಬದುಕಿನ ಭಾಗವಾಗಿದ್ದ ರೈತಾಪಿ ವರ್ಗದ ಕುರಿತ ಚಿಂತನೆ ಇಲ್ಲಿದೆ. ಸಮಕಾಲೀನ ಕೃಷಿಯ ತಲ್ಲಣಗಳು ಇಲ್ಲಿಯ ಮುಖ್ಯ ಆಶಯವಾಗಿದೆ.

ಚಾರಿತ್ರಿಕ ಕೃತಿಗಳಾದ ತುಳುನಾಡಿನ ಇತಿಹಾಸದಲ್ಲಿ ಕೆ.ವಿ ರಮೇಶ್ ಅವರು ಪ್ರಾಚೀನ ತುಳುನಾಡಿನ ಬಗ್ಗೆ ವಿವರಿಸುತ್ತಾ ಆರ್ಥಿಕ ಪರಿಸ್ಥಿತಿಯ ಬಗ್ಗೆ ಬರೆಯುತ್ತಾ ಆಗಿನ ಕಾಲದ ಸರಕಾರದ ಆದಾಯ ಭೂ ವ್ಯವಸಾಯದ ಹುಟ್ಟುವಳಿಯನ್ನೇ ಅವಲಂಬಿಸಿತ್ತು ಎನ್ನುತ್ತಾರೆ. ಪ್ರಾಚೀನ ಆಳುಪರ ಕಾಲ ಕ್ರಿ.ಶ ೯೩೦ ರಿಂದ ೯೬೦ ರ ಕಾಲಘಟ್ಟದಲ್ಲಿ ಅಕ್ಕಿ ಮೆಣಸು, ಅಡಿಕೆ, ಹತ್ತಿ ಮುಂತಾದ ಬೆಳೆಗಳ ಮೇಲೆ ತೆರಿಗೆ ವಿಧಿಸಲಾಗಿದ್ದು, ಹಾಗೆ ಭೂಮಿಯಿಂದ ಸರಕಾರಕ್ಕೆ ಸಲ್ಲಬೇಕಾದ ಆದಾಯವನ್ನು 'ನೆಲಸುಂಕ' ವೆನ್ನುತ್ತಿದ್ದರು. ಅದರಂತೆಯೇ ಕಡಲ ಮತ್ತು ನದಿಯ ಮೇಲಿನ ವ್ಯಾಪಾರದಿಂದ ದೊರೆಯುತ್ತಿದ್ದ ತೆರಿಗೆಯನ್ನು 'ಜಲಸುಂಕ'ವೆನ್ನುತ್ತಿದ್ದರು. ತುಳುನಾಡಿನಲ್ಲಿ ದೊರೆತಿರುವ ಶಾಸನಗಳಲ್ಲಿ ವಡರ್ಸೆ ಶಾಸನದಲ್ಲಿ 'ಕಂಚು', ಮತ್ತು ಕೀಲ್ಗುಂಚು' ಅಂದಿನ ಎರಡು ಬೇರೆ ಬೇರೆ ಮಾನದ ನಾಣ್ಯಗಳಿದ್ದಿರಬಹುದು ಎಂಬ ವಿವರಣೆಗಳಷ್ಟೇ ಈ ಕೃತಿಯಲ್ಲಿದೆ.

'ಸ್ಟಡೀಸ್ ಇನ್ ತುಳುವ ಹಿಸ್ಟರಿ ಆ್ಯಂಡ್ ಕಲ್ಚರ್' ಎನ್ನುವ ತುಳುನಾಡಿನ ಚರಿತ್ರೆಯ ಬಗೆಗೆ ಬರೆದ ಡಾ.ಪಿ ಗುರುರಾಜ ಭಟ್ಟರು (೧೯೭೫) ಕರಾವಳಿಯ ಕೃಷಿ ಮತ್ತು ವ್ಯಾಪಾರದ ಬಗ್ಗೆ ಸಂಕ್ಷಿಪ್ತವಾಗಿ

ವಿವರಿಸುತ್ತಾರೆ. ಶಾಸನಗಳಲ್ಲಿ ಉಲ್ಲೇಖಿಸಲ್ಪಟ್ಟ ಶಬ್ದಗಳನ್ನು ದೃಷ್ಟಿಯಲ್ಲಿರಿಸಿಕೊಂಡು ಇಲ್ಲಿರುವ ಗದ್ದೆಯ ಹೆಸರು, ಜಾತಿಯ ಹೆಸರು, ವೃತ್ತಿ ಸಂಬಂಧಿ ವಿವರಗಳನ್ನು ನೀಡುತ್ತಾರೆ. ಕುಲನಾಮ ಮತ್ತು ವೃತ್ತಿಗಳಿಗೆ ಸಂಬಂಧವಿರಬಹುದೇ ಎಂದು ಚರ್ಚಿಸಿದ್ದಾರೆ.ಬೆಳೆಯ ಹೆಸರು ಎಣೆಲು, ಕಾರ್ತಿ ಎಂಬ ಉಲ್ಲೇಖವಿದೆ. ಗದ್ದೆಗಳನ್ನು ಹಿರಿಯ ಗದ್ದೆ ಗುಡ್ಡೆಯ ಗದ್ದೆ, ಕುದುರು ಕಂಡಖಡಗಣ ಗುಡ್ಡೆಯ ಗದ್ದೆ, ಕೋರಿಗೆ ಗದ್ದೆ ನಗರ ಗದ್ದೆ, ಎಂಬ ದಾಖಲೆಗಳಿವೆ. ೧೩೭೧ ರ ಬಾರಕೂರು ಶಾಸನದಲ್ಲಿ ನಾಯರ್ ಸಮುದಾಯದ ಉಲ್ಲೇಖವಿದೆ. ೧೫೬೨ ರ ಶಾಸನದಲ್ಲಿ ಬ್ಯಾರಿಯೊಬ್ಬ ಭೂಮಿಯನ್ನು ದಾನ ಕೊಟ್ಟ ವಿವರವಿದೆ. ೧೩೮೬ ರ ಬಾರಕೂರು ಶಾಸನದಲ್ಲಿ ಬೆಳೆ ಬೆಳೆವ ಭೂಮಿಗಳನ್ನು ದಾನ ಮಾಡಿದ ಉಲ್ಲೇಖವಿದೆ. ಇವಲ್ಲದೆ ಹೆಚ್ಚಿನ ವಿವರಗಳಿರುವುದು ಜಾತಿ ಮತ್ತು ಬಳಿಗಳ ಬಗೆಗಿನ ಚರ್ಚೆ ಇದೆ. ಕರಾವಳಿಯ ಇತಿಹಾಸದ ದೃಷ್ಟಿಯಿಂದ ಈ ಎರಡೂ ಕೃತಿಗಳೂ ಮಹತ್ವದವಾಗಿದೆ.

ಸಂಶೋಧನೆ ಅಧ್ಯಯನ ಕ್ಷೇತ್ರಕಾರ್ಯ ಸಂಬಂಧಿ ಬರಹಗಳಲ್ಲದೆ ಕೆಲವು ಬಿಡಿ ಲೇಖನಗಳನ್ನು ಉಲ್ಲೇಖಿಸುವುದು ಅವಶ್ಯವಾಗಿದೆ. ಪುರುಷೋತ್ತಮ ಬಿಳಿಮಲೆಯವರ 'ಮಹಿಳಾ ಜಾನಪದ' (೧೯೯೭) , ಮೃತ್ಯುಂಜಯ ಹೊರಕೇರಿ ಸಂಪಾದಕೀಯದ ರೈತ ಜಾನಪದ (೧೯೯೮), ಶಾಂತಿನಾಥ ದಿಬ್ಬದ 'ರೈತ ಮತ್ತು ಭೂಮಿ', ಎಸ್.ಪಿ ಪದ್ಮಪ್ರಸಾದ್ ಅವರ ರೈತ ಮತ್ತು ಮಳೆ, ಎ.ಜಿ ಈಶ್ವರಪ್ಪನವರ ರೈತನ ಸಾಧನ ಸಾಮಾಗ್ರಿಗಳು, ವೀರಣ್ಣ ದಂಡೆಯವರ 'ಸುಗ್ಗಿ ಸಂಪ್ರದಾಯ' ವೆ.ನಂ ಸರ್ವ ಮಂಗಳಾ ಅವರ ವ್ಯವಸಾಯ ಜಾನಪದ, ಸಿ.ಕೆ. ನಾವಲಗಿ ಅವರ 'ಉತ್ತರ ಕರ್ನಾಟಕದ ಕೃಷಿ ಜಾನಪದ ಸಾಹಿತ್ಯ' , ಮೊಗಳ್ಳಿ ಗಣೇಶ್ ಅವರ ಕೃಷಿ ಸಂಸ್ಕೃತಿಯ ದೈವ (೨೦೦೫ ಆದಿಮ) ,ಕೆ.ಜಿ ವಸಚಿತ ಮಾಧವರ ಕನ್ನಡ ಕರಾವಳಿಯ ಕೃಷಿ ವಿಸ್ತರಣೆಯಲ್ಲಿ ನಿಮ್ನ ಹಂತದ ಶೂದ್ರರ ಪಾತ್ರ: ಐತಿಹಾಸಿಕ ನೋಟ (ಇತಿಹಾಶ ದರ್ಶನ) ವಿಜಯಲಕ್ಷ್ಮಿ ಅವರ ಬುಡಕಟ್ಟು ಸಮುದಾಯುಗಳಲ್ಲಿ ಮಾತೃ ಪ್ರಧಾನತೆ ಚರ್ಚೆಯ ವಿವಿಧ ನೆಲೆಗಳು (ಹಾಲಕ್ಕಿ ಒಕ್ಕಲಿಗ ಸಮುದಾಯ ಅನುಲಕ್ಷಿಸಿ) ಬುಡಕಟ್ಟು ಅಧ್ಯಯನ ಸಂಪುಟ ೫, ಸಂಚಿಕೆ ೨, (೨೦೦೮) ಲೇಖನಗಳನ್ನು ಪರಾಮರ್ಶನೆಗೆ ಒಳಪಡಿಸಲಾಗಿದೆ.

ಅರುಹು ಕುರುಹು ಪತ್ರಿಕೆಯ ವಿಶೇಷ ಸಂಚಿಕೆಯ ಒಂದು ಸಂಪುಟ 'ಕೃಷಿ ಸಂಸ್ಕೃತಿ' ಎಂಬ ಆವೃತ್ತಿಯನ್ನು ಪ್ರಕಟಿಸಿದ್ದು ಹಿರಿಯ ವಿದ್ವಾಂಸರು ಕೃಷಿಯ ಬಗ್ಗೆ ಬೇರೆ ಬೇರೆ ಸ್ವರೂಪದ ಲೇಖನಗಳಲ್ಲಿ ವಿಶ್ಲೇಷಣೆ ನಡೆದಿದೆ. ಕೃಷಿಯನ್ನು ವಿಭಿನ್ನ ದೃಷ್ಟಿಕೋನದಿಂದ ಅರ್ಥೈಸಲಾಗಿದೆ. (೨೦೧೫–ಹಾಲತಿ ಸೋಮಶೇಖರ) ಸಂಸ್ಕೃತಿ ಹಿನ್ನೆಲೆಯ ಚಿಂತನೆಗಳು ಇಲ್ಲಿ ಇಲ್ಲ.

ಕರಾವಳಿಯ ಜಾನಪದಕ್ಕೆ ಸಂಬಂಧ ಪಟ್ಟಂತೆ ಬಹಳಷ್ಟು ಕೃತಿಗಳು ಬಂದಿವೆ. ಎಲ್ಲಾ ಅಧ್ಯಯನಗಳು ಒಂದಲ್ಲ ಒಂದು ಪರಿಕಲ್ಪನೆಯನ್ನು ಇಟ್ಟುಕೊಂಡು ಅಧ್ಯಯನ ಚರ್ಚೆ ನಡೆದಿವೆ. ಅಧ್ಯಯನದ ವಿಷಯ ವಸ್ತುವಿಗೆ ಪೂರಕವಾಗಿವೆಯಲ್ಲದೆ ಸಂಸ್ಕೃತಿಯ ಹಿನ್ನೆಲೆಯಲ್ಲಿ ನಿರೂಪಿಸಿದ ವಿವರಣೆಗಳು ಬಹಳ ಸಂಕ್ಷಿಪ್ತವಾದುದು. ಕೃಷಿ ಜಾನಪದದ ಒಂದು ಭಾಗವೇ ಆದರೂ ಸಾಹಿತ್ಯದ ಬೇರೆ ಬೇರೆ ಪ್ರಕಾರಗಳಲ್ಲಿ ಇದರ ಉಲ್ಲೇಖವಿದೆ. ಆ ಹಿನ್ನೆಲೆಯಲ್ಲಿ ನಡೆದ ಅಧ್ಯಯನಗಳು ಮಾತ್ರ ಲಭ್ಯವಾಗಿಲ್ಲ.

## ೨.೨ ಅಧ್ಯಯನ ವಿಷಯದ ತಾತ್ವಿಕ ಸ್ವರೂಪ:- ಕೃಷಿ ಸಂಸ್ಕೃತಿ ಹಾಗೂ ಕೃಷಿ ಸಂಸ್ಕೃತಿ ನಿರ್ವಚನ

ಕರಾವಳಿಯ ಕೃಷಿ ಸಂಸ್ಕೃತಿ ಎನ್ನುವ ಶೀರ್ಷಿಕೆಯನ್ನು ನಿರ್ವಚಿಸಿಕೊಳ್ಳುವುದಾದರೆ, ಸಾಂಸ್ಕೃತಿಕ ಅಧ್ಯಯನ ಎನ್ನುವುದು ಅನೇಕ ಪರಿಕಲ್ಪನಾತ್ಮಕ ಮಜಲುಗಳನ್ನು ದಾಟಿ, ಬಹು ಶಿಸ್ತೀಯವಾದ ಅಧ್ಯಯನ ವಿಧಾನ ಎಂಬರ್ಥಕ್ಕೆ ನಿಂತಂತಿದೆ. ಸಂಸ್ಕೃತಿ ಎನ್ನುವುದು ಹಲವು ಚಾರಿತ್ರಿಕ ಘಟ್ಟಗಳನ್ನು ದಾಟಿಕೊಂಡು 'ಸಮುದಾಯಗಳ ಸಮಗ್ರ ಜೀವನ ವಿಧಾನ' ಎಂಬ ಮಾನವ ಶಾಸ್ತ್ರೀಯ ಅರ್ಥದಲ್ಲಿ ನಿಂತಂತಿದೆ. ಎರಡೂ ಪರಿಕಲ್ಪನೆಗಳು ತಮ್ಮ ಹಿಂದಿನ ಸೀಮಿತ ಏಕರೂಪಿ ಅರ್ಥವನ್ನು ಬಿಟ್ಟು ಬಹುಮುಖಿ ಅರ್ಥದತ್ತ ಪಯಣಿಸಿವೆ. ಮೊದಲನೆಯದು ವಸ್ತುವಿನ ಆಯ್ಕೆಗೆ ಸಂಬಂಧಿಸಿದ್ದರೆ ಎರಡನೆಯದು ಅದನ್ನು ನೋಡುವ ದೃಷ್ಟಿಕೋನಕ್ಕೆ ಸೇರಿದೆ. ಕೃಷಿ ಸಂಸ್ಕೃತಿ ಅಧ್ಯಯನ ಎಂಬುದು ಇವೆರಡೂ ನೆಲೆಗಳು ಅರ್ಥಪೂರ್ಣವಾಗಿ ಕೂಡಿರುವ ದೃಷ್ಟಿಕೋನ, ಜ್ಞಾನದ ಪಯಣಕ್ಕೆ ನಿಜದ ಶೋಧಕ್ಕೆ ಸಿಗುವ ಎಲ್ಲವನ್ನು ಬಳಸುವ ಬೌದ್ಧಿಕ ಸಮಾಜವಾದಿ ತತ್ವ,

ಕರಾವಳಿ ಎನ್ನುವುದು ಭೌಗೋಳಿಕ ಮಿತಿಯ ಪರಿಕಲ್ಪನೆ, ಜಗತ್ತು, ದೇಶ, ರಾಜ್ಯಗಳ ಗಡಿಗಳಿಂದೀಚೆಗೆ ಬಂದು ಒಂದು ಸೀಮಿತ ಚೌಕಟ್ಟಿನ ಭೌಗೋಳಿಕತೆಯನ್ನು ಪರಿಭಾಷಿಸಿ ಆ ಮೂಲಕ ಸಂಸ್ಕೃತಿಯನ್ನು ಅರ್ಥೈಸಿಕೊಳ್ಳುವುದು. ಕೃಷಿ ಎನ್ನುವ ಪದಕ್ಕೆ ಸಾವಯವ, ಸಹಜ, ಪ್ರಾಕೃತಿಕ, ಚೌಕಟ್ಟನ್ನು ಮೀರಿಯೂ ಅರ್ಥ ಸಾಧ್ಯತೆಗಳು ವಿಸ್ತರಿಸಿಕೊಳ್ಳುತ್ತವೆ. ಬಿತ್ತುವುದು ಮತ್ತು ಬೆಳೆಯುವುದು ಕೃಷಿಯ ಪ್ರಮುಖ ಕಾಯಕವಾದರೂ ಬಿತ್ತುವುದರ ಮೂಲಕ ಜೀವ ಮೊಳಕೆಯೂರುತ್ತದೆ. ಅದು ಜೈವಿಕ, ಜೀವಶಾಸ್ತ್ರೀಯ ನೆಲೆಯಲ್ಲಿ ಗುರುತಿಸಿಕೊಳ್ಳುವುದು. ಜೀವಶಾಸ್ತ್ರವು ಸಸ್ಯಶಾಸ್ತ್ರ ಮತ್ತು ಪ್ರಾಣಿಶಾಸ್ತ್ರಗಳನ್ನು ಒಳಗೊಂಡಿದೆ. ಅದು ವೈಜ್ಞಾನಿಕ ನೆಲೆಯಲ್ಲಿ ಪ್ರಯೋಗಾತ್ಮಕವಾಗಿ ವಿಶ್ಲೇಷಣೆ ಪಡೆಯುವಂತಹುದು. ಪ್ರಸ್ತುತದಲ್ಲಿ ಕೃಷಿಯನ್ನು ಈ ಯಾವ ಶಾಸ್ತ್ರಗಳ ಹಿನ್ನೆಲೆಯಲ್ಲೂ ಅರ್ಥೈಸಿಕೊಳ್ಳದೆ ಪಾರಂಪರಿಕವಾದ ಜನರ ಲೋಕದ ದೃಷ್ಟಿಯ ಕೃಷಿ ಜಗತ್ತನ್ನು ನಿರ್ವಚಿಸಿಕೊಳ್ಳಲಾಗಿದೆ. ಇಲ್ಲಿ ಕೃಷಿಯ ಚರಿತ್ರೆಯನ್ನು ಗಮನಿಸಿ ಸಂಸ್ಕೃತಿ ವಿಕಾಸದ ಹಂತಗಳನ್ನು ವಿಶ್ಲೇಷಿಸಲಾಗಿದೆ.

ಕೃಷಿ ಎಂದರೆ ಶಬ್ದಾರ್ಥ "ಬಿತ್ತಿದ್ದನ್ನು ಬೆಳೆಯುವುದು". ಪಲ್ಲಟ, ಸ್ಥಿತ್ಯಂತರ ಮತ್ತು ಬದಲಾವಣೆಯನ್ನು ಸೂಚಿಸುತ್ತದೆ. ಕೃಷಿ ಬದಲಾದಂತೆ ಜಗತ್ತು ಬದಲಾಗಿದೆ. ಜನರ ಜೀವನ ಕ್ರಮದ ಅಲೋಚನೆಗಳು, ಮೌಲ್ಯಗಳು, ರೀತಿ ನೀತಿಗಳು ಬದಲಾಗುತ್ತ ಸಾಗಿವೆ. ಆ ಹಿನ್ನೆಲೆಯಲ್ಲಿ ಗಮನಿಸಿದರೆ ಯಾವುದೇ ಕೃಷಿ ಜಗತ್ತು ಬದಲಾದಂತೆಲ್ಲಾ ಜನಜೀವನ ಬದಲಾಗಿವೆ. ಹೀಗೆ ಬದಲಾಗುತ್ತಾ ಹೋದ ಜೀವನ ಧರ್ಮ ಮತ್ತು ಮರ್ಮವೂ ಸರಳ ರೇಖಾತ್ಮಕವಾದುದಲ್ಲ. ಹಲವು ಅರ್ಥ ಸಾಧ್ಯತೆಗಳ ವೈಯಕ್ತಿಕ ಜೀವನದೊಂದಿಗೆ ಸಾಮಾಜಿಕ ಬದುಕಿನ ಸ್ಥಿತ್ಯಂತರಗಳಲ್ಲೂ ಬದಲಾಗುತ್ತ ಸಾಗಿದೆ. ನಾಗರಿಕತೆ ಬೆಳೆದು ಬಂದಂತೆ ಚರಿತ್ರೆಯ ಕಾಲಘಟ್ಟದಲ್ಲಿ ವ್ಯತ್ಯಯಗೊಳ್ಳುತ್ತಾ ಸಾಗಿದ ಜನರ ಜೀವನ ಕ್ರಮಗಳು. ಮೌಲ್ಯಗಳು ಇದಕ್ಕೆ ಸಾಕ್ಷಿಯಾಗಿವೆ.

**೨.೩ ಕರಾವಳಿ ಕರ್ನಾಟಕದ ಕೃಷಿ ಸಂಸ್ಕೃತಿಯ ಐತಿಹಾಸಿಕ ಹಿನ್ನೋಟ**

'ಕರಾವಳಿಯ ಕೃಷಿ ಸಂಸ್ಕೃತಿ' ಎನ್ನುವ ಈ ಪಾರಿಭಾಷಿಕ ಪದವೇ ಬಹಳಷ್ಟು ಪ್ರಶ್ನೆಗಳನ್ನು ಎತ್ತುತ್ತದೆ. ಸಮುದ್ರ ತೀರದ ಮರಳು ಮಿಶ್ರಿತ ಮಣ್ಣು ಅದಕ್ಕೆ ಮುಖಾಮುಖಿಯಾಗಿ ತಲೆಯೆತ್ತಿ ನಿಂತ ಪಶ್ಚಿಮ ಘಟ್ಟದ ಸಾಲುಗಳು ಅದರ ಮಧ್ಯೆ ದೋಣಿಯಾಕಾರದಲ್ಲಿ ಹಬ್ಬಿರುವ ಈ ಮಣ್ಣಲ್ಲಿ ಕೃಷಿಯ ಅನ್ವೇಷಣೆಯಾದದ್ದು ಯಾವಾಗ ಮತ್ತು ಹೇಗೆ? ಎನ್ನುವುದು ಮೂಲಭೂತ ಪ್ರಶ್ನೆ. ಕರಾವಳಿಯಲ್ಲಿ ನಿಜವಾಗಿಯೂ ಕೃಷಿ ಇತ್ತೆ? ಎಂಬ ಪ್ರಶ್ನೆಯನ್ನು ಹಾಕಿಕೊಂಡೇ ಅಧ್ಯಯನವನ್ನು ಮುಂದುವರಿಸಬೇಕಾಗುತ್ತದೆ. ಒಂದೆಡೆ ಮೊರೆಯುವ ಕಡಲು ಇನ್ನೊಂದೆಡೆ ನೀರವ ಕಾಡು ಇವುಗಳ ಮಧ್ಯೆ 'ಕೃಷಿ' ಅಥವಾ ಭೂಮಿಗೆ ಹಾಕಿದ ಬೆಳೆ ಬೆಳೆಸಿದ್ದು ಮನುಷ್ಯ ಪ್ರಯತ್ನಗಳ ಸಾಧನೆ, ಅನ್ವೇಷಣೆಗಳೊಂದಿಗೆ ಸಾಹಸವೂ ಕೂಡ ಆಗಿದೆ.

ನದಿ ಸಮುದ್ರವನ್ನು ಸೇರುವ ಅಳಿವೆ ಬಾಗಿಲುಗಳು ಎತ್ತರದ ಘಟ್ಟದಿಂದ ಮೆಕ್ಕಲು ಮಣ್ಣನ್ನು ಹೊತ್ತು ತಂದು ತನ್ನ ಪಾತ್ರ ಮತ್ತು ಗಾತ್ರಗಳನ್ನು ವಿಸ್ತರಿಸುತ್ತಾ ಸಾಗುತ್ತಿದೆ. ಎತ್ತರದ ಬೆಟ್ಟದ ಸಾಲುಗಳಲ್ಲಿ ಕಿರುತೊರೆಯಾಗಿ ನದಿ ಹುಟ್ಟಿದ್ದು ಮುಂದೆ ಸಾಗಿದಂತೆಲ್ಲಾ ಫಲವತ್ತಾದ ಭೂಮಿ ನಿರ್ಮಾಣವಾಗುವುದಕ್ಕೆ ಕಾರಣವಾಯಿತು. ನದಿಗಳು ಮತ್ತು ನದಿಯ ಒಳ ಹರವಿನ ಸಣ್ಣ–ದೊಡ್ಡ ತೋಡುಗಳು, ವಿಸ್ತಾರವಾದ ತೋಕೆ ಕಾನುಗಳು ಇದ್ದ ಪರಿಸರವೇ ಅತಿ ವಿಶಿಷ್ಟವಾದ ಕರಾವಳಿ ಪ್ರದೇಶ. ಕರಾವಳಿ ತೀರದ ಉದ್ದಕ್ಕೂ ಕಾಣಿಸುವ ವೈಶಿಷ್ಟವೆಂದರೆ ಎತ್ತರವಾದ ಬೆಟ್ಟ–ಗುಡ್ಡಗಳು ಅದರ ಬುಡದಲ್ಲಿರುವ ವಿಸ್ತಾರವಾದ ಪ್ರದೇಶಗಳು ಹೀಗೆ ನದಿ–ಹಳ್ಳ–ಕೊಳ್ಳ–ಗುಡ್ಡ–ಬಯಲು–ಕಡಲುಗಳಿಂದ ಕೂಡಿದ್ದ ವಿಶಿಷ್ಟವಾದ ಪ್ರದೇಶವಾಗಿದೆ.

ಕರಾವಳಿ ಹಿಂದೆ ಹೇಗಿತ್ತು ಎಂದು ತಿಳಿಯಬೇಕಾದರೆ ಭೌಗೋಳಿಕ ವಿವರಣೆಗಳ ಒಂದಿಷ್ಟು ಉಲ್ಲೇಖ ಮತ್ತು ಸ್ಥೂಲ ಪರಿಚಯ ಸಿಗುವುದು ತಮಿಳಿನ **'ಸಂಗಂ'** ಸಾಹಿತ್ಯದಲ್ಲಿ. ಕೆಲವು ಸಸ್ಯಗಳ ವಿವರಣೆಯನ್ನು ಹೇಳುವಾಗ ಈ ಉಲ್ಲೇಖ ಬರುತ್ತದೆ. ನಂತರ ಕಲ್ಲಚ್ಚಿನ ಬರಹಗಳಾದ ಅಶೋಕನ ಶಿಲಾ ಶಾಸನಗಳಲ್ಲಿ ಕರಾವಳಿಯ ಭೌಗೋಳಿಕತೆಯ ವಿವರಣೆ ಬರುತ್ತದೆ. ಇವೆಲ್ಲಕ್ಕಿಂತಲೂ ಬಹಳ ಮುಖ್ಯವಾದುದು ಮತ್ತು ಪ್ರಮುಖವಾದುದು ಜನಪದ ಸಾಹಿತ್ಯ ಮತ್ತು ಐತಿಹ್ಯಗಳು. ಪರಶುರಾಮನ ಕತೆಯನ್ನು ಹೇಳಿದರೂ ಅದು ಕಬ್ಬಿಣದ ಯುಗದ ಆರಂಭವನ್ನು ಮಾತ್ರ ಹೇಳಬಹುದು. ಪರಶುರಾಮನನ್ನು ಅರ್ಥೈಸುವ ನೆಲೆಯ ಜಿಜ್ಞಾಸೆಗಳು ಇಂದು ಬಹಳಷ್ಟು ಚರ್ಚೆಗೆ ಗ್ರಾಸವಾಗಿರುವುದರಿಂದ ಕರಾವಳಿಯ ಕೃಷಿ ಬದುಕನ್ನು ಅಲ್ಲಿಂದ ಊಹಿಸಲು ಸಾಧ್ಯವಿಲ್ಲ. ತುಳು ಜನಪದ ಆರಾಧನಾ ಪರಂಪರೆಯಲ್ಲಿ ಬರುವ ಭೂತಗಳ ಪರಿಕಲ್ಪನೆಯಲ್ಲಿ ಪ್ರಾಣಿ ಜಗತ್ತು ಕೃಷಿ ಜಗತ್ತಿಗೆ ಒಂದಿಷ್ಟು ಸಾಮೀಪ್ಯತೆಯನ್ನು ಒದಗಿಸುತ್ತದೆ. ತುಳುವರ ಹೆಚ್ಚಿನ ಎಲ್ಲಾ ಭೂತಗಳು ಘಟ್ಟ ಇಳಿದು ಕೆಳಗೆ ಬಂದಿರುವುದು ಇಲ್ಲವೇ ಕಡಲಿನೊಂದಿಗೆ ಸೆಣಸಿ ಭೂತಗಳಾಗಿರುವುದು. ಕಾಡು ಮತ್ತು ಕಡಲು ಎರಡೂ, ಎರಡರ ಸಂಘರ್ಷದ ಮಧ್ಯೆ ಬದುಕು ಕಟ್ಟಿದ ತುಳುವರು ಬೆಳೆಯನ್ನು ಇದ್ದಕ್ಕಿದ್ದಂತೆ ಅನ್ವೇಷಿಸಲಿಲ್ಲ.

ಕರಾವಳಿಯ ಕೃಷಿ ಬದುಕಿನ ಚರಿತ್ರೆಯನ್ನು ಅರ್ಥೈಸಬೇಕಾದರೆ ಜಗತ್ತಿನ ಸಂಸ್ಕೃತಿ ವಿಕಾಸದ ಹೆಜ್ಜೆಗಳು ಮತ್ತು ಭಾರತೀಯ ಸಮಾಜದ ಚರಿತ್ರೆಯ ಅರಿವು ಅಗತ್ಯ. ಈ ಭೂಮಿಯಲ್ಲಿ ಜೀವ

ಸೃಷ್ಟಿಯಾಗುವುದಕ್ಕೆ ಇರುವ ಜನಪದ ಕತೆಗಳಲ್ಲಿ ಕೊರಗರ 'ಡೋಲಿನ ಕತೆ'(ಕೊನೆ ಟಿಪ್ಪಣಿ –೧ ಅಣ್ಣ ತಂಗಿ ಕತೆ) ಅಣ್ಣ–ತಂಗಿಯರ ಅನುಬಂಧ ಸೃಷ್ಟಿಯ ಕತೆಯೂ ಒಂದು. ಭೂಮಿಯಲ್ಲಿ ಜೀವ ಹುಟ್ಟಿ, ಸಂತಾನೋತ್ಪತ್ತಿಯಾಗಿ, ಸಂತತಿ ಬೆಳೆಯುವ ಕ್ಷಣಕ್ಕೆ ಮನುಷ್ಯನಿಗೂ ಹಸಿವು ಅಗಾಧವಾಗಿ ಕಾಡಿತು. ಹಸಿವೆಯನ್ನು ನೀಗಿಸಿಕೊಳ್ಳಲು ಮೊದಲು ಗಮನಿಸಿದ್ದು ತಮ್ಮ ಸುತ್ತ ಇರುವ ಪ್ರಕೃತಿಯನ್ನು. ಏನನ್ನು ತಿನ್ನಬೇಕು ಏನನ್ನು ತಿನ್ನಬಾರದು ಎನ್ನುವ ಎಚ್ಚರ ಮತ್ತು ಕುತೂಹಲ ಜತೆಗೇ ಬೆಳೆದ ಕಾಲವಿದು. ಆಹಾರ ಸಂಗ್ರಹಣೆ ಎನ್ನುವುದು ಆದಿಮಾನವ ಹಸಿವಿಗೆ ಕಂಡುಕೊಂಡ ಮೊದಲ ಹಂತದ ಹುಡುಕಾಟವಾಗಿತ್ತು. ಕಾಡುಗಳಲ್ಲಿ ವಾಸಿಸುತ್ತಿದ್ದ ಸಮುದಾಯ ಹಸಿವು ನೀಗಿಸುವುದಷ್ಟೇ ಸಮಸ್ಯೆಯಾದಾಗ ಪ್ರಾಣಿಗಳ ಬೇಟೆಯನ್ನು ಕಣ್ಣಲೇ ಕಂಡು ತಾವು ಬೇಟೆಯಾಡಲು ಆರಂಭಿಸಿದರು. ಬೇಟೆಯ ಹಂತದಿಂದ ಮುಂದೆ ಬೇಟೆಯಾಡುತ್ತಿದ್ದ ಪ್ರಾಣಿಗಳಿಗಿಂತ ಭಿನ್ನವಾದ ಸಾಕು ಪ್ರಾಣಿಗಳನ್ನಾಗಿಸಲು ಕೆಲವನ್ನು ಪಳಗಿಸಿ ಸಾಕಲು ಆರಂಭಿಸಿದರು. ಸಾಕುತ್ತಿರುವ ಪಶುವಿನ ಉತ್ಪನವನ್ನು ಮತ್ತು ಪಶುಗಳ ಮಾಂಸವು ಆಹಾರವಾಗಿ ಬಳಕೆಯಾಗಲು ಆರಂಭವಾದಾಗ ಪಶುಪಾಲನೆಯು ಅನಿವಾರ್ಯವಾಯಿತು. ಕಬ್ಬಿಣದೊಂದಿಗೆ ಬೆಂಕಿಯ ಅನ್ವೇಷಣೆಯು ನಾಗರಿಕತೆಯಲ್ಲಿ ಬಹಳ ದೊಡ್ಡ ಸ್ಥಿತ್ಯಂತರ. ಆಹಾರ ಸಂಗ್ರಹಣೆಯಿಂದ ಆಹಾರ ಉತ್ಪಾದನೆಯೆಡೆಗೆ ಸಾಗಿದ ಈ ಹಂತದ ಮಧ್ಯದಲ್ಲಿ ಪಶುಪಾಲನೆಯು ಸಾಗಿ ಬಂದಿದೆ ಎಂದು ಸಂಸ್ಕೃತಿ ಚಿಂತಕರು ಇತಿಹಾಸಕಾರರು ಅಭಿಪ್ರಾಯ ಪಡುತ್ತಾರೆ.

ಪ್ರಾಚೀನ ಭಾರತ ದೇಶದ ಚರಿತ್ರೆಗೆ ಒಂದು ಅಂಶಸೂತ್ರವಾಗಿ ಒಂದು ಆರ್ಥಿಕ ಕ್ರಮ ನಡೆದು ಬಂದಿತೆಂಬುವುದನ್ನು ಕೊಸಾಂಬಿಯವರು ಸರ್ಮಥವಾಗಿ ನಿರೂಪಿಸುತ್ತಾರೆ. ಈ ಆರ್ಥಿಕ ಕ್ರಮದಲ್ಲಿ ಮೂರು ಹಂತಗಳಿವೆ. "ಮೊದಲಿನದ್ದು ಆಹಾರ ಸಂಗ್ರಹಣೆಯ ಸ್ಥಿತಿಯಲ್ಲಿ ಬದಲಾವಣೆಯಾಗಿ ಆಹಾರ ಉತ್ಪಾದನೆ ಮೊದಲಾದ್ದದು. ಇವೆರೆಡರ ನಡುವಿನ ಹಂತವಾಗಿ ಒಮ್ಮೊಮ್ಮೆ ಪಶುಪಾಲನೆ ಬರುತ್ತದೆ. ಎರಡನೆಯದು ಆಹಾರ ಉತ್ಪಾದನೆಯ ಕಾರಣವಾಗಿ ಸ್ಥಿರವಾಸಗಳು ಗ್ರಾಮಗಳು, ರೂಪುಗೊಂಡದ್ದು. ಮೂರನೆಯದ್ದು ಆ ಗ್ರಾಮಗಳಲ್ಲಿ ಶ್ರಮ ವಿಭಜನೆ ಮೊದಲಾಗಿದ್ದರಿಂದಾಗಿ ಸ್ವಯಂ ಘೋಷಣೆ ಸ್ವಭಾವವಾದ ಭೂಸ್ವಾಮ್ಯ ವ್ಯವಸ್ಥೆಗೆ ಅಡಿಪಾಯ ಬಿದ್ದದ್ದು ಕ್ರಿ.ಪೂ.೧೦೦೦ದಲ್ಲಿ ಆರಂಭಗೊಂಡ ಈ ಪ್ರಕ್ರಿಯೆ ಕ್ರಿ.ಶ.೧೦೦೦ದ ಹೊತ್ತಿಗೆ ನೆಲೆಯೂರಿ ನಿಂತಿತು. ಅಂದ ಮಾತ್ರಕ್ಕೆ ಇದು ಇಂದಿಗೆ ಕೊನೆಗೊಂಡಿದೆ ಎಂದೇನೂ ಅಲ್ಲ. ಈ ಪ್ರಕ್ರಿಯೆ ಇಂದಿಗೂ ಮುಂದುವರಿಯುತ್ತಲೇ ಬಂದಿದೆ".(ಶ್ರೀಮತಿ ಎಚ್.ಎಸ್ (ಅನು) ೧೯೯೮; ಪು ೧೭)

ಈ ಮೂರು ಹಂತಗಳನ್ನು ಹೀಗೆ ಗುರುತಿಸಿದಾಗ ಅವು ಕಾಲಕ್ರಮದಲ್ಲಿ ಮೂರು ಸ್ಪಷ್ಟ ಬದಲಾವಣೆಗಳು ಎಂಬಂತೆ ಅಲ್ಲ. ಇವು ಒಂದಾದ ನಂತರ ಒಂದು ಅನುಕ್ರಮವಾಗಿ ಘಟಿಸಿದವು ಎಂದಲ್ಲ. "ಉತ್ತರ ಪ್ರಾಂತದಲ್ಲಿ ಸ್ಥಿರ ಗ್ರಾಮಗಳು ಇದ್ದಾಗ ದಕ್ಷಿಣ ಪ್ರಾಂತದಲ್ಲಿ ಸಂಗ್ರಹಣ ಕಾರ್ಯ ಸಾಗುತ್ತಿತ್ತು. ಒಂದು ಪ್ರಾಂತದಲ್ಲಿ ಆದ ಆರಂಭ ಮಿಕ್ಕುಳಿದ ಪ್ರಾಂತಗಳಿಗೆ ವಿಸ್ತರಿಸಿದ್ದೇ ಅದರ ಅಂತ ಸೂತ್ರದ ಕ್ರಮ. ಒಂದು ಜನಾಂಗ ಕೃಷಿಯನ್ನು ಅನ್ವೇಷಿಸಿದ್ದರೆ, ಇನ್ನೊಂದು ಆಹಾರ ಸಂಗ್ರಹಣೆಯಲ್ಲಿ, ಬೇಟೆಯಲ್ಲೇ ನಿಂತು ಬಿಟ್ಟಿತ್ತು. ಮತ್ತೊಂದು ಜನಾಂಗ ಪಶುಪಾಲನೆಯನ್ನು ನಡೆಸುತ್ತಿತ್ತು. ಈ ಬದಲಾವಣೆಗಳು ಒಂದಾದ ನಂತರ ಒಂದು

ಘಟಿಸಿತು ಎಂದು ಸರಳರೇಖಾತ್ಮವಾಗಿ ನಿರೂಪಿಸುವುದು ಕಷ್ಟ. ಆಹಾರ ಉತ್ಪಾದನೆ ಜೀವನದ ಪದ್ಧತಿಯನ್ನು ಅನುಸರಿಸಿ ನಾಗರಿಕವೆನಿಸಿದ ಸಮುದಾಯ ತಮ್ಮ ಸುತ್ತ ಮುತ್ತಲಿನ ಕಾಡು ಜನರನ್ನು ಆಹಾರ ಉತ್ಪಾದನಾ ವಿಧಾನಕ್ಕೆ ಒಗ್ಗಿಸಿದೆ. ಅದಕ್ಕೆ ಉತ್ಪಾದನಾ ಸಂಬಂಧಗಳನ್ನು ಕಲ್ಪಿಸಿ ಸಾಮಾಜಿಕ ವ್ಯವಸ್ಥೆಯನ್ನು ನಿರ್ಮಿಸಿ ಆ ಕಾಡು ಜನರನ್ನು ಅದರ ಒಂದು ಸ್ತರದಲ್ಲಿ ಕೃಷಿಗೆ ಅಳವಡಿಸಿಬಿಟ್ಟರು. ಆಹಾರ ಸಂಗ್ರಹಣೆಯ ಜೀವನ ಪದ್ಧತಿಯನ್ನು ಬಾಳುತ್ತಿದ್ದ ಸಮುದಾಯಗಳ ಪ್ರದೇಶಕ್ಕೆ ಆಹಾರ ಉತ್ಪಾದನಾ ಜೀವನ ಪದ್ಧತಿಯ ಸಮಾಜವು ಪ್ರವೇಶಿಸಿ ತನ್ನಿಚ್ಛೆಯಂತೆ ನೆಮ್ಮದಿಯಾಗಿ ವಿಸ್ತರಿಸುತ್ತ ಸಾಗಿತ್ತು ಸಮುದಾಯಗಳು ಜೀವನ ಮಾಡುತ್ತಿದ್ದ ಭೂ ಪ್ರದೇಶದೊಳಗೆ ವ್ಯವಸಾಯವನ್ನಾಧರಿಸಿದ ಗ್ರಾಮೀಣ ಆರ್ಥಿಕ ವ್ಯವಸ್ಥೆ ವಿಸ್ತರಿಸಲು ತೊಡಗಿದ್ದೇ ಭಾರತ ದೇಶದಲ್ಲಿ ಮೊಟ್ಟ ಮೊದಲಿಗೆ ಜರುಗಿದ್ದ ಪ್ರಮುಖ ಸಾಮಾಜಿಕ ವಿಪ್ಲವ." (ಅದೇ, ಪುಟ-೧೮)

ಕೋಸಾಂಬಿಯವರ ಈ ವಿಚಾರಗಳ ಮೂಲಕ ಕರಾವಳಿಯ ಕೃಷಿಜಗತ್ತನ್ನು ಅರ್ಥೈಸುವುದಾದರೆ ವರ್ತಮಾನದ ಈ ಕಾಲದಲ್ಲಿ  ಕಾಡಿನಲ್ಲಿ ಬದುಕುವ ಬುಡಕಟ್ಟು ಸಮುದಾಯಗಳೊಂದಿಗೆ ಆಹಾರ ಉತ್ಪಾದನೆಯ ಸಾಮಾಜಿಕ ಆರ್ಥಿಕ ಪ್ರಭುತ್ವದ ಸಮುದಾಯಗಳು ಇಲ್ಲಿವೆ. ಕಾಡನ್ನು ಕಡಿದು ಬೆಳೆಯನ್ನು ಬಿತ್ತಿ ಫಸಲನ್ನು ಪಡೆದ ಮಲೆಕುಡಿಯ ಸಮುದಾಯದಂತೆ, ಕೃಷಿ ಜಗತ್ತಿನಿಂದ ದೂರ ಉಳಿದ ಬೇಟೆ, ಪಶುಪಾಲನೆಗಳಲ್ಲೇ ಉಳಿದ ಬುಡಕಟ್ಟು ಸಮುದಾಯಗಳು ಕರಾವಳಿಯಲ್ಲಿವೆ. ಕೃಷಿಯ ಅನ್ವೇಷಣೆಯಿಂದ ಕೃಷಿ ವಿಸ್ತರಣೆಗೊಂಡ ಈ ಹಂತದವರೆಗಿನ ಸಂದರ್ಭದಲ್ಲೂ ಆಹಾರದ ಉತ್ಪಾದನೆ ಮತ್ತು ಸಂಪತ್ತಿನ ಒಡೆತನದ ಹಂತಗಳು ಮುಖ್ಯವಾಗುತ್ತವೆ. ಸಮುದಾಯಗಳ ಈ ಕಾರಣಕ್ಕಾಗಿಯೇ ಸಾಮಾಜಿಕ ಸ್ಥಿತ್ಯಂತರಗಳಿಗೆ ಒಳಗಾಗಿರುವುದಕ್ಕೆ ಪ್ರತ್ಯಕ್ಷ ಸಾಕ್ಷಿಯಾಗಿದೆ.

ಇಂದಿನ ಕರಾವಳಿಯ ಕೃಷಿ ಜಗತ್ತು  ಇಷ್ಟು ದೀರ್ಘವಾಗಿ ಮುಂದುವರಿದು ಬರಲು ಹಲವು ಸಾವಿರ ವರ್ಷಗಳ ಚರಿತ್ರೆಯೇ ಇದೆ. ಕರಾವಳಿಯ ಕೆಂಪು ಗೋಡು ಮಣ್ಣು ಯಾವ ಬೆಳೆಯನ್ನು ಬೆಳೆಯಲು ಯೋಗ್ಯವಾದುದು ಎನ್ನುವ ಅನ್ವೇಷಣೆ ಪ್ರಮುಖ ಪ್ರಶ್ನೆಯಾಗುತ್ತದೆ.

ಜಗತ್ತಿನಲ್ಲಿಯೇ ಕೃಷಿಯನ್ನು ಅನ್ವೇಷಿಸಿದವಳು ಮಹಿಳೆ ಎಂದು ಬಹಳ ಹಿಂದೆಯೇ ನಮ್ಮ ಸಮಾಜಶಾಸ್ತ್ರಜ್ಞರು ಒಂದು ಧೃಡವಾದ ನಿಲುವನ್ನು ಒಪ್ಪಿಕೊಂಡಿದ್ದಾರೆ. ತನ್ನ ಕುಟುಂಬದ ಹೊಟ್ಟೆ ಮತ್ತು ನೆತ್ತಿಯನ್ನು ತಣ್ಣಗೆ ಇಡುವ ಅವಳ ಕಾಳಜಿ ಅವಳನ್ನು ಕೃಷಿಯತ್ತ ಹೊರಳಿಸಿತು. ಆಹಾರ ಸಂಗ್ರಹಣೆಯ ಹಂತದಲ್ಲಿದ್ದ ಮನುಷ್ಯ ಬೇಟೆಯಾಡುತ್ತಾ ಗಂಡು ದೂರ ದೂರ ಅಲೆಯುತ್ತಿದ್ದ ಸಂದರ್ಭದಲ್ಲಿ ತನ್ನ ಕುಟುಂಬದ ಹಸಿವಿಗಾಗಿ ಕಾಡಿನ ಹಣ್ಣು ಹಂಪಲು, ಗೆಡ್ಡೆ ಗೆಣ್ಣಸುಗಳನ್ನು ತಾನು ಸಂಗ್ರಹಿಸಿ ತಂದು ನೀಡುತ್ತಿದ್ದಳು. ಹೀಗೆ ಸಂಗ್ರಹಿಸಿದ ತಂದು ತಿಂದ ಬೆಳೆಗಳ ಬೀಜಗಳನ್ನು ಮಣ್ಣಿಗೆ ಎಸೆದಾಗ ಅದು ಭೂಮಿಗೆ ಬಿದ್ದು ಮೊಳೆತು ಚಿಗುರಿದ್ದು ಆಕೆಗೆ ಒಂದು ವಿಸ್ಮಯವಾಗಿಯೇ ಕಂಡಿರಬೇಕು. ಒಂದು ಎರಡಾಗುತ್ತಾ, ಹಲವು ಸಾವಿರವಾಗುತ್ತಾ ಸಾಗಿದ ಈ ಕ್ಷಣದಲ್ಲಿಯೇ ಬೆಳೆಯನ್ನು ಬೆಳೆವ ಅನ್ವೇಷಕಿಯಾದಳು. ತಾನು ತಿಂದು ಎಸೆದದ್ದನ್ನು ಜತನದಿಂದ ಬೆಳೆಸಿ, ಬೀಜ ರಕ್ಷಣೆ ಮಾಡಿ ಮತ್ತೆ ಬಿತ್ತಿ ಜೀವ ಸಂಕುಲವನ್ನು ಚಿರಂತನವಾಗಿಸಿದಳು. ಕೃಷಿ ಸಂಸ್ಕೃತಿಯ ಅನ್ವೇಷಕಿಯಾಗಿ ಹೊಸ ಜೀವಕ್ಕೆ ಜನ್ಮ ಕೊಡುವ ಹೆಣ್ಣಿಗೂ

ಬಿತ್ತಿದ್ದನ್ನು ಮೊಳೆತು ಕೊಡುವ ಪ್ರಕೃತಿ ಎರಡನ್ನು ಸಮೀಕರಿಸಿ ನೋಡಲಾಯಿತು. ಪ್ರಕೃತಿ, ಸಂಸ್ಕೃತಿ ಮತ್ತು ಸ್ತ್ರೀ ಎಂಬ ಈ ನಿಷ್ಪತ್ತಿ ಎಲ್ಲ ಸಂಸ್ಕೃತಿಗಳ ವಿಕಾಸದ ಮೂಲ ನಿಷ್ಪನ್ನವೂ ಆಗಿದೆ.

ಕೃಷಿಯನ್ನು ಆರಂಭಿಸುವ ಹಂತದಲ್ಲಿ ತಂತ್ರ ವಿದ್ಯೆಯನ್ನು ಕೃಷಿಗೆ ಅಳವಡಿಸಲಾಯಿತು. ಗರ್ಭಕೋಶವನ್ನು ಹೊಂದಿದ ಹೆಣ್ಣಿನ ದೇಹ ಮರುಸೃಷ್ಟಿಗೆ ಕಾರಣವಾಗುವಂತೆ, ಭೂಮಿಗೆ ಬಿದ್ದ ಬೀಜ ಮೊಳಕೆಯೊಡೆಯುವ ಪ್ರಕ್ರಿಯೆಯನ್ನು ಒಂದು ವಿಸ್ಮಯವಾಗಿ ಗ್ರಹಿಸಲಾಯಿತು. ವಿಶ್ವದ ಎಲ್ಲೆಡೆಯೂ ಬೇಸಾಯದ ಕ್ರಿಯೆಗಳನ್ನು ಮಾಂತ್ರಿಕ ವಿಧಿಗಳ ಅಧೀನವೆಂದು ಬಗೆಯಲಾಯಿತು. ಕೃಷಿಯಲ್ಲಿ ಮಾಂತ್ರಿಕ ನಂಬಿಕೆಗಳಿಗೆ ವಿಚಿತ್ರ ಪ್ರಾಮುಖ್ಯತೆ ಬಂದು ನೈಪುಣ್ಯ ಮತ್ತು ದೈಹಿಕ ಶ್ರಮ ಈ ನಂಬಿಕೆಗಳಿಗಿಂತ ಕಡಿಮೆ ಮುಖ್ಯ ಎಂದು ಅರ್ಥೈಸಲಾಗಿತ್ತು. ಜಗತ್ತಿನಾದ್ಯಂತದ ಜನಾಂಗಗಳಲ್ಲಿ ಕೃಷಿಯನ್ನು ಆರಂಭಿಸುವ ಪೂರ್ವದಲ್ಲಿ ತಂತ್ರದ ಬೇರೆ ಬೇರೆ ತಾಂತ್ರಿಕ ವಿದ್ಯೆಗಳನ್ನು ಪೂರೈಸಿದ ಉಲ್ಲೇಖಗಳು ಸಿಗುತ್ತವೆ ತಂತ್ರ ವಿದ್ಯೆಯ ಅರ್ಥೈಸುವಿಕೆಗೆ ಇಂದು ತಪ್ಪಾದ ಗ್ರಹಿಕೆಗಳು ಇರುವಾಗಲೂ ಆರಂಭಿಕ ಕೃಷಿ ಹಂತದ ನಂಬಿಕೆ ಮತ್ತು ಆಚರಣೆಗಳಲ್ಲಿ ತಂತ್ರದ ಅವಶೇಷಗಳಿರುವುದು ಸಹಜ. ಗುದ್ದಲಿಯಿಂದ ಭೂಮಿಯನ್ನು ಅಗೆದು ಬಿತ್ತುವುದಕ್ಕೆ ಆರಂಭಿಸಿದ ಕೃಷಿ ಜಗತ್ತು ನೇಗಿಲ ಮೊನೆಯನ್ನು ಬಳಸಿದಂತೆಲ್ಲಾ ಪುರುಷಾಧಿಪತ್ಯಕ್ಕೆ ಸರಿಯಿತು. ಎನ್ನುತ್ತಾರೆ ಇತಿಹಾಸಕಾರರು. 'ಬೀಜಪ್ರಾಧಾನ್ಯ' ಮತ್ತು 'ಕ್ಷೇತ್ರಪ್ರಾಧಾನ್ಯ' ಎಂಬ ಚರ್ಚೆಗಳು ಬಹಳ ವಿಸ್ತರವಾಗಿ ಚರ್ಚೆಗೆ ಒಳಗಾಗುತ್ತಿರುವ ಸಂದರ್ಭದಲ್ಲಿ ಸ್ತ್ರೀ ಮೂಲವಾಗಿರುವ ಕೃಷಿಯು ಮತ್ತು ಸ್ತ್ರೀಯು ಬಂಧುತ್ವದ ಮೂಲವು ಆಗಿ ಗೋಚರಿಸುವ ಸಾಧ್ಯತೆಗಳು ಸ್ಪಷ್ಟವಿದೆ.

ಕರಾವಳಿಯಲ್ಲಿ ಇಂದಿಗೂ ಸ್ತ್ರೀ ಮೂಲದ ಮೂಲಕ ಬಂಧುತ್ವವನ್ನು ಗುರುತಿಸಲಾಗುತ್ತದೆ. ಸಮಾಜದಲ್ಲಿ ಬಂದಿರುವ 'ಕುಟುಂಬ' ಪರಿಕಲ್ಪನೆಯೇ ಸ್ತ್ರೀ ಮೂಲ ಚಿಂತನೆಯ ಮಾತೃಮೂಲೀಯವಾದುದ್ದು. ತಾಯಿ ಯಾರು ಎನ್ನುವ ಪ್ರಶ್ನೆ ಸಾಮಾಜಿಕ ಅಸ್ತಿತ್ವಕ್ಕೆ ಮುಖ್ಯವಾಗುತ್ತದೆ. ಕರಾವಳಿಯ ಕೃಷಿ ಸಂಸ್ಕೃತಿಗೂ ಇಲ್ಲಿ ಇಂದಿಗೂ ಚಾಲ್ತಿಯಲ್ಲಿರುವ ಮಾತೃಮೂಲೀಯ ಕುಟುಂಬ ವ್ಯವಸ್ಥೆಗೆ ಏನಾದರೂ ಸಂಬಂಧವಿದೆಯೇ ಎಂದು ಅರ್ಥೈಸುವುದು ಈ ಅಧ್ಯಯನದ ಮುಖ್ಯ ಉದ್ದೇಶ. ಕರಾವಳಿಯ ಕೃಷಿ ಸಂಸ್ಕೃತಿಯನ್ನು ಅರ್ಥೈಸುವುದು ಹೇಗೆ? ಎನ್ನುವ ಮೂಲಭೂತ ಪ್ರಶ್ನೆಯನ್ನು ಇರಿಸಿಕೊಂಡೇ ಇಲ್ಲಿಯ ವಿಚಾರಗಳನ್ನು ಅರ್ಥೈಸಲಾಗಿದೆ. ಜಗತ್ತಿನ ಕೃಷಿ ಚರಿತ್ರೆಯ ಹಿನ್ನೆಲೆಯಲ್ಲಿ ಕರಾವಳಿಯ ಕೃಷಿ ಸಂಸ್ಕೃತಿಯ ಅರ್ಥವನ್ನು ಅನ್ವೇಷಿಸುವುದು ಮತ್ತು ಇದರೊಂದಿಗೆ ಇಲ್ಲಿಯ ವೈಶಿಷ್ಟ್ಯಗಳನ್ನು ಗುರುತಿಸುವುದು ಆಗಿದೆ.

ಕರಾವಳಿಯಲ್ಲಿ "ಕುಮೆರಿ" ಕೃಷಿಯನ್ನು ಮಾಡುವ ಸಮುದಾಯಗಳಿವೆ. ಒಂದು ವರ್ಷದಲ್ಲಿ ಕಾಡಿನ ಒಂದು ಭಾಗದಲ್ಲಿ ಬೆಳೆಯನ್ನು ಬೆಳೆದು ಫಸಲನ್ನು ಪಡೆದ ಮೇಲೆ ಇನ್ನೊಂದು ದಿಕ್ಕಿಗೆ ತೆರಳಿ ಬೆಳೆಯನ್ನು ಬೆಳೆಯುತ್ತಿದ್ದರು. ಬೇಟೆಯೊಂದಿಗೆ, ಪಶುಗಳನ್ನು ಪಾಲಿಸುತ್ತಾ ಭತ್ತವನ್ನು ಬೆಳೆಯುತ್ತಾ ಸ್ಥಿರವಾಗಿ ಎಲ್ಲೂ ನಿಲ್ಲದೆ ಅಲೆಮಾರಿಗಳಾಗಿ ಕಾಡಿನ ಉದ್ದ-ಅಗಲಕ್ಕೂ ಸಂಚರಿಸುತ್ತಿದ್ದರು. ಇಂದಿಗೂ ಅಂತಹ ಸಮುದಾಯಗಳನ್ನು ಕಾಡಿನ ತಪ್ಪಲುಗಳಲ್ಲಿ ಕಾಣಬಹುದು. ಇಂದು ವಲಸೆ ಕಡಿಮೆಯಾಗಿದ್ದರು, ಕಾಡಿನ ವಾಸ ಕಡಿಮೆಯಾಗಲಿಲ್ಲ. ಕಾಡುತ್ಪತ್ತಿಗಳಲ್ಲಿ ಬದುಕುವ ಅವರದ್ದು ಒಂದು ರೀತಿಯ ಕೃಷಿ ಬದುಕೇ ಆಗಿದೆ.

ಕಾಡನ್ನು ಕಡಿದು ವಿಸ್ತಾರವಾದ ಪದವುಗಳಲ್ಲಿ ಕುಮೆರಿ ಕೃಷಿಯನ್ನು ನಡೆಸುವ ಕುಡುಬಿಗಳು ಮತ್ತು ಕ್ರೈಸ್ತರು ಕರಾವಳಿ ಕೃಷಿ ಜಗತ್ತಿನ ಇನ್ನೊಂದು ಮಾದರಿಗಳು. ಇಲ್ಲಿಗೆ ವಲಸೆ ಮತ್ತು ಮತಾಂತರಕ್ಕೆ ಒಳಗಾದ ಈ ಎರಡೂ ಸಮುದಾಯಗಳು ಪಿತೃಪ್ರಧಾನ ಮೌಲ್ಯವನ್ನು ಹೊಂದಿದೆ. ಅತ್ಯಂತ ಜೋರಾಗಿ ಬೀಳುವ **'ಕಾರ್ತಿ'** ತಿಂಗಳ ಮಳೆಗೆ ವಿಸ್ತಾರವಾದ ಹುಲ್ಲುಗಾವಲಿನಂತಹ ಪ್ರದೇಶವಾದ ಪದವುಗಳಲ್ಲಿ ಭತ್ತದ ಕೃಷಿಯಲ್ಲದೆ ಪ್ರಮುಖ ತರಕಾರಿಗಳು ಮತ್ತು ಗೆಡ್ಡೆ ಗೆಣಸುಗಳನ್ನು ಇವರು ಬೆಳೆಯುತ್ತಾರೆ. ಆದಾಯದ ಆರ್ಥಿಕ ಚೌಕಟ್ಟಿನಿಂದ ಬೆಳೆಯುವ ಈ ಕುಮೆರಿ ಕೃಷಿಯು ಕರಾವಳಿಗೆ ವಿಶಿಷ್ಟವಾದುದು. ಕೇರಳದಿಂದ ಕರಾವಳಿಗೆ ವಲಸೆ ಬಂದ ಮಲೆಯಾಳಿ ಕ್ರೈಸ್ತರು ವ್ಯವಸಾಯದಿಂದ ವ್ಯವಸಾಯಕ್ಕೆ ವಲಸೆ ಹೊಂದಿದ ವಿಶಿಷ್ಟ ಸಮುದಾಯವಾಗಿದೆ.(ಕೊನೆ ಟಿಪ್ಪಣಿ–೨ ಮಲಯಾಳಿ ಕ್ರೈಸ್ತರು)ಇನ್ನೊಂದೆಡೆ ತುಂಡು ಭೂಮಿಯ ಒಡೆತನವು ಇಲ್ಲದೆ ಒಕ್ಕಲುಗಳಾಗಿ ದುಡಿಯುವ ಕೃಷಿ ಕೂಲಿ ಕಾರ್ಮಿಕರ, ಜೀತದಾಳುಗಳ ಒಂದು ದೊಡ್ಡ ಸಮುದಾಯವೇ ಕರಾವಳಿಯಲ್ಲಿದೆ. ಪಾಳೇಗಾರಿಕೆ ಮತ್ತು ಊಳಿಗ ಮಾನ್ಯ ಪದ್ಧತಿಯನ್ನು ಅತ್ಯಂತ ನಾಜೂಕಿನಿಂದ ಪೋಷಿಸಿಕೊಂಡು ಬಂದಿರುವ ಕೃಷಿ ಸಂಸ್ಕೃತಿಯು ಬಹುದೊಡ್ಡ ಸಂಖ್ಯೆಯ ಜಮೀನ್ದಾರರ ಹುಟ್ಟಿಗೂ ಕಾರಣವಾಯಿತು. 'ಆಕಾಶ ನೋಡಲು ನೂಕು ನುಗ್ಗಲೇಕೆ?' ಎಂಬ ಗಾದೆಯ ಮಾತಿಗೆ ವ್ಯತ್ಯಯವಾಗಿ 'ಭೂಮಿ'ಯ ಒಡೆತನದ ಪ್ರಶ್ನೆ ಪ್ರಮುಖ ಶಕ್ತಿ ಕೇಂದ್ರವಾಗಿ ಪರಿಣಮಿಸಿತು. ಭೂಮಿಯ ಒಡೆತನವೆಂದರೆ ಅಧಿಕಾರ ಮತ್ತು ಸಂಪತ್ತಿನ ಒಡೆತನ ಎನ್ನುವ ಪ್ರಜ್ಞೆಗಳು ಹುಟ್ಟುತ್ತಿರುವ ಕಾಲದಲ್ಲಿ, ಭೂಮಿ ಫಲವಂತಿಕೆಯ ತಾಣವಾಗಿ ಉಳಿದಿಲ್ಲ. ಹೆಣ್ಣು ಹೆರುವ ಪ್ರಕ್ರಿಯೆಗೆ ಸಂತಾನ ಹರಣ ಶಸ್ತ್ರ ಚಿಕಿತ್ಸೆ ಮಾಡಿಕೊಂಡು ಸಂತಾನವನ್ನು ನಿಯಂತ್ರಣ ಮಾಡಿಕೊಂಡಂತೆ ಭೂಮಿಯು ಗಡಿರೇಖೆಗಳನ್ನು ಕೊರೆದುಕೊಂಡು ಸೈಟುಗಳಾಗಿ ಪರಿವರ್ತನೆ ಹೊಂದಿದೆ. ಇಂತಹ ಸಂಕ್ರಮಣ ಕಾಲದಲ್ಲಿರುವ ಕರಾವಳಿಯ ಕೃಷಿ ಸಂಸ್ಕೃತಿಯನ್ನು ಅರ್ಥೈಸುವುದು ಮತ್ತು ವಿಶ್ಲೇಷಿಸುವುದು ಮುಖ್ಯ ನೆಲೆಯಾಗಿದೆ.

ನೆಲಮೂಲದ ಬುಡಕಟ್ಟು ಸಂಸ್ಕೃತಿಯಿಂದ ಅಧಿಕಾರಶಾಹಿ ಜಗತ್ತಿನೆಡೆಗೆ ಸಾಗಿ ಕೃಷಿಯು ವ್ಯಾಪಾರದ ಮೂಲವಾಗಿಯೂ ಗುರುತಿಸಿಕೊಂಡಿದೆ. ಪ್ರಭುತ್ವದ ನೆಲೆಯಲ್ಲಿ 'ಭೂಮಿ'ಯನ್ನು ದಾನವಾಗಿ, ಉಂಬಳಿಯಾಗಿ ರಾಜರು ನೀಡುತ್ತಿದ್ದರು. ಫಲವತ್ತಾದ ಭೂಮಿಯನ್ನು ಮೇಲ್ವರ್ಗದವರಿಗೆ ಅಧಿಕಾರ ಕೇಂದ್ರದಲ್ಲಿದ್ದವರಿಗೆ ದಾನ ನೀಡಿದರೆ ಶೂದ್ರರು ಮತ್ತು ದಲಿತರಿಗೆ ಬಂಜರು ಶುಷ್ಕ ಭೂಮಿಯನ್ನು ನೀಡಲಾಗುತ್ತಿತ್ತು. ಇದರಿಂದಾಗಿ ನೂರಾರು ಮುಡಿ ವಿಸ್ತೀರ್ಣದ ಗದ್ದೆಗಳಲ್ಲಿ ಶೂದ್ರರು ಮತ್ತು ದಲಿತರು ಖಾಯಂ ಜೀತದಾಳುಗಳಾಗಿ ದುಡಿಯುವುದು ಅನಿವಾರ್ಯವಾಗಿತ್ತು. ಭೂಮಿಯ ಸಾಗುವಳಿಯಲ್ಲಿ ಗದ್ದೆಯನ್ನು ಕೃಷಿ ಮಾಡಿದಕ್ಕಾಗಿ ರೈತರು ಇಂತಿಷ್ಟು ಮುಡಿ ಅಕ್ಕಿಯನ್ನು ಕೊಡಬೇಕೆಂಬ 'ಗೇಣಿ'ಯ ಲೆಕ್ಕಾಚಾರವು ಹುಟ್ಟಿಕೊಂಡಿತು. ಪುರೋಹಿತಶಾಹಿ ಆಡಳಿತ ವ್ಯವಸ್ಥೆಯಲ್ಲಿ ಧಾರ್ಮಿಕತೆ ಪ್ರಮುಖ ಪಾತ್ರ ವಹಿಸಿ ದೇವಸ್ಥಾನ ಮತ್ತು ಅದರ ಆಡಳಿತಕ್ಕೊಳಪಟ್ಟ ಗದ್ದೆಗಳೆಲ್ಲ 'ದೇವರ ಬೆನ್ನಿ'ಗಳಾದವು. ಸಂಪತ್ತು ದೇವಾಲಯಗಳಲ್ಲಿ ಕೇಂದ್ರಿಕೃತವಾಗುತ್ತಲೇ ಪುರುಷಧೀನತೆಯೆಡೆಗೆ ಸಾಗುತ್ತಾ ಸಾಮಾಜಿಕ ಅಸಮಾನತೆಗಳು ಹೆಚ್ಚಾದವು.

ವಸಹತೀಕರಣದ ಪೂರ್ವದಲ್ಲಿ ಭೂಮಿಯನ್ನು ಭೂಮಿಗೆ ಹಾಕುವ ಬಿತ್ತನೆ ಬೀಜದಿಂದ ವಿಸ್ತಾರವನ್ನು ನಿರೂಪಿಸಲಾಗುತ್ತಿತ್ತು. ಮೂರು ಕಳಸೆ ಗದ್ದೆ, ಆರು ಮುಡಿ ಗದ್ದೆ ಎಂದು ಕೃಷಿಕರು ಗದ್ದೆಯ ವಿಸ್ತಾರವನ್ನು ಹೇಳುತ್ತಿದ್ದರು. ಕರಾವಳಿಗೆ ಮಿಶನರಿಗಳ ಆಗಮನ ಮತ್ತು ಅವರಿಗಿದ್ದ ವ್ಯಾಪಾರಿ ದೃಷ್ಟಿಕೋನದ ಪ್ರಮುಖ ಹೆಜ್ಜೆಯಾಗಿ ಭುಮಿಯನ್ನು ಅಳತೆ ಮಾಡಲಾಯಿತು. ಸೆನ್ಸ್, ಎಕರೆಗಳ ವಿಸ್ತೀರ್ಣದಲ್ಲಿ ಇಷ್ಟು ಕೊಳಿಕೆ, ಇಷ್ಟು ಸಂಕಲೆ ಎಂದು ವಿಶ್ಲೇಷಿಸಲಾಯಿತು ಮತ್ತು ಎಲ್ಲಾ ಭೂಮಿಯನ್ನು ಬೆಳೆ ಬೆಳೆಯುವ, ನೀರಾವರಿ ವ್ಯವಸ್ಥೆಯನ್ನು ಗಮನದಲ್ಲಿರಿಸಿಕೊಂಡು ಮೂರು ರೀತಿಯಲ್ಲಿ ಹೆಸರಿಸಿದರು. ಇದರಂತೆ ಭೂಮಿಯು ಖುಷ್ಕಿ, ತರಿ, ಮತ್ತು ಖದೀಂಗಳಾದವು. ಖುಷ್ಕಿ ಭೂಮಿಯನ್ನು ಒಣಭೂಮಿಯೆಂದೂ, ತರಿಯನ್ನು ಗದ್ದೆಗಳೆಂದೂ, ಖದೀಂ ಎಂದರೆ ಹಳೆಯ ವರ್ಗದ ಭೂಮಿ ಎಂದು ಅರ್ಥೈಸಲಾಗುತಿತ್ತು. ಭೂಮಿಯಲ್ಲಿ ಬೆಳೆದ ಬೆಳೆಗಳಿಗೂ ತೆರಿಗೆ ಕೊಡಬೇಕು ಎಂಬ ಹೊಸ ಕಾನೂನನ್ನು ಬ್ರಿಟಿಷರು ತಂದರು. ಯಾವುದಕ್ಕೆ, ಯಾವ ಭೂಮಿಗೆ ಎಷ್ಟು ತೆರಿಗೆ ಎಂದು ಬ್ರಿಟಿಷ್ ಸರಕಾರವೇ ನಿರ್ಧರಿಸುತ್ತಿತ್ತು. ಕುಮೆರಿ ಬೇಸಾಯಕ್ಕೂ ತೆರಿಗೆ ಇತ್ತು. ತೆರಿಗೆ ಕಟ್ಟದಿದ್ದರೆ ದಂಡ ನೀಡಬೇಕಾಗುತ್ತಿತ್ತು. ಖಾಸಗಿ ಒಡೆತನದ ಭೂಮಿ, ಸರ್ಕಾರಿ ಒಡೆತನದ ಭೂಮಿಗಳೆಂಬ ವಿಭಾಗ ಕ್ರಮಗಳನ್ನು ಗುರುತಿಸಿದರು. ಖಾಸಗಿ ಭೂಮಿಯ ಗದ್ದೆಗಳಿಗಾಗಿ ಒಂದಿಷ್ಟು ಸರಕಾರಿ ಜಮೀನಿನ ಗುಡ್ಡಗಳಿದ್ದರೆ, ಅದು ಆ ಜಾಗದ **'ಕುಮ್ಕಿ'** ಹಕ್ಕು ಆಗಿ ಅನುಭವಿಸಲು ಮಾತ್ರ ಲಭ್ಯವಾಗುತಿತ್ತು. ಯಾವುದೇ ವ್ಯಕಿಯು ಕಟ್ಟಿದ ಮನೆ ಇರುವ ಜಾಗವು ಸಾಗುವಳಿ ಮಾಡುತ್ತಿದ್ದ ಗದ್ದೆಯಾಗಿದ್ದು ನಂತರದಲ್ಲಿ ಮಾಡದೆ ಹಾಗೆ ಇದ್ದರೆ ಅದನ್ನು **'ಪರಂಬೋಕು'** ಎನ್ನುತ್ತಿದ್ದರು. ಭೂಮಿಯ ಅಳತೆ, ತೆರಿಗೆಯ ವ್ಯವಸ್ಥೆಯ ಆ ಎಲ್ಲಾ ಸ್ಥಿತ್ಯಂತರಗಳೊಂದಿಗೆ 'ಭೂಮಿ'ಯ ಪರಿಭಾಷೆಯೇ ಬದಲಾಯಿತು.

ಕರಾವಳಿ ಕರ್ನಾಟಕದ ಭೌಗೋಳಿಕತೆ ಕೃಷಿಗೆ ಯೋಗ್ಯವಾಗಿತ್ತೆ? ಎಂಬ ಪ್ರಶ್ನೆ ಹುಟ್ಟಿಕೊಂಡಾಗ ಕೃಷಿ ಎಂದರೆ ಏನು ಮಾತ್ರವಲ್ಲ ಸಮತಟ್ಟಾದ ನೆಲದಲ್ಲಿ ನದಿ ದಂಡೆಗಳಲ್ಲಿ ಮಾತ್ರ ಕೃಷಿಯ ಅನ್ವೇಷಣೆಯಾದುದಲ್ಲ. ಕೃಷಿ ಜಗತ್ತೇ ತೀರ ಸಂಕೀರ್ಣವಾದುದು. ನಾಗರೀಕತೆಯ ಮೂಲ ಬೇರಾದ ಕೃಷಿ ಜಗತ್ತಿನ ಎಲ್ಲಾ ಪ್ರದೇಶಗಳಲ್ಲೂ ಒಂದೆ ರೀತಿಯಾಗಿ ವಿಕಸನ ಹೊಂದಿಲ್ಲ. ಕರಾವಳಿಯ ಬೌಗೋಳಿಕತೆ ಕೃಷಿಗೆ ಯೋಗ್ಯವಾದುದು ಅಲ್ಲ ಎನ್ನುವ ವಾದ ಹುರುಳಿಲ್ಲದ್ದು. ಕರಾವಳಿಯ ಕೃಷಿಯೇ ವಿಶಿಷ್ಟವಾದುದು. ಒಂದೆಡೆ ವಿಸ್ತಾರ ನದಿ ಬಯಲು ಅದಕ್ಕೆ ಸಮೀಪಿಸಿದಂತೆ ಎತ್ತರವಾದ ಬೆಟ್ಟ-ಗುಡ್ಡಗಳು ಈ ಬೆಟ್ಟ-ಗುಡ್ಡಗಳ ಮಧ್ಯದಲ್ಲಿಯೇ ವಿಸ್ತಾರವಾದ ಬಯಲು ಗದ್ದೆಗಳ ಹಂದರಗಳು. ಮಳೆಯ ನೀರು ಗುಡ್ಡದಿಂದ ಇಳಿದು ಆಳ ಅಗಲವಾಗಿ ತೊರೆ, ನದಿಗಳಾಗಿ ಹರಿದಿವೆ. ನದಿ ಬಯಲಿನ ಉಪ್ಪು ನೀರು ತುಂಬುವ ಗದ್ದೆಗಳು, ಸಮುದ್ರ ನದಿ ಬಯಲನ್ನು ಸೇರುವ ಅಳಿವೆ ಬಾಗಿಲಿನ ಪಟ್ಲ ಗದ್ದೆಗಳು ಹೀಗೆ ತಗ್ಗು ಪ್ರದೇಶಗಳಲ್ಲಿ ಅತಿ ವೈವಿಧ್ಯತೆಯನ್ನು ಹೊಂದಿರುವ ಪ್ರದೇಶ ಕರಾವಳಿ. ನದಿ ಬದಿಯ ಗದ್ದೆಗಳಲ್ಲಿ ಉಪ್ಪು ನೀರು ಬಂದಾಗ ನೀರು ತುಂಬಿಸಿ ಉಪ್ಪು ತಯಾರಿಸುತ್ತಿದ್ದ ಗದ್ದೆಗಳಲ್ಲಿ ಸಿಹಿ ನೀರು ಬಂದಾಗ ಬೆಳೆ ಬೆಳೆಯುತ್ತಿದ್ದರು. ಹೀಗೆ ಕೃಷಿ ಪರಂಪರೆಯೇ ತೀರ ವೈವಿಧ್ಯದ ಸಂಕೀರ್ಣದ ಆಯಾಮ.

ಕರಾವಳಿ ಯಾವುದೇ ಕಾಡಿನ ಸೆರಗನ್ನು ಆಶ್ರಯಿಸಿ ಹೊರಟಾಗಲೂ ಅಲ್ಲರುವ ದಟ್ಟ ಕಾನನ ಪ್ರಾಣಿ ಸಂಕುಲ ಇಳಿಜಾರು ಭೂಮಿ ಕೃಷಿಗೆ ಸವಾಲಾದದುದು. ಈ ಸವಾಲುಗಳನ್ನು ಸಮರ್ಥವಾಗಿ ಸ್ವೀಕರಿಸಿ ಸಾಧ್ಯವಾಗುವ ಬೆಳೆಗಳನ್ನು ಬೆಳೆದರು. ಕರಾವಳಿಯ ಸಮುದ್ರ ತೀರ ಮತ್ತು ನದಿ ದಂಡೆಗಳಲ್ಲಿ ದಡವನ್ನು ಕಾಯುವುದಕ್ಕಾಗಿ ತೆಂಗಿನ ಕೃಷಿಯನ್ನು ನಡೆಸಿದರು. ಉಳಿದಂತೆ ಧಾನ್ಯಗಳು, ಸಾಂಬಾರು ಪದಾರ್ಥಗಳು, ವನಸ್ಪತಿಗಳು ತರಕಾರಿಗಳು ಇತ್ಯಾದಿಗಳನ್ನು ವಿಶೇಷವಾಗಿ ಬೆಳೆಸಲು ಎತ್ತರವಾದ ಪ್ರದೇಶ, ವಿಸ್ತಾರವಾದ ಪದವುಗಳಲ್ಲಿ ಮಾಡುತ್ತಿದ್ದ ಕುಮೆರಿ ಕೃಷಿ, ಇಳಿಜಾರಿನ ಬೆಟ್ಟ ಗುಡ್ಡಗಳಲ್ಲಿ ನಡೆಸುತ್ತಿದ್ದ ತೆಂಗು ಬಾಳೆಯ ಕೃಷಿ ಬೆಟ್ಟ ಗುಡ್ಡಗಳಲ್ಲಿ ವಿಸ್ತಾರವಾದ ಗದೆಗಳಲ್ಲಿ ಮಾಡುತ್ತಿದ್ದ ಭತ್ತ ಹಾಗೂ ಧವಸ ಧಾನ್ಯಗಳ ಕೃಷಿ, ವಿಶಿಷ್ಟತೆ ಮತ್ತು ವೈವಿಧ್ಯತೆಯಿಂದ ಕೂಡಿತ್ತು. ಆಹಾರದ ಸ್ವಾವಲಂಬನೆ ಮತ್ತು ಸ್ವಂತಿಕೆಯನ್ನು ಬೆಳೆಸಿದ್ದ ಕೃಷಿ ಜಗತ್ತಿನ ಅನ್ವೇಷಣೆ ಮತ್ತು ವಿತರಣೆ ಏಕಮುಖಿಯಾದುದು ಅಲ್ಲ.

ಕುಮೆರಿ ಕೃಷಿ ಹರಿದು ಹೋಗುವ ನೀರಿನಲ್ಲಿ ಮಾಡುವ ಕೃಷಿ ನದಿ ಬದಿಯ ಗದ್ದೆಗಳಲ್ಲಿ ಮಾಡುತ್ತಿದ್ದ ಕೃಷಿ ಎಲ್ಲವೂ ಒಂದಕ್ಕೊಂದು ಭಿನ್ನ ಮತ್ತು ವಿಶಿಷ್ಟ. ಕರಾವಳಿಗರ ಕೃಷಿ ಜ್ಞಾನದ ಅರಿವು ಏಕರೂಪವಾಗಿಲ್ಲ. ಬಹುಮುಖತೆಯನ್ನು ಹೊಂದಿದ ಕರಾವಳಿ ಕರ್ನಾಟಕವನ್ನು ಇಡೀ ಭಾರತದ ಕೃಷಿ ಪರಂಪರೆಯಲ್ಲಿ ತನ್ನದೇ ಆದ ವಿಶಿಷ್ಟತೆಯನ್ನು ಹೊಂದಿದೆ ಹಾಗಾಗಿಯೇ ಎಷ್ಟೇ ಫಲವತ್ತಾದ ಪ್ರದೇಶಗಳಲ್ಲಿ ಎರಡು ಹೆಚ್ಚೆಂದರೆ ಮೂರು ಬೆಳೆಯನ್ನು ಪಡೆದರೆ ಕರಾವಳಿಯಲ್ಲಿ ನಾಲ್ಕು ಬೆಳೆಯನ್ನು ಸರಾಗವಾಗಿ ಬೆಳೆಯಬಹುದು. (ಕೊನೆ ಟಿಪ್ಪಣಿ ೩ : ನಾಲ್ಕು ಬೆಳೆ)

**ಕೊನೆ ಟಿಪ್ಪಣಿ ೧ :– ಡೋಲಿನ ಕತೆ– ಅಣ್ಣ –ತಂಗಿ ಕತೆ**

ಪ್ರಪಂಚದಲ್ಲಿ ಭೂಮಿ ಎನ್ನುವುದೇ ಇರಲಿಲ್ಲ. ಎಲ್ಲವೂ ನೀರಿನಿಂದ ತುಂಬಿ ಹೋಗಿತ್ತು. ಆ ನೀರಿನಲ್ಲಿ ಗಂಡು– ಹೆಣ್ಣು ಎನ್ನುವ ಎರಡು ಜೀವಿಗಳು ಹುಟ್ಟಿದವು. ಈ ಎರಡು ಜೀವಗಳೇ ಅಣ್ಣ–ತಂಗಿ (ತಗೆ–ತಂಗಡಿ) ಇರುವ ನೀರಿನಲ್ಲಿರುವಾಗ ನಾರಾಯಣ ದೇವರು ಮಾಯೆಯ ಸೃಷ್ಟಿಯಿಂದ ಡೋಲಿನ 'ಕಳಸೆ' (ಡೋಲುದ ಕರ) ಯನ್ನು ನೀರಿನಲ್ಲಿ ತೇಲಿಬಿಟ್ಟಾಗ ಅವರು ಅದರೊಳಗೆ ಕುಳಿತು ರಕ್ಷೆಯನ್ನು ಪಡೆದರು. ನಾರಾಯಣ ದೇವರು ಬಂದು ನಿಮಗೆ ಏನಾದರೂ ಬೇಕೆ? ಎಂದು ಕೇಳಿದರಂತೆ. ಆಗ ಅವರು ನಮಗೇನೂ ಬೇಡವೆಂದು ಹೇಳಿದ್ದರಿಂದ ಮರಳಿ ಹೋದರು. ಜೀವ ತಡೆಯಲಾಗದೆ ನಾರಾಯಣ ದೇವರು ಪುನಃ ಬಂದು ಕೇಳಿದಾಗಲೂ ಅವರಿಂದ ಅದೇ ರೀತಿ ಉತ್ತರ ದೊರೆಯಿತು. ಮೂರನೇ ಬಾರಿ ಬಂದಾಗ ನಿಮಗೆ ಪ್ರಪಂಚ ಅನ್ನುವುದು ಬೇಡವೇ? ಪ್ರಪಂಚದಲ್ಲಿ ಇತರ ಜೀವಿಗಳೂ ಇರಬೇಕು ಎಂಬ ಬಯಕೆ ನಿಮಗಿಲ್ಲವೇ? ನಿಮಗೆ ಈ ನೀರಿನಲ್ಲಿ ಡೋಲಿನ ಇಷ್ಟೇ ಸ್ಥಳದಲ್ಲಿ ಇರಲು ಬೇಸರವಾಗುವುದಿಲ್ಲವೇ? ಹೀಗೆ ಪ್ರಶ್ನೆಗಳನ್ನು ಕೇಳಿ ಪರಸ್ಪರ ಒಬ್ಬರಿನ್ನೊಬ್ಬರಲ್ಲಿ ಆಸೆ ಹುಟ್ಟಿಸಿದರು. ಆಗ ಆ ಅಣ್ಣ ತಂಗಿಯರಿಬ್ಬರೂ ಕೂಡಿದರು. ಆಗ ಭೂಮಿ ಹುಟ್ಟಿತು. ಅವರ ಆಸೆಗೆ ತಕ್ಕಂತೆ ಎಲ್ಲವೂ ನಿರ್ಮಾಣವಾಯಿತು.

ಅಣ್ಣ ತಂಗಿಯರ ಸಂತಾನ ಬೆಳೆಯುತ್ತಾ ಹೋಯಿತು. ಈ ಸಂತಾನ ಬೆಳೆದಂತೆ ಮನೆತುಂಬಿ ಹೋಯಿತು. ಹೊಟ್ಟೆಯ ಪಾಡಿಗಾಗಿ ಅವರ ಮಕ್ಕಳೆಲ್ಲ ಬೇರೆ ಬೇರೆ ವೃತ್ತಿಯನ್ನು ಅವಲಂಭಿಸಿದರು. ಇದೇ ವೃತ್ತಿಗಳೇ ಮುಂದೆ ಜಾತಿಗಳಾದವು. ಅದರಲ್ಲಿ ಬ್ರಾಹ್ಮಣ, ಶೆಟ್ಟಿ, ಮೊಯ್ಲಿ, ಬಿಲ್ಲವ ಇವರೆಲ್ಲರೂ ಇದ್ದರು. 'ಅಕ್ಕನ'ಸಂತಾನದ ಮಕ್ಕಳಾದ ಇವರು ಬೆಳೆದು ಶ್ರೀಮಂತರಾದರು ಮತ್ತು ಬುದ್ಧಿವಂತರಾದರು. ಆದರೆ ತಂಗಿಯ ಸಂತಾನದವರು ಹಾಗೆ ಆಗಲಿಲ್ಲ. ಏಕೆಂದರೆ ತಂಗಿ ಅಣ್ಣನನ್ನು ವರಿಸಿದ್ದರಿಂದ ಅವರಿಗೆ ಶಾಪವಿತ್ತು, ಆ ಕಾರಣಕ್ಕಾಗಿ ಅವರಿಗೆ ಬೆಳೆಯಲಾಗಲಿಲ್ಲ. ತಂಗಿ ಈ ಶಾಪದಿಂದ ಮುಕ್ತಿಯನ್ನು ಪಡೆಯಬೇಕಾದರೆ ಆಕೆ ತನ್ನ ಎಲ್ಲಾ ಮಕ್ಕಳ ಮನೆಯಲ್ಲಿ ಎಂಜಲು ಅನ್ನವನ್ನು ತಿನ್ನಬೇಕು ಎಂದು ನಾರಾಯಣ ದೇವರು ಹೇಳಿದರಂತೆ. ಆ ಕಾರಣಕ್ಕಾಗಿ ತಂಗಿಯ ಸಂತಾನದವರು ಎಂಜಲು ಅನ್ನವನ್ನು ತಿನ್ನುತ್ತಾರೆ. (ಪುರುಷೋತ್ತಮ ಬಿಳಿಮಲೆ, ೧೯೯೩, ೨೭)

**ಕೊನೆ ಟಿಪ್ಪಣಿ ೨ :– ಮಲೆಯಾಳಿ ಕ್ರೈಸ್ತರು:** ಮಲೆಯಾಳಿ ಭಾಷೆಯನ್ನಾಡುವ ಕ್ರೈಸ್ತ ಸಮುದಾಯವೇ ಮಲಯಾಳಿ ಕ್ರೈಸ್ತರು. ಕೇರಳದಿಂದ ದಕ್ಷಿಣ ಕನ್ನಡಕ್ಕೆ ವಲಸೆ ಬಂದಿರುವ ಇವರು ನೆಲಸಿದುದು ಮಲೆನಾಡು ಮತ್ತು ಕಾಡು ಪ್ರದೇಶಗಳಲ್ಲಿ ಇವರನ್ನು ಸಿರಿಯನ್ ಕ್ರಿಶ್ಚಿಯನ್ನರೆಂದೂ ಕರೆಯುತ್ತಾರೆ. ಕ್ರಿ.ಶ ೧ನೇ ಶತಮಾನದ ಸುಮಾರಿಗೆ ಈಗಿನ ಅರಬ್ ಪ್ರಾಂತ್ಯದ ಸಿರಿಯಾದಿಂದ ಕೊಚ್ಚಿಗೆ ಧರ್ಮ ಪ್ರಚಾರಕ್ಕಾಗಿ ಬಂದ ಸೈಂಟ್ ತೋಮಸ್ ಎಂಬ ಕ್ರಿಸ್ತನ ಶಿಷ್ಯರ ಅನುಯಾಯಿಗಳಿವರು. ಇವರಲ್ಲಿ ಮತ್ತಷ್ಟು ಒಳ ಪಂಗಡಗಳಿವೆ.

ಶ್ರಮ ಜೀವಿಗಳಾದ ಇವರು ಬಹಳ ದೀರ್ಘ ಕಾಲ ಕೇರಳದಲ್ಲೆ ವಾಸಿಸಿದ್ದರೂ ಕಾಲಾಂತರದಲ್ಲಿ ದಟ್ಟ ಕಾಡು ಗುಡ್ಡ ಪ್ರದೇಶಗಳಿಗೆ ವಲಸೆ ಬಂದರು. ಬ್ರಿಟಿಷರು ಭಾರತಕ್ಕೆ ಆಗಮಿಸಿ ವಸಾಹತುವಾಗಿ ಮಾರ್ಪಡಿಸಿಕೊಂಡು ಇಲ್ಲಿಯ ಭೂಮಿಯ ಮೇಲೆ ಒಡೆತನವನ್ನು ಹೊಂದಿದ್ದರು. ಎರಡನೆ ಮಹಾ ಯುದ್ಧದ ಕಾಲದಲ್ಲಿ ಚಾರಿತ್ರಿಕ ಸಾಮಾಜಿಕ ಕಾರಣಗಳಿಗಾಗಿ ವಲಸೆ ಇವರಿಗೆ ಅನಿವಾರ್ಯವಾಗಿತ್ತು. ತಿರೂವಾಂಕೂರು ಮಲಬಾರ್ ಪ್ರದೇಶಗಳಲ್ಲಿ ನಡೆದ ವಲಸೆ ಜಾಗತಿಕ ಮಟ್ಟದಲ್ಲಿ ಗುರುತಿಸಿಕೊಂಡಿದ್ದರೂ ಅದಕ್ಕಿಂತ ಭಿನ್ನವಾಗಿ ಆರ್ಥಿಕ ಕಾರಣಗಳಿಗಾಗಿ ವಲಸೆ ನಡೆಯಿತು. ಕೃಷಿ ಭೂಮಿಯ ಅಲಭ್ಯತೆ ಇದಕ್ಕೆ ಮುಖ್ಯ ಕಾರಣ. ಕೃಷಿ ವಿಸ್ತರಣೆಗೊಂಡಂತೆಲ್ಲ ಮಲಬಾರ್ ಪ್ರಾಂತ್ಯದಲ್ಲಿದ್ದ ಕೃಷಿ ಭೂಮಿಗಳು ಅಲಭ್ಯವಾಗಿ ಕೃಷಿಯನ್ನೆ ಅನ್ವೇಷಿಸಿಕೊಂಡು ಈ ಸಮುದಾಯ ವಲಸೆ ಬಂದರು ಬಹಳ ಮುಖ್ಯವಾಗಿ ಎರಡನೆ ಮಹಾಯುದ್ಧದ ಕಾಲದಲ್ಲಿ ಕೃಷಿ ಉತ್ಪನ್ನಗಳ ಬೆಲೆ ತೀವ್ರವಾಗಿ ಕುಸಿಯಿತು. ಆರ್ಥಿಕತೆಯಲ್ಲಿ ಆದ ವ್ಯತ್ಯಾಸಗಳಿಂದ ಕೃಷಿಕರ ಸಾಲ ಹೆಚ್ಚಾಯಿತು. ಮಲಬಾರ್ ಪ್ರಾಂತ್ಯದಲ್ಲಿ ಭೂಮಿಯ ಬೆಲೆ ಹೆಚ್ಚಾದುದರಿಂದ ತಮ್ಮಲ್ಲಿರುವ ಕೃಷಿ ಭೂಮಿಯುನ್ನು ಮಾರಿ ಉಳಿಟ ಹಣದಿಂದ ಕಡಿಮೆ ಬೆಲೆಗೆ ಲಭ್ಯವಾದ ಕೃಷಿ ಭೂಮಿಯ ಖರೀದಿಗಾಗಿ ವಲಸೆ ಬಂದರು. ವಲಸೆಯಲ್ಲೂ ಹಲವಾರು ಸಾವು–ನೋವುಗಳು ಸಂಬಂಧಿಸಿದವು. ಕಾಡು ಪ್ರಾಣಿಗಳ ಹಾವಳಿ ಮಲೇರಿಯಾದಂತಹ ಸಮಸ್ಯೆಗಳ ಮಧ್ಯೆಯೂ ಹಲವು ಸವಾಲುಗಳನ್ನು ಎದುರಿಸಿದರು.

ಎರಡನೆಯ ಮಹಾಯುದ್ದದ ಕಾಲಕ್ಕೆ ಯುದ್ಧೋಪರಕಣಗಳಿಗಾಗಿ ರಬ್ಬರ್‌ನ ಅವಶ್ಯಕತೆಯಿದ್ದುದರಿಂದ ರಬ್ಬರ್ ಬೆಳೆಯನ್ನು ವಿಸ್ತರಿಸುತ್ತ ಹೋದರು. ಬೇಡಿಕೆ ಇರುವ ಬೆಳೆಯನ್ನು ಬೆಳೆಯಲು ಲಭ್ಯವಾಗುವ ಭೂಮಿಗಾಗಿ ಸಾಹಸೀ ಪ್ರವೃತ್ತಿಯೊಂದಿಗೆ ವಲಸೆ ಬಂದರು.

ಕರಾವಳಿಯ ಮಂದಿ ಕೃಷಿಯನ್ನು ಪರಿಚಯಿಸಲು ಕೇರಳ-ತಮಿಳುನಾಡುಗಳಿಗೆ ವಲಸೆ ಹೋಗಿರುವುದು ಒಂದು ಹಂತವಾದರೆ ಎರಡನೆಯ ಹಂತದಲ್ಲಿ ಕೃಷಿಯನ್ನು ವಿಸ್ತರಿಸಲು ಕೇರಳಿಗರು ಮಲೆನಾಡಿಗೆ ವಲಸೆ ಬಂದರು. ತಿರುವಾಂಕೂರು ರಾಜನ ಆಡಳಿತ ಕಾಲದಲ್ಲಿ ಕೃಷಿ ವಿಸ್ತರಣೆಗೊಂಡು ಕೃಷಿ ಅಭಿವೃದ್ಧಿಯಾಯಿತು. ಮಲಬಾರ್ ಪ್ರಾಂತ್ಯದಲ್ಲಿ ವಿಸ್ತಾರವಾದ ಭೂಮಿ ಇದ್ದರೂ ಎಲ್ಲವೂ ಕೃಷಿ ಭೂಮಿಯಾದಾಗ ದುಡಿಮೆ ಸಂಪತ್ತಿನ ಒಡೆತನ ಆರ್ಥಿಕತೆಗಾಗಿ ಆಂತರಿಕ ಸಂಘರ್ಷಗಳು ಉಂಟಾದವು. ಕೃಷಿಯನ್ನು ವಿಸ್ತರಿಸಲು ಮಾಡಿದ ಸಾಲಗಳು, ಉತ್ಪನ್ನಗಳು, ಬೆಲೆ ಕಳಕೊಂಡು ರೈತರು ಹತಾಶರಾಗುವ ಸ್ಥಿತಿಗೆ ಬಂತು.

ತಿರುವಾಂಕೂರು ರಾಜ್ಯವನ್ನು ತಮ್ಮ ಕೈವಶ ಮಾಡಿಕೊಂಡು ಬ್ರಿಟಿಷರು ಮೊದಲ ಬಾರಿಗೆ 'ದೇವಿ ಕುಳಂ'ನ ಗುಡ್ಡಗಳಲ್ಲಿ ರಬ್ಬರ್ ಬೆಳೆಯನ್ನು ಪ್ರಯೋಗ ಮಾಡಿದರು. ಇದರಿಂದ ಒಳ್ಳೆಯ ಉತ್ಪನ್ನ ಮತ್ತು ಲಾಭ ಪ್ರಾಪ್ತಿಯಾಯಿತು. ನಂತರದಲ್ಲಿ ಕಾಣಿಸಿಕೊಂಡ ಜಾಗತಿಕ ಮಹಾಯುದ್ಧ ತೀವ್ರ ಆರ್ಥಿಕ ಒತ್ತಡ ಮತ್ತು ಬಡತನವನ್ನು ಸೃಷ್ಟಿಸಿತು. ಪರಿಣಾಮ ಕೃಷಿಕರು ತಮ್ಮ ಹೊಟ್ಟೆ ಪಾಡಿಗಾಗಿ ಪ್ರಾಕೃತಿಕವಾಗಿ ಬೆಳೆಯುವ ಮರ ಗೆಣಸು, ಮರ ಕೆಸುಗಳನ್ನು ಕಾಡು ಗುಡ್ಡಗಳಲ್ಲಿ ಬೆಳೆಯುತ್ತಿದ್ದರು. ಆಹಾರದ ಮೂಲವನ್ನು ಹುಡುಕುತ್ತಾ ಈ ಬೆಳೆಗಳನ್ನು ಬೆಳೆಯಲು ಲಭ್ಯವಾಗುವ ಭೂಮಿಗಾಗಿ ದಕ್ಷಿಣ ಕನ್ನಡಕ್ಕೆ ಅಗಮಿಸಿದ್ದರು. ಕಾಡು ದಟ್ಟವಾಗಿದ್ದ ಚಿಕ್ಕಮಗಳೂರು ಮತ್ತು ಅದರ ಕೆಳಗಿನ ಸಾಲಿನ ಪಶ್ಚಿಮ ಘಟ್ಟದ ಪರ್ವತ ಶ್ರೇಣಿಗಳ ಇಳಿಜಾರಾದ ಕಾಡು-ಗುಡ್ಡಗಳು ಸರಕಾರಿ ಜಮೀನುಗಳು, ಅತಿ ಕಡಿಮೆ ಬೆಳೆಗೆ ಲಭಿಸಿದ ಖಾಸಗಿ ಒಡೆತನದ ತುಂಡು ಭೂಮಿಗಳಿಗೆ ಸೇರಿಕೊಂಡ ಕುಮ್ಕಿ ಭೂಮಿಯನ್ನು ಖರೀದಿಸಿ, ಬಾಡಿಗೆಗೆ, ಗೇಣಿಗೆ ಹೀಗೆ ಬೆಳೆ ಬೆಳೆಯಲಾರಂಭಿಸಿದರು. ಬಹಳ ಮುಖ್ಯವಾಗಿ ಬೆಲೆದ ಬೆಳೆಗಳು ಆಹಾರದ ಬೆಳೆಗಳಾಗಿರದೆ ವಾಣಿಜ್ಯ ಬೆಳೆಗಳೇ ಆಗಿದ್ದವು. ತಮ್ಮ ಆಹಾರದ ಮೂಲವಾಗಿದ್ದ ಗೆಣಸು, ಕೆಸು, ನೇಂದ್ರ ಬಾಳೆಗಳ ಜತೆ ಅಗತ್ಯಕ್ಕೆ ತಕ್ಕಂತೆ ಒಂದಿಷ್ಟು ಭತ್ತ ಬೇಸಾಯವನ್ನು ನಡೆಸಿದರು. ಆದಾಯದ ಮೂಲದ ಬಗೆಗೆ ಹೆಚ್ಚು ಲೆಕ್ಕಾಚಾರವಿದ್ದುದರಿಂದ ಪ್ರಮುಖ ಬೆಳೆಗಳಾಗಿ ರಬ್ಬರ್, ಲಾವಂಚ, ಶುಂಠಿ, ಗೆಡ್ಡೆ ಗೆಣಸುಗಳನ್ನೇ ಬೆಳೆದರು. ರಬ್ಬರ್ ಹೊಸ ಪ್ರಯೋಗದ ಬೆಳೆಯಾಗಿದ್ದು ನೀರು ಇಳಿಜಾರಾಗಿ ಹರಿದು ಹೋಗುವ ವಿಸ್ತಾರವಾದ ಗುಡ್ಡಗಳೆಲ್ಲ ಏಕ ಮಾದರಿಯ ಸಸ್ಯಗಳಿಂದ ರಬ್ಬರ್ ತೋಟಗಳಾದವು. ಈ ರಬ್ಬರ್ ಮರಗಳ ಮಧ್ಯೆ ಮರ ಗೆಣಸು ಮತ್ತು ಮರ ಕೆಸುವಿನ ಬೆಳೆಗಳನ್ನು ಬೆಳೆದರು.

ಕೃಷಿಯಿಂದ ಕೃಷಿಗೆ ವಲಸೆ ಬಂದ ವಿಶಿಷ್ಟ ಸಮುದಾಯ ಮಲಯಾಳಿ ಕ್ರೈಸ್ತರು, ಆಹಾರದ ಮೂಲ ಮತ್ತು ಆರ್ಥಿಕತೆಯ ಮೂಲವನ್ನು ಸ್ಪಷ್ಟವಾಗಿ ಅರಿತಿದ್ದರಿಂದ ವಾಣಿಜ್ಯ ಬೆಳೆಗಳೇ ಅವರ ಉತ್ಪನ್ನಗಳಾದವು. ಅಡಿಕೆ, ಕಾಳುಮೆಣಸು, ಪ್ರಮುಖ ಬೆಳೆಯಾಗಿ ತೆಂಗು ಹಾಗೂ ಅಡಿಕೆ ಹಲವು ಉಪಬೆಳೆಗಳಾಗಿ ಪ್ರಾದೇಶಿಕವಾಗಿ ವಿಶಿಷ್ಟವಾಗಿರುವ ತರಕಾರಿಗಳು, ಗೆಡ್ಡೆ ಗೆಣಸುಗಳನ್ನು ಬೆಳೆದರು. ಕೃಷಿಯ ಅನನ್ಯತೆ ಮತ್ತು ವೈಶಿಷ್ಟ್ಯತೆಯನ್ನು ಶ್ರಮದ ದುಡಿಮೆಯೊಂದಿಗೆ ವಲಸೆಯಿಂದಾದ ನೋವು, ಬಿಕ್ಕಟ್ಟು ಹತಾಶೆಗಳನ್ನು ಮರೆಯಲು ಯತ್ನಿಸಿದರು. ಕಾಲಾಂತರದಲ್ಲಿ ಕೆಲವು ಕುಟುಂಬಗಳು ಅತ್ಯಂತ ಶ್ರೀಮಂತ ಶ್ರೇಣಿಯ ಕುಟುಂಬಗಳಾಗಿ ಬೆಳೆದವು. ರಟ್ಟೆ ತುಂಬಾ ದುಡಿಮೆ ಹೊಟ್ಟೆ ತುಂಬಾ ಹಸಿವು ನೀಗಿಸಿಕೊಳ್ಳುವುದರ ಉದ್ದೇಶ ಇದೇ ಆಗಿತ್ತು. ಜೇಬು ತುಂಬಾ ಒದು ತಂದು ಕೃಷಿ ಮಾಡುತ್ತೇನೆಂದವರು ದಿವಾಳಿಯಾಗಿ ಹೋದ ದುರಂತ ಘಟನೆಗಳು ಇವೆ. (ಮಾಹಿತಿ ಅನಿಲ್.ವಿ.ಚೆರಿಯನ್ - ೨೨-೨-೨೦೧೬).

**ಕೊನೆ ಟಿಪ್ಪಣಿ ೩:- ನಾಲ್ಕು ಬೆಳೆ** ; ಕರಾವಳಿಯಲ್ಲಿ ಎಣೆಲು, ಸುಗ್ಗಿ, ಕೊಳಕೆ, ಮತ್ತು ಇಡೆ ಕೊಳಕೆ ಎಂಬ ನಾಲ್ಕು ಬೆಳೆಯನ್ನು ಒಂದು ವರ್ಷದಲ್ಲಿ ಬೆಳೆಯುತ್ತಾರೆ. ಗದ್ದೆಯ ಸ್ವರೂಪ ಮತ್ತು ನೀರಾವರಿಯನ್ನು ಅನುಸರಿಸಿ ಭತ್ತ, ಧಾನ್ಯಗಳನ್ನು ಬೆಳೆಯುವಾಗ ಪ್ರತಿ ಬೆಳೆಯ ತಳಿಗಳು ಭಿನ್ನವಾಗಿದ್ದು ಆಯಾಯ ಕಾಲಮಾನಕ್ಕೆ ಅನುಗುಣವಾಗಿ ಫಸಲನ್ನು ಪಡೆಯಲು ಸಾಧ್ಯವಾಗಿದೆ. ಇದು ಕರಾವಳಿಯ ಕೃಷಿ ಸಂಸ್ಕೃತಿಯ ವೈಶಿಷ್ಟ್ಯವೂ ಆಗಿದೆ.

ಅಧ್ಯಾಯ ೩

# ಕರಾವಳಿ ಕರ್ನಾಟಕದಲ್ಲಿ ಕೃಷಿ ಸಂಸ್ಕೃತಿಯ ಪಲ್ಲಟದ ಸ್ವರೂಪ

೩.೧ ಆಹಾರದ ಬೆಳೆಯಿಂದ ವಾಣಿಜ್ಯ ಬೆಳೆಗೆ

೩.೨ ಕೃಷಿಯಿಂದ ಕೈಗಾರಿಕೆಗೆ

೩.೩ ಕೃಷಿ ಸಂಸ್ಕೃತಿ ಮತ್ತು ವೃತ್ತಿ ಪಲ್ಲಟ

೩.೪ ಕೃಷಿ ಸಂಸ್ಕೃತಿ ಮತ್ತು ವೈಯಕ್ತಿಕ ಬದುಕಿನ ಪಲ್ಲಟ

೩.೫ ಕೃಷಿ ಸಂಸ್ಕೃತಿ ಪಲ್ಲಟ ಮತ್ತು ಪಾರಂಪರಿಕ ಕೃಷಿಕ ಸಮುದಾಯಗಳು

ಕರ್ನಾಟಕದ ಪಶ್ಚಿಮ ಘಟ್ಟದ ಮೇಲಿನ ಪ್ರದೇಶಗಳಿಂದ ಪ್ರತ್ಯೇಕವಾಗಿ ವಿಭಿನ್ನ ಸಂಸ್ಕೃತಿಯನ್ನು ಹೊಂದಿದ ಭೂ ಭಾಗವಾಗಿ ಕರಾವಳಿ ಕರ್ನಾಟಕ ಮಹತ್ವದ ಪ್ರದೇಶ. ತುಳುನಾಡು ಎಂದು ಕರೆಯಲ್ಪಡುವ ಈ ಭೂ ಭಾಗದ ದಕ್ಷಿಣದಲ್ಲಿ ಚಂದ್ರಗಿರಿ ನದಿಯಿಂದ ಉತ್ತರದಲ್ಲಿ ಕರ್ನಾಟಕ ಪಶ್ಚಿಮ ಕರಾವಳಿ ಭಟ್ಕಳದವರೆಗೆ ವಿಸ್ತರಿಸಲ್ಪಟ್ಟಿದೆ. ಇತ್ತೀಚಿನವರೆಗೆ ಪ್ರಾಗಿತಿಹಾಸದ ಯಾವುದೇ ಅವಶೇಷಗಳು ದೊರೆಯದೇ ಇದ್ದುದರಿಂದ ಈ ಭಾಗದಲ್ಲಿ ಮಾನವ ಯಾವಾಗ ವಾಸಿಸಲು ಆರಂಭಿಸಿದ ಎನ್ನುವ ವಿವರ ತಿಳಿದಿರಲಿಲ್ಲ. ಈ ಭಾಗದಲ್ಲಿ ಹೆಚ್ಚಿನ ಪ್ರಚಾರವನ್ನು ಪಡೆದಿರುವ 'ಪರಶುರಾಮನ ಸೃಷ್ಟಿಯ' ಐತಿಹ್ಯ ಕಬ್ಬಿಣ ಯುಗದ ಜನರು ಈ ಭಾಗದಲ್ಲಿ ಜೀವನ ನಡೆಸಿದ್ದನ್ನು ನೆನಪಿಸುವ ಐತಿಹ್ಯ ಎನ್ನುವುದು ಕೆಲವು ವಿದ್ವಾಂಸರ ಅಭಿಮತ (ರಮೇಶ್ ಕೆ.ವಿ ೧೯೬೯:೧೭)

ಪುರಾತತ್ವ ಸಂಶೋಧಕರು ತುಳುನಾಡಿಗೆ ತಾಗಿಕೊಂಡಿರುವ ಮಲೆನಾಡಿನ ಪ್ರದೇಶದಲ್ಲಿ ಹಾಗೂ ಕೊಂಕಣ, ಗೋವ ಹಾಗೂ ಕೇರಳದ ಕೆಲವು ಭಾಗಗಳಲ್ಲಿ ದೊರೆತ ಶಿಲಾಯುಗ ಕಾಲದ ಅವಶೇಷಗಳನ್ನು ಆಧರಿಸಿ ಇಲ್ಲಿಯೂ ಸಂಶೋಧನೆಗೆ ತೊಡಗಿದಾಗ ನಾರಾವಿ ನದಿ ತೀರದಲ್ಲಿ ಹಳೇ ಶಿಲಾಯುಗ ಕಾಲದ ಅವಶೇಷಗಳು ದೊರೆತವು. ಇದು ಇನ್ನೂ ಹೆಚ್ಚಿನ ಸಂಶೋಧನೆಗೆ ಇಂಬು ನೀಡಿತು. ಆನಂತರ ನೇತ್ರಾವತಿ ನದಿ ತೀರದ ಉಪ್ಪಿನಂಗಡಿ ಹಾಗೂ ಮಾಣಿಯಲ್ಲಿ ಬೆಳಕಿಗೆ ಬಂದ ಅಂತ್ಯ ಶಿಲಾಯುಗದ ಅವಶೇಷಗಳು, ಆಗಿನ ಕಾಲದ ಮಾನವನ ಚಟುವಟಿಕೆಗಳನ್ನು ವಿವರಿಸುವ ಆಧಾರ ಶಿಲೆಗಳಾದವು. ಇಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಸೂಕ್ತ ಶಿಲಾಯುಧಗಳು ದೊರೆತಿದ್ದು ಅವುಗಳು ಭಾರತ ಕರಾವಳಿಯ ಇತರ ಭಾಗಗಳಲ್ಲಿ ದೊರೆತ ಆಧಾರಗಳೊಂದಿಗೆ ಸಾಮ್ಯತೆ ಹೊಂದಿದೆ. ತುಳುನಾಡಿನ ಇತರ ಭಾಗಗಳಲ್ಲಿಯೂ ಸೂಕ್ಷ್ಮ ಶಿಲಾಯುಗದ ಅವಶೇಷಗಳು ದೊರೆತಿವೆ.

ಕರಾವಳಿ ಕರ್ನಾಟಕದ ಇತಿಹಾಸದ ನಂತರ ಹಂತ ನೂತನ ಶಿಲಾಯುಗ. ಈ ಹಂತದ ಅತೀ ಮುಖ್ಯ ಆಧಾರವಾದ ನೂತನ ಶಿಲಾಯುಗ ಕಾಲದ ಕೊಡಲಿ ದೊರೆತಿದ್ದು ಉಡುಪಿ ಭಂಡಿ ಮಠದಲ್ಲಿ ಇದನ್ನು ಡಾಲರೈಟ್ ಕಲ್ಲಿನಿಂದ ತಯಾರಿಸಲಾಗಿದೆ. ಇಂತಹುದೇ ಕೊಡಲಿಗಳು ಉಡುಪಿ ತಾಲೂಕಿನ ನಡೂರು ಹಾರಾಡಿ ಗ್ರಾಮದ ಕುಕ್ಕುಡೆ ಹಾಗೂ ಕೋತಟ್ಟು ಗ್ರಾಮದಲ್ಲಿ ದೊರೆತಿವೆ. ಇವುಗಳಲ್ಲಿ ಕುಕ್ಕುಡೆಯಲ್ಲಿ ದೊರೆತ ಕೊಡಲಿ ಅತ್ಯಂತ ದೊಡ್ಡದಾಗಿದೆ.

ಕರಾವಳಿ ಸಾಂಸ್ಕೃತಿಕ ಇತಿಹಾಸವನ್ನು ಚರಿತ್ರೆಯ ಪೂರ್ವಕಾಲ ಮತ್ತು ಚರಿತ್ರೆಯ ಪ್ರಸ್ತುತ ಕಾಲವೆಂದು ಎರಡು ನೆಲೆಗಳಲ್ಲಿ ವಿಶ್ಲೇಷಿಸಬಹುದು. ಚರಿತ್ರೆಯ ಪೂರ್ವಕಾಲಕ್ಕೆ ಸಂಬಂಧಿಸಿದಂತೆ ಕೆಲವು ಸಾಕ್ಷಾಧಾರ ಇತ್ತೀಚಿಗೆ ನಮ್ಮ ಸಂಶೋಧಕರಿಂದ ಬೆಳಕಿಗೆ ಬರುತ್ತಿವೆ. ಪೂರ್ವ ಕಾಲದಲ್ಲಿ ತುಳುನಾಡಿನಲ್ಲಿ ವಾಸವಿದ್ದ ಜನರು ಬೃಹತ್ ಶಿಲಾಯುಗ ಮತ್ತು ಕಬ್ಬಿಣ ಯುಗಕ್ಕೆ ಸೇರಿದವರಾಗಿದ್ದು ಅವರ ವಾಸ್ತವ್ಯಕ್ಕೆ ಸಂಬಂಧಿಸಿದ ಸಮಾಧಿ ಸ್ಥಳಗಳು, ಗವಿಗಳು, ಆಯುಧಗಳು, ಮಣ್ಣಿನ ಗಡಿಗೆ, ಪಾತ್ರೆಗಳು, ಬೇರೆ ಬೇರೆ ಪ್ರದೇಶಗಳಲ್ಲಿ ದೊರೆತಿವೆಯಾದರೂ ಆ ಜನರ ಸಾಂಸ್ಕೃತಿಕ ಬದುಕು ಹೇಗಿದ್ದವೆಂದು ತಿಳಿದುಕೊಳ್ಳಲು ಸಂಶೋಧನಾ ಕಾರ್ಯಗಳು, ಉತ್ಖನನಗಳು, ಇನ್ನೂ ಚುರುಕಾಗಿ ನಡೆಯಬೇಕಾದ ಅಗತ್ಯವಿದೆ. ಕಾರ್ಕಳ

ತಾಲೂಕಿನ ಪರ್ಪಲೆ ಬೆಟ್ಟ ಮದೆರೆಗುಡ್ಡೆ, ಕಣಜಾರು ಬೆಟ್ಟ ಪ್ರದೇಶ, ರೆಂಜಳ ಬೋರುಕಟ್ಟೆ , ಮೂಡುಬಿದಿರೆಯ ಹತ್ತಿರದ ಕೊಣಾಜೆ ಮೊದಲಾದ ಪ್ರದೇಶಗಳು ಹಾಗೂ ಉಪ್ಪಿನಂಗಡಿಯ ನೇತ್ರಾವತಿಯ ದಡ ಬಂಟ್ವಾಳದ ಮಾಣಿ ಪ್ರದೇಶಗಳಲ್ಲಿ ಶಿಲಾಯುಗ ಸಂಸ್ಕೃತಿಯ ಮಾನವನ ಅವಶೇಷಗಳು ಬೆಳಕಿಗೆ ಬಂದಿವೆ.

ತುಳುನಾಡಿನ ಪಶ್ಚಿಮ ಘಟ್ಟ ಮತ್ತು ಕರಾವಳಿ ಪ್ರದೇಶಗಳಲ್ಲಿ ಹಿಂದೆ ದಟ್ಟವಾದ ಕಾಡುಗಳು ಬೆಳೆದಿದ್ದು ಕೊಡಲಿಯ ಉಪಯೋಗವಿಲ್ಲದೆ ಆದಿ ಮಾನವನು ಈ ಪ್ರದೇಶದಲ್ಲಿ ಬಂದು ನೆಲೆಸುವುದು ಅಸಂಭವವಾಗಿತ್ತೆಂದು ಕೆಲವು ಸಂಶೋಧಕರು ಭಾವಿಸಿದ್ದರು. ಇದಕ್ಕೆ ಪೂರಕವಾಗಿ ಈ ಪ್ರದೇಶವು ಪರಶುರಾಮನಿಂದ ಸೃಷ್ಟಿಸಲ್ಪಟ್ಟಿತೆಂಬ ಪುರಾಣದ ಐತಿಹ್ಯಗಳನ್ನು ಸಾಂದರ್ಭಿಕ ಸಾಕ್ಷಿಗಳೆಂದು ಪರಿಗಣಿಸಿದ್ದರು. ಆದರೆ ಈಗ ಬೆಳಕಿಗೆ ಬಂದಿರುವ ಪುರಾತನ ಅವಶೇಷಗಳು ಈ ನಿರ್ಧಾರವನ್ನು ಬದಲಿಸುವಂತೆ ಮಾಡಿದೆ. ಗೋವಾ, ಕೊಂಕಣ, ಕೇರಳ ಪ್ರದೇಶಗಳಲ್ಲಿ ಶಿಲಾಯುಗದ ಆಯುಧಗಳು ದೊರೆತ ಬಳಿಕ ಕರಾವಳಿ ಕರ್ನಾಟಕ ಪ್ರದೇಶವು ಕೂಡ ಆದಿಮಾನವನ ವಾಸ್ತವ್ಯದ ನೆಲೆಯಾಗಿತ್ತೆಂದು ಹೇಳುವುದಕ್ಕೆ ಸಾಧ್ಯವಾಯಿತು. ಅಷ್ಟೇ ಅಲ್ಲ ೧೯೮೩ ರಲ್ಲಿ ಡಾ. ಪಿ. ರಾಜೇಂದ್ರನ್ ಅವರು ನೇತ್ರಾವತಿ ನದಿ ಪ್ರದೇಶದ ಉಪ್ಪಿನಂಗಡಿ ಮತ್ತು ಮಾಣಿಯಲ್ಲಿ ಸಂಶೋಧನಾ ಕಾರ್ಯಗಳನ್ನು ಕೈಗೊಂಡಾಗ ಮಧ್ಯ ಹಾಗೂ ಅಂತ್ಯ ಶಿಲಾಯುಗ ಸಂಸ್ಕೃತಿಗೆ ಸಂಬಂಧಿಸಿ ಶಿಲಾಯುಧಗಳು ಹೆಚ್ಚಿನ ಸಂಖ್ಯೆಯಲ್ಲಿ ಕಂಡು ಬಂದವು. ಈ ಆಧಾರದಂತೆ ಅಂತ್ಯ ಶಿಲಾಯುಗದ ಹೊತ್ತಿಗೆ ಮಾನವನು ಇಲ್ಲಿ ನೆಲೆಸಿದ್ದನೆಂದೂ ಬೇಟೆಯೇ ಆತನ ಮುಖ್ಯ ಕಸುಬಾಗಿತ್ತೆಂದು ಹೇಳಲು ಸಾಧ್ಯವಾಯಿತು.

ಬೇಟೆಯ ಹಂತವನ್ನು ದಾಟಿ ಕೃಷಿಯನ್ನು ಅನ್ವೇಷಿಸುವ ಆರಂಭದ ಕೃಷಿ ಚಟುವಟಿಕೆಗಳ ಬಗೆಗಿನ ವಿವರಗಳಿಗೆ ದಾಖಲೆಗಳು ನಮಗಿನ್ನು ಲಭ್ಯವಾಗಿಲ್ಲ. ಆ ಕೃಷಿ ಪರಂಪರೆಯನ್ನು ಇಂದಿಗೂ ಅನುಸರಿಸಿಕೊಂಡು ಬರುತ್ತಿರುವ ಬುಡಕಟ್ಟು ಸಮುದಾಯಗಳು ಕುಮೆರಿ ಕೃಷಿಯನ್ನೇ ನಡೆಸುತ್ತಿವೆ. ಚಾರಿತ್ರಿಕವಾಗಿ ಲಭ್ಯವಿರುವ ಗ್ರಂಥಗಳಾದ' ತುಳುನಾಡಿನ ಇತಿಹಾಸ' ದ ಕೆ.ವಿ.ರಮೇಶ್ ಮತ್ತು ಗುರುರಾಜ ಭಟ್ಟರ 'ತುಳುವ ಹಿಸ್ಟರಿ ಆಫ್ ಸೌತ್ ಕೆನರಾ' ಸಾಂಸ್ಕೃತಿಕ ಚರಿತ್ರೆಯ ವಿವರಗಳನ್ನು ನೀಡುವಾಗ ಕೃಷಿಯ ಬಗೆಗಿನ ಒಂದಿಷ್ಟು ಮಾಹಿತಿಗಳನ್ನು ನೀಡುತ್ತವೆ. ಗದ್ದೆಯ ಹೆಸರುಗಳು ಅಳತೆಯ ಮಾಪನಗಳು, ಕೃಷಿ ಮಾಡುವ ಸಮುದಾಯಗಳನ್ನು ಹೆಸರಿಸುತ್ತಾರೆ. ಇಲ್ಲಿ ಲಭ್ಯವಾಗುವ ವಿಚಾರಗಳಂತೆ ಕರಾವಳಿಯಲ್ಲಿ ವಿದೇಶಿಯರ ಆಗಮನದ ಕಾಲಕ್ಕೆ ಬರಿಯ ಆಹಾರದ ಬೆಳೆ ಮಾತ್ರ ಉಳಿದಿರಲಿಲ್ಲ ಭತ್ತ, ಅಡಿಕೆ, ತೆಂಗು, ಕಾಳುಮೆಣಸುಗಳಲ್ಲದೆ ಧಾನ್ಯಗಳನ್ನು ಬೆಳೆಯುತ್ತಿದ್ದರು. ಗದ್ದೆಯ ವಿನ್ಯಾಸ ಮತ್ತು ಸ್ವರೂಪವನ್ನು ವಿವರಿಸುವುದರೊಂದಿಗೆ, ವಡ್ಡರ್ಸೆಯ ಶಾಸನ ಬಾರಕೂರಿನಲ್ಲಿ ಲಭ್ಯವಾದ ಶಾಸನಗಳು ಕೃಷಿ ಮಾಡುವ ಗದ್ದೆಗಳ ಬಗ್ಗೆ ಉಲ್ಲೇಖಿಸುತ್ತದೆ. ಇದಲ್ಲದೆ ಚಕ್ರವರ್ತಿಗಳ ಆಡಳಿತಕ್ಕೆ ಒಳಪಡದೆ ಸಾಮಂತ ಅರಸರ ಆಳ್ವಿಕೆಗೆ ಒಳಪಟ್ಟಿದ್ದ ಕರಾವಳಿಯಲ್ಲಿ ಕೃಷಿಯೇ ಪ್ರಮುಖ ಆದಾಯದ ಮೂಲವಾಗಿತ್ತು. ತುಳುವಿನಲ್ಲಿ ಹೇಳುವಂತೆ

'ಬೆನ್ನಿ' (ಸಾಗುವಳಿ,ಕೃಷಿ) ಮತ್ತು 'ಬೇರ' (ವ್ಯಾಪಾರ) ತುಳುವರ ಮುಖ್ಯ ಅಸ್ಮಿತೆಯಾಗಿದೆ. ಕರಾವಳಿಯ ಕಡಲ ತೀರದ ಭೌಗೋಳಿಕತೆಯೂ ಇದಕ್ಕೆ ವರದಾನವಾಗಿದೆ.

ಶಾಸನಗಳಲ್ಲಿ ಕೃಷಿಗೆ ಸಂಬಂಧ ಪಟ್ಟ ದಾಖಲೆಗಳು ಗದ್ದೆಯ ಹೆಸರುಗಳು, ಧಾನ್ಯಗಳು, ಅಳೆಯುವ ಮಾಪನಗಳು, ಉಲ್ಲೇಖಿಸಲ್ಪಟ್ಟಿವೆ. ಅಲ್ಲದೆ ಭೂಮಿಯನ್ನು ದಾನವಾಗಿ, ಉಂಬಳಿಯಾಗಿ, ಯುದ್ಧ ಗೆದ್ದುದಕ್ಕೆ ಉಡುಗೊರೆಯಾಗಿ ಕೊಟ್ಟ ದಾಖಲೆಗಳೂ ಲಭ್ಯವಾಗುತ್ತಿವೆ. ಬೆಳೆ ಬೆಳೆದ ರೀತಿ, ಸ್ವರೂಪ, ಕೃಷಿಯ ವಿಸ್ತರಣೆಯ ಅಂಶಗಳ ಸೂಕ್ಷ್ಮಗಳು ಎಲ್ಲೂ ದಾಖಲಾಗಿಲ್ಲ. ಭೂಮಿಯನ್ನು ಸಂಪತ್ತಾಗಿ ಆಸ್ತಿಯಾಗಿ ಪರಿಭಾವಿಸಿದ ದಾಖಲೆಗಳಷ್ಟೇ ಇವು ಆಗಿದೆ. ಇದಕ್ಕಿಂತ ಭಿನ್ನವಾಗಿ ಬಾಸೆಲ್ ಮಿಶನರಿಗಳು ನಡೆಸುತ್ತಿದ್ದ ಚರ್ಚ್‌ಗಳ ನಿಯತಕಾಲಿಕಗಳಲ್ಲಿ ನದಿ ಬದಿಯ ಗದ್ದೆಗಳಲ್ಲಿ ಬೆಳೆ ಬೆಳೆಯುತ್ತಿದ್ದ ರೀತಿ ಕಾಡನ್ನು ಕಡಿದು ಕೃಷಿ ವಿಸ್ತರಣೆ ಮಾಡಿದ ಅಂಶಗಳು ದಾಖಲಾಗಿವೆ. ನೀರಾವರಿಗಾಗಿ ಪ್ರಾಕೃತಿಕವಾಗಿ ಸುರಂಗಗಳನ್ನು ಕೊರೆದು ಒಂದು ಬಾವಿಯಿಂದ ಇನ್ನೊಂದು ಕೆರೆಗೆ ನೀರೆತ್ತುವ ಏತಗಳನ್ನು ಬಳಸಿ ನೀರಾವರಿ ಮಾಡುತ್ತಿದ್ದ ತಂತ್ರಜ್ಞಾನಗಳು ಉಲ್ಲೇಖಗೊಂಡಿದೆ. ಚರ್ಚ್ ತನ್ನ ಆಡಳಿತಕ್ಕಾಗಿ ಆರ್ಥಿಕ ಮೂಲಕ್ಕಾಗಿ ಸಾವಿರಾರು ಎಕರೆಯಷ್ಟು ಜಮೀನುಗಳನ್ನು ಸರಕಾರಿ ಜಮೀನುಗಳೆಂದು ಘೋಷಿಸಿಕೊಂಡು ಬೆಳೆ ಬೆಳೆಯಲು ಬಳಸಿಕೊಂಡಿದ್ದು ಪ್ರಮುಖ ಉಲ್ಲೇಖನೀಯ ಅಂಶವಾಗಿದೆ. ವಾರ್ಷಿಕ ಸಂಚಿಕೆಗಳು ಅಲ್ಲಿ ಬರೆದಿಡಲ್ಪಟ್ಟ ದಾಖಲಾತಿಗಳೆಲ್ಲ ಈ ವಿವರವನ್ನು ವಿಸ್ತಾರವಾಗಿ ನೀಡುತ್ತವೆ ಎನ್ನುತ್ತಾರೆ ಬಾಸೆಲ್ ಮಿಶನರಿ ಸಂಸ್ಥೆಯ ಗ್ರಂಥ ಪಾಲಕರಾದ ಶ್ರೀ.ಬೆನೆಟ್.ಅಮ್ಮನ್. ಉದಾ:- ಸಂಕಲಕರಿಯದ ಚರ್ಚ್‌ನಲ್ಲಿ ಕೃಷಿ ನಡೆಸುತ್ತಿದ್ದ ರೀತಿಯ ವಿವರಣೆಗಳು, ಹಳೆಯಂಗಡಿಯ ನದಿ ಬದಿಯ ಭೂಮಿಗಳನ್ನು ಬಳಸುತ್ತಿದ್ದ ರೀತಿ ; ಮರಳು ಮಣ್ಣಿನಲ್ಲಿ ಗದ್ದೆ ಸಾಗುವಳಿ ಮಾಡಿದ ಮಾನವ ಶ್ರಮಗಳ ಉಲ್ಲೇಖವಿದೆ.

ಕರಾವಳಿಯಲ್ಲಿ ಕೃಷಿ ಎಲ್ಲಿತ್ತು? ಎಂದು ಪ್ರಶ್ನಿಸಿಕೊಳ್ಳುತ್ತ ಉತ್ತರಿಸಲು ಪ್ರಯತ್ನಿಸುವ ಬೆನೆಟ್ ಅಮ್ಮನ್ನ ನೀಡಿರುವ ಮೌಖಿಕ ಸಂದರ್ಶನದಲ್ಲಿ ನೀಡಿದ ಮಾಹಿತಿ ಇಂತಿದೆ. ದ.ಕನ್ನಡದಲ್ಲಿ ಸಂಕಲಕರಿಯ, ಮಂಜರ್‌ಪಲ್ಕೆ, ಸಾಂತೂರು ಎಲ್ಲಾ ಕಾಡುಗಳಿದ್ದು ಬಾಸೆಲ್ ಮಿಷನರಿಯ ಚರ್ಚ್‌ಗಳ ವರದಿಗಳಲ್ಲಿ ಈ ಬಗ್ಗೆ ದಾಖಲೆ ಇದೆ. ನದಿ ಬದಿಯಲ್ಲಿ ಮರಳು ಮಣ್ಣಿನಲ್ಲಿ ಕೆಲವು ಗದ್ದೆಗಳಷ್ಟೇ ಇದ್ದವು. ಆಮೇಲೆ ಗುಡ್ಡ ಅಗೆದು ಬೆಟ್ಟು ಗದ್ದೆಗಳನ್ನು ಮೊದಲು ಮಾಡಿದರು ಎತ್ತರದ ಗುಡ್ಡ, ಕಾಡು ಕಡಿದು ಮಾಡಿದ ಗದ್ದೆಗಳೊಂದಿಗೆ ನಿಧಾನಕ್ಕೆ ಮಜಲು ಬೈಲು ಗದ್ದೆಗಳು ರಚನೆಯಾದವು. ಗದ್ದೆಯ ರಚನೆ ಮತ್ತು ವಿನ್ಯಾಸವೂ ಈ ಹಿನ್ನೆಲೆಯಲ್ಲಿ ಮುಖ್ಯವಾಗುತ್ತದೆ. ಕಾಡು ಕಡಿದು ಕೃಷಿ ಎಲ್ಲೆಲ್ಲಾ ಮಾಡಲಾಯಿತು ಎನ್ನುವುದಕ್ಕೆ ಸಿಗುವ ದಾಖಲಾತಿ ೧೮೪೦ ರಲ್ಲಿ ಬೊಳ್ಮ, ೧೮೬೦ ಮುಲ್ಕಿ, ೧೮೭೦ ಕಾರ್ಕಳ, ೧೮೭೦ ಕಾಪು ಸಾಂತೂರು ಹಳೆಯಂಗಡಿಗಳಲ್ಲಿ ಕೃಷಿ ಭೂಮಿಗಳು ವಿಸ್ತರಣೆಗೊಂಡವು, ಚರ್ಚ್‌ಗಳಿಗೆ ದಿನ ನಿತ್ಯದ ನಿರ್ವಹಣೆಯ ಆದಾಯಕ್ಕಾಗಿ ಆಹಾರದ ಬೆಳೆಗಳನ್ನು ಬೆಳೆಯುತ್ತಿದ್ದರು. ಕೆ.ಟಿ.ಸಿ ಯಲ್ಲಿ ೧೯೧೨ ರಿಂದ ೨೦೧೪ ರವರೆಗಿನ ಸಭಾ ವರದಿಗಳ ಹಸ್ತಪ್ರತಿಯನ್ನಾಧರಿಸಿ ರಚಿಸಿರುವ ಲೇಖನದಲ್ಲಿ ಈ ಮಾಹಿತಿಗಳಿವೆ. ಸಂಕಲಕರಿಯದಲ್ಲಿ ಮಿಶನರಿಗಳು ಸ್ಥಾಪಿಸಲೆಂದು ಖರೀದಿಸಿದ ೩೪ ಎಕ್ರೆ ಸ್ಥಳದ ಬಗ್ಗೆ ಹೀಗೆ ವರದಿ ಮಾಡಲಾಗಿದೆ.'ಮುಂಡೇರ್‌ದ ಕಾಡ್‌ಡ್

ಮೂಜಿ ನಾಲ್ ಮುಡಿ ಕಂಡ ಮಲ್ಪೆರೆ ಪೊರ್ಲುದವು. ಒಂಜಿ ಜಾಗ ಉಂಡು, ಸತ್ಯ ಮಿತ್ರೆ ಇನ್ಪಿನಾಯಗ್ ದಿನ ಪೋವಂದೆ ಆಯೆ ಗಟ್ಟದ ಮಿತ್ತ್‌ಲಾ ಬೇತೆ ಊರುಗುಲಾ ಪೋದು ಉಪ್ಪೊಡು ಅಂದ್‌ದ್ ಪಣ್ಣಗ ಆಯನ್ ಮುಂಡೇರ್‌ಡ್ ಒಕ್ಕೆಲ್ ಒರಿಪೆರೆ ಯೆನಡ್ ಆ ಕಂಡ ಮಳ್ಪು ಆಲೋಚನೆ ಪುಟುಂಡು. ಅಪಗನೇ ಬುನ್ಸ್ ದೊರೆಕ್ ಬರೆದ್ ಕೇನ್‌ನಗಳ್ ಪಂಡ್ ಎಕೌಂಟ್‌ಡ್ ಪಣವು ಉಂಡುಡ ಮಳ್ಪುಲೆ ಪಂಡೆರ್. ಈಯೊಡು ಸುಮಾರ್ ಒಂಜೇ ಕಾಲ್ ಮುಡಿ ಮಾತ್ರ ಆಪೆಲೆಕ್ಕ ಮಳ್ಪೊಡು ಅಂದ್‌ದ್. ನನಕ್ ಬೊಕ್ಕ ಐಕ್ಕ್ ಬೋಡಾಯಿ ಖರ್ಚಿ ಆ ಜಾಗೆಡುಪ್ಪಿ ಮರನ್ ಕಡ್ತ್‌ದ್ ಮಾರ್‌ಂಡ ಪುಟ್ಟು ಪನ್ಪಿ ಧೈರ್ಯ ಉಂಡು'. (ಬೆನೆಟ್.ಜಿ.ಅಮ್ಮನ್ನ ೨೦೦೬.;ಪು.೬೫.)

(ಮುಂಡೇರುವಿನ ಕಾಡಿನಲ್ಲಿ ಮೂರು ನಾಲ್ಕು ಮುಡಿ ಗದ್ದೆ ಮಾಡಲು ಒಳ್ಳೆಯ ಒಂದು ಜಾಗ ಉಂಟು. ಸತ್ಯ ಮಿತ್ರೆ ಎನ್ನುವವರು ದಿನ ಕಳೆಯಲಾಗದೆ ಅವನು ಗಟ್ಟದ ಮೇಲಕ್ಕೂ ಬೇರೆ ಊರಿಗೂ ಹೋಗಿ ಇರಬೇಕು ಎಂದು ಹೇಳಿದಾಗ ನನಗೆ ಮುಂಡೇರುವಿನಲ್ಲಿ ಒಕ್ಕಲಾಗಿ ಉಳಿಸಲು ನನ್ನಲ್ಲಿ ಆ ಗದ್ದೆ ಮಾಡಬೇಕೆಂಬ ಆಲೋಚನೆ ಹುಟ್ಟಿತು. ಆವಾಗಲೇ ಬುನ್ಸ್ ದೊರೆಗೆ ಬರೆದು ಕೇಳಿದಾಗ ಅವರು ಹೇಳಿದಂತೆ ಖಾತೆಯಲ್ಲಿ ಹಣವಿದ್ದರೆ ಮಾಡಿ ಎಂದರು. ಈ ವರ್ಷ ಸುಮಾರು ಒಂದು ಕಾಲು ಮುಡಿ ಮಾತ್ರ ಆಗುವ ಹಾಗೆ ಮಾಡಿದರೆ ಆದೀತು. ಆ ಮೇಲೆ ನಂತರದಲ್ಲಿ ಅದಕ್ಕೆ ಬೇಕಾದ ಖರ್ಚಿಗಾಗಿ ಆ ಜಾಗದಲ್ಲಿರುವ ಮರವನ್ನು ಕತ್ತರಿಸಿ ಮಾರಿದರೆ ಹುಟ್ಟಬಹುದು ಎಂಬ ಧೈರ್ಯ ಉಂಟು)

೧೮೭೧ ರಲ್ಲಿ ಕಾರ್ಕಳಕ್ಕೆ ಬಂದ ಬಾಸೆಲ್ ಮಿಷನರಿಗಳು ಮೂಡುಬಿದಿರೆ, ನಿಟ್ಟೆ, ಮಾರ್ಪಡಿ, ಕೆದಿಂಜೆ, ಮೂಡಾರ್, ಮೂರೂರು, ಹರ್ಗಾನ, ನೀರೆಬೈಲೂರು, ಬನ್ನಡ್ಕ, ಸಾಲ್ಮರ, ಎರ್ಲಪಾಡಿ, ಮರ್ಣೆ, ಕೆರ್ವಾರ್, ಬೈಲೂರು, ಕಾರ್ಕಳ, ಪರ್ಸ್‌ಲ್, ಮೊದಲಾದ ಪ್ರದೇಶದಲ್ಲಿ ೬೦೦ ಎಕರೆಯಷ್ಟು ಕೃಷಿ ಭೂಮಿ ಖರೀದಿ ಮತ್ತು ಕೃಷಿ ವಿಸ್ತರಣೆ ನಡೆಯಿತು. ಕೃಷಿಯಲ್ಲಿ ತೋಟಗಾರಿಕೆಯಲ್ಲಿ ಉದ್ಯೋಗ, ನೀಡುವುದರೊಂದಿಗೆ ಬೇಸಾಯವೂ ಒಂದು ಕಸುಬು ಆಗಿ ನೀಡಿದ ಪ್ರೋತ್ಸಾಹ ಪ್ರಮುಖವಾದುದು. ೧೯೧೨ ರಲ್ಲಿ ಮಿಶನರಿ ರೆವೆರೆಂಡ್ ಫಿಶ್‌ರವರು ಮಧ್ಯರಾತ್ರಿ ಮಂಗಳೂರಿನಿಂದ ಎದ್ದು ಬಂದು ೧೧ ಮೈಲಿ ಪ್ರಯಾಣಿಸಿ ಉತ್ತು, ಬೀಜ ಬಿತ್ತಿಸಿ ಬೆಳಿಗ್ಗೆ ಮರಳಿದ್ದರು. ಬೈಲೂರಿನ ಮಿಷನ್ ಕಂಪೌಂಡ್‌ನಲ್ಲಿ ಕೃಷಿ ಕೂಲಿ ಕಾರ್ಮಿಕರಿಗೆ ಉಚಿತವಾಗಿ ತೆರಿಗೆ ಇಲ್ಲದೆ ಭೂಮಿ ನೀಡಿ ಕೃಷಿ ಚಟುವಟಿಕೆಗಳಲ್ಲಿ ಪ್ರೋತ್ಸಾಹಿಸಿದರು. ಈ ಚಟುವಟಿಕೆ ಬರಿಯ ಬೈಲೂರಿಗೆ ಸೀಮಿತವಾಗಿರಲಿಲ್ಲ. ಎಲ್ಲೆಲ್ಲಾ ಚರ್ಚ್‌ಗಳಿದ್ದವೋ ಅದರ ಸುತ್ತಲೂ ಇದ್ದ ಭೂಮಿಗಳನ್ನು ಕೃಷಿಯೋಗ್ಯವಾಗಿಸಿದ್ದಲ್ಲದೆ ಮತಾಂತರಗೊಂಡವರಿಗಾಗಿ ಕೃಷಿಯನ್ನು ಒಂದು ಉದ್ಯೋಗವಾಗಿಸಿ ವಿಸ್ತರಿಸಿದ ಅಂಶವೂ ಮುಖ್ಯ. ಘಟ್ಟಕ್ಕೆ ತೆರಳಿ ರೋಗ ಅಂಟಿಸಿಕೊಂಡು ಬಳಲುವುದಕ್ಕಿಂತ ಸ್ವತಂತ್ರ ಜೀವನ ನಡೆಸಲೂ ಸಹಕಾರಿಯಾಗಿತ್ತು.

೧೮೫೧ ರಲ್ಲಿ ಉಡುಪಿಯ ಗುಡ್ಡೆಯ ಬಿಲ್ಲವ ಸಮಾಜದಿಂದ ಕ್ರೈಸ್ತರಾಗಿ ಮತಾಂತರ ಹೊಂದಿದ ಶ್ರೀ ಪೀಟರ್ ಮತ್ತು ಮಾರ್ಥಾ ಸೋನ್ನರ ಪುತ್ರರಾದ ಗುಸ್ತಾಪ್ ಸೋನ್ನರ ಮಕ್ಕಳಾದ ಗ್ರಾಬ್ರಿಯಲ್ ಮತ್ತು ಆಲ್ಫ್ರೆಡ್ ಕುಟುಂಬಿಕರು ಉಚ್ಚಿಲದ ಮೂಳೂರಿನಲ್ಲಿ ನೆಲೆಸಿ ಕೃಷಿ ಹಾಗೂ ನರ್ಸರಿಯಲ್ಲಿ ಅಸಾಮಾನ್ಯ ಸಾಧನೆ

ಮಾಡಿದರು. ೧೯೦೦ ರಲ್ಲಿ ಗ್ಯಾಬ್ರಿಯಲ್ ಸೋನ್ಸ್ ನಡೆಸಿದ ಕೃಷಿ ಕ್ರಾಂತಿ ಮಹತ್ವದಾಗಿತ್ತು. ಮಿಷನ್ ಶಾಲೆಯ ಮುಖ್ಯೋಪಾಧ್ಯಾಯರಾಗಿ ಕೃಷಿಗೆ ಸಂಬಂಧಿಸಿದ ಸಾಹಿತ್ಯಗಳನ್ನು ರಚಿಸಿದರು. ಹೂ ಹಣ್ಣಿನ ಗಿಡಗಳ ಸಂಗ್ರಹವನ್ನು ಮಾಡಿದರು. ೧೯೦೦ ರಲ್ಲಿ ಉಚ್ಚಿಲದ ಮೂಳೂರಿನಲ್ಲಿ ಸ್ಥಾಪಿಸಿದ ತುಳುನಾಡಿನ ಪ್ರಪ್ರಥಮ ನರ್ಸರಿ ಸ್ಥಾಪಿಸಿದರು. ಭಟ್ಕಳ ಮಲ್ಲಿಗೆಯನ್ನು ಉಡುಪಿಗೆ ಮಲ್ಲಿಗೆ ಕೃಷಿಯಾಗಿ ಪರಿಚಯಿಸಿದ ಹಿರಿಮೆಯೂ ಇವರದು. ಕೃಷಿಯನ್ನು ಉದ್ದಿಮೆಯಾಗಿ ಬೆಳೆಸಿದ ಹೆಚ್ಚುಗಾರಿಕೆಯೂ ಇಲ್ಲಿದೆ. ಬಿ.ಜಿ. ಸೋನ್ಸರ ಚಿಕ್ಕಪ್ಪನ ಮಗ ಸುಂದರ ಸೋನ್ಸರು ೧೯೪೬ ರಲ್ಲಿ ಅರುಣಾ ನರ್ಸರಿಯನ್ನು ಸ್ಥಾಪಿಸಿದರು. ಬಿ.ಜಿ ಸೋನ್ಸ್ ಮಗ ಬೆನ್ ಸೋನ್ಸ್‌ರವರು ೧೯೭೫ ರಲ್ಲಿ 'ಮಿಲಿಯನ್ಸ್ ಆಫ್ ಬ್ರೋಸ್ ಕ್ಲಬ್' ಸ್ಥಾಪಿಸಿದರು. (ರಮಾನಾಥ್ ಕೋಟೆಕಾರ್ ಪು-೨೦೧೨-ಪು-೩೪)

ನರ್ಸರಿಗಳನ್ನು, ತೋಟಗಾರಿಕಾ ಬೆಳೆಗಳನ್ನು ಸ್ಥಾಪಿಸುವ ಮೊದಲು ಆಹಾರದ ಸ್ವಾವಲಂಬನೆಗಾಗಿ ಭತ್ತವನ್ನೇ ಬೆಳೆದರು. ನದಿ ಬದಿಯ ಗದ್ದೆಗಳು ಮತ್ತು ನೀರು ನಿಲ್ಲುವ ಗದ್ದೆಗಳು ಇವನ್ನೆಲ್ಲ ಗಮನಿಸಿಯೇ ಪಟ್ಲ ಗದ್ದೆಗಳಲ್ಲಿ ಕಬ್ಬಿನಂತಹ ಬೆಳೆಗಳನ್ನು ಬೆಳೆಸುತ್ತಿದ್ದರು. ಕಾಡನ್ನು ಕಡಿದು ಕೃಷಿ ವಿಸ್ತರಣೆ ಮಾಡುವುದು ಒಂದು ಹಂತವಾದರೆ ಅನ್ನದ ಮೂಲವನ್ನು ಹುಡುಕಿ ಉದ್ಯೋಗ ಕೊಡುವಂತೆಯೂ ನಡೆಸಿಕೊಂಡರು. ನದಿ ದಂಡೆಗಳಲ್ಲಿ ತೆಂಗನ್ನು ನಾಟಿ ಮಾಡಿ ಒಂದೆಡೆ ಮಣ್ಣಿನ ಸವೆತ ಮತ್ತು ಇನ್ನೊಂದೆಡೆ ಉಪಬೆಳೆ ಅಥವಾ ಪ್ರಮುಖ ಬೆಳೆಯಾಗಿ ಇದನ್ನು ಬೆಳೆಸಲಾಯಿತು. ಇಲ್ಲಿ ಎರಡು ಅಂಶಗಳನ್ನು ಗಮನಿಸಬಹುದು, ಒಂದು ಸಾಮಾಜೀಕರಣದ ಹಂತದಲ್ಲಿ ಮತಾಂತರಕ್ಕೆ ಒಳಗಾದವರಿಗೆ ಅರ್ಥಿಕ ಭದ್ರತೆಯನ್ನು ಒದಗಿಸಲು ನಡೆಸುತ್ತಿದ್ದ ಆಹಾರದ ಬೆಳೆ ಮತ್ತು ವಾಣಿಜ್ಯ ಬೆಳೆ ಹೀಗೆ ಮತಾಂತರಗೊಂಡವರು ಭೂ ರಹಿತರಾದ ಕೃಷಿ ಕೂಲಿ ಕಾರ್ಮಿಕರೇ ಹೆಚ್ಚಿನ ಸಂಖ್ಯೆಯಲ್ಲಿದ್ದರು. ದಲಿತರು ಮತ್ತು ಶೂದ್ರರು ಮತಾಂತರಕ್ಕೆ ಒಳಗಾದುದಲ್ಲದೆ ಸಾಮಾಜಿಕ ಬಹಿಷ್ಕಾರಗಳಿಂದ ತಮ್ಮನ್ನು ತಾವು ರಕ್ಷಿಸಿಕೊಳ್ಳಲು ಸಾಮಾಜಿಕ ಭದ್ರತೆಗಾಗಿಯೂ ಕೃಷಿ ಅವರಿಗೆ ಅನಿವಾರ್ಯವಾಗಿತ್ತು. ಭೂಮಿಯ ಒಡೆತನ ಜಾತಿ ಜೀತವನ್ನು ಮೀರುವುದಕ್ಕೂ ಸಾಧ್ಯವಾಯಿತು. ಸಾಮಾಜಿಕ ವ್ಯವಸ್ಥೆಯಲ್ಲಿ ಒಂದು ಹೊಸ ಸಂಚಲನವನ್ನು ಇದು ಸೃಷ್ಟಿಸಿತು.

**೩.೧ ಆಹಾರದ ಬೆಳೆಯಿಂದ ವಾಣಿಜ್ಯ ಬೆಳೆಗೆ**

ಸ್ಥಿರ ಜೀವನ, ಕೃಷಿಯ ಅವಲಂಬನೆ ಮತ್ತು ಪ್ರಾಣಿ ಸಾಕಾಣಿಕೆಯ ಪ್ರವೃತ್ತಿಗಳು ಮಾನವನಲ್ಲಿ ಉದಯವಾದಂದಿನಿಂದ ನೂತನ ಶಿಲಾಯುಗದ ಪ್ರಾರಂಭವನ್ನು ಗುರುತಿಸಲಾಗುತ್ತದೆ. ವಾಸ್ತವದಲ್ಲಿ ನೂತನ ಶಿಲಾಯುಗದ ಸಾಂಸ್ಕೃತಿಕ ಘಟ್ಟವನ್ನು ಗುರುತಿಸುವಾಗ ಆ ಸಂಸ್ಕೃತಿ ವಿಶಿಷ್ಟ ಉಪಕರಣವನ್ನು ಅದರ ಲಕ್ಷಣಗಳನ್ನು ಗಣನೆಗೆ ತೆಗೆದುಕೊಳ್ಳಲಾಗುತ್ತದೆ. ಉಜ್ಜಿ ಉಜ್ಜಿ ನಯ ಮಾಡಿದ ಮೇಲ್ಮೈಯುಳ್ಳ ಕೊಡಲಿಗಳು ,ಕೈ ಬಾಚಿಗಳು, ಕಲ್ಲಿನ ಆಯುಧಗಳು, ಉಳಿಗಳು ಮುಂತಾದವುಗಳನ್ನು ಮರದ ಹಿಡಿಕೆಗಳಿಂದ ಗಟ್ಟಿಯಾಗಿ ಜೋಡಿಸಿ ಮಾಡಿದ ಉಪಕರಣಗಳು ಇತರ ಸಂಸ್ಕೃತಿಗಳಿಂದ ಭಿನ್ನವಾಗಿ ಕಾಣಿಸುತ್ತದೆ. ಹೊಳೆಹಳ್ಳಿಗಳ ದಂಡೆಯ ಮೇಲಿನ ಫಲವತ್ತಾದ ಜಮೀನುಗಳ ಹತ್ತಿರ ನೆಲೆಯೂರಿದ ಜೀವನ ಕೃಷಿಯ ಅವಲಂಬನೆ ಜೊತೆಗೆ ಸೂಕ್ಷ್ಮ ಶಿಲಾಯುಗದ ಹಂತದಲ್ಲಿ ಈಗಾಗಲೇ ಪ್ರಾರಂಭವಾಗಿದ್ದ ಕುರಿ ಮೇಕೆ ಮತ್ತು ದನಗಳನ್ನು

ಸಾಕುವುದು, ಸಾಮಾನ್ಯವಾಗಿ ಬೂದು ಬಣ್ಣದ ಸುಟ್ಟಿರದ ಪಾತ್ರೆಗಳನ್ನು ತಯಾರಿಸುವುದು, ಒಂದು ರೀತಿಯ ಪರಸ್ಪರ ಅವಲಂಬನೆಯ ಆಧಾರದ ಮೇಲೆ ಒಟ್ಟಾಗಿ ಇರುವುದು ನವ ಶಿಲಾಯುಗದ ಸಂಸ್ಕೃತಿಯ ಲಕ್ಷಣಗಳೆಂದು ಗುರುತಿಸಬಹುದು. ಈ ಎಲ್ಲಾ ಬದಲಾವಣೆಗಳು ಇದಕ್ಕಿದ್ದಂತೆ ಆದ ಬದಲಾವಣೆಗಳಲ್ಲ. ಪರಿಸರದ ಬದಲಾವಣೆ, ಮಾನವನ ಪ್ರಾಣಿಗಳ ಮತ್ತು ಭೂಮಿ ಇವುಗಳ ನಡುವೆ ಸ್ಥಾಪನೆಯಾದ ಹೊಸ ಬಗೆಯ ಸಂಬಂಧ ಮಾನವ ಜೀವನದಲ್ಲಿ ಕ್ರಾಂತಿಕಾರಕ ಬದಲಾವಣೆಗೆ ಕಾರಣವಾದವು. ಹೆಚ್ಚುತ್ತಿದ್ದ ಜನಸಂಖ್ಯೆಯು ಕೃಷಿಯ ಅವಲಂಬನೆಗೆ ಉತ್ತೇಜಿಸಬಹುದು. ದೀರ್ಘ ಅವಧಿಗಳಲ್ಲದಿದ್ದರೂ ಸ್ವಲ್ಪ ದಿನಗಳ ಮಟ್ಟಿಗಾದರೂ ಆಹಾರ ಶೇಖರಿಸುವ ಅವಶ್ಯಕತೆ ಉಂಟಾಗಿ ಮಡಿಕೆಗಳ ನಿರ್ಮಾಣಕ್ಕಾಗಿ ಉತ್ತೇಜಿಸಿರಬಹುದು. ಈ ಎಲ್ಲ ಬೆಳವಣಿಗೆಗಳು ಸ್ಥಿರ ಕೃಷಿ ಜೀವನ ನಡೆಸಲು ಕಾರಣಗಳಾಗಿದ್ದಿರಬಹುದು. (ದ.ಭಾರತದ ನವಶಿಲಾಯುಗದ ಕಾಲವನ್ನು ಕ್ರಿ.ಪೂ ೨೦೦೦ ದಿಂದ ಕ್ರಿ.ಪೂ ೧೦೦೦ ದವರೆಗೆ ಗುರುತಿಸಲಾಗುತ್ತದೆ.)

ಅಲೆಮಾರಿತನದಿಂದ ಸ್ಥಿರ ಕೃಷಿಯ ಹಂತಕ್ಕೆ ಬರುವ ಸಂದರ್ಭದಲ್ಲಿ ಪ್ರಾಕೃತಿಕವಾಗಿ ಕಚ್ಚಾ ಆಗಿರುವ ಆಹಾರವನ್ನು ಅನ್ವೇಷಿಸುತ್ತ ಸಾಗಿರಬೇಕು. ಸಹಜವಾಗಿ ಬೆಳೆಯುವ ಧಾನ್ಯ, ಹಣ್ಣು, ಹೂ, ಎಲೆಗಳನ್ನು ಆಹಾರವಾಗಿ ಬಳಸುತ್ತ ಬದುಕುತ್ತಿದ್ದ ಮಾನವರು ಕಾಡು ತಳಿಗಳನ್ನು ಮೊದಲು ಗುರುತಿಸಿರಬೇಕು. 'ತೊಲಕ್ಕಾಪಿಯಂ' ಮತ್ತು 'ಸಂಗಂ' ಕಾವ್ಯದಲ್ಲಿಬರುವ ಕೆಲವು ಸಸ್ಯಗಳ ಹೆಸರುಗಳು ಕಾಡುತಳಿಗಳು ಮೂಲವಾಗಿದೆ. ನೈಸರ್ಗಿಕವಾಗಿ ಮನುಷ್ಯನಿಗೆ ಆಹಾರ ಲಭಿಸದೆ ಇದ್ದಾಗ ಅದನ್ನು ಬೆಳೆಯಬೇಕಾದ ಅನಿವಾರ್ಯತೆ ಉಂಟಾಗಿದ್ದಿರಬೇಕು. ಆಹಾರವನ್ನಾಗಿ ಅತಿ ಹೆಚ್ಚು ಬಳಸಲು ಆರಂಭಿಸಿದಾಗ ಹೊಟ್ಟೆಯ ಹಸಿವು ಮಾತ್ರ ಮುಖ್ಯವಾಗಿ ಪ್ರಕೃತಿಯ ಸೂಕ್ಷ್ಮತೆಯನ್ನು ಗಮನಿಸುತ್ತ ಅಗತ್ಯಕ್ಕೆ ತಕ್ಕಂತೆ ಬೆಳೆಗಳನ್ನು ಬೆಳೆದಿರಬೇಕು. ಮನುಷ್ಯನ ಹೊಟ್ಟೆಯ ಹಸಿವು ಭೂಮಿಯಲ್ಲಿ ಬೆಳೆಯುವ ಸಾಧ್ಯತೆ ಈ ಎರಡು ಅಂಶಗಳು ಮಾತ್ರ ಆ ಕ್ಷಣಕ್ಕೆ ಪ್ರಮುಖವಾಯಿತು. ಅಲೆಮಾರಿ ಕೃಷಿ ತನಕ್ಕಿಂತ ಭಿನ್ನವಾಗಿ ಬೆಳೆದ ಸ್ಥಿರಕೃಷಿ ಮತ್ತು ಸ್ಥಿರ ಜನ ಜೀವನವೂ ಪ್ರಮುಖ ಅಂಶವಾಯಿತು. ಆಹಾರದ ಬೆಳೆಗಳಾಗಿ ಅತಿ ಹೆಚ್ಚು ಬಳಸುವ ಧಾನ್ಯಗಳನ್ನೇ ಬೆಳೆದರು. ಭತ್ತವೇ ಯಾಕೆ ಬೆಳೆದರೆನ್ನುವುದೂ ಪ್ರಶ್ನೆ. ಇಲ್ಲಿಯ ಹವಾಮಾನಕ್ಕೆ ಒಗ್ಗುವ ಈ ಬೆಳೆಗಳಿಂದ ಇನ್ನಷ್ಟು ಹೆಚ್ಚು ಬೆಳೆಯಬೇಕೆಂಬ ಇರಾದೆಯಿದೆ. ಆಹಾರದ ಬೆಳೆಯು ವಾಣಿಜ್ಯ ಬೆಳೆಯಾಗಿ ಪರಿವರ್ತನೆ ಹೊಂದಿರಬೇಕು. ಉತ್ಪಾದನೆ ಮತ್ತು ಹಂಚುವಿಕೆಯ ನಿಯಮಗಳನ್ನು ಮೀರಿ ಅದು ವ್ಯಾಪರದ ಹಂತವನ್ನು ತಲುಪಿದಾಗ ಮತ್ತೆ ಲಾಭ–ನಷ್ಟಗಳ ಪ್ರಶ್ನೆಯೂ ಹುಟ್ಟಿಕೊಂಡಿದೆ. ಕೊಳ್ಳುವವ ಮತ್ತು ಮಾರುವವರ ಮಧ್ಯೆ ಮನುಷ್ಯ ಸಮುದಾಯದ ಸಮಪಾಲಿನ ಕಲ್ಪನೆಗಳು ಕ್ಷೀಣಿಸುತ್ತಾ ಸಾಗಿದೆ. ಅದನ್ನು ದಾಟಿ ಲಾಭ –ನಷ್ಟಗಳು ಎಂಬ ತಾರ್ಕಿಕತೆ ಹುಟ್ಟಿಕೊಂಡಿರಬಹುದು. ವ್ಯವಹಾರ ಮತ್ತು ಆರ್ಥಿಕತೆಯ ದೃಷ್ಟಿಯಿಂದ ನೋಡುವಾಗ ಬೆಳೆಗಳನ್ನು ಬೆಳೆದ ರೀತಿಯ ವೈಶಿಷ್ಟತೆಯೂ ಮುಖ್ಯವೆನಿಸುತ್ತದೆ.

ವ್ಯಾಪಾರವೂ ಮೂಲದಲ್ಲಿ ವಸ್ತು ವಿನಿಮಯ ಪದ್ಧತಿಯನ್ನು ಹೊಂದಿದ್ದು ಮೇಲ್ನೋಟಕ್ಕೆ ಅತಿ ಸರಳವಾಗಿ ಕಂಡರೂ ಅದರಲ್ಲಿ ಹಲವಾರು ಮಿತಿಗಳಿದ್ದವು. ವ್ಯವಹಾರವೇ ಅಧ್ಯಯನದ ಒಂದು ಶಾಸ್ತ್ರವಾಗಿ

ಬೆಳೆದು ನೀತಿ ನಿರೂಪಣೆಗಳು ಬೇರೆ ಬೇರೆ ನೆಲೆಯಲ್ಲಿ ವಿಸ್ತೃತಗೊಂಡುದು ಇಂದು ಇತಿಹಾಸ. ಆರ್ಥಿಕತೆಯ ಮಿಮಾಂಸೆಗಳು ಇಂದು ಅತಿಕ್ಷೀಷೆಯಾಗಿರುವ ಹೊತ್ತಿನಲ್ಲಿ ಅರ್ಥಶಾಸ್ತ್ರದ ಹಿನ್ನೆಲೆಯ ವಿಶ್ಲೇಷಣೆಗಿಂತ ಚಾರಿತ್ರಿಕ ದೃಷ್ಟಿಕೋನಗಳು ವಿಷಯ ವಸ್ತುಗಳಿಗೆ ನ್ಯಾಯ ಒದಗಿಸುತ್ತದೆ. ಬೆಳೆದ ಬೆಳೆ ಆಹಾರವಾಗಿದ್ದುದು ವ್ಯವಹಾರಿಕವಾಗಿ ಪರಿವರ್ತನೆಯನ್ನು ಹೊಂದಿದ್ದು ಚಾರಿತ್ರಿಕ ಸತ್ಯ. ಕರಾವಳಿಯ ಭೌಗೋಳಿಕತೆಯೂ ಇದಕ್ಕೆ ಪ್ರಮುಖ ಕಾರಣವಾಗಿದೆ. ಸಮುದ್ರ ತೀರಗಳು ಪ್ರಾಕೃತಿಕ ರೇವುಗಳು ರೇವು ಪಟ್ಟಣಗಳಾಗಿ ಹೊರ ಜಗತ್ತಿನೊಂದಿಗೆ ಸಂಪರ್ಕ ಕಲ್ಪಿಸುವ ಮತ್ತು ವಲಸೆ ಬರಲು ಕಾರಣವಾದುದೂ ಕೂಡಾ ಪ್ರಮುಖ ಅಂಶ.

ಕೃಷಿಯನ್ನು ವಿಸ್ತರಿಸುತ್ತಾ, ನಿರ್ವಹಣೆಯ ಹಂತಕ್ಕೆ ಬಂದಾಗ ವ್ಯವಹಾರದ ದೃಷ್ಟಿಯಿಂದ ನೋಡಿದ ರೀತಿಯ ಕಾರಣಕ್ಕೂ ವಾಣಿಜ್ಯ ಬೆಳೆಯಾಗಿ ಪರಿವರ್ತನೆ ಹೊಂದಲು ಸಾಧ್ಯವಾಯಿತು ಎನ್ನಬಹುದು. ಉತ್ಪಾದನಾ ಪ್ರಕ್ರಿಯೆಯಲ್ಲಿ ಸಮುದಾಯಗಳ ಒಳಗೊಳ್ಳುವಿಕೆಯ ಸಂಬಂಧವು ಈ ನೆಲೆಯಲ್ಲಿ ಮುಖ್ಯವೆನಿಸುತ್ತದೆ. ಅತಿ ವಿಸ್ತಾರವಾದ ಭೂಮಿಯ ಒಡೆತನ ಹೊಂದಿದವರು ಅಧಿಕಾರ ಕೇಂದ್ರದಲ್ಲಿ ಗುರುತಿಸಿಕೊಂಡು ಪ್ರಮುಖ ಸ್ಥಾನಗಳಲ್ಲಿ ಇದ್ದುದರಿಂದ ಉತ್ಪಾದಕತೆಯನ್ನು ಲಾಭದಾಯಕವಾಗಿ ಬಳಸಿಕೊಳ್ಳುವುದೂ ಸಾಧ್ಯವಾಯಿತು. ಕೃಷಿ ಕೂಲಿ ಕಾರ್ಮಿಕರಾಗಿದ್ದವರಿಗೆ ದುಡಿದ ದುಡಿಮೆಗೆ ಪ್ರತಿಫಲವಾಗಿ ನೀಡುತ್ತಿದ್ದುದು ಬೆಳೆದ ಬೆಳೆಗಳನ್ನೇ ಆಗಿತ್ತು. ಭತ್ತದ ಕೆಲಸ ಮಾಡುವವರಿಗೆ ನೀಡುತ್ತಿದ್ದ ಸಂಬಳ ಭತ್ತದ ರೂಪದಲ್ಲಿದ್ದು ಕ್ರಮೇಣ ಅಕ್ಕಿಯ ಸ್ವರೂಪಕ್ಕೆ ಬಂದಿತು. ತೆಂಗಿನ ಮರ ಏರಿ ಕಾಯಿ ಕೀಳುವವನಿಗೆ ಒಂದು ಮರಕ್ಕಿಷ್ಟು ಎಂಬ ಕಾಯಿಯ ಲೆಕ್ಕಚಾರವೇ ಹೊರತು ದುಡ್ಡಿನ ಲೆಕ್ಕಚಾರವಿಲ್ಲ. ದುಡಿಮೆಯೂ ದುಡ್ಡಿನ ಸ್ವರೂಪವನ್ನು ಪಡೆಯಲು ಸಾಧ್ಯವಾದದ್ದು ವಾಣಿಜ್ಯ ಬೆಳೆಗಳ ಪ್ರವೇಶದಿಂದ ಮತ್ತು ಬೆಳೆಗಳನ್ನು ವಾಣಿಜ್ಯ ದೃಷ್ಟಿಯಿಂದ ಬೆಳೆಸಿದಾಗ ಎನ್ನುವ ಅಂಶ ಮುಖ್ಯವಾದುದು.

ತಮ್ಮ ಅವಶ್ಯಕತೆಗೆ ಅಗತ್ಯವಾದಷ್ಟನ್ನೇ ಬೆಳೆಯುತ್ತಿದ್ದ 'ಕುಮೆರಿ ಕೃಷಿ' ಬೆಳೆಯುತ್ತಿದ್ದವರು ಸಾಮಾನ್ಯವಾಗಿ ಕೃಷಿ ಚಟುವಟಿಕೆಯಲ್ಲಿ ತೊಡಗಿಸಿಕೊಂಡವರು ಬೆರಳೆಣಿಕೆಯ ಬುಡಕಟ್ಟು ಸಮುದಾಯಗಳು. ಉಳಿದ ತಳ ವರ್ಗದ ಜನರೆಲ್ಲ ಕೃಷಿಗೆ ಪೂರಕವಾದ ಕೆಲವು ಆಯಗಾರಿಕೆಯ ವೃತ್ತಿ ಯನ್ನು ಮಾಡುತ್ತಿದ್ದರು. ಕೆಲಸವಿಲ್ಲದ ಮತ್ತು ಆಹಾರದ ಅಗತ್ಯಕ್ಕಾಗಿ ಅವರಿಗೆ ಕೃಷಿ ಕೂಲಿ ಕಾರ್ಮಿಕರಾಗಿ ದುಡಿಯುವುದು ಅನಿವಾರ್ಯವಾಗಿತ್ತು. ಕೃಷಿ ಚಟುವಟಿಕೆಗಳು ಬಹಳಷ್ಟು ಮನುಷ್ಯ ಶ್ರಮವನ್ನು ಸಾಂಘಿಕವಾಗಿ ಬಯಸುವುದರಿಂದ ಭೂಮಿಯ ಒಡೆತನವನ್ನು ವಿಸ್ತರಿಸಿಕೊಂಡ ಜಮೀನ್ದಾರರಿಗೆ ನೂರಾರು ಸಂಖ್ಯೆಯ ಆಳುಗಳ ಅವಶ್ಯಕತೆಯಿತ್ತು. ಕಾಡುಗಳಲ್ಲಿ ವಾಸಿಸುತ್ತಿದ್ದ ಸಮುದಾಯಗಳು ಮತ್ತು ತಮ್ಮದೇ ಅನನ್ಯತೆಯನ್ನು ಹೊಂದಿದ ಕುಲ ಕಸುಬುಗಳ ವೃತ್ತಿ ಜೀವನ ನಡೆಸುತ್ತಿದ್ದವರನ್ನು ಪೂರಕವಾಗಿ ಕೃಷಿ ಕಾರ್ಯಕ್ಕೆ ಬಳಸಿಕೊಳ್ಳುವುದರ ಮೂಲಕ ಸಾಗುವಳಿ ಮಾಡುವ ಗದ್ದೆಗಳ ವಿಸ್ತಾರವೂ ಹೆಚ್ಚಾಯಿತು. ಉತ್ಪಾದನೆ ಅಧಿಕವಾದಂತೆಲ್ಲ ಸಂಗ್ರಹಣೆಯ ಮನೋಧರ್ಮವೂ ಹೆಚ್ಚಿತು. ಇಂತಹ ಸಂಗ್ರಹವೂ ಸಂಪತ್ತಿನ ಭಾಗವಾಗಿ ಗುರುತಿಸಲು ಸಾಧ್ಯವಾಯಿತು. ಕೇವಲ ಸಾಮಾಜಿಕ ಸ್ಥಾನಮಾನಗಳನ್ನಷ್ಟೇ ನೀಡದೆ ಅಧಿಕಾರ ಪಡೆಯುವಲ್ಲಿ ಮಕ್ಕಳು ದೈಹಿಕ ಶ್ರಮವನ್ನು ವಹಿಸಲೇಬೇಕಾಗಿತ್ತು. ಕೃಷಿಯಲ್ಲಿ ದುಡಿಸಿಕೊಳ್ಳುವ ವರ್ಗದಲ್ಲಿಯೂ ಇದು

ಸಫಲವಾಯಿತು. ಒಂದರ್ಥದಲ್ಲಿ ಕೃಷಿಯು ನಾಗರಿಕತೆಯನ್ನು ಬೆಳೆಸಿತು. ನಿಜ, ಆದರೆ ಅದು ಖಾಸಗಿ ಆಸ್ತಿಯ ಜತೆಗೆ ಗುಲಾಮಗಿರಿಯನ್ನು ಬೆಳೆಸಿತು. ಶುದ್ಧಾಂಗವಾಗಿ ಬೇಟೆಯೇ ಪ್ರಧಾನವಾಗಿದ್ದ ಜನಾಂಗಗಳಲ್ಲಿ ಗುಲಾಮಗಿರಿ ಹೆಸರೇ ಇರಲಿಲ್ಲ. ಬೇಟೆಗಾರರ ಹೆಂಡತಿ ಉತ್ಪಾದಕ ಸ್ಥಾನದಲ್ಲಿ ನಿಂತು ಮಹತ್ವದ ಸ್ಥಾನವನ್ನು ಪಡೆದು ಕೊಳ್ಳುತ್ತಿದ್ದರು. ಸಂಪತ್ತು ಅಧಿಕಾರ, ಅಂತಸ್ತು ಭೂಮಿಯ ಒಡೆತನ ಸಹಜವಾಗಿಯೇ ಉಳ್ಳವರ ವರ್ಗವಾಗಿ ಮಾರ್ಪಾಡು ಹೊಂದಿ, ಪಾಳೇಗಾರಿಕೆಯಂತಹ ವ್ಯವಸ್ಥೆಗೆ ನಾಂದಿ ಹಾಡಿತು. ಇದರ ಇನ್ನೊಂದು ಮುಖವಾಗಿ ಊಳಿಗ ಮಾನ್ಯತೆಯೂ ಬೆಳೆದು ಬರಲು ಕಾರಣವಾಗಿದೆ.

ಭೂಮಿಯ ಒಡೆತನ ಖಾಸಗಿ ಹಂತಕ್ಕೆ ಬಂದಾಗ ಅವರಿಗೆ ಸಿಕ್ಕ ಅಧಿಕಾರ ಕೇಂದ್ರಗಳಿಗೆ ಅನುಗುಣವಾಗಿ ಜಮೀನ್ದಾರಿ, ಇನಾಂದಾರ್, ಜಾಗೀರದಾರ ಎಂಬ ಹೆಸರುಗಳು ಲಭಿಸುವುದು ಸಾಧ್ಯವಾಯಿತು. ಕೃಷಿ ಭೂಮಿಗೆ ಹೊಂದಿದ ಸರಕಾರಿ ಜಮೀನನ್ನು ಕುಮ್ಕಿ ಭೂಮಿ ಎಂದು ಗುರುತಿಸಿದರು. ಈ ಕುಮ್ಕಿ ಭೂಮಿಗಳಲ್ಲಿ ಒಂದಿಷ್ಟು ಕೃಷಿ ಮಾಡುತ್ತಿದ್ದವರು ತಮ್ಮ ಪಾಡಿಗೆ ತಾವು ಬಾಳುತ್ತಿದ್ದ ಸಮುದಾಯಗಳನ್ನು ಕೃಷಿ ಕೂಲಿ ಕಾರ್ಮಿಕರನ್ನಾಗಿ ಮಾಡಿ ಅವರಲ್ಲಿದ್ದ ಭೂಮಿಗಳನ್ನು ಕಸಿದುಕೊಂಡು ಖಾಯಮ್ಮಾಗಿ ಜೀತದಾಳುಗಳಂತೆ ನಡೆಸಿಕೊಂಡದ್ದು ಒಂದು ಮುಖ. ದಲಿತರಿಂದ ಭೂಮಿಯನ್ನು ಕಸಿದುಕೊಂಡ ಕಾರಣ ಮತ್ತು ಉತ್ಪಾದನಾ ಹಂತದಲ್ಲಿ ತಮ್ಮನ್ನು ಗುರುತಿಸಿಕೊಳ್ಳಲು ಅವರಿಗೆ ಸಾಧ್ಯವಾಗಲಿಲ್ಲ.

ಕೃಷಿ ಸಂಸ್ಕೃತಿಯು ಆಹಾರದ ಬೆಳೆಯಿಂದ ವಾಣಿಜ್ಯ ಬೆಳೆಗೆ ಪಲ್ಲಟ ಹೊಂದುವಾಗ ಕೃಷಿಯ ಸ್ವರೂಪ. ಜನರ ಆರ್ಥಿಕತೆ, ಸಾಮಾಜಿಕ ಮುಂಚಲನೆಗಳಲ್ಲದೆ ಭೂಮಿಯ ಪ್ರಕಾರಗಳಲ್ಲಿಯೂ ವ್ಯತ್ಯಾಸಗಳು ಗೋಚರಿಸಿದವು. ಹೆಚ್ಚು ಆದಾಯ ತರುವ ಬೆಳೆಗಳಿಗೆ ಪ್ರಮುಖ ಆಧ್ಯತೆಯನ್ನು ನೀಡಿದ್ದು ಮಾತ್ರವಲ್ಲ, ಭೂಮಿಯ ಫಲವಂತಿಕೆಗೆ ಕಾರಣವಾಗುವ ಹಸನಾದ ಭೂಮಿಗಳನ್ನು ನಿರ್ವಹಿಸಲು ಸಾಧ್ಯವಾದಾಗ ಕೆಲವು ಜನ ಸಮುದಾಯಗಳನ್ನು 'ಒಕ್ಕಲು' ಗಳಾಗಿ ನಿರ್ವಹಿಸಿದರು. ಖಾಸಗಿ ಭೂಮಿಯನ್ನು ಬಳಕೆ ಮಾಡಿಕೊಂಡುದಕ್ಕಾಗಿ ನಿಗದಿತ ಗೇಣಿಯನ್ನು ಇವರು ನೀಡಬೇಕಿತ್ತು. ಈ ಗೇಣಿಯೂ 'ಧಾನ್ಯ'ದ ಸ್ವರೂಪದಲ್ಲಿ ಇದ್ದು ಇಷ್ಟು ವಿಸ್ತಾರವಾದ ಗದ್ದೆಗೆ ಇಷ್ಟು ಅಳತೆಯ ಮಾಪನ (ಮುಡಿ,ಕಳಸೆ)ದ ಗೇಣಿಯನ್ನು ಕೊಡಬೇಕಿತ್ತು. ಇದು ಒಂದು ರೀತಿಯ ಒಕ್ಕಲು, ಆದರೆ ಇನ್ನೊಂದು ವಿಭಾಗ ಮನೆಯ ಕೃಷಿ ಕಾರ್ಯಗಳಿಗಾಗಿ ದುಡಿಮೆಯ ಖಾಯಂ ಆಳುಗಳಾಗುವುದಕ್ಕಾಗಿ 'ಬುಡಿ ಒಕ್ಕಲು' ಎಂದು ಗುಡಿಸಲು ಕಟ್ಟಲು ತುಂಡು ಭೂಮಿಯನ್ನು ನೀಡುತ್ತಿದ್ದರು. ಮನೆಯೊಡೆಯ ಕೊಟ್ಟ ಕೂಲಿ ಮತ್ತು ಅವನು ಹೇಳಿದ ದುಡಿಮೆಯಲ್ಲದೆ ಅವರಿಗೆ ಬೇರಾವ ಸ್ವಾತಂತ್ರ್ಯವೂ ಇರಲಿಲ್ಲ. ಶ್ರಮಿಕ ಆಳುಗಳ ಬೆವರಿನ ಬೆಲೆಗಿಂತ ಭೂಮಿಯ ಬೆಲೆಯೇ ಹೆಚ್ಚೆಂದು ಪರಿಭಾವಿಸಿ ಅವರ ದುಡಿಮೆಯನ್ನು ನಗಣ್ಯಗೊಳಿಸಲಾಗುತ್ತಿತ್ತು. ಒಂದರ್ಥದಲ್ಲಿ ಜೀತವೇ ಆಗಿದ್ದು ಈ ದುಡಿಮೆಯಲ್ಲಿರುವವರು ಯಾವತ್ತು ಸ್ಥಿತಿವಂತರಾಗಲು ಸಾಧ್ಯವಿರಲಿಲ್ಲ. ಅನ್ಯರ ಮನೆಯಲ್ಲಿ ಆಳುಗಳಾಗಿ ದುಡಿಯುವ ಸ್ವಾತಂತ್ರ್ಯವೂ ಇಲ್ಲದಿದ್ದ ಈ ಮಂದಿಗೆ ಆಹಾರದ ಮೂಲ ದಣಿಗಳ ಮನೆಯಂಗಳವಲ್ಲದೆ ಬೇರಾವುದೂ ಆಗಿರಲಿಲ್ಲ. ತನ್ನ ಮನೆಯಂಗಳದಲ್ಲಿ ಬೆಳೆದ ಬಾಳೆಯೋ, ತೆಂಗೋ ದಣಿಗಳ ಸ್ವತ್ತಾಗಿತ್ತೋ ಹೊರತು ಆತನಿಗೆ ಅದರ ಮೇಲೆ ಅಧಿಕಾರವಿರಲಿಲ್ಲ. ಈ ಬಿಕ್ಕಟ್ಟುಗಳನ್ನು ಶತಮಾನಗಳ ಕಾಲ ಸಹಿಸಿಕೊಂಡು

ಪಾಳೆಗಾರಿಕೆ ಮತ್ತು ಊಳಿಗಮಾನ್ಯತೆಯನ್ನು ಘೋಷಿಸಿಕೊಂಡು ಬೆಳೆದ ಕೃಷಿ ಸಂಸ್ಕೃತಿಯ ಒಳಗೆಯೇ ಪಲ್ಲಟದ ಸೂಕ್ಷ್ಮ ಅವತರಣಿಕೆಗಳು ಗೋಚರಿಸಿದವು.

ಮನೆಯ ಅವಶ್ಯಕತೆಗಾಗಿಯಷ್ಟೇ ಬೆಳೆಯುವುದು ಎಂಬ ಅಂಶ ಕೃಷಿ ವಿಸ್ತರಣೆಗೊಂಡಂತೆಲ ್ಲಮಾಯವಾಗಿ ಮಹಿಳೆ ಬೆಳೆಯುತ್ತಿದ್ದ ಮಿಶ್ರ ಬೆಳೆ, ಪರ್ಯಾಯ ಬೆಳೆಗಳ ಕ್ರಮಗಳೂ, ಅಂಚಿಗೆ ಸರಿದವು. ಅತಿ ವಿಸ್ತಾರವಾದ ಗದ್ದೆಗಳಲ್ಲಿ ಊರಿಗೆ ಊರೇ ಒಬ್ಬರ ಜಮೀನು ಎಂದಾದಾಗ ಬೆಳೆದ್ದದನ್ನು ವಿಲೇವಾರಿ ಮಾಡುವುದು ಮುಖ್ಯವಾಯಿತು. ಬೆಳೆದ ಬೆಳೆ ಸಂಪತ್ತಾದರೂ ಏಕ ರೀತಿಯ ಉತ್ಪಾದನೆ ಬೆಲೆಯನ್ನು ಕಳಕೊಂಡದ್ದರಿಂದ ಹೆಚ್ಚು ಲಾಭದಾಯಕವಾಗುವ ಬೆಳೆ ಬೆಳೆಯುವ ಇರಾದೆಯೇ ಹುಟ್ಟಿಕೊಂಡಿತು. ಫಲಶ್ರುತಿಯಾಗಿ ವಾಣಿಜ್ಯದ ಉದ್ದೇಶವನ್ನು ಇರಿಸಿಕೊಂಡು ಒಂದು ಬೆಳೆಯಾದ ನಂತರ ಇನ್ನೊಂದು ಬೆಳೆಗಾಗಿ ಭತ್ತವನ್ನೇ ಬೆಳೆಯದೆ ಉದ್ದು, ಹುರುಳಿ, ಎಳ್ಳು ಅವಡೆಯಂತಹ ಧಾನ್ಯಗಳಲ್ಲದೆ, ಗದ್ದೆ ಸಾಲುಗಳಲ್ಲಿ ನೆಟ್ಟ ತೆಂಗಿನ ಸಸಿ, ಗದ್ದೆ, ಹುಣಿ (ಬದು) ಗಟ್ಟಿಗೊಳಿಸಲು ಕಟ್ಟಿದ ಕಟ್ಟಹುಣಿಗಳು ಸಾಲು ಸಾಲು ತೆಂಗಿನಮರ, ಅಡಿಕೆ, ಮರಗಳಿಂದ ತುಂಬಿದವು. ಬೆಳೆದ ಬೆಳೆಯನ್ನೆಲ್ಲಾ ಮನೆಯಂಗಳದಲ್ಲಿ 'ತುಪ್ಪೆ' ಹಾಕಿ ರಾಶಿ ಮಾಡಿದರೂ ಮಾರಾಟ ಮಾಡುವುದು ಮುಖ್ಯವಾಯಿತು. ಭೂ ರಹಿತರು ಖರೀದುದಾರರಾಗಿ ಭೂಮಿಯ ಒಡೆಯರು ಉತ್ಪಾದಕರಾಗಿ ಪ್ರಾಮುಖ್ಯವನ್ನು ಪಡೆದರು. ಭೂಮಿಯ ವ್ಯವಹಾರವೇ ಆದಾಯದ ಮೂಲವಾದಾಗ 'ಸುಂಕ' ನೀಡುವಕ್ರಮವೂ ಪ್ರಮುಖವೆನಿಸಿಕೊಂಡಿತು.

ಎಲ್ಲಕ್ಕೂ ಒಡೆಯನ ಮನೆಯಂಗಳಕ್ಕೆ ಮುಖ ಮಾಡಿದ್ದ ಭೂ ರಹಿತರಿಗೆ ಹೊಟ್ಟೆಯ ಹಸಿವನ್ನು ನೀಗಿಸುವುದೇ ಪ್ರಮುಖವಾದುದ್ದರಿಂದ ಕಾಡುತ್ಪತ್ತಿಗಳ ಕಡೆಗೂ ಗಮನ ಹರಿಸಿದರು. ಕಾಡಿನಲ್ಲಿ ಪ್ರಾಕೃತಿಕವಾಗಿ ಬೆಳೆಯುತ್ತಿದ್ದ ತರಕಾರಿಗಳನ್ನು,ಧಾನ್ಯಗಳನ್ನು ಗಮನಿಸಿ ಯಾವುದು ತಿನ್ನಬೇಕು, ತಿನ್ನಬಾರದು ಎನ್ನುವುದನ್ನು ಅವರಾಗಲೇ ಕಂಡುಕೊಂಡದ್ದರಿಂದ ಅವಶ್ಯಕತೆಗಾಗಿ ಸೊಪ್ಪು –ತರಕಾರಿಗಳು, ಹಣ್ಣುಗಳನ್ನು ಬಳಕೆ ಮಾಡತೊಡಗಿದರು. ಮತ್ತು ಅವುಗಳನ್ನು ಬೆಳೆಸುವ ಸಾಹಸಕ್ಕೂ ಮುಂದಾದರು. ಮೂಲ ಕಾಡು ತಳಿಗಳಿಂದ ಬೆಳೆ ಬೆಳೆದ ತಳಿಗಳನ್ನು ಅನ್ವೇಷಿಸಿ ಆಹಾರ ಯೋಗ್ಯವಾದುದೂ ಒಂದು ಹಂತ. ಗದ್ದೆಯಲ್ಲಿ ಭತ್ತ ಬೆಳೆಯುತ್ತಿದ್ದರೂ ಬೆಳೆಯುವ ಕಾಯಕ್ಕಾಗಿ ಅವರು ಬೆವರು ಹರಿಸಿ ದುಡಿಯುತ್ತಿದ್ದರೂ ಅವರ ಹೊಟ್ಟೆ ತುಂಬುವಷ್ಟು ಅಕ್ಕಿ ಭತ್ತಗಳು ಸಿಗುತ್ತಿರಲಿಲ್ಲ. ಕಾಡಿನಲ್ಲಿ ಸಹಜವಾಗಿ ಬೆಳೆವ ಬಿದಿರಕ್ಕಿಯನ್ನು ಬೆಳೆವ ಕಾಲಮಾನ ಗಮನಿಸಿ ಸಂಗ್ರಹಿಸಿಡುತ್ತಿದ್ದರು. ಕಾಡು ಮತ್ತು ನಾಡು ಆಹಾರದ ಮೂಲವಾಗಿದ್ದರೂ ಬೇಟೆಯೂ ಬದುಕಿನ ಒಂದು ಭಾಗವೇ ಆಗಿತ್ತು. ಹೊಟ್ಟೆಯ ಹಸಿವು ಮುಖ್ಯವಾಗಿತ್ತೇ ವಿನಃ ಬಾಯಿಯ ರುಚಿಯಲ್ಲ. ಸಸ್ಯಹಾರ ಮತ್ತು ಮಾಂಸಾಹಾರ ಮಿಶ್ರಹಾರಗಳಿಂದ ಬಾಳುತ್ತಿದ್ದವರ ಬದುಕು ಹಸಿವು ನೀಗಿಸುವುದಕ್ಕೆ ನಿಂತು ಬಿಡಲಿಲ್ಲ. ಬದುಕಿನ ಸೊಬಗು, ಪ್ರಕೃತಿಯ ನಿಗೂಢತೆಯನ್ನು ಕಂಡುಕೊಂಡು ಕಟ್ಟಿದ ಸಂಸ್ಕೃತಿ ಚಿಂತನೆಯೂ ಕೃಷಿಯ ಭಾಗವೇ ಆಗಿತ್ತು. ಆರಾಧನೆ, ಆಚರಣೆ ನಂಬಿಕೆಗಳ ಮೂಲಕ ಬದುಕಿನ ಯೋಚನೆಗಳನ್ನು ಚಿಂತನೆಗಳನ್ನೂ ವಿಸ್ತರಿಸಿ ಕೊಂಡವರಿಗೆ ಪೂರ್ವ ಗ್ರಹೀತವಾದ ವಿಚಾರಗಳನ್ನು ಪಲ್ಲಟಿಸಿಕೊಳ್ಳುವುದು ಮುಖ್ಯವಾಗಿತ್ತು.

ಅಲೆಮಾರಿತನದಿಂದ ಸ್ಥಿರ ಕೃಷಿ ಹೀಗೆ ಕೃಷಿ ಮಾಡುವುದು ಸಾಮೂಹಿಕವಾಗಿ ಬೆಳೆಯುವುದು ಮತ್ತು ಸಾಮೂಹಿಕವಾಗಿ ಹಂಚುವುದು ಕೂಡಾ ಒಂದು ಕಾಲದ ಜೀವನ ಕ್ರಮ, ಖಾಸಗಿ ಒಡೆತನದ ಭೂಮಿಯ ಪರಿಕಲ್ಪನೆ ಇಲ್ಲದಿದ್ದ ಕಾಲದಲ್ಲಿ ಸಾಮೂಹಿಕವಾಗಿ ದುಡಿಯುವುದು ಮತ್ತು ಸಾಮೂಹಿಕವಾಗಿ ಬದುಕುವುದು ಮತ್ತು ಎಲ್ಲವನ್ನು ಹಂಚಿ ತಿನ್ನುವುದು ಆ ಕಾಲದ ಪರಂಪರೆಯ ರೀತಿ ನೀತಿ ದುಡಿಯುವುದು ಮತ್ತು ಉಣ್ಣುವುದು ಬದುಕಿನ ಪ್ರಮುಖ ಧರ್ಮವೆಂದು ಪರಿಭಾವಿಸಿದ್ದ ಕಾಲದಲ್ಲಿ ಸಾಮೂಹಿಕ ಶ್ರಮಮತ್ತು ಸಾಮೂಹಿಕ ಆದಾಯದ ಮೂಲವಾದ ಕೃಷಿ ಉತ್ಪಾದನಾ ಮತ್ತು ಬಳಕೆಯ ಮೂಲ ಎಂದು ಪರಿಭಾವಿಸಬಹುದು. ಅಲೆಮಾರಿತನದ ಕೃಷಿಯನ್ನು ನಿಧಾನವಾಗಿ ಕ್ಷಯಿಸುತ್ತಾ ಸ್ಥಿರವಾದ ಕೃಷಿಯನ್ನು ಒಂದೆಡೆ ನೆಲೆ ನಿಂತು ಬೆಳೆಯುವ ಹಂತಕ್ಕೆ ಆಗುವಾಗ ಸಂಪತ್ತು, ಭೂಮಿ, ಕುಟುಂಬದ ಗಂಡು ಹೆಣ್ಣು ಮಕ್ಕಳೇ ಆದಾಯವೆಂದು ಪರಿಗಣಿಸಿ ಬಳಸಿಕೊಳ್ಳುವುದು ಮುಖ್ಯವಾಗಿತ್ತು. ಸಾಮೂಹಿಕ ಕೃಷಿ ಮತ್ತು ಸ್ಥಿರ ಕೃಷಿ ಭೂಮಿಯನ್ನು ಸಂಪತ್ತೆಂದು ಗ್ರಹಿಸದೆ ಬೆಳೆ ಬೆಳೆಯಲು ಮಾತ್ರ ಇದು ಅನುಕೂಲವಾಗಿತ್ತು.

ಮಿಶನರಿಗಳ ಕಾಲಕ್ಕೆ ಕೃಷಿಯು ಆಹಾರದ ಬೆಳೆಯಿಂದ ವಾಣಿಜ್ಯ ಬೆಳೆಯಾಗಿ ಪರಿವರ್ತನೆ ಹೊಂದಿಯಾಗಿತ್ತು. ಇದಕ್ಕೆ ಪೂರಕವಾಗಿ ಅವರೂ ಒಂದಿಷ್ಟು ಪ್ರಯೋಗಶೀಲತೆಗಳನ್ನು ನಡೆಸಿದರು. ಬಾಸೆಲ್ ಮಿಶನರಿಯ ಆರ್ಕೈವ್‌ನಲ್ಲಿ ಲಭ್ಯವಾಗುವ ಛಾಯಚಿತ್ರದ ದಾಖಲೆಗಳಲ್ಲಿ ಅಕ್ಕಿ ಮುಡಿಗಳನ್ನು ಮೂಟೆ ಕಟ್ಟಿ ಗಾಡಿಗಳಲ್ಲಿ ತುಂಬಿ ಬಂದರುಗಳಲ್ಲಿ ತಂದಿಡುವ ಸಾಂದರ್ಭಿಕ ಚಿತ್ರಗಳಿವೆ. ಇದಲ್ಲದೆ ಇತರ ಆಹಾರ ಧಾನ್ಯಗಳೂ ಇಲ್ಲಿಂದ ರಫ್ತು ಆಗುತ್ತಿರುವ ದಾಖಲೆಗಳಿವೆ. ಭತ್ತದ ಬೆಳೆಯನ್ನು ಪರೀಕ್ಷಾರ್ಥವಾಗಿ ನಡೆಸಿ ಅದರ ಎಲ್ಲ ಖರ್ಚು ವೆಚ್ಚಗಳನ್ನು ನಮೂದಿಸಿ ಅದರ ಕೃಷಿ ಲಾಭವೋ ನಷ್ಟವೋ ಎಂದು ವ್ಯಾವಹಾರಿಕವಾಗಿ ಲೆಕ್ಕಾಚಾರ ಮಾಡುವ ಮನೋಧರ್ಮಗಳೂ ಮುಖ್ಯ ಬೆಳವಣಿಗೆಯಾಯಿತು. ೧೯೦೮ರಲ್ಲಿ ಕಾರ್ಕಳದಲ್ಲಿ ಮತ್ತಾಯಸರ ವಾಸಸ್ಥಾನವಾದ ಕಾರ್ಕಳದಲ್ಲಿ ಒಂದು ಭತ್ತದ ಕೃಷಿಯನ್ನು ಪರೀಕ್ಷಾರ್ಥ ನಡೆಸಿದ ವಿವರ ವ್ಯಾವಸಾಯಿಕ ಪಂಚಾಂಗದಲ್ಲಿದೆ. ಕೃಷಿ ಮಾಡಲು ಖರ್ಚಾದ ಎಲ್ಲಾ ಲೆಕ್ಕಚಾರಗಳು ಉಳುಮೆ, ಗೊಬ್ಬರ, ಬೀಜ, ಆಳುಗಳು, ಕಟಾವು, ಸಂಗ್ರಹಣೆ, ಪರಿಷ್ಕರಣೆಗಳಿಗಾದ ಖರ್ಚನ್ನೂ ಪೈಸೆ ಪೈಸೆ ಲೆಕ್ಕ ಹಾಕಿ ಬಂದ ಉತ್ಪತ್ತಿಯನ್ನು ವಿಲೇವಾರಿ ಮಾಡಿದಾಗ ಸಿಕ್ಕ ಹಣದಿಂದ ಅದನ್ನು ಕಳೆದು ಕೃಷಿ ಲಾಭವೋ ನಷ್ಟವೋ ಎಂದು ನಿರ್ಧರಿಸಿದರು. ಹಿರಿಯರು ಕೃಷಿಯನ್ನು ಎಂದೂ ಲೆಕ್ಕಚಾರದ ದೃಷ್ಟಿಯಿಂದ ನೋಡಿದಿಲ್ಲ. ದುಡಿಮೆ, ಶ್ರಮದ ಆಯಾಮದ ಮೂಲಕ ಸಹಜವಾಗಿ ಬೆಳೆ ಬೆಳೆಯುತ್ತಾ ಸಾಗಿದರು. ಮನೆಯಂಗಳದ ಬೀಜ, ಹಟ್ಟಿಯ ಗೊಬ್ಬರ ಎಲ್ಲವೂ ಪ್ರಾಕೃತಿಕವಾಗಿತ್ತೋ ಹೊರತು ದುಡ್ಡಿನ ಪ್ರಶ್ನೆ ಅಲ್ಲಿ ಎದ್ದಿರಲಿಲ್ಲ. ಬಂದ ಫಸಲಿನಲ್ಲೂ ಮನೆಗೆ ಉಣ್ಣಲು, ಕೊಟ್ಟಿಗೆಯ ದನಕರು ಕೋಣಗಳಿಗೆ ಆಹಾರವಾಗಿ ಆಳುಗಳಿಗೆ ಅಳೆಯುವ 'ಪಡಿ' ಯಾಗಿ ನೋಡುತ್ತಿದ್ದರೇ ಹೊರತು ಅಲ್ಲಿ ಲಾಭ ನಷ್ಟಗಳಿರಲಿಲ್ಲ ಬದುಕಿನ ಉತ್ತರವಿತ್ತು. ಸಮಸ್ತ ಜೀವಜಾಲಕ್ಕೂ ಬೆಳೆ ಬೆಳೆಯುವ ಮೂಲಕ ಆಹಾರದ ಸರಪಳಿಗೆ ಅನುಕೂಲತೆಯಿತ್ತು. ತಾನು ಮಾತ್ರ ಬದುಕಲು ಬೆಳೆ ಬೆಳೆಯುತ್ತಿರಲಿಲ್ಲ. ಗದ್ದೆಯಲ್ಲಿ ಉಳಿದದ್ದು, ಚೆಲ್ಲಿದ್ದು ಉಳಿದ ಸಹ ಜೀವಿಗಳಿಗೂ ಲಭ್ಯವಾಗುತ್ತಿತ್ತು. ಒಂದು

ಜೀವನಚಕ್ರಕ್ಕೆ ಪೂರಕವಾಗಿ ಲಭ್ಯವಾಗುತ್ತಿದ್ದ ಅದರ ಫಸಲು ಮಾತ್ರವಲ್ಲದೆ ತ್ಯಾಜ್ಯವೆಂದು ಪರಿಭಾವಿಸುವ ಅಂಶಗಳೂ ಇರುತ್ತಿರಲಿಲ್ಲ. ಆಹಾರದ ಸರಪಳಿ ಮತ್ತು ಜೀವನ ಸರಪಳಿಗಳಿಗೂ ಅದು ಅನುಕೂಲವಾಗುತ್ತಿತ್ತು.

ಪ್ರಾಯೋಗಿಕವಾಗಿ ಮಿಶನರಿಗಳು ಕೃಷಿಯನ್ನು ವಾಣಿಜ್ಯ ಬೆಳೆಯಾಗಿ ಬೆಳೆಯಲು ಸಾಧ್ಯವಾಗಿದೆ. ೧೯೧೦-೧೧ನೇ ಇಸವಿಯಲ್ಲಿ ರಚಿತವಾದ ವ್ಯಾವಸಾಯಿಕ ಪಂಚಾಂಗದಲ್ಲಿ ಈ ಬಗೆಗಿನ ದಾಖಲಾತಿಗಳಿವೆ. ಕರಾವಳಿಯಲ್ಲಿ ನೆಲಗಡಲೆ ಬೆಳೆಯನ್ನು ಬೆಳೆದು ಅದನ್ನು ಲಾಭ-ನಷ್ಟಗಳ ಲೆಕ್ಕಚಾರದಲ್ಲಿ ಅಳೆದಿದ್ದರು. ಒಂದು ಕೋಷ್ಟಕವನ್ನು ಕೊಟ್ಟು ಆ ಬೆಳೆಗೆ ಆದ ಆಯ ಮತ್ತು ವ್ಯಯವನ್ನು ಗುರುತಿಸುತ್ತಾರೆ. ಬಂದ ಫಸಲಿನಿಂದ ಬಂದ ಒಟ್ಟು ಆದಾಯ ೧೬೭ ರೂ ಗಳಾಗಿದ್ದು ಗೇಣಿಯನ್ನು ಕಳೆದರೆ ಒಟ್ಟು ಒಂದು ನೂರು ಒಂಭತ್ತು (೧೦೯) ರೂಪಾಯಿ ಲಾಭವಾಗಿದೆ. ಕರಾವಳಿಯಲ್ಲಿ ಇಂದಿಗೂ ನೆಲಗಡಲೆ ಕೃಷಿ ಅಪರೂಪವಾಗಿದ್ದು ಅದನ್ನು ಮಾಡಿರುವ ಪ್ರಯೋಗಾತ್ಮಕತೆ ಮತ್ತು ಮಿಶನರಿಗಳ ಸಾಹಸ ಪ್ರವೃತ್ತಿ ಮೆಚ್ಚುವಂತಹುದು. ಅಲ್ಲದೆ ಬೆಳೆಯೊಂದನ್ನು ಲಾಭ- ನಷ್ಟಗಳ ಅಂಶದಲ್ಲಿ ವಿಶ್ಲೇಷಿಸಿರುವುದೂ ಮುಖ್ಯ ಅಂಶವಾಗಿದೆ.

೧೯೦೮ ರಲ್ಲಿ ಮತ್ತಾಯಸರು ಕಾರ್ಕಳದ ಕಾಡುಗಳಲ್ಲಿ ರಬ್ಬರ್ ಕೃಷಿ ಮಾಡಿದ ವಿವರಗಳೂ ಲಭ್ಯವಾಗಿವೆ.ಅನಾನಸು ಬೆಳೆಯನ್ನು ಕರಾವಳಿಗೆ ಪರಿಚಯಿಸಿದವರೇ ಮಿಶನರಿಗಳು. ತುಳುವಿನಲ್ಲಿ ಅದಕ್ಕಿರುವ ಹೆಸರು 'ಪೆರಂಗಿ ಪೆಲಕಾಯಿ' ಕೆಂಪು ಮೈ ಬಣ್ಣ ಹೊಂದಿದವರನ್ನು ಪರೆಂಗಿಗಳೆಂದು ಸ್ಥಳಿಯರು ಕರೆಯುತ್ತಿದ್ದರು. ಅವರು ತಮ್ಮ ನಾಡಿನಿಂದ ತಂದು ಬೆಳೆದಿದ್ದರಿಂದ ಅದು 'ಪೆರಂಗಿ' ಪೆಲಕಾಯಿ ಎಂದಾಗಿದೆ. ಪೆಲಕಾಯಿ ಎಂದರೆ ಹಲಸು. ಸ್ಥಳೀಯವಾಗಿರುವ ಹಲಸು ಬೆಳೆಯನ್ನು ಅಪರಿಚಿತ ಹಣ್ಣಿನೊಂದಿಗೆ ಸಮೀಕರಿಸುವ ಲೋಕ ದೃಷ್ಟಿಯೊಂದಿಗೆ ಅದನ್ನು ವಾಣಿಜ್ಯ ಬೆಳೆಯಾಗಿಯೂ ಅಭಿವೃದ್ಧಿ ಪಡಿಸಿದರು. ಮಿಶನರಿಗಳು ಸ್ಥಾಪಿಸಿದ ಮೂಡಬಿದಿರೆಯ ಸೋನ್ಸ್ ಪಾರ್ಮ್‌ನಲ್ಲಿ ಇಂದು ಅನಾನಸು ಪ್ರಮುಖ ಬೆಳೆ, ಇದಲ್ಲದೆ ಇಂದು ಅಲ್ಲಿ ನೂರಾರು ವಿದೇಶೀ ಮೂಲದ ಹಣ್ಣುಗಳನ್ನು ಬೆಳೆಯುತ್ತಾರೆ. ಇದಲ್ಲದೆ ಇಂದು ಅಡಿಕೆ, ಮೆಣಸು, ಕೊಕ್ಕೋ, ಮೊದಲಾದ ತೋಟದ ಬೆಳೆಗಳು ಆಧುನಿಕವಾಗಿ ವೆನ್ನಿಲ್ಲಾವು ವಾಣಿಜ್ಯ ಬೆಳೆಯಾಗಿ ಬೆಳೆಯಿತು.

**೩..೨ ಕೃಷಿಯಿಂದ ಕೈಗಾರಿಕೆಗೆ**

ಕೃಷಿಯಿಂದ ಕೈಗಾರಿಕೆಗೆ ಏಕರೂಪದ ಸ್ಥಿತ್ಯಂತರವಲ್ಲ. ಮಾನವ ನಾಗರಿಕತೆ ವಿಕಾಸವಾದಂತೆಲ್ಲ ಶಿಲಾಯುಗದಿಂದ ಲೋಹ ಯುಗಕ್ಕೆ ಸಾಗಿ ಬಂದು ಕೃಷಿಯನ್ನು ಅನ್ವೇಷಿಸಿ , ವಿಸ್ತರಿಸಿ ನಿರ್ವಹಿಸುವ ಸಂದರ್ಭದಲ್ಲಿ ಸಲಕರಣೆಗಳನ್ನು ಬಳಸುತ್ತಾ ಸಾಗಿದರು. ಪರಿಣಾಮ ಆಯಗಾರಿಕೆಯ ವೃತ್ತಿಗಳೂ ಹೊಸ ವಿಸ್ತಾರಗಳನ್ನು ಪಡೆದವು. ಈ ಅನ್ವೇಷಣಾ ಮನೋಧರ್ಮ ಸರ್ವ ವೇದ್ಯವಾಗಿರುವಂತೆ ಯುರೋಪಿನಲ್ಲಿ ನಡೆದ ಕೈಗಾರಿಕಾ ಕ್ರಾಂತಿ ಯಂತ್ರ ಸಂಸ್ಕೃತಿಯ ಹುಟ್ಟಿಗೂ ಕಾರಣವಾಯಿತು. ಮಾನವ ಶ್ರಮವನ್ನು ಕಡಿಮೆಗೊಳಿಸಿ ಹೆಚ್ಚು ಬಾರವನ್ನು ಸರಳವಾಗಿ ಎತ್ತಲು ಸಾಧ್ಯವಾಗುವ 'ಸನ್ನೆ'ಯಿಂದ ತೊಡಗಿ ಮನುಷ್ಯ ಕೈಯಿಂದ ಕೆಲಸಮಾಡುವುದು ಕಡಿಮೆಯಾಗುತ್ತಾ ತಲೆಯಿಂದ ಕೆಲಸದ ನಿರ್ವಹಣೆ ಸಾಧ್ಯವಾಯಿತು. ಯಂತ್ರಗಳ , ಸಲಕರಣೆಗಳ ಆವಿಷ್ಕಾರ ಮತ್ತು ಬಳಕೆಯ ಜಾಣ್ಮೆಯನ್ನು ಗುರುತಿಸಿಕೊಂಡು ಮಾನವ

ಶ್ರಮವನ್ನು ಕಡಿಮೆ ಉಪಯೋಗಿಸುವುದು ಮೊದಲ ಆದ್ಯತೆಯಾಗಿತ್ತು. ನೂರಾರು ಸಾವಿರಾರು ಲಕ್ಷಾಂತರ ಆಳುಗಳ ಬೆವರಿನ ಶ್ರಮಗಳ ಪರ್ಯಾಯದ ಯಂತ್ರಗಳ ಆವಿಷ್ಕಾರ ಮತ್ತು ನಿರ್ವಹಣೆಯೇ ಕೌಶಲ್ಯದ ಮೆಟ್ಟಿಲಾಗಿ ಯಾಂತ್ರಿಕತೆ ಮುಂದುವರಿಯಲು ಸಾಧ್ಯವಾಯಿತು. ನಾಗರಿಕತೆಯಿಂದ ಯಾಂತ್ರಿಕತೆಯೆಡೆ ಸಾಗಿದಾಗಲೆಲ್ಲ ಆರ್ಥಿಕತೆಯ ಕ್ಷೇತ್ರದಲ್ಲಿ ಬಂಡವಾಳವೇ ಪ್ರಮುಖ ಸ್ಥಾನವನ್ನು ಪಡೆಯಿತು. ವ್ಯಕ್ತಿಯ ಜೀವನ ಕೌಶಲ್ಯ ಮತ್ತು ಜ್ಞಾನ ಕೌಶಲ್ಯಗಳೂ ನಗಣ್ಯಗೊಂಡು ಕೇವಲ ಅರ್ಥವ್ಯವಸ್ಥೆಯ ಆರ್ಥಿಕತೆಯೇ ಪ್ರಮುಖ ಸ್ಥಾನ ಪಡೆದಾಗ ಕೃಷಿ ಜಗತ್ತಿನಲ್ಲಿದ್ದ ಎಲ್ಲಾ ಸಾಮಾಜಿಕ ಸಂರಚನೆಗಳೂ ಸ್ಥಿತ್ಯಂತರಗೊಂಡವು.

ಮನುಷ್ಯರ ಅನ್ವೇಷಣಾ ಗುಣ ಮತ್ತು ಹೊಸತರ ಕಡೆಗೆ ತುಡಿಯುವ ಸ್ವಭಾವ ಅವರನ್ನು ಹೊಸ ಹೊಸ ವಿಚಾರಗಳ ಬಗೆಗೆ ಸಂಶೋಧನೆಗೆ ತೊಡಗುವಂತೆ ಮಾಡಲು ಕಾರಣವಾಯಿತು. ಯಾವುದೇ ಕೆಲಸವನ್ನು ಕಡಿಮೆ ಮಾನವ ಶ್ರಮ ಬಳಸಿ ಕಡಿಮೆ ಅವಧಿಯಲ್ಲಿ ವೇಗವಾಗಿ ಹೆಚ್ಚು ಪ್ರಮಾಣದಲ್ಲಿ ಉತ್ಪಾದನೆ ಮಾಡುವುದು ಕೂಡಾ ಅವಶ್ಯಕವಾಗಿತ್ತು. ಸಾಧನಗಳಿಗೆ ಪೂರಕವಾಗಿ ಯಂತ್ರಗಳನ್ನು ಬಳಸಿಕೊಂಡು ಸಾಂಘಿಕ ನೆಲೆಯಲ್ಲಿ ಕಡಿಮೆ ಅವಧಿಯಲ್ಲಿ ಉತ್ಪಾದನೆಯನ್ನು ಹೆಚ್ಚುಗೊಳಿಸುವುದು ಅವಶ್ಯವಾಗಿತ್ತು. ಹೀಗೆ ಉತ್ಪಾದಕತೆ ಮತ್ತು ಆರ್ಥಿಕತೆಗಳು ಪ್ರಮುಖವೆನಿಸಿಕೊಂಡಾಗ ಅವುಗಳನ್ನುಅತಿ ಹೆಚ್ಚು ಪ್ರಮಾಣದಲ್ಲಿ ಮಾಡುವ ಧ್ಯೇಯೋದ್ದೇಶಗಳಿಂದಾಗಿ, ಹೆಚ್ಚು ಉತ್ಪಾದನೆಯ ಅವಶ್ಯಕತೆಯಿತ್ತು. ಮನುಷ್ಯರ ಜನಸಂಖ್ಯೆ ಹೆಚ್ಚಿದಂತೆಲ್ಲಾ ಬಳಕೆಯಾಗುವ ಆಹಾರ ಧಾನ್ಯಗಳ ಪ್ರಮಾಣವೂ ಹೆಚ್ಚಾಯಿತು. ಇಂದು ಬೆಳೆದದ್ದನ್ನು ಇಂದು ಖರ್ಚು ಮಾಡಿಮುಗಿಯದೆ ಇದ್ದಾಗ ಅವುಗಳನ್ನು ಮತ್ತೆ ಸಂಪತ್ತಿನ ಮೂಲವಾಗಿ ಬಳಸುವುದೂ ಮುಖ್ಯವಾಗಿತ್ತು. ಆಹಾರ ಸಂಗ್ರಹಣೆಯಿಂದ ಆಹಾರ ಉತ್ಪಾದನೆಯೆಡೆಗೆ ಸಾಗಿದ ಹಂತವು ಪಶುಪಾಲನೆ ಮತ್ತು ಬೇಸಾಯದ ಮೂಲ ಉದ್ದೇಶ, ಆಹಾರದ ನಿರ್ವಹಣೆಯೇ ಆಗಿತ್ತು. ಕೃಷಿ ಅನ್ವೇಷಣೆಗೊಂಡು ವಿಸ್ತರಣೆಗೊಳ್ಳುವ ಹಂತದಲ್ಲಿ ಕೃಷಿಗೆ ಪೂರಕವಾಗಿ ಕೆಲವು ಆಯಗಾರಿಕೆಯ ಕಸುಬುಗಳೂ ಹುಟ್ಟಿಕೊಂಡು ವಿಸ್ತರಿಸಿದವು. ವ್ಯವಸಾಯಕ್ಕೆ ಅನುಬಂಧವಾಗಿ ಬರುವ ವ್ಯವಸಾಯೇತರ ಉತ್ಪತ್ತಿ ಆಗಿನ್ನು ಗ್ರಾಮದೊಳಗೇ ನಡೆಯುತ್ತಿತ್ತು. ಕಬ್ಬಿಣ, ಉಪ್ಪು, ಮೊದಲಾದ ಕೆಲಸವನ್ನು ಹೊರತು ಪಡಿಸಿ ಮಿಕ್ಕೆಲ್ಲ ದೈನಂದಿನ ಆಗತ್ಯಗಳು ಗ್ರಾಮದೊಳಗೇ ತಯಾರಾಗುತ್ತಿದ್ದವು. ಅಲೆಮಾರಿ ಕೃಷಿಯಿಂದ ಸ್ಥಿರ ಕೃಷಿಯೆಡೆಗೆ ಸಾಗಿದಂತೆಲ್ಲ ವ್ಯವಸಾಯೇತರ ಅಗತ್ಯಗಳು ,ಪರಿಕರಗಳು, ವಸ್ತ್ರಗಳು ಪೂರೈಕೆಯನ್ನು ನಡೆಸುವ ಸಮುದಾಯಗಳೂ ಸೃಷ್ಟಿಗೊಂಡವು. ಮೌರ್ಯರ ಕಾಲದಲ್ಲಿ ಭಾರತ ದೇಶಕ್ಕೆ ಬಂದಿದ್ದ ಮೆಗಸ್ತಾನೀಸ್ ಏಳು ವರ್ಗಗಳನ್ನು ಗುರುತಿಸುತ್ತಾನೆ. ಅವುಗಳಲ್ಲಿ ಗ್ರಾಮೀಣ ಕೃಷಿಕರ ವರ್ಗ ಒಂದಾದರೆ ವೃತ್ತಿ ಪರರನ್ನು ವ್ಯಾಪಾರಸ್ಥರನ್ನು ಒಟ್ಟಾಗಿ ಪಟ್ಟಣ ಪ್ರಾಂತದ ಒಂದು ವರ್ಗವೆಂದು ಗುರುತಿಸುತ್ತಾನೆ ಎಂದು ಚರಿತ್ರಕಾರರು ವಿಶ್ಲೇಷಿಸುತ್ತಾರೆ. ಹೀಗೆ ಕೃಷಿಯು ವಿಸ್ತರಣೆಗೊಂಡಂತೆಲ್ಲ ಸಾಂಘಿಕ ಸಮಾಜವೊಂದು ತನ್ನದೇ ಸ್ವರೂಪವನ್ನು ಪಡೆದುಕೊಂಡು ವಿನ್ಯಾಸಗೊಳ್ಳುತ್ತಾ ಹೋಯಿತು. ಗಣಗಳು ಗ್ರಾಮಗಳಾಗಿ ಸಂಘಗಳಾಗಿ ಗುರುತಿಸಿಕೊಂಡಂತೆಲ್ಲಾ ಕೃಷಿಯ ವಿಸ್ತಾರದ ಹಂತ ವಿನ್ಯಾಸಗೊಳ್ಳುತ್ತಾ ಹೋಯಿತು. ಸಮುದಾಯ ಮತ್ತು ಸಮಾಜದ ನಿರ್ಮಾಣದಲ್ಲಿ ಕೃಷಿ ಬದುಕು ವಿಸ್ತರಣೆಗೊಳ್ಳುತ್ತ ಹೋದದೂ ಒಂದು ಪ್ರಮುಖ ಅಂಶ.

ಕೃಷಿಯ ನಿರ್ವಹಣೆಗಾಗಿ ಬಳಸಲಾದ ಸಾಧನಗಳು ಸಲಕರಣೆಗಳು ಯಾಂತ್ರಿಕತೆಯ ಮೂಲ ಅಂಶಗಳು ಹಾರೆ ಗುದ್ದಲಿ,ಕತ್ತಿ, ಪಡಿ ಮಂಚ, ಬುಟ್ಟಿ, ಹೆಡಿಗೆ, ಗೆರಸೆ, ಇವುಗಳನ್ನು ತಯಾರಿಸಲು ಕಚ್ಚಾ ಪದಾರ್ಥಗಳಾಗಿ ಬಳ್ಳಿ, ಮರ, ತಾಳೆ ಎಲೆ, ಸೋಗೆ ಮೊದಲಾದ ಪ್ರಾಕೃತಿಕವಾಗಿ ವಿನ್ಯಾಸಗೊಳಗಾದ ಸಲಕರಣೆಗಳ ತಯಾರಿ ಮೊದಲು ನಡೆದಿದೆ. ಲೋಹದ ಅನ್ವೇಷಣೆಯಾದ ಬಳಿಕ ಕಬ್ಬಿಣವನ್ನು ಬಳಸಿ ಉಪಕರಣಗಳನ್ನು ತಯಾರಿಸುತ್ತಿದ್ದರು. ಪರಿಣಾಮ ಒಂದೊಂದು ಸಮುದಾಯಗಳು ಆಯಗಾರಿಕೆಯ ವೃತ್ತಿಗಳನ್ನು ಮಾಡುತ್ತ ಕೃಷಿಗೆ ಪೂರಕವಾದ ಕಾರ್ಯ ಚಟುವಟಿಕೆಗಳಲ್ಲಿ ಭಾಗಿಯಾಗಿದ್ದವು. ಈ ದೇಸೀಯ ಪರಂಪರೆ ಹಾಗೆಯೇ ಉಳಿದು ಬಿಡಲಿಲ್ಲ.

ಕರಾವಳಿ ಕಡಲ ತೀರ ಹಾಗೂ ರೇವು ಪಟ್ಟಣಗಳಿಂದ ಕೂಡಿದ ಪ್ರದೇಶವಾಗಿದ್ದು ಹೊರ ದೇಶಗಳೊಂದಿಗೆ ಸಂಪರ್ಕ ಮತ್ತು ಸಂವಹನದ ಸಾಧ್ಯತೆಗಳಿಗೆ ತೆರೆದುಕೊಂಡಿತ್ತು. ಸ್ಥಿರ ಕೃಷಿಯಿಂದ ವಿಸ್ತರಣೆಗೊಂಡಂತೆಲ್ಲ ಧಾನ್ಯಗಳು ಬೆಳೆದದ್ದು ಹೆಚ್ಚಾದಂತೆಲ್ಲಾ ವ್ಯಾಪಾರ ವಹಿವಾಟುಗಳು ಹೆಚ್ಚಾದವು. ತಮ್ಮಲ್ಲಿ ವಿಪುಲವಾಗಿ ಬೆಳೆದ ಆಹಾರ ಧಾನ್ಯಗಳನ್ನು ಮಾರಾಟ ಮಾಡುವ ವ್ಯವಸ್ಥೆ ನಿರ್ಮಾಣಗೊಂಡಂತೆಲ್ಲ ಹೆಚ್ಚು ಬೇಡಿಕೆಯಿರುವ ಬೆಳೆಗಳನ್ನು ಬೆಳೆಯುತ್ತಿದ್ದರು. ಬಹಳ ಪೂರ್ವ ಕಾಲದಿಂದಲೂ ಕರಾವಳಿಯ ಬಂದರು ತೀರಗಳು ಜಗತ್ತಿನ ಹೊರದೇಶಗಳೊಂದಿಗೆ ಸಂಬಂಧ ಕಲ್ಪಿಸಿ ಆರ್ಥಿಕತೆ, ಬೆಳೆಯಲು ಸಾಧ್ಯವಾಯಿತು. ಕರಿಮೆಣಸು, ಸಾಂಬಾರ ಪದಾರ್ಥಗಳಲ್ಲದೆ 'ಮಸ್ಕತಿ' ಎಂಬ ಪ್ರಸಿದ್ಧ ಅಕ್ಕಿಯನ್ನು ಇಲ್ಲಿಂದ ರಫ್ತು ಮಾಡುತ್ತಿದ್ದರು. ಇಡೀ ಜಗತ್ತಿಗೆ ತತ್ವಜ್ಞಾನ ಮೊದಲು ತಿಳಿಸಿದ ಗ್ರೀಕ್, ರೋಮ್, ಕರಾವಳಿಯೊಂದಿಗೆ ಸಂಪರ್ಕದಲ್ಲಿದ್ದವು. ಬೇಡಿಕೆ ಹೆಚ್ಚಿದಂತೆ ಉತ್ಪಾದನೆಯೂ ಹೆಚ್ಚಿ ವ್ಯಾಪಾರವು ಬಿರುಸಿನಿಂದ ಸಾಗುತ್ತಿತ್ತು. ಇಂತಹ ಸಮಯದಲ್ಲಿ ಕೃಷಿಯನ್ನು ವಿಸ್ತರಿಸುವ ಪ್ರಯತ್ನಗಳೂ ಸಾಗಿದವು. ವ್ಯಾಪಾರ ವಹಿವಾಟುಗಳು ಹೆಚ್ಚಿದಂತೆ ಕೃಷಿ ಜಗತ್ತಿಗೆಪರ್ಯಾಯವಾಗಿ ಆರ್ಥಿಕತೆಯೂ ಪ್ರಮುಖವಾಯಿತು. ಹೊರ ದೇಶಗಳಿಂದ ವ್ಯಾಪಾರಕ್ಕೆ ಆಗಮಿಸಿದವರು ಸಂಚಾರಿ ವ್ಯವಸ್ಥೆಯನ್ನು ಅನ್ವೇಷಿಸಿದರು. ಗ್ರೀಕ್, ರೋಮ್ ಯುರೋಪ್ ದೇಶಗಳಿಂದಬೇರೆ ಬೇರೆ ಕಾರಣಗಳಿಗಾಗಿ ಹಾಗೂ ಪ್ರಮುಖ ವ್ಯಾಪಾರ ದೃಷ್ಟಿಯನ್ನಿರಿಸಿಕೊಂಡು ಬಂದ ಸಮುದಾಯಗಳು ಬರಿ ವ್ಯಾಪಾರವನ್ನಷ್ಟೇ ಮಾಡಿಲ್ಲ .ಇಲ್ಲಿಯ ಸಾಮಾಜಿಕ ಮತ್ತು ಸಾಂಸ್ಕೃತಿಕ ಜನ ಜೀವನವನ್ನು ಗಮನಿಸಿ ತಮ್ಮ ಧರ್ಮವನ್ನು ಪ್ರಚಾರ ಮಾಡುವ ಉದ್ದೇಶವೂ ಅವರಿಗಿತ್ತು. ಪೋರ್ಚುಗಲ್‌ನಿಂದ ಬಂದ ಪೋರ್ಚುಗೀಸರು ಪ್ರಾನ್ಸ್‌ನಿಂದ ಬಂದ ಫ್ರೆಂಚರು, ಡಚ್ಚರು, ಬ್ರಿಟಿಷರು ವಸಾಹತುಗಳ ಅನ್ವೇಷಣೆಗಾಗಿ ಕರಾವಳಿಯ ಕಡಲ ತೀರಕ್ಕೆ ಬಂದರು. ಮಿಶನರಿಗಳು ಕರಾವಳಿಗೆ ಆಗಮಿಸಿ ಸಾಮಾಜಿಕ ಚಟುವಟಿಕೆಗಳಲ್ಲಿ ತಮ್ಮನ್ನು ತೊಡಗಿಸಿಕೊಂಡು ಶಿಕ್ಷಣ ಸಂಸ್ಥೆಗಳನ್ನು ಸ್ಥಾಪಿಸಿದರು. ಈ ಶಾಲೆಗಳಿಗೆ ವಿದ್ಯಾರ್ಥಿಗಳನ್ನು ದಾಖಲುಗೊಳಿಸಿ ಅವರಿಗೆ ಸ್ವಾವಲಂಬನೆಯ ವೃತ್ತಿಯನ್ನು ಅನುಸರಿಸಲು ವೃತ್ತಿ ತರಬೇತಿಗಳನ್ನು ಆರಂಭಿಸಿದರು. ಗಂಡು ಮಕ್ಕಳು ಮತ್ತು ಹೆಣ್ಣು ಮಕ್ಕಳಿಗೆ ಪ್ರತ್ಯೇಕ ಶಾಲೆಗಳನ್ನು ತೆರೆದು ಆ ಮೂಲಕ ಮಕ್ಕಳು ಹೆಚ್ಚು ಶಾಲೆಗಳ ಕಡೆ ಮುಖ ಮಾಡುವಂತೆ ಪ್ರಯತ್ನಿಸಿದರು. ಶಿಕ್ಷಣವೆನ್ನುವುದು ಸೇವೆ ಎನಿಸಿಕೊಂಡಿದ್ದ ಆ ಕಾಲದಲ್ಲಿ ಉಚಿತ ಶಿಕ್ಷಣಕ್ಕೆ ಆದ್ಯತೆಯನ್ನು ನೀಡಲಾಗಿತ್ತು. ಶಾಲಾ ಪಠ್ಯಗಳೊಂದಿಗೆ

ಪೂರಕವಾಗಿ ಹೆಣ್ಣು ಮಕ್ಕಳಿಗೆ ನೇಯ್ಗೆ, ಹೊಲಿಗೆ, ಕಸೂತಿಗಳನ್ನು ಕಲಿಸಿದರು. ಗಂಡು ಮಕ್ಕಳಿಗೆ ಸಣ್ಣ ಪುಟ್ಟ ವೃತ್ತಿ ಕೌಶಲ್ಯಗಳನ್ನು ಕಲಿಸಿದರು.

ಚಾರಿತ್ರಿಕ ಮತ್ತು ಸಾಮಾಜಿಕವಾದ ಒಂದು ಕಾಲಘಟ್ಟದಲ್ಲಿ ಕರಾವಳಿಯಲ್ಲಿ 'ಕಾರ್ಖಾನೆಯಂಥ ಒಂದು ಸಂಸ್ಥೆ ಹುಟ್ಟಿಕೊಳ್ಳಲು ಕಾರಣವಾಯಿತು. ಕಚ್ಚಾ ಮಾಲು, ಸಿದ್ಧ ವಸ್ತುಗಳು, ಬಂಡವಾಳ ಈ ಮೂರು ಮೂಲ ಭೂತ ಅವಶ್ಯಕತೆಗಳೊಂದಿಗೆ ಮಾನವ ಶ್ರಮವೂ ಮುಖ್ಯವಾಗಿತ್ತು. ಮಿಶನರಿಗಳು ನಡೆಸಿದ ಕಾರ್ಯ ಚಟುವಟಿಕೆಗಳ ಬಗೆಗಿನ ಅಧ್ಯಯನವೂ ಮುಖ್ಯವಾದುದು. ಬಾಸೆಲ್ ಮಿಶನರಿ ಸಂಸ್ಥೆ ೧೮೪೦ ರಲ್ಲಿ ಮೊದಲ ಕಾರ್ಖಾನೆಯನ್ನು ಸ್ಥಾಪಿಸಲು ಪ್ರಯತ್ನಿಸಿದರೂ ಅದು ಯಶಸ್ವಿಯಾಗಲಿಲ್ಲ. ೧೮೪೬ ರಲ್ಲಿ ಇಂಡಸ್ಟ್ರೀಯಲ್ ಸ್ಕೂಲ್ ಆಫ್ ಮ್ಯಾಂಗಲೂರ್ ಸ್ಥಾಪನೆಯಾಯಿತು. ಇದು ಕಲಿಕಾ ಕೇಂದ್ರವಾಗಿದ್ದು ಉತ್ಪಾದನಾ ಕೇಂದ್ರವೂ ಆಗಿ ಕಾರ್ಯ ನಿರ್ವಹಿಸಿತು. ಮುಖ್ಯವಾಗಿ ನೇಕಾರಿಕೆ,ಬೀಗ ತಯಾರಿಕೆ ಮರದ ಕೆಲಸಗಳನ್ನು ಮಾಡಲು ಕಲಿಸುವ ಮತ್ತು ವಸ್ತುಗಳನ್ನು ಉತ್ಪಾದಿಸುವ ಕೆಲಸ ನಡೆಯಿತು. ೧೮೫೨ ರಲ್ಲಿ ಗಡಿಯಾರ ತಯಾರಿಕೆ ಮತ್ತು ಬೀಗ ತಯಾರಿಕೆಯ ಇನ್ನೊಂದು ಸಂಸ್ಥೆ ಸ್ಥಾಪನೆಯಾಯಿತು. ಅಂದು ಉತ್ಪಾದಿಸಿದ ವಸ್ತುಗಳ ಮಾದರಿಗಳ ಚಿತ್ರಗಳು ಬಾಸೆಲ್ ಮಿಶನರಿ ಆರ್ಕೈವ್‌ನಲ್ಲಿ ಲಭ್ಯವಿದೆ. ಕರಾವಳಿಯಲ್ಲಿ ತುಂಬಿ ಹರಿಯುತ್ತಿರುವ ನದಿಗಳ ಪಕ್ಕದಲ್ಲಿ ಅದರಲ್ಲೂ ನೇತ್ರಾವತಿ ನದಿ ತೀರದಲ್ಲಿ ಮೊದಲ ಹೆಂಚಿನ ಕಾರ್ಖಾನೆಯು ೧೮೬೫ ರಲ್ಲಿ ಸ್ಥಾಪನೆಗೊಂಡಿತು. ಇಲ್ಲಿ ತಯಾರಾದ ಹಂಚುಗಳು ಜಗತ್ತಿನಾದ್ಯಂತ ಮಂಗಳೂರು ಹಂಚುಗಳು ಎಂದೇ ಪ್ರಸಿದ್ಧವಾಗಿದೆ. ಹಂಚಿನ ಮಾದರಿಗಾಗಿ ಅಚ್ಚನ್ನು ತಮ್ಮ ತಾಯ್ನಾಡಿನಿಂದಲೇ ತಂದರು. ಆರಂಭದ ಹಂತದಲ್ಲಿನ ಹಂಚಿನ ಗಾತ್ರ ಮತ್ತು ವಿನ್ಯಾಸ ಅಲ್ಪಸ್ವಲ್ಪ ಬದಲಾವಣೆಗೊಂಡು ಇಂದಿಗೂ ಅದೇ ಸ್ವರೂಪದಲ್ಲಿ ಇದೆ.

ಮಿಶನರಿಗಳು ಕೈಗಾರಿಕೆಯನ್ನು ಸ್ಥಾಪಿಸುವುದಕ್ಕಾಗಿ ಅಲ್ಲಿಂದ ಇಲ್ಲಿಗೆ ಬಂದಿರಲಿಲ್ಲ ಅವರನ್ನು ಕಳುಹಿಸಿದ್ದು ಅಲ್ಲ. ಸಮಾಜ ಸೇವೆಯ ಹಿನ್ನೆಲೆಯಲ್ಲಿ ಈ ಕಾರ್ಯ ಚಟುವಟಿಕೆಯನ್ನು ಮಾಡಿದರು. ಮತಾಂತರಕ್ಕೆ ಒಳಗಾದ ಕೆಳವರ್ಗದ ಜನರನ್ನು ಭೂ ಮಾಲೀಕರು ಸಮುದಾಯದ ಒಳಗೆ ಸೇರಿಸಲಿಲ್ಲ. ಮತಾಂತರಕ್ಕೊಳಗಾದ ಅತಿ ಹೆಚ್ಚಿನ ಸಂಖ್ಯೆಯ ಬಿಲ್ಲವರು ಮತ್ತು ಅಸ್ಪ್ರಶ್ಯರು ತಾವು ಮಾಡುವ ಕೆಲಸಕ್ಕೆ ಅವಕಾಶ ಇಲ್ಲದಾಗ ಕೆಲಸವೂ ಇಲ್ಲದೆ ಕೂಲಿಯೂ ಇಲ್ಲದೆ ಕಂಗಾಲಾದರು. ಆಗ ಅವರಿಗೆ ಉತ್ಪಾದನೆಯ ಮೂಲ ಆರ್ಥಿಕತೆಯನ್ನು ಹುಟ್ಟು ಹಾಕುವುದಕ್ಕಾಗಿ ಇಂತಹ ಸಣ್ಣ ಪುಟ್ಟ ಉದ್ದಿಮೆಗಳನ್ನು ಸ್ಥಾಪಿಸಿದ್ದು, ನಂತರದಲ್ಲಿ ದೊಡ್ಡ ಪ್ರಮಾಣದಲ್ಲಿ ಬೆಳೆಯಲು ಕಾರಣವಾಯಿತು. ಇದು ಸಮಾಜ ಸೇವೆಯೇ ಆದರೂ ಅದರ ಹಿಂದಿನ ಉದ್ದೇಶ ಆರ್ಥಿಕತೆಯನ್ನು ವಿಸ್ತರಿಸುವುದೇ ಆಗಿತ್ತು.

೧೮೬೫ ರಲ್ಲಿ ಮಿಶನರಿಯಾದ ಚಾರ್ಲ್ ಜಾರ್ಜ್ ಆ್ಯಂಡ್ರೂ ಪೋಟ್ಸ್ ಸ್ಥಳೀಯವಾಗಿದ್ದ ಕುಂಬಾರಿಕೆಯ ತಂತ್ರಗಾರಿಕೆಯನ್ನು ಕಲಿತು ಅದನ್ನು ಪ್ರಯೋಗಶೀಲಗೊಳಿಸಿದರು. ನದಿ ಬದಿಯಜೇಡಿ ಮಣ್ಣು (ಆವೆ ಮಣ್ಣು) ಮಡಿಕೆ ಮಾಡಲು ಹೇಗೆ ಯೋಗ್ಯವೋ ಹಾಗೆಯೇ ಹಂಚು ತಯಾರಿಕೆಗೂ ಸಾಧ್ಯವೆಂದೂ ಪರೀಕ್ಷಿಸಿದರು. ಮೊದಲು ಈ ಯಂತ್ರದ ಚಲಾವಣೆಗೆ ಮಾನವ ಶ್ರಮ ಮತ್ತು ಎತ್ತುಗಳ ಬಳಕೆಯ ನಂತರ

ಸ್ಟೀಮ್ ಇಂಜಿನ್‌ನಿಂದ ಅದನ್ನು ಚಲಾಯಿಸಲಾಯಿತು. ೧೮೮೧ ರಲ್ಲಿ ಈ ಕಾರ್ಖಾನೆಯ ವಿನ್ಯಾಸವನ್ನು ವಿಸ್ತರಿಸಿಹೊಸ ರೂಪವನ್ನು ನೀಡಲಾಯಿತು. ಯಶಸ್ವಿ ನಿರ್ವಹಣೆಯ ಉತ್ಸಾಹದಿಂದ ೧೮೮೨ ರಲ್ಲಿ ಕುದುರೋಳಿಯಲ್ಲೂ ೧೮೮೬ ರಲ್ಲಿ ಮಲ್ಪೆಯಲ್ಲೂ ಹಂಚಿನ ಕಾರ್ಖಾನೆಗಳು ಸ್ಥಾಪನೆಯಾದವು. ರೆವೆರೆಂಡ್ ಮೆಟ್ಜ್ ರವರ ನೇತೃತ್ವದಲ್ಲಿ ಅಪರಿಚಿತವಲ್ಲದ ನೇಕಾರಿಕೆ ಕಾರ್ಖಾನೆಯಾಗಿ ಆರಂಭವಾದದ್ದು ೧೮೪೪ ರಲ್ಲಿ ಯುರೋಪಿನ ಕೈಗಾರಿಕಾ ಕ್ರಾಂತಿಯ ಪರಿಣಾಮ ಇಪ್ಪತ್ತೊಂದು ಲೂಮ್‌ಗಳನ್ನು ಸ್ಥಾಪಿಸಿದರು. ೧೮೭೧ ರಲ್ಲಿ ನಲ್ವತ್ತೊಂದು ಮತ್ತು ನಲ್ವತ್ತೆರಡು ಒಟ್ಟು ಎಂಭತ್ತಮೂರು ಘಟಕಗಳನ್ನು ಸ್ಥಾಪಿಸಿದರು. ಒಟ್ಟು ೮೩ ಘಟಕಗಳಲ್ಲಿ ೧೯೦೯ ರಲ್ಲಿ ಒಟ್ಟು ೨೧೪ ಜನ ಕೆಲಸಗಾರರು ಇದ್ದರು. ಇದಲ್ಲದೆ ಯಂತ್ರಗಳ ರಿಪೇರಿಗಾಗಿಯೂ ಮೆಕ್ಯಾನಿಕಲ್ ವರ್ಕ್ ಶಾಪ್‌ಗಳನ್ನು ೧೮೭೪ ರಲ್ಲಿ ಸ್ಥಾಪಿಸಿದರು. ಮೊದಲ ಮಹಾಯುದ್ಧದ ನಂತರ ಇಂತಹ ಕಾರ್ಖಾನೆಗಳು ಮತ್ತಷ್ಟು ವಿಸ್ತರಿಸಿದವು. ಕಲ್ಲಚ್ಚು ಯಂತ್ರಗಳನ್ನು ಬಳಸಿ ಪತ್ರಿಕಾಲಯಗಳ ಪುಸ್ತಕ ಪ್ರಕಾಶನ ಸಂಸ್ಥೆಗಳೂ ಹುಟ್ಟಿಕೊಂಡವು. ಹೀಗೆ ವಸಾಹತುಶಾಹಿ ಆಡಳಿತದ ಪ್ರಭಾವದಿಂದ ಮತ್ತು ಯುರೋಪ್‌ನಲ್ಲಾದ ಕೈಗಾರಿಕಾ ಕ್ರಾಂತಿಯ ಪರಿಣಾಮ ಕಾರ್ಖಾನೆಗಳು ಆಯಗಾರಿಕೆ ವೃತ್ತಿಗೆ ಪರ್ಯಾಯವಾಗಿ ಹುಟ್ಟಿಕೊಂಡವು. ಒಂದೆಡೆ ಕೃಷಿ ಚಟುವಟಿಕೆ ಅದಕ್ಕೆ ಪೂರಕವಾಗಿದ್ದ ಕುಲಕಸುಬಿನ ವೃತ್ತಿಗಳು ಅವುಗಳನ್ನು ಮೀರಿ ರಖಂ ಉತ್ಪನ್ನ ಮತ್ತು ಮಾರುಕಟ್ಟೆ ವ್ಯವಸ್ಥೆಯನ್ನು ಕಲ್ಪಿಸುವಂತಹ ಆರ್ಥಿಕತೆಯ ಪರಿಭಾಷೆಗಳು ಹುಟ್ಟಿಕೊಂಡವು. ಪರಿಣಾಮ ಭೂಮಿಯ ಆದಾಯದ ಮೇಲಿನ ಅವಲಂಬನೆಯನ್ನು ತಪ್ಪಿಸಿಕೊಳ್ಳಲು ಪ್ರಯತ್ನಿಸಲಾಯಿತು. ಭೂಮಿಯ ಆದಾಯಕ್ಕಿಂತ ಹೆಚ್ಚಿನ ಆದಾಯವನ್ನು ವ್ಯಾಪಾರ ಮತ್ತು ಕೈಗಾರಿಕೆಗಳಲ್ಲಿ ಪಡೆದುದರಿಂದ ಅದು ಹೆಚ್ಚು ಲಾಭದಾಯಕವೆನಿಸಿತು. ಹತ್ತೊಂಭತ್ತನೇ ಶತಮಾನದ ಅಂತ್ಯ ಮತ್ತು ನಂತರದಲ್ಲಿ ಆರ್ಥಿಕ ಚಟುವಟಿಕೆಗಳು ಕೈಗಾರಿಕೆಗಳು ಆರ್ಥಿಕ ಸಂಚಲನವನ್ನು ಉಂಟು ಮಾಡಿದವು.

ಕರಾವಳಿಯಲ್ಲಿ ಬೆಳೆಯುತ್ತಿದ್ದ ಬೆಳೆಗಳಿಗೆ ಅನುಗುಣವಾಗಿ ವಾಣಿಜ್ಯಿಕ ಬೆಳೆಗಳು ಮತ್ತು ಆಹಾರ ಬೆಳೆಗಳಿಗೆ ಪೂರಕವಾದ ಕಾರ್ಖಾನೆಗಳು ಸ್ಥಾಪನೆಗೊಂಡವು. ರಬ್ಬರ್,ಅಡಿಕೆ, ಕೋಕೋ ಮೊದಲಾದ ಬೆಳೆಗಳನ್ನು ಪ್ರಾಯೋಗಿಕವಾಗಿ ಬೆಳೆದು ಯಶಸ್ಸು ಕಂಡಾಗ ಆ ಬೆಳೆಗಳನ್ನು ಬೆಳೆವ ಪ್ರದೇಶಗಳನ್ನು ವಿಸ್ತರಿಸಿದರು. ಪರಿಣಾಮ ಪ್ರಕೃತಿಯ ವೈವಿಧ್ಯತೆಯ ಬದಲಾಗಿ ಏಕರೂಪದ ಬೆಳೆಗಳನ್ನೇ ಹೆಚ್ಚು ಬೆಳೆದರು. ಕುರುಚಲು ಗುಡ್ಡಗಳಲ್ಲಿ ಗೇರು, ಮಾವುಗಳನ್ನು ಬೆಳೆದುದರಿಂದ ಗೇರು ಕೃಷಿಯಿಂದ ಗೋಡಂಬಿ ಕಾರ್ಖಾನೆಗಳು ಕರಾವಳಿಯ ಮೂಲೆ ಮೂಲೆಗಳಲ್ಲಿ ಸ್ಥಾಪನೆಯಾಯಿತು. ಉಡುಪಿಯ ಬಳಿಯ 'ಪುಗೆರೆ ಬಾಬಣ್ಣ'ಎಂಬ ಹೆಸರು ಸೂಚಿಸುವಂತೆ ಅವರ ವೃತ್ತಿ ಅನ್ವರ್ಥವಾಗಿತ್ತು. ಹೊಗೆ ಸೊಪ್ಪು ಬೆಳೆಯದೆ ನಶ್ಯ ಗುದ್ದಲು ಮತ್ತು ತಯಾರಿಸಲು ಸಾಧ್ಯವಿಲ್ಲ ತಿಳಿದಿರಲೂ ಸಾಧ್ಯವಿಲ್ಲ. ಪೊಡಿತ ನರ್ಸಪ್ಪಣ್ಣನ ಅಂಗಡಿ ಇಂದು ಮಂಗಳೂರಲ್ಲಿ ಕೃಷ್ಣ ನಶ್ಯವಾಗಿ ಪ್ರಸಿದ್ಧವಾಗಿದೆ.

ಕೃಷಿ ಕಾರ್ಯಕ್ಕೆ ಪರ್ಯಾಯವಾಗಿ ಕಾರ್ಖಾನೆಗಳು, ದುಡಿಮೆಯ ಪರಿಭಾಷೆಗಳು ಬದಲಾದವು. ಆರಂಭದಲ್ಲಿ ಕೃಷಿ ಕಾರ್ಯವನ್ನು ಆರಂಭಿಸಿ ಭೂಮಿಯ ಒಡೆತನ ಪ್ರಾರಂಭಿಸಿದರು. ಮಿಷನರಿಗಳು ಈ

ನೆಲದಲ್ಲಿ ನೆಲೆ ಊರಲು ಮೊದಲು ಕೃಷಿಕರಾಗುವುದು ಅನಿವಾರ್ಯವಾಗಿತ್ತು. ಭೂಮಿಯ ಒಡೆತನ ಭೂಮಾಲಿಕತ್ವ ಆ ಕಾಲಕ್ಕೆ ಸುಲಭ ಸಾಧ್ಯವಾಗಿರಲಿಲ್ಲ. ಇಲ್ಲಿಯ ಜನರು ಭೂಮಿ ಮಾರುತ್ತಿರಲಿಲ್ಲ ಎಂಬ ತಮ್ಮ ಅನುಭವವನ್ನು ಮಿಶನರಿಗಳು ದಾಖಲಿಸುತ್ತಾರೆ. ಭೂಮಿಯ ಒಡೆತನವೂ ದೇವಸ್ಥಾನದ ಹೆಸರಲ್ಲಿ , ನಾಗನ ಹೆಸರಲ್ಲಿ ಇರುತ್ತಿದ್ದು ಜನರ ನಂಬಿಕೆಗಳ ಕಾರಣವಾಗಿ ಮಾರಾಟ ಮಾಡುತ್ತಿರಲಿಲ್ಲ. ಕುಟುಂಬದ ಹೆಸರಲ್ಲಿ ಭೂತಸಾನಗಳ ಹೆಸರಲ್ಲೂ ಗದ್ದೆಗಳು ಇರುತ್ತಿದ್ದವು. 'It would be best to get some rice field for a doyenof family because Indians are masters in cultivation of rice".( page No 207)

ಮೂಡುಬಿದಿರೆಯ ಸೋನ್ಸ್ ಪಾರ್ಮ್ ಬಗ್ಗೆ ಇರುವ ದಾಖಲೆಯನ್ನು ಗಮನಿಸಬೇಕು. 1910-12 Rev'Fischer purchased 46 Acere land of a Bhutastana for Rs 250/ (page no 208) 1926 ರವರೆಗೆ ಇಲ್ಲಿ ಏನೂ ಬೆಳೆಯಲಿಲ್ಲ. ಮಿಷನ್ ಫಾರ್ಮ್ ಆರಂಭಿಸಿ೨,೦೦೦ ತೆಂಗಿನ ಸಸಿ ನೆಟ್ಟಿದ್ದು ಹೊಸ ಪ್ರಯೋಗ ಶೀಲ ಮನೋಧರ್ಮವಾಗಿತ್ತು. ಅದಲ್ಲದೆ ಅಲಹಾಬಾದ್ ಅಗ್ರಿಕಲ್ಚರ್ ಯೂನಿವರ್ಸಿಟಿಯಲ್ಲಿ ಓದಿದ್ದ Ezekeil S.Bangera ಎಂಬ ಮಿಶನರಿಯು ನರ್ಸರಿ ಕೃಷಿ ಬಗ್ಗೆ ಪ್ರಯೋಗಾತ್ಮಕ ಪ್ರಯತ್ನ ಮಾಡಿದರು. ತೆಂಗಿನ ತೋಟವನ್ನು ಇನ್ನಷ್ಟು ವಿಸ್ತರಿಸಿದಾಗ ೧೯೨೮ ರಲ್ಲಿ ಅದನ್ನು ನೋಡಿಕೊಳ್ಳಲು Alfred .D. soans ರನ್ನು ನೇಮಿಸಲಾಯಿತು. ೧೯೩೦ ರಲ್ಲಿ ಕೃಷಿಯ ಬಗ್ಗೆ ಶಾಲೆ ತೆರೆದರು. ಬಹಳಷ್ಟು ಹೊಸತನ ಮತ್ತು ಪ್ರಯೋಗಶೀಲ ಕೃಷಿಯನ್ನು ಮಾಡಿ ಕೃಷಿಯನ್ನು ವಿಸ್ತರಿಸಿದರು. ಕಾಲಾಂತರದಲ್ಲಿ ಖಾಸಗಿ ಆಸ್ತಿ ಆಗಿ ಬದಲಾಯಿತು. ಇಂದು ಮೂಡಬಿದ್ರೆಯಲ್ಲಿರುವ ಪ್ರಖ್ಯಾತ ಸೋನ್ಸ್ ಫಾರ್ಮ್‌ನ ಮೂಲದ ಬಗ್ಗೆ ಹೀಗೆ ದಾಖಲೆ ಇದೆ.

ವಾಣಿಜ್ಯ ಉದ್ದೇಶಗಳಿಗೆ ಬೆಳೆಯೊಂದನ್ನು ಬೆಳೆಯುಲಾರಂಭಿಸಿದಾಗ ವೈವಿಧ್ಯದ ಬೆಳೆಗಳು ನಾಶವಾಗಿ ಏಕರೂಪದ ಬೆಳೆಗಳೇ ಅಭಿವೃದ್ಧಿ ಹೊಂದಿದವು. ಉಪ ಬೆಳೆ ಪರ್ಯಾಯ ಬೆಳೆಗಳಿಗಿಂತ ಪ್ರಾಮುಖ್ಯತೆ ಹೆಚ್ಚು. ಆದಾಯ ತರುವ ಬೆಳೆಗಳ ಕಡೆಗೇ ಸರಿಯಿತು. ಮನೆಯ ಅಡಿಗೆ ಮನೆಯ ಅವಶ್ಯಕತೆಗಳ ಹಿಂದೆ ಸರಿದು ಆರೋಗ್ಯದ ಚಿಂತನೆಗಳೂ ಮುನ್ನೆಲೆಗೆ ಬಾರದೆ ಕೇವಲ ಹೆಚ್ಚು ಲಾಭ ತರುವ ಬೆಳೆಗಳನ್ನೇ ಬೆಳೆದರು. ಕ್ರಿಮಿಕೀಟ, ರೋಗ ರುಜಿನಗಳು ಹೆಚ್ಚಾದಾಗ ರಾಸಾಯನಿಕಗಳನ್ನು ಸಿಂಪಡಿಸಿ ಉತ್ತಮ ಫಸಲನ್ನು ರೈತರು ನಿರೀಕ್ಷಿಸುವಂತಾಯಿತು. ಉದಾಹರಣೆಗೆ ಅಡಿಕೆ ಸಸಿಗಳನ್ನು ನೆಟ್ಟು ತೋಟ ಮಾಡುವಾಗ ಉಪ ಬೆಳೆಯಾಗಿ ಬೆಳೆದ ಬಾಳೆ ಕೊಕ್ಕೊ ,ವೀಳ್ಯೆದೆಲೆ ,ಕರಿಮೆಣಸುಗಳಲ್ಲಿ ಯಾವುದು ಹೆಚ್ಚು ಮಾರುಕಟ್ಟೆ ಬೆಲೆಯನ್ನು ಹೊಂದಿದೆ. ಅದರ ಮೇಲೆ ಆ ಬೆಳೆಗೆ ಒತ್ತನ್ನು ನೀಡುವುದು ಪ್ರಮುಖವಾಯಿತು. ಅಡಿಕೆಗೆ ಧಾರಣೆ ಇದ್ದ ಕಾಲಕ್ಕೆ ಎಕರೆಗಟ್ಟಲೆ ಅಡಿಕೆ ತೋಟಗಳನ್ನೇ ವಿಸ್ತರಿಸಿದರು. ಒಂದು ಕಾಲಕ್ಕೆ ಗುಡ್ಡ ಅಗೆದು ಗದ್ದೆ ಮಾಡಿ ಭತ್ತ ಬೆಳೆದವರು , ಗುಡ್ಡಗಳನ್ನು ಸಮತಟ್ಟುಗೊಳಿಸಿ ಅಡಿಕೆ ನೆಟ್ಟರು. ಕೃಷಿಯ ತಂತ್ರಗಾರಿಕೆ ಬದಲಾಗುವುದರೊಂದಿಗೆ ಕೃಷಿ ಸಂಸ್ಕೃತಿಯ ಮೂಲ ಆಶಯವೂ ಇದರಿಂದ ಪಲ್ಲಟಗೊಂಡಿತು. ಅತ್ಯಂತ ಎತ್ತರದ ಗುಡ್ಡಗಳಲ್ಲೂ

ವಾರ್ಷಿಕ ಬೆಳೆಯಾದ ಗೇರು ಕೃಷಿಯನ್ನು ಅಭಿವೃದ್ಧಿಪಡಿಸಿ ಕೀಟನಾಶಕವಾಗಿ ಸಿಂಪಡಿಸಿ ಎಂಡೋಸಲ್ಫಾನಿನ ಪಿಡುಗಿನ ಪ್ರತಿಫಲವನ್ನು ಹಲವು ದಶಕಗಳ ನಂತರವೂ ಮಾನವ ಕುಲ ಕರಾವಳಿಯಲ್ಲಿ ಅನುಭವಿಸುತ್ತಾ ಬರುತ್ತಿದೆ. ಆಹಾರದ ಬದಲಿಗೆ ದುಡ್ಡು ಕಾಸಿನ ವಾಣಿಜ್ಯ ಬೆಳೆಗಳಿಗೆ ಮಹತ್ವ ದೊರಕಿತು. ಮನುಕುಲದ ನಾಶಕ್ಕೆ ಮುನ್ನುಡಿ ಬರೆಯಿತು.

ಮೊದಲ ಹಂತದಲ್ಲಿ ಆಯಗಾರಿಕೆಗೆ ಪೂರಕವಾಗಿ ಕಾರ್ಖಾನೆಗಳು ಆರಂಭವಾದರೆ ಎರಡನೆಯ ಹಂತದಲ್ಲಿ ಆಯಗಾರಿಕೆಗೆ ಮಾರಕವಾದ ಕೈಗಾರಿಕೆಗಳು ಕಾಣಿಸಿಕೊಂಡವು. ಕೃಷಿಯನ್ನು ವಿಸ್ತರಿಸಲು , ಅಭಿವೃದ್ಧಿ ಪಡಿಸಲು, ಉತ್ಪಾದನೆಯನ್ನು ಹೆಚ್ಚಿಸಲು ಯಂತ್ರವಿಜ್ಞಾನ ಬಳಕೆಯಾಯಿತು. ಈ ಯಂತ್ರ ವಿಜ್ಞಾನ ನಿಧಾನವಾಗಿ ಸಣ್ಣ ಸಣ್ಣ ಕೌಶಲ್ಯದ ಅಂಶಗಳನ್ನು ನಾಶಪಡಿಸುತ್ತಾ ಕೃಷಿಯ ಕಾರ್ಯವನ್ನು ಸರಳವಾಗಿಸುವ ಮತ್ತು ದುಡಿಮೆಯನ್ನು ಕಡಿಮೆಗೊಳಿಸುವ ಹಂತಕ್ಕೆ ವಿಸ್ತರಿಸಿತು. ಉದಾ:– ಭತ್ತದ ಕೃಷಿಯಲ್ಲಿ ಪೈರು ಕಟಾವಿನಿಂದ ಭತ್ತದ ರಾಶಿಯನ್ನು ಹಾಕಿ ತುಪ್ಪೆ ಹಾಕುವವರೆಗಿನ ಶ್ರಮ ಅತ್ಯಂತ ದೀರ್ಘವಾದುದು. ಪೈರಿನ ಕಟಾವು ಅದನ್ನು ಸೂಡಿಗಳಾಗಿ ಕಟ್ಟುವುದು, ಪೈರನ್ನು ತಲೆಯ ಮೇಲೆ ಹೊರಬೇಕಾದರೆ ಕಟ್ಟುವ ಕಟ್ಟ , ಮನೆಯಂಗಳದಲ್ಲಿ ಹಾಕುವ ನೇಜಿ, ಪಡಿಮಂಚಕ್ಕೆ ಬಡಿಯುವ ಕಾರ್ಯ, ಭತ್ತವನ್ನು ರಾಶಿ ಮಾಡುತ್ತಲೇ ಬೈ ಹುಲ್ಲನ್ನು 'ಬೈತ್ತ ಮುಟ್ಟೆ'ಯಾಗಿ ರಥದಂತೆ ಜೋಡಿಸುವುದು. ಭತ್ತವನ್ನು ಒಕ್ಕಣೆ ಮಾಡುವ ದೀರ್ಘ ಚಟುವಟಿಕೆಗಳು ಇವೆಲ್ಲ ಬಹಳ ತಾಳ್ಮೆ ಮತ್ತು ಸೂಕ್ಷ್ಮವನ್ನು ಬಯಸುವ ಕಾರ್ಯಗಳು, ಮನೆಯಂಗಳದಲ್ಲಿ ಎಣೆಲು ಬೆಳೆಯ ಭತ್ತವನ್ನು 'ತುಪ್ಪೆ' ಹಾಕಿ ಸಂಗ್ರಹಿಸಬೇಕಾದರೆ ಅದಕ್ಕೆ ವಾರಗಟ್ಟಲೆಯ ಶ್ರಮವಿದೆ. ಬೈಹುಲ್ಲನ್ನು ಸ್ವಚ್ಚಗೊಳಿಸುವ , ಬೈಹುಲ್ಲಿನ ಹಗ್ಗ, ಪೆರ್ಮರಿ ಹೊಸೆಯುವ ಕೆಲಸಗಳಲ್ಲದೆ, ಭತ್ತವನ್ನು ತೂರುವ ಗಾಳಿಗೆ ಹಾರಿಸುವ ಮತ್ತು ಮಧ್ಯ ಮಧ್ಯದಲ್ಲಿ ಜಳ್ಳು ಕಾಳುಗಳನ್ನು ಮುಂದಿನ ಆವರಣಕ್ಕೆ ಗುಡಿಸುತ್ತ ಒಳ್ಳೆಯ ಭತ್ತವನ್ನು ಸಂಗ್ರಹಿಸಲಾಗುತ್ತದೆ ಇದನ್ನು ಪ್ರಾಕೃತಿಕವಾಗಿ ಕ್ರಿಮಿಕೀಟಗಳಿಂದ ಒಂದು ಆರು ತಿಂಗಳಿನಿಂದ ವರ್ಷದವರೆಗೆ ಸಂಗ್ರಹಿಸಲಾಗುತ್ತದೆ. ಮುಂದಿನ ಮಳೆಗಾಲಕ್ಕಿಂತ ಮೊದಲು ತುಪ್ಪೆಯನ್ನು ತೆಗೆದು ಅಕ್ಕಿ ಮಾಡಿದರಾಯಿತು. ಈ ಎಲ್ಲ ಕಾರ್ಯ ಚಟುವಟಿಕೆಗಳಲ್ಲಿ ಹಲವಾರು ಆಚರಣೆಗಳು, ನಂಬಿಕೆಗಳು, ವಿಧಿ ನಿಷೇಧಗಳು, ಸಂಪ್ರದಾಯಗಳು ಸೇರಿಕೊಂಡಿವೆ. ಮನೆಮಂದಿ ಎಲ್ಲರೂ ಸೇರಿ ದುಡಿಯುವ ಮತ್ತು ಜತೆಗೆ ಎಲ್ಲರೂ ಸಡಗರದಿಂದ ಕುಳಿತು ಉಣ್ಣುವ ಸಂಭ್ರಮವೂ ಈ ಕೆಲಸ ಕಾರ್ಯದ ಒಂದು ಭಾಗವಾಗಿತ್ತು. ಯಾವಾಗ ಭತ್ತದ ಕೊಯಿಲು ಮಾಡುವ ಯಂತ್ರವೊಂದು ಗದ್ದೆಯ ಹುಣಿಗೆ ಬಂತೋ ತಾಸು ಎರಡು ತಾಸಿನ ಗದ್ದೆಯ ಬದುವಿನಲ್ಲಿ ಕೊಯಿಲಿನಿಂದ ಒಕ್ಕಣೆ ಕೆಲಸ ನಡೆದು ಹೋಗುತ್ತದೆ. ಪೈರಿನ ತೆನೆಯನ್ನು ಕತ್ತರಿಸುವುದಕ್ಕೆ ಒತ್ತುಕೊಟ್ಟು ಕೆಳಗೆ ಬೀಳುವ ಭತ್ತ ಮತ್ತು ಬುಡವನ್ನು ಉಳಿದ ಬೈ ಹುಲ್ಲಿನ ಬಗ್ಗೆ ಗಮನ ಹರಿಸದೆ ಪೈರಿನಿಂದ ಭತ್ತವನ್ನು ಕ್ಷಣ ಮಾತ್ರದಲ್ಲಿ ಯಂತ್ರ ಬೇರ್ಪಡಿಸುತ್ತದೆ ಮಾತ್ರವಲ್ಲ ಭತ್ತದ ರಾಶಿಯೂ ತಾಸೆರಡು ತಾಸಲ್ಲಿ ಪೂರ್ಣವಾಗುತ್ತದೆ. ಬೆಳೆದ ಬೆಳೆ ಮನೆಯಂಗಳಕ್ಕೆ ಬರುವ ಅವಶ್ಯಕತೆಯೇ ಇಲ್ಲ. ಭತ್ತವನ್ನು ಅಲ್ಲಿಯೇ ಗೋಣಿ ಚೀಲಗಳಿಗೆ ತುಂಬಿ ಅಕ್ಕಿಯ ಮಿಲ್ಲುಗಳೆಡೆಗೆ ಲಾರಿಗಳಲ್ಲಿ ರವಾನಿಸಲಾಗುತ್ತದೆ. ವಾರ ಎರಡು ವಾರಗಳಲ್ಲಿ ಅಕ್ಕಿ ಬೇಕಾದರೆ ತರಬಹುದು. ಇಲ್ಲವಾದರೆ ಭತ್ತವನ್ನು ಅಲ್ಲೇ ಮಿಲ್‌ನಲ್ಲಿ

ವಿಲೇವಾರಿ ಮಾಡಬಹುದು. ಒಂದೆಡೆ ಮಾನವ ಶ್ರಮ ಬಹಳಷ್ಟು ಕಡಿಮೆಯಾಯಿತು. ಇನ್ನೊಂದೆಡೆ ಜೀವನ ಕ್ರಮ ಕೌಶಲ್ಯಗಳ ನಾಶದ ಜತೆಗೆ ಬದುಕಿನ ಭಾಗವಾಗಿದ್ದ ಸಡಗರ ಸಂಭ್ರಮಗಳು ಕಾಣೆಯಾಗಿ ಕೇವಲ ನೋಟಿನ ಕಂತೆಗಳ ಲೆಕ್ಕಚಾರವೇ ಮುಖ್ಯವಾಯಿತು. ಕೃಷಿ ಲಾಭದಾಯಕವಲ್ಲ, ಏನೂ ಪ್ರಯೋಜನವಿಲ್ಲ. ಇದೆಲ್ಲಕ್ಕಿಂತ ಮಾರುಕಟ್ಟೆಯ ಖರೀದಿಯೇ ಸುಲಭ ಎಂಬ ವಾವಹಾರಿಕ ಚಿಂತನೆಗಳೂ ಮುಖ್ಯವಾದವು. ಬದುಕಿನ ಬಂಧ ಮತ್ತು ಮೌಲ್ಯಗಳೂ ಕಣ್ಣೆದುರೇ ಅಪಮೌಲ್ಯಗಳಾಗಿ ಪರಿವರ್ತನೆ ಹೊಂದಿದವು.

ಮೂರನೆಯ ಹಂತದಲ್ಲಿ ಕೃಷಿ ಭೂಮಿಯನ್ನೇ ಕಾರ್ಖಾನೆಗಳನ್ನಾಗಿ ಪರಿವರ್ತನೆ ಮಾಡಲಾಯಿತು. ಚರಿತ್ರೆಯ ಕಾಲದಿಂದಲೂ ಕರಾವಳಿಯ ಕಡಲ ತೀರ ವ್ಯಾಪಾರಕ್ಕೆ ತೆರೆದ ಬಾಗಿಲಾಗಿತ್ತು. ಮಂಗಳೂರು ಬಾರಕೂರಿನ ಬಂದರುಗಳ ಮೂಲಕ ಗ್ರೀಕ್, ಅರಬ್ ದೇಶಗಳಲ್ಲದೆ ಪಾಶ್ಚಿಮಾತ್ಯ ದೇಶಗಳು ಸಂಪರ್ಕದ ಸಾಧನವಲ್ಲದೆ ವ್ಯಾಪಾರದ ಕೇಂದ್ರಗಳಾಗಿಯೂ ಬೆಳೆದು ಬಂದಿದ್ದವು. 'ಬೆನ್ನಿ' ಮತ್ತು 'ಬೇರ' ಕರಾವಳಿಯ ಎರಡು ಜೀವನ ಕ್ರಮಗಳಾಗಿ ಹಿಂದಿನಿಂದಲೂ ಬಾಳುತ್ತಾ ಬಂದಿದ್ದಾರೆ. ಬೆನ್ನಿ (ಕೃಷಿ) ಗೆ ಪರ್ಯಾಯವಾಗಿ ಬೇರ (ವ್ಯಾಪಾರ) ಇರಲಿಲ್ಲ.

ರಾಷ್ಟ್ರೀಯ ಚಳುವಳಿ, ವಸಾಹತುಶಾಹಿ ಆಡಳಿತ ನಂತರದಲ್ಲಿ ಸ್ವತಂತ್ರಗೊಂಡ ಭಾರತ ಹೊಸ ಆರ್ಥಿಕ ನೀತಿಗಳು ರಾಷ್ಟ್ರದಲ್ಲಿ ಹಸಿರುಕ್ರಾಂತಿಯೊಂದಿಗೆ ಕೈಗಾರಿಕೆಗಳಿಗೂ ಒತ್ತನ್ನು ನೀಡಿದವು. ಅತ್ಯಂತ ವಿಸ್ತಾರವಾದ ಕೃಷಿ ಭೂಮಿಯನ್ನು ಹೊಂದಿದ ಪಾಳೇಗಾರರೊಂದಿಗೆ , ಸಣ್ಣ ಹಿಡುವಳಿದಾರರೂ ಇದ್ದರು. ಆರಂಭದಲ್ಲಿ ಕೃಷಿಗೆ ಪೂರಕವಾಗಿದ್ದ ಸಣ್ಣ –ಪುಟ್ಟ ಕೈಗಾರಿಕೆಗಳು ಸ್ಥಾಪನೆಗೊಂಡವು. ಈಗಾಗಲೇ ಚರ್ಚಿಸಿರುವಂತೆ ಕೃಷಿಯನ್ನು ಉತ್ತೇಜಿಸುವ, ವಿಸ್ತರಿಸುವ ಹಂತವನ್ನು ದಾಟಿ ಕೃಷಿ ಭೂಮಿಯೇ ಕೈಗಾರಿಕೆಯ ಸ್ಥಳವಾಗಿ ಪರಿವರ್ತನೆ ಹೊಂದಿತು. ನದಿ ಬದಿಯ ಬೈಲುಗಳಲ್ಲದೆ ಅಳಿವೆ ಬಾಗಿಲುಗಳಲ್ಲಿರುವ ಸಮುದ್ರ ಬದಿಯ ಭೂಮಿಗಳನ್ನು ಪ್ರಾಯೋಜನಿಕ ದೃಷ್ಟಿಯಿಂದ ನೋಡಲಾಯಿತು. ಮಂಗಳೂರಿನಲ್ಲಿ ಸಹಜ ಬಂದರು ಇಲ್ಲದೆ ಕೃತಕ ಬಂದರಿನ ನಿರ್ಮಾಣವಾಗಿ ವ್ಯಾಪಾರವನ್ನು ವೃದ್ಧಿಸಬೇಕಾದರೆ ಪಣಂಬೂರಿನ ಸಾವಿರಾರು ಎಕರೆ ಕೃಷಿ ಭೂಮಿಯನ್ನು ಒಕ್ಕಲೆಬ್ಬಿಸಲಾಯಿತು. ಅಲ್ಲೇ ಸಮೀಪದಲ್ಲಿ ಕೃಷಿಗೆ ಪೂರಕವಾದ ರಸಗೊಬ್ಬರ ಕಾರ್ಖಾನೆಯಾದ ಎಂ.ಸಿ.ಎಫ್ ಸ್ಥಾಪನೆಗೊಂಡಿತು. ಕೃಷಿಕರಿಗೆ ರಾಸಾಯನಿಕ ಗೊಬ್ಬರವನ್ನು ಒದಗಿಸಿ ಕೃಷಿಯನ್ನು ಉತ್ತೇಜಿಸುವುದಾದರೂ ಕಾರ್ಖಾನೆಗಾಗಿ ಮತ್ತೆ ವಿಸ್ತಾರವಾದ ಭೂಮಿ ಒತ್ತುವರಿಯಾಯಿತು. ಸಮೀಪದಲ್ಲೇ ಕುದುರೆಮುಖ ಅದಿರು ಕಂಪೆನಿ ಕುದುರೆಮುಖದ ಅದಿರನ್ನು ಕರಗಿಸಿ ವಿದೇಶಕ್ಕೆ ರಫ್ತು ಮಾಡಲು ಪೂರಕವಾಗಿ ನಿರ್ಮಾಣಗೊಂಡಿತು. ಮುಖ್ಯ ಕಾರ್ಖಾನೆಗಳಿಗೆ ಪೂರಕವಾದ ಸಲಕರಣೆಗಳನ್ನು ಉತ್ಪಾದಿಸಲು ಬೈಕಂಪಡಿಯಲ್ಲಿ ಕೈಗಾರಿಕಾ ಪ್ರಾದೇಶಿಕ ಕೇಂದ್ರ ಮತ್ತೆ ಕೃಷಿ ಭೂಮಿಯ ಒತ್ತುವರಿಯಿಂದಲೇ ನಿರ್ಮಾಣಗೊಂಡಿತು. ಕಾಲ ಕಳೆದಂತೆ ವ್ಯಾಪಾರಕ್ಕೆ ಅನುಗುಣವಾಗಿ ಸಾರಿಗೆ ಸಂಪರ್ಕಗಳು ವಿಸ್ತರಣೆಗೊಂಡಿತು. ರಸ್ತೆ, ಜಲ, ವಾಯು, ರೈಲ್ವೆ ಸಾರಿಗೆಗಳನ್ನು ಮೇಲ್ದರ್ಜೆಗೇರಿಸಬೇಕಾದರೂ ಭೂಮಿಯ ಅವಶ್ಯಕತೆ ಇದೆ. ಶ್ರೀನಿವಾಸ ಮಲ್ಯರಂಥಹ ಹಿರಿಯ ಮುತ್ಸದ್ದಿ ರಾಜಕಾರಣಿ, ಕರಾವಳಿಯ ಅಭಿವೃದ್ಧಿಯ ದೃಷ್ಟಿಯಿಂದಲೇ ಇವೆಲ್ಲದರ ಜತೆಗೆ ರಾಷ್ಟ್ರೀಯ ತಾಂತ್ರಿಕ ಮಹಾ ವಿದ್ಯಾಲಯವನ್ನು ಮಂಜೂರುಗೊಳಿಸಿದರು.

ವ್ಯವಹಾರ ವಿಸ್ತರಣೆಯಾದಂತೆ ಕರಾವಳಿಯಲ್ಲಿ ಪ್ರಮುಖ ನಾಲ್ಕು ಬ್ಯಾಂಕುಗಳು ಸ್ಥಾಪನೆಗೊಂಡವು. ಉಡುಪಿ– ಮಣಿಪಾಲ– ಮಂಗಳೂರು ಪ್ರಮುಖ ನಗರಗಳಾಗಿಯೂ ಬೆಳೆಯುತ್ತಾ ಬಂದವು. ಕ್ರಮೇಣ ರಸ್ತೆ, ರೈಲು, ಜಲ ವಾಯು ಸಾರಿಗೆ ಈ ಪ್ರದೇಶದ ಉಳಿದ ಕಾರ್ಖಾನೆಗಳ ಪ್ರವೇಶಕ್ಕೂ ರಾಜಮಾರ್ಗವಾಗಿ ಪರಿಣಮಿಸಿತು. ೧೯೮೦ ರ ದಶಕದಲ್ಲಿ ಯೋಜನೆ ರೂಪಿಸಿ ೧೯೯೦ ರಲ್ಲಿ ಭೂಮಿ ಒತ್ತುವರಿ ಮಾಡಿಕೊಂಡ ಎಂ.ಆರ್.ಪಿ.ಎಲ್ ಸಂಸ್ಥೆ ಒಂದೇ ಬಾರಿಗೆ ಏಳು ಗ್ರಾಮಗಳನ್ನು ತನ್ನ ಕಾರ್ಖಾನೆಯ ನೆಲವನ್ನಾಗಿಸಿಕೊಳ್ಳಲು ಯಶಸ್ವಿಯಾಯಿತು. ನಾಲ್ಕು ಸುತ್ತಲೂ ಆವರಿಸಿಕೊಂಡಿದ್ದ ಗುಡ್ಡ ಸಾಲುಗಳು ಮಧ್ಯದಲ್ಲಿ ವಿಸ್ತಾರವಾದ ಪದವುಗಳು ವಾಯು ಮಾರ್ಗದ ಹೆಲಿಕಾಪ್ಟರ್‌ಗಳಿಂದಲೇ ಸರ್ವೆ ಮಾಡಿಕೊಂಡು ಜನ ವಸತಿ ಇಲ್ಲದ ಭೂಮಿ ಕೃಷಿ ಭೂಮಿಯಲ್ಲ ಎಂಬ ಧೃಢೀಕರಣದ ಪತ್ರಗಳಿಂದ ಸಾವಿರಾರು ಎಕರೆ ಪ್ರದೇಶದಲ್ಲಿ ಕಾರ್ಖಾನೆ ಸ್ಥಾಪನೆಗೊಂಡಿತು. ಕೃಷಿಯಿಂದ ಲಾಭ ಇಲ್ಲ ಎಂಬ ವಾದಗಳ ಮಧ್ಯೆ ಕಾರ್ಖಾನೆಗಳು ಬಂದರೆ ಉದ್ಯೋಗ ಲಭಿಸುತ್ತದೆ ಎಂಬ ಆಸೆಯನ್ನು ಜನರಲ್ಲಿ ಬಿತ್ತಿ ಜನ ತಾವಾಗಿಯೇ ತಮ್ಮ ಭೂಮಿಗಳನ್ನು ಕೈಗರಿಕಾ ಅಭಿವೃದ್ಧಿ ಮಂಡಳಿಗೆ ಹಸ್ತಾಂತರಿಸಿದರು. ಒಂದಿಷ್ಟು, ಸಂಘರ್ಷಗಳಾದರೂ ಲಾಭಗಳೇ ಕಣ್ಣ ಮುಂದೆ ಬಂದು ಹೋರಾಟ ಸಮಿತಿಗಳೆಲ್ಲ ಲಾಭಕೋರ ಗುಂಪುಗಳಾಗಿ ಹಿಂದೆ ಸರಿದವು. ಭೂಮಿ ಹಂತ ಹಂತವಾಗಿ ಒತ್ತುವರಿಯಾಯಿತು. ಗ್ರಾಮದೊಳಗೆ ಯಾವುದೇ ವಾಹನಗಳನ್ನು ಬಿಡುವುದಿಲ್ಲ ಎಂದವರಿಗೆ ಸರಕಾರಿ ಜಮೀನನ್ನು ಅತಿಕ್ರಮಿಸಿ ಸಾಲ ಮಾಡಿ ಗೇರು ಕೃಷಿ ಮಾಡಿದವರು ನಮ್ಮ ಭೂಮಿಯನ್ನೇ ಮೊದಲು ಸಮತಟ್ಟುಗೊಳಿಸಿ ಎಂದರು. ಪಾರಂಪರಿಕವಗಿ ಇದ್ದ ಭೂಮಿಯ ನಕಾಶೆ ಕ್ಷಣ ಮಾತ್ರದಲ್ಲಿ ಬದಲಾಗುವುದಕ್ಕೂ ಸಾಧುವಾಯಿತು. ಪರಿಣಾಮ ಎಂ.ಆರ್.ಪಿ.ಎಲ್ ಕಾರ್ಖಾನೆಗೆ ೧೮೦೪ ಎಕರೆ ಕೃಷಿ ಭೂಮಿ ಒತ್ತುವರಿಯಾಯಿತು.

ಸ್ವಾತಂತ್ರ ನಂತರದ ದಿನಗಳಲ್ಲಿ ಮಣಿಪಾಲದ ಗುಡ್ಡಗಳನ್ನು ಸಮತಟ್ಟುಗೊಳಿಸಿ ಶಿಕ್ಷಣ ಸಂಸ್ಥೆಯನ್ನು, ಬ್ಯಾಂಕ್ ಪತ್ರಿಕಾ ಸಂಸ್ಥೆಗಳನ್ನು ಸ್ಥಾಪಿಸಿದ ಪೈ ಬಂಧುಗಳು ಊರನ್ನೇ ಅಂತರಾಷ್ಟ್ರೀಯ ಮಟ್ಟದ ಗುಣಮಟ್ಟಕ್ಕೆ ಏರಿಸಿದರು. ಅದರೊಂದಿಗೆ ಸುತ್ತ ಮುತ್ತಲಿನ ಹಳ್ಳಿಗಳು ನಗರಗಳಾಗಿ ವಿಸ್ತರಿಸಿದಲ್ಲದೆ ಆ ಸಂಸ್ಥೆಗಳಿಗೆ ಪೂರಕವಾದ ಕಸುಬುದಾರಿಕೆಯನ್ನು ಮಾಡುವ ಸಣ್ಣ ಸಣ್ಣ ಕೈಗಾರಿಕೆಗಳೂ ಸ್ಥಾಪನೆಗೊಂಡವು. ಉಡುಪಿ– ಮಂಗಳೂರುಗಳ ಮಧ್ಯದಲ್ಲೂ ಕೊಜೆಂಟ್ರಿಕ್ಸ್, ಸುಜ್ಲಾನ್‌ನಂತಹ ಅಣು ವಿದ್ಯುತ್ ಸ್ಥಾವರಗಳು ಸ್ಥಾಪನೆಗೊಂಡವು. ಪರಿಸರಕ್ಕೆ ಹಾನಿಕಾರಕವಾದ ಹಾರು ಬೂದಿಯಿಂದ ಸಸ್ಯ ಸಂಪತ್ತೇ ನಾಶವಾಗುವಂತಹ ಕಾರ್ಖಾನೆಗಳು ವಿಸ್ತರಣೆಗೊಂಡವು.

ಆರಂಭದಲ್ಲಿ ಬಂದಿರುವ ಕಾರ್ಖಾನೆಗಳು ಅಭಿವೃದ್ಧಿಯ ಕೈಗನ್ನಡಿಯಾಗಿ ಗುರುತಿಸಲ್ಪಟ್ಟರೆ ಎರಡನೆ ಹಂತದಲ್ಲಿ ವಿದೇಶಗಳಲ್ಲಿ ನಿಷೇಧಿಸಲ್ಪಟ್ಟ ಬಿ.ಎ.ಎಸ್.ಎಫ್ ನಂತಹ ಕಾರ್ಖಾನೆಗಳೂ ಕರಾವಳಿಯಲ್ಲಿ ಸದ್ದಿಲ್ಲದೆ ತಳವೂರಿದವು. ಇಪ್ಪತ್ತೊಂದನೇ ಶತಮಾನದ ಕೊಡುಗೆಯಾಗಿ ಬಂದ ವಿಶೇಷ ಅರ್ಥಿಕ ವಲಯ ಆರಂಭದಲ್ಲಿ ಎರಡು ಸಾವಿರ ಎಕರೆ ಮತ್ತೆ ವಿಸ್ತರಣಾ ಭಾಗವಾಗಿ ಎರಡು ಸಾವಿರ ಎಕರೆ ಜಮೀನು ಒತ್ತುವರಿಯಾಯಿತು. ಎಂ.ಆರ್.ಪಿ.ಎಲ್ ನಂತಹ ಬೃಹತ್ ಕಾರ್ಖಾನೆಯ ಉಪ ಉತ್ಪನ್ನಗಳನ್ನು ವಿಲೇವಾರಿ ಮಾಡುವುದಲ್ಲದೆ

ಒ.ಎನ್.ಜಿ.ಸಿ, ಜೆ.ಬಿ.ಎಫ್ ನಂತಹ ಕಾರ್ಖಾನೆಗಳು ತಲೆ ಎತ್ತಿ ನಿಂತವು. ಕಾರ್ಖಾನೆ ತನ್ನ ಗಾತ್ರ ಮತ್ತು ಪಾತ್ರಗಳನ್ನು ವಿಸ್ತರಿಸುತ್ತ ಹೋದಂತೆ ಮತ್ತಷ್ಟು ಕೃಷಿ ಭೂಮಿ ಕಾರ್ಖಾನೆಗಳ ಒಡಲು ಸೇರುತ್ತಿವೆ. ಎಂ.ಆರ್.ಪಿ.ಎಲ್‌ನ ಮೂರನೇ ಫೇಸ್‌ಗಾಗಿ ಮತ್ತೆ ಒಂದು ಸಾವಿರದ ನಾಲ್ಕುನೂರು ಎಕರೆ ಭೂಮಿ ನೋಟಿಫಿಕೇಶನ್‌ಗೆ ಸಜ್ಜಾಗಿದೆ.

ಕರಾವಳಿಯಲ್ಲಿ ಐಟಿಬಿಟಿ ಕಂಪೆನಿಗಳಿಗೂ ಬರವಿಲ್ಲ. ಮುಡಿಪುವಿನಲ್ಲಿ ಸ್ಥಾಪಿತವಾದ ಇನ್‌ಫೋಸಿಸ್ ಸಂಸ್ಥೆ ನೂರಾರು ಎಕರೆ ಭೂಮಿಯನ್ನು ಆವರಿಸಿದೆ. ಒಂದೆಡೆ ಅಭಿವೃದ್ಧಿ, ಇನ್ನೊಂದೆಡೆ ಉದ್ಯೋಗದ ಲಾಲಸೆ ಕಾರ್ಖಾನೆಗಳನ್ನು ಕೈ ಬೀಸಿ ಆಹ್ವಾನಿಸಿದರೂ ಕರಾವಳಿಯ ಉದ್ಯೋಗಾರ್ಥಿಗಳು ಊರು ಬಿಟ್ಟು ತೆರಳುವುದು ಅನಿವಾರ್ಯವೇ ಆಗಿದೆ. ಕರಾವಳಿ ಇಂದು ಕರ್ನಾಟಕದಲ್ಲಿಯೇ ಬೆಂಗಳೂರಿನ ನಂತರದ ಅತಿ ದೊಡ್ಡ ನಗರವಾಗಿದೆ. ಒಂದೆಡೆ ಬೆಳೆಯುತ್ತಿರುವ ನಗರ ಸಂಸ್ಕೃತಿ, ಹೆಚ್ಚುತ್ತಿರುವ ಜನಸಾಂದ್ರತೆ, ವಸತಿ ಸಂಕೀರ್ಣಗಳೂ , ಮಾಲ್‌ಗಳು ಅಂಗಡಿ ಮುಗ್ಗಟ್ಟುಗಳು ಮತ್ತೆ ಕೃಷಿ ಭೂಮಿಯನ್ನು ಆವರಿಸಿಕೊಂಡಿದೆ. ಪ್ರತಿಯೊಂದು ಹಂತದಲ್ಲೂ ಗದ್ದೆ ಸಾಗುವಳಿಯ ಭೂಮಿಗಳೇ ಒತ್ತುವರಿಯಾಗುತ್ತಿದ್ದು, ಗದ್ದೆ ಇಲ್ಲವೇ ನೀರು ನಿಂತ ಪಟ್ಲ ಗದ್ದೆಗಳು ನಿಷ್ಪ್ರಯೋಜಕ ಅದನ್ನು ಲಾಭದ ಬಾಬತ್ತನ್ನಾಗಿ ಮಾಡಬೇಕಾದರೆ ಆ ಗದ್ದೆಗಳಿಗೆ ಮಣ್ಣು ತುಂಬಿ ಸೈಟುಗಳಾಗಬೇಕು ಎಂಬ ಯೋಜನೆಯೂ ಇದೆ. ಇಂದು ಕರಾವಳಿಯಲ್ಲಿದ್ದ ಕೈಗಾರಿಕೆಗಳೂ ಎಲ್ಲಿಯವರೆಗೆ ವಿಸ್ತರಿಸಿದೆಯೆಂದರೆ ತೂಗಿ ತೊನೆಯುತ್ತಿದ್ದ ಬತ್ತದ ಗದ್ದೆಗಳೆಲ್ಲ ನೋಡ ನೋಡುತ್ತಿದ್ದಂತೆ ಮಟಾ ಮಾಯವಾಗಿ ರಸ್ತೆಯುದ್ದಕ್ಕೂ ಕಾಂಕ್ರಿಟ್ ಕಾಡುಗಳೇ ಗೋಚರಿಸುತ್ತವೆ. ಕೃಷಿಯನ್ನು ಮರೆಯಾಗಿಸುವಷ್ಟು ಕಾಣೆಯಾಗುವ ಹಂತಕ್ಕೆ ತಂದು ತಲುಪಿದೆ. ಕೃಷಿಗೆ ಪೂರಕವಾಗಿ ಆಯಗಾರಿಕೆಯ ಕುಲಕಸುಬಿನ ಜೊತೆ ಜೊತೆಗೆ ನಡೆಸುತ್ತಿದ್ದ ಕಾರ್ಖಾನೆಗಳ ಚಟುವಟಿಕೆಗಳು ಇಂದು ಜೀವನಾಶಕವಾಗಿ ಬೆಳೆಯುತ್ತಿವೆ. ಕೃಷಿಯನ್ನು ನಾಶ ಮಾಡುವುದರೊಂದಿಗೆ ಸಂಸ್ಕೃತಿಯ ಮೌಲ್ಯಗಳು, ಚಿಂತನೆಗಳು, ಜೀವನ ಕ್ರಮಗಳು ಎಲ್ಲವೂ ಪಲ್ಲಟಗೊಳ್ಳುತ್ತಿವೆ. ಆಧುನಿಕತೆ ಮತ್ತು ಅಭಿವೃದ್ಧಿಯ ಹೆಸರಿನಲ್ಲಿ ಸಾಗುತ್ತಿರುವ ಈ ಹಾದಿಯನ್ನು ನಿರ್ಬಂಧಿಸಲು ಸಾಧ್ಯವಿಲ್ಲದ ವ್ಯವಸ್ಥೆಯಾದರೂ, ಉಣ್ಣುವ ಅನ್ನವನ್ನು ಯಾವ ಕಾರ್ಖಾನೆಯಿಂದ ತರಬಹುದು ಎಂಬ ಪ್ರಶ್ನೆ ಮೂಡುತ್ತಿವೆ.

**೩.೩ ಕೃಷಿ ಸಂಸ್ಕೃತಿ ಮತ್ತು ವೃತ್ತಿ ಪಲ್ಲಟ**

ಆಹಾರದ ಸಂಗ್ರಹಣೆಯಿಂದ ಆಹಾರದ ಉತ್ಪಾದನೆಯೆಡೆಗೆ ಹೆಜ್ಜೆ ಇರಿಸಿದ ಅನ್ವೇಷಣೆಗೊಂಡ ಕೃಷಿ ಬದುಕಿನಲ್ಲಿ ಪ್ರಯೋಗಶೀಲತೆಗಳೂ ನಿತ್ಯವೂ ನಡೆಯುತ್ತಲೇ ಸಾಗಿದವು. ಕೃಷಿಯನ್ನು ಅನ್ವೇಷಿಸಿದಾಗ ಅದಕ್ಕೆ ಪೂರಕವಾದ ಆಯಗಾರಿಕೆಯ ವೃತ್ತಿಗಳೂ ಹುಟ್ಟಿಕೊಂಡವು. 'ಕುಮೆರಿ ಕೃಷಿ'ಯಿಂದ ತೊಡಗಿ ಒಳ್ಳೆಯ ಫಲವತ್ತಾದ ಫಸಲನ್ನು ಪಡೆಯುವ ವೈವಿಧ್ಯದ ಆಧುನಿಕ ಕೃಷಿ ಜಗತ್ತನ್ನು ಗಮನಿಸಿದಾಗ ಇದು ಸತ್ಯ. ಬಿತ್ತುವುದು, ಬೆಳೆಯುವುದು ಈ ಎರಡು ಕಾರ್ಯ ಚಟುವಟಿಕೆಗಳ ಮಧ್ಯೆ ನೂರಾರು ಸಣ್ಣ-ದೊಡ್ಡ – ಕೆಲಸಗಳಿಗೆ ಪೂರಕವಾಗಿ ವೃತ್ತಿಗಳು ನಿರ್ಮಾಣಗೊಂಡವು. ಕಾಡಿನಲ್ಲಿ ಅಲೆಮಾರಿಗಳಾಗಿ ವಾಸಿಸುತ್ತಿದ್ದವರನ್ನು, ಬುಡಕಟ್ಟಿನ ಜನರನ್ನು ಕೃಷಿ ಕೂಲಿ ಕಾರ್ಮಿಕರನ್ನಾಗಿ ನಾಡಿಗೆ ಕರೆತರಲಾಯಿತು. ಆಹಾರದ ಅಗತ್ಯಕ್ಕಾಗಿ

ಅವರು ಸ್ಥಿರವಾಸಿಗಳಾಗಿ ಪರಿವರ್ತನೆ ಹೊಂದಿದರು. ಕಾಡು ಮತ್ತು ನಾಡಿನ ಸಂಪರ್ಕವನ್ನು ಹೊಂದಿ ಕಾಡುತ್ಪತ್ತಿಗಳನ್ನು ಬಳಸುತ್ತಲೇ ಉತ್ಪಾದಕ ವರ್ಗದಲ್ಲಿ ಗುರುತಿಸಿಕೊಳ್ಳದೆ ಬಾಳುತ್ತಿದ್ದರು. ಇವರಲ್ಲಿ ಭೂಮಿಯ ಒಡೆತನ ಇರಲಿಲ್ಲ. ಭೂ ಮಾಲಿಕರ ಅಧೀನದಲ್ಲಿ ಕೃಷಿ ಕೂಲಿ ಕಾರ್ಮಿಕರಾಗುವುದು ಅನಿವಾರ್ಯವಾಗಿತ್ತು. ಅಸ್ಪೃಶ್ಯರಾಗಿ ನಡೆಸಿಕೊಂಡ ಇವರನ್ನು ಜೀತದಾಳುಗಳನ್ನಾಗಿಯೂ ದುಡಿಸಿಕೊಳ್ಳಲಾಯಿತು. ಜೀತ ನಿರಂತರವಾಗಿ ಮುಂದುವರಿದು ಅವರ ಶ್ರಮಕ್ಕೆ ಬೆಲೆ ಇಲ್ಲದಂತಾಯಿತು. ಮಾನವ ಶ್ರಮವನ್ನು ಎಲ್ಲ ನೆಲೆಯಲ್ಲಿಯೂ ಬಳಸಿಕೊಂಡು ಅವರನ್ನು ಭೂರಹಿತರನ್ನಾಗಿ ಕೂಲಿಯಿಲ್ಲದೆ ಕಾರ್ಮಿಕರನ್ನಾಗಿಯೇ ಉಳಿಸಿಕೊಳ್ಳಲಾಯಿತು.

ಕೃಷಿ ಸಂಸ್ಕೃತಿ ವಿಸ್ತರಣೆಗೊಂಡಂತೆಲ್ಲ ಉತ್ಪಾದನೆಯನ್ನು ಹೆಚ್ಚುಗೊಳಿಸಿ ಆದಾಯವನ್ನು ಸಂಗ್ರಹಿಸುವ ಪ್ರವೃತ್ತಿ ಬೆಳೆಯುತ್ತಾ ಹೋಯಿತು. ಬೆಳೆ ಮತ್ತು ಫಸಲಿನ ಪ್ರಮಾಣವನ್ನು ಹೆಚ್ಚುಗೊಳಿಸಬೇಕಾದರೆ ಅದಕ್ಕೆ ಪೂರಕವಾಗಿ ತಾಂತ್ರಿಕ ಕೌಶಲ್ಯಗಳೂ ಹುಟ್ಟಿಕೊಂಡವು. ಈ ಕುಶಲತೆಯೇ ಮುಂದೆ ವೃತ್ತಿ ಆಧಾರಿತವಾದ ಗುಂಪುಗಳಾಗಿ ಕುಲಕಸುಬು ಎನಿಸಿಕೊಂಡಿತು. ವೃತ್ತಿ ಕುಲ ವರ್ಣ ಮತ್ತು ಜಾತಿಗಳುಇಂದು ಒಂದೇ ಪರಿಭಾಷೆಯಲ್ಲಿ ಸಂಕೀರ್ಣವಾಗಿ ಚರ್ಚಿಸಲ್ಪಡುತ್ತದೆ. ಈ ಬಗ್ಗೆ ಹಲವಾರು ವಾದ ವಿವಾದಗಳಿವೆ. ವೃತ್ತಿ ಆಧಾರದ ಮೇಲೆ ರೂಪುಗೊಂಡಿದ್ದ ಸಮಾಜ ಕ್ರಮೇಣ ವರ್ಣ ವ್ಯವಸ್ಥೆಗೆ ಪರಿವರ್ತನೆಗೊಂಡು ನಂತರ ಜಾತಿ ವ್ಯವಸ್ಥೆಗೆ ಪರಿವರ್ತನೆಗೊಂಡಿರುವುದು ಈಗಾಗಲೇ ಸಾಕಷ್ಟು ಚರ್ಚೆಗೆ ಒಳಪಟ್ಟಿರುವಂತದ್ದು. ವರ್ಣ ವ್ಯವಸ್ಥೆಗಿಂತ ಮೊದಲು ಜಾತಿಗಳು ಹುಟ್ಟಿಕೊಂಡಿದ್ದವು ಎನ್ನುವ ವಾದವೂ ಇದೆ. ವರ್ಣ ಮತ್ತು ಜಾತಿ ಎನ್ನುವ ಪದಗಳ ಬಗ್ಗೆ ಎಷ್ಟೇ ವ್ಯಾಖ್ಯಾನಗಳು ಬಂದರೂ ಅವುಗಳ ಸಂದರ್ಭದಲ್ಲಿನ ಗೊಂದಲವಂತೂ ನಿವಾರಣೆಯಾಗಿಲ್ಲ. ಸಮಾನ ಧಾರ್ಮಿಕ ಆಚರಣೆಗಳುಳ್ಳ ಜಾತಿಗಳನ್ನು ಒಟ್ಟುಗೂಡಿಸಿ ಅನುಕ್ರಮವಾಗಿ ಶ್ರೇಣೀಕರಿಸುವುದು ವರ್ಣ ವ್ಯವಸ್ಥೆ ಆದರೆ ಇದು ವಾಸ್ತವ ಸಾಮಾಜಿಕ ಚಿತ್ರಣವನ್ನು ನೀಡುವುದಿಲ್ಲ. ಜಾತಿ ವ್ಯವಸ್ಥೆಯಲ್ಲಿ ಬರುವ ಅನೇಕ ಜಾತಿಗಳು ಇದರಲ್ಲಿ ತಮ್ಮ ನೆಲೆಯನ್ನು ಕಳೆದುಕೊಂಡು ಬಿಡುತ್ತದೆ. ಇದಕ್ಕೆ ಉತ್ತಮ ಉದಾಹರಣೆಯೆಂದರೆ ಬುಡಕಟ್ಟುಗಳ ಜಾತಿ ಅವು ಬೇರೆ ಬೇರೆ ಸಂದರ್ಭದಲ್ಲಿ ಬೇರೆ ಬೇರೆ ಅರ್ಥವನ್ನು ಕೊಡುತ್ತಿರುತ್ತದೆ. ಇದರಲ್ಲಿ ನೀತಿ ನಿಯಮಗಳು ಮೊದಲೇ ರೂಪುಗೊಂಡಿರುತ್ತದೆ. ವ್ಯಕ್ತಿಯ ಜೀವನದ ಪ್ರತಿಯೊಂದು ಹಂತವನ್ನು ಅದು ನಿರ್ಧರಿಸುತ್ತದೆ. ಮಾನವ ಬದುಕಿದ್ದಾಗ ಮಾತ್ರವಲ್ಲ ಸತ್ತ ಮೇಲೂ ಅವನಿರಬೇಕಾದ ಜಾಗವನ್ನು ಜಾತಿಯೇ ನಿರ್ಧರಿಸುತ್ತದೆ. ಈ ವ್ಯವಸ್ಥೆಯಲ್ಲಿ ಆದಿವಾಸಿ ಬುಡಕಟ್ಟುಗಳು ಹಾಗೂ ಅಲೆಮಾರಿಗಳು ಮನುಷ್ಯ ವರ್ಗಕ್ಕೆ ಸೇರಿದವರೇ ಅಲ್ಲ ಎನ್ನುವ ತೀರ್ಮಾನವಿದೆ. ಅವರು ಸವಲತ್ತುಗಳನ್ನು ಪಡೆಯುವುದಾಗಲೀ, ವೃತ್ತಿಗಳನ್ನು ಬದಲಾಯಿಸುವುದಾಗಲೀ ಸಾಧ್ಯವಿರಲಿಲ್ಲ. ಈ ವ್ಯವಸ್ಥೆಯಲ್ಲಿ ಮೇಲ್ವರ್ಗ ಮೇಲ್ವರ್ಗವಾಗಿಯೇ ಇತ್ತು ಹಾಗೂ ಕೆಳವರ್ಗ ಕೆಳವರ್ಗವಾಗಿಯೇ ಇತ್ತು. ಸಾಮಾಜಿಕ ಯಥಾಸ್ಥಿತಿಯನ್ನು ಕಾಯ್ದುಕೊಳ್ಳಲು ವೇದಗಳ ಮೂಲಕ ಕಾನೂನಿನ ಚೌಕಟ್ಟನ್ನು ನಿರ್ಮಿಸಲಾಯಿತು. ಇದಕ್ಕೆ ಮೂಲ ಕಾರಣವೆಂದರೆ ಬ್ರಾಹ್ಮಣ ಮತ್ತು ಕ್ಷತ್ರಿಯರು ಅಲ್ಪ ಸಂಖ್ಯಾತರಾಗಿರುವುದೇ

ಆಗಿತ್ತು. ಬಹುಸಂಖ್ಯಾತರಾಗಿದ್ದ ವೈಶ್ಯ ಹಾಗೂ ಶೂದ್ರರನ್ನು ಹತೋಟಿಯಲ್ಲಿಡಲು ಈ ಚೌಕಟ್ಟು ಅನಿವಾರ್ಯವಾಗಿತ್ತು.(ಮೋಹನ ಕೃಷ್ಣ ರೈ.ಕೆ;೨೦೦೪-ಪುಟ; ೬೦-೬೧)

ಸಮಾಜವನ್ನು ನಾಲ್ಕು ವರ್ಗಗಳಾಗಿ ವಿಂಗಡಿಸಲಾಗಿತ್ತು ಬ್ರಾಹ್ಮಣ, ಕ್ಷತ್ರಿಯ ವೈಶ್ಯ, ಶೂದ್ರ ಈ ಅನುಕ್ರಮಣಿಕೆಯಲ್ಲಿ ಮೊದಲ ಮೂರು ವರ್ಣಗಳು ಹಿಂದು ಮುಂದಾಗಿದ್ದರೂ ಬ್ರಾಹ್ಮಣ ಶ್ರೇಷ್ಠನೆಂಬ ಸಾರ್ವತ್ರಿಕ ಒಪ್ಪಿತ ಅಭಿಪ್ರಾಯವಾಗಿತ್ತು. ಕವಿರಾಜ ಮಾರ್ಗದಲ್ಲಿ ಈ ನಾಲ್ಕು ವರ್ಗಗಳನ್ನು ವೈಶ್ಯ, ಬ್ರಾಹ್ಮಣ, ಕ್ಷತ್ರಿಯ, ಶೂದ್ರ ಈ ಅನುಕ್ರಮದಲ್ಲಿ ಹೇಳಲಾಗಿದೆ. ವೈಶ್ಯರಿಗೆ ಪಶುಪಾಲನೆ, ಬ್ರಾಹ್ಮಣರಿಗೆ ಅಧ್ಯಯನ, ಕ್ಷತ್ರಿಯರಿಗೆ ರಾಜ್ಯಭಾರ ಮತ್ತು ಶೂದ್ರರಿಗೆ ವ್ಯವಸಾಯ ಈ ನಾಲ್ಕು ವರ್ಣಗಳ ವೃತ್ತಿಗಳು ಎಂಬುದಾಗಿ ಹೇಳಲಾಗಿದೆ. ವರ್ಣ ವ್ಯವಸ್ಥೆಯ ಈ ವರ್ಗೀಕರಣ ಸರಳೀಕೃತವಾಗಿದ್ದು, ಮೇಲ್ನೋಟಕ್ಕೆ ಕಂಡಂತೆ ಇರಲಿಲ್ಲ. ಅದರೊಳಗೆ ಭಿನ್ನತೆ ವೈರುಧ್ಯಗಳು ತುಂಬಿಕೊಂಡಿದ್ದವು.



"ವರ್ಣವ್ಯವಸ್ಥೆಯಲ್ಲಿ ಬರುವ ನಾಲ್ಕು ವರ್ಣಗಳವರು ತಮ್ಮದಲ್ಲದ ವೃತ್ತಿಗಳನ್ನು ಅವಲಂಬಿಸಿರುತ್ತಿದ್ದರು ಎನ್ನುವುದು ಹಲವಾರು ಶಾಸನಗಳಿಂದ ಮತ್ತು ಕಾವ್ಯಗಳಿಂದ ತಿಳಿದು ಬರುತ್ತದೆ. ಶೂದ್ರನೊಬ್ಬ ರಾಜನಾದರೆ ಅಥವಾ ವರ್ತಕನಾದರೆ ಅವನು ತನ್ನನ್ನು ಕ್ಷತ್ರಿಯನೆಂದೋ, ವೈಶ್ಯನೆಂದೋ ಕರೆದುಕೊಳ್ಳಲು ಅಂಥ ಸಾಮಾಜಿಕ ಅಡ್ಡಿಯೇನೋ ಇರಲಿಲ್ಲ." (ಅದೇ, ಪುಟ ೬೨) ವೃತ್ತಿಗಳಲ್ಲಿ ಯಾವ ರೀತಿಯ ಬದಲಾವಣೆ ಕಾಣಿಸಿಕೊಳ್ಳುತ್ತಿದ್ದರೂ ಬ್ರಾಹ್ಮಣರ ಅಂತಸ್ತು, ಪ್ರಭಾವ ಉನ್ನತವಾಗಿಯೇ ಉಳಿದಿತ್ತು. ಇನ್ನುಳಿದ ಮೂರು ವರ್ಣಗಳು ಬ್ರಾಹ್ಮಣರ ಮೂಲಕ ತಮ್ಮ ಸ್ಥಾನವನ್ನು ಗುರುತಿಸಿಕೊಳ್ಳಬೇಕಾದ ಒತ್ತಾಯಕ್ಕೆ ಒಳಗಾಗಿದ್ದವು. ಕ್ಷತ್ರಿಯರು, ವೈಶ್ಯರು ಮತ್ತು ಶೂದ್ರರು ತಮ್ಮೊಳಗೆ ಅನೇಕ ಗುಂಪುಗಳಾಗಿ ಒಡೆದು ಪರಸ್ಪರ ದ್ವೇಷಿಸುವ ಪ್ರವೃತ್ತಿಗಳು ಕಾಣಿಸಿಕೊಂಡದ್ದು ಬ್ರಾಹ್ಮಣರಿಗೆ ಅನುಕೂಲಕರವಾದ ವಾತಾವರಣವನ್ನು ಸೃಷ್ಟಿಸಿತು. ಬ್ರಾಹ್ಮಣರು ಜಾತಿ ವ್ಯವಸ್ಥೆಯನ್ನು ಕಾಪಾಡಿಕೊಳ್ಳಲು ಸದಾ ಜಾಗರೂಕರಾಗಿರುತ್ತಿದ್ದರು. ಬ್ರಾಹ್ಮಣರಲ್ಲಿಯೂ ಉನ್ನತ ದರ್ಜೆಯ ಮತ್ತು ಕೆಳದರ್ಜೆಯ ಬ್ರಾಹ್ಮಣರಿರುತ್ತಿದ್ದರು. ವೇದಾಧ್ಯಯನವನ್ನು ಕೈಗೊಳ್ಳುವವರು ಉನ್ನತ ದರ್ಜೆಯವರಾದರೆ ಕ್ಷತ್ರಿಯರು ವೈಶ್ಯರು ಮಾಡುವ ಕೆಲಸಗಳನ್ನು ನಿರ್ವಹಿಸುವವರು ಎರಡನೇ ದರ್ಜೆಯವರು. ದೇವಾಲಯದ ಪುರೋಹಿತರು ಅಧಿಕಾರಿಗಳು, ವ್ಯಾಪಾರಸ್ಥರು ಮತ್ತು ಅಗ್ರಹಾರವನ್ನು ನಡೆಸುವವರು ಮೊದಲಾದ ಪಂಗಡಗಳಿದ್ದವು. ಭೂಮಿಯನ್ನು ಬ್ರಾಹ್ಮಣರಿಗೆ ದಾನ ನೀಡಬೇಕು ಎಂಬ ನಂಬಿಕೆ ಇದ್ದು, ಇದರಿಂದ ಪುಣ್ಯ ಪ್ರಾಪ್ತಿಯಾಗುತ್ತದೆ ಎನ್ನುವ ಧಾರ್ಮಿಕ ನಂಬಿಕೆಯನ್ನು ಉಳಿದ ವರ್ಣಗಳಲ್ಲಿ ಬಿತ್ತಲಾಗಿತ್ತು. ಬ್ರಹ್ಮದೇಯ ಭೂಮಿಯ ಮಹಾ ಜನರಾಗಿ ಬ್ರಾಹ್ಮಣರು ಆಡಳಿತವನ್ನು ನಡೆಸುತ್ತಿದ್ದರು.

ಸಾಮಾಜಿಕ ಶ್ರೇಣಿಯಲ್ಲಿ ಬ್ರಾಹ್ಮಣರ ನಂತರದ ಸ್ಥಾನ ಕ್ಷತ್ರಿಯರದ್ದು, ರಾಜ್ಯವನ್ನು ಆಳುವುದು ಮತ್ತು ಪ್ರಜೆಗಳನ್ನು ರಕ್ಷಿಸುವುದು ಕ್ಷತ್ರಿಯರ ಮುಖ್ಯ ಕರ್ತವ್ಯವಾಗಿತ್ತು. ಬ್ರಾಹ್ಮಣರಂತೆ ಕ್ಷತ್ರಿಯರಿಗೆ ಎಲ್ಲ ಕಾಲದಲ್ಲಿಯೂ ಪ್ರಧಾನವಾದ ಸ್ಥಾನವಾಗಲಿ, ಪಾತ್ರವಾಗಲಿ ಇರಲಿಲ್ಲ. ಏಕೆಂದರೆ ಕ್ಷತ್ರಿಯರ ಸ್ಥಾನಮಾನ ರಾಜಕೀಯ ಶಕ್ತಿ ಮತ್ತು ಅಧಿಕಾರವನ್ನು ಅವಲಂಭಿಸಿಕೊಂಡಿತ್ತು. ಸೈನಿಕ ವರ್ಗ ಇದರಲ್ಲಿ ಪ್ರಧಾನ ಪಾತ್ರವನ್ನು ವಹಿಸುತ್ತಿತ್ತು. ಸಾಮಂತ ಅರಸರುಗಳು ತಮ್ಮದು ಕ್ಷತ್ರಿಯ ಸ್ಥಾನಮಾನವೆಂದು ಹೇಳಿಕೊಂಡರು. ಆ ಕಾರಣಕ್ಕಾಗಿಯೇ ತಮ್ಮ

ಮೂಲವನ್ನು ಸೂರ್ಯವಂಶ, ಚಂದ್ರವಂಶ, ಎನ್ನುವ ಪೌರಾಣಿಕ ಮೂಲಗಳಿಂದ ಗುರುತಿಸಿಕೊಳ್ಳಲು ಪ್ರಯತ್ನಪಟ್ಟರು. ಕ್ಷತ್ರಿಯರಲ್ಲೂ ಮೇಲ್ ದರ್ಜೆಯ ಕ್ಷತ್ರಿಯರು ಮತ್ತು ಕೆಳದರ್ಜೆಯ ಕ್ಷತ್ರಿಯರಿರುತ್ತಿದ್ದರು. ಆಡಳಿತ ನಡೆಸುವವರು ಮೇಲ್ ದರ್ಜೆಯವರಾದರೆ ವೈಶ್ಯರು ಮತ್ತು ಶೂದ್ರರು ಮಾಡುವ ಕೆಲಸವನ್ನು ಮಾಡುವವರು ಸಾಮಾನ್ಯ ದರ್ಜೆಯವರಾಗಿದ್ದರು. ಕ್ಷತ್ರಿಯರು ಪುರೋಹಿತ ವರ್ಗದೊಂದಿಗೆ ಉತ್ತಮ ಸಂಬಂಧವನ್ನು ಹೊಂದಿರುತ್ತಿದ್ದರು. ಪುರೋಹಿತರು ಕ್ಷತ್ರಿಯರ ರಾಜಕೀಯ ಅಧಿಕಾರವನ್ನು ಶಾಸನಬದ್ದಗೊಳಿಸುತ್ತಿದ್ದರು. ಕ್ಷತ್ರಿಯ ಸ್ಥಾನಮಾನವನ್ನು ಪಡೆಯಲು ಶಾಸನಬದ್ಧಗೊಳ್ಳುವುದು ಅವಶ್ಯಕವಾಗಿತ್ತು. ಹುಟ್ಟಿನಿಂದ ಕ್ಷತ್ರಿಯರಾಗಿಲ್ಲದ ಅವರ ಪರಾಕ್ರಮ ಮತ್ತು ದಕ್ಷತೆಗಳನ್ನೇ ಉನ್ನತ ವ್ಯಕ್ತಿಗಳನ್ನು ಆಧಾರವನ್ನಾಗಿ ಇಟ್ಟುಕೊಂಡು ಕ್ಷತ್ರಿಯ ವರ್ಗಕ್ಕೆ ಸೇರಿಸಲಾಗುತ್ತಿತ್ತು. (ಅದೇ, ಪುಟ.೬೩)

ವ್ಯಾಪಾರ ವಾಣಿಜ್ಯ ಮತ್ತು ಕೃಷಿಯಲ್ಲಿ ತೊಡಗಿದ್ದ ವೈಶ್ಯ ವರ್ಗ ಸಾಮಾಜಿಕ ಶ್ರೇಣಿಯಲ್ಲಿ ಮೂರನೆಯ ಸ್ಥಾನವನ್ನು ಪಡೆದಿದ್ದರೂ ಆರ್ಥಿಕತೆಯ ದೃಷ್ಟಿಯಿಂದ ಪ್ರಮುಖ ಸ್ಥಾನವನ್ನು ಹೊಂದಿದ್ದರು. ವ್ಯಾಪಾರ ವಾಣಿಜ್ಯ ಬೊಕ್ಕಸಕ್ಕೆ ಹೆಚ್ಚಿನ ಆದಾಯವನ್ನು ತರುತ್ತಿದ್ದುದು ಇದಕ್ಕೆ ಕಾರಣವಾಗಿತ್ತು. ಪುರೋಹಿತ ವರ್ಗ ಮತ್ತು ಸೈನಿಕ ವರ್ಗವನ್ನು ಬಿಟ್ಟರೆ ಸಮಾಜದಲ್ಲಿ ಉನ್ನತ ಸ್ಥಾನವನ್ನು ಹೊಂದಿದವರೊಂದಿಗೆ ವ್ಯಾಪಾರಸ್ಥರು, ಶ್ರೀಮಂತ ವ್ಯಾಪಾರಸ್ಥರು ರಾಜರೊಡನೆ ಆಡಳಿತಾತ್ಮಕ ಹಾಗೂ ಆರ್ಥಿಕ ಸಂಬಂಧಗಳನ್ನು ಹೊಂದಿರುತ್ತಿದ್ದರು. ಹೊರತು ಸಣ್ಣ ವ್ಯಾಪಾರಸ್ಥರಲ್ಲಿ ರಾಜ್ಯದ ಅರ್ಥವ್ಯವಸ್ಥೆಯಲ್ಲಿ ಕೃಷಿ ಮೊದಲ ಸ್ಥಾನವನ್ನು ಹೊಂದಿದ್ದರೂ, ಶ್ರೇಣಿಕೃತ ಸಮಾಜ ವ್ಯವಸ್ಥೆಯಲ್ಲಿ ಕೃಷಿಕರು ಕೆಳಸ್ಥಾನವನ್ನು ಹೊಂದಿದ್ದರು. ಕೃಷಿಕರು ಕೃಷಿ ಮಾತ್ರವಲ್ಲದೆ ಕರಕುಶಲ ವೃತ್ತಿ ಹಾಗೂ ಪಶುಸಂಗೋಪನೆಯಲ್ಲೂ ತೊಡಗುತ್ತಿದ್ದರು.

ವರ್ಣವ್ಯವಸ್ಥೆಯಲ್ಲಿ ಕೊನೆಯವರಾದ ಶೂದ್ರರು ತಮ್ಮಲ್ಲೆ ಹಲವಾರು ಜಾತಿ ಉಪಜಾತಿಗಳಾಗಿ ವಿಭಜನೆಗೊಂಡಿದ್ದರು. ಶೂದ್ರರಲ್ಲಿ ಮುಖ್ಯವಾಗಿ ವೃತ್ತಿಯ ಆಧಾರದ ಮೇಲೆ ಪಂಗಡಗಳು ಉಪಪಂಗಡಗಳು ರಚನೆಗೊಂಡವು. ಶೂದ್ರರು ಇತರ ಜಾತಿಗಳಾಗಿ ದುಡಿಯುವ ಒತ್ತಾಯಕ್ಕೊಳಗಾಗಿದ್ದರು. ಇವರು ಕೃಷಿ ಕೈಗಾರಿಕೆ, ವ್ಯಾಪಾರ ಹಾಗೂ ಇನ್ನಿತರ ವೃತ್ತಿಗಳಲ್ಲೂ ಪರಿಣಿತರಾಗಿರುತ್ತಿದ್ದರು. ಅಗಸರು, ನೇಕಾರರು, ಬಳೆಗಾರರು, ಬೆಸ್ತರು, ಕುಂಬಾರರು, ಕಮ್ಮಾರರು, ಶಿಲ್ಪಿಗಳು, ಕ್ಷೌರಿಕರು, ಗಾಣಿಗರು, ಈಡಿಗರು, ವಡ್ಡರು, ಬಡಗಿಗಳು, ಅಕ್ಕಸಾಲಿಗರು, ಹೀಗೆ ವಿವಿಧ ಕಸುಬುಗಳನ್ನು ಮಾಡುತ್ತಿದ್ದರು. ಅದರೊಳಗೆ ಮತ್ತಷ್ಟು ಒಳಪಂಗಡಗಳಿದ್ದವು.

ಗುಡ್ಡ ಬೆಟ್ಟ ಕಾಡುಗಳಲ್ಲಿ ವಾಸಿಸುತ್ತಿದ್ದ ಬುಡಕಟ್ಟು ಸಮುದಾಯಗಳು ಸಮಾಜದಲ್ಲಿ ಅಸ್ತಿತ್ವವೇ ಇಲ್ಲದ ರೀತಿಯಲ್ಲಿ ಬದುಕುತ್ತಿದ್ದವು. ಅಸ್ಪೃಶ್ಯರು ಎಂದು ಕರೆಯಿಸಿಕೊಂಡು ಸಮಾಜದಿಂದ ಬಹಿಷ್ಕೃತಗೊಂಡವರಂತೆ ಜೀವಿಸಬೇಕಾಗಿತ್ತು. ಅವರು ಹಳ್ಳಿಗಳ ಮತ್ತು ಪಟ್ಟಣ ಪ್ರದೇಶಗಳಿಂದ ಹೊರವಲಯಗಳಲ್ಲಿ ಮೇಲ್ಜಾತಿಗಳಿಂದ ಪ್ರತ್ಯೇಕವಾಗಿ ವಾಸ ಮಾಡುವ ಒತ್ತಾಯಕ್ಕೊಳಗಾಗಿದ್ದರು. ಇವರ ವೃತ್ತಿಗಳನ್ನು ಮೇಲ್ ವರ್ಗಗಳೇ ನಿರ್ಧರಿಸುತ್ತಿದ್ದವು. ಊರ ಕಸವನ್ನು ಗುಡಿಸುವುದು, ಸತ್ತ ದನವನ್ನು ಹೊತ್ತು ಸಾಗಿಸುವುದು, ಸ್ಮಶಾನದಲ್ಲಿ ಗುಂಡಿ ತೋಡುವುದು ಮರಣದಂಡನೆಗೆ ಒಳಗಾದವರನ್ನು ಗಲ್ಲಿಗೇರಿಸುವುದು ಮುಂತಾದವು ಅಸ್ಪೃಶ್ಯರು

ಮಾಡಬೇಕಾದ ಕೆಲಸಗಳಾಗಿದ್ದವು. ಇಂಥ ಕೆಲಸಗಳನ್ನು ಮಾಡಿಸುವುದಕ್ಕಾಗಿ ಮಾನವರಲ್ಲಿಯೇ ಅಸ್ಪೃಶ್ಯರೆನ್ನುವ ವರ್ಗವೊಂದನ್ನು ಹುಟ್ಟು ಹಾಕಿ ಅವರನ್ನು ತೀರಾ ನಿಕೃಷ್ಟವಾಗಿ ನೋಡಿಕೊಳ್ಳಲಾಗಿದೆ.

ಅಸ್ಪೃಶ್ಯರನ್ನು ಮಾರಾಟದ ವಸ್ತುಗಳಂತೆ ನೋಡಲಾಗುತ್ತಿತ್ತು. ಸಾಮಾಜಿಕವಾಗಿ ಮತ್ತು ಆರ್ಥಿಕವಾಗಿ ಅವರು ಕ್ಷೀಣಿಸುವಂತೆ ಜೀತದಾಳುಗಳಾಗಿ ವರ್ತಿಸಲಾಯಿತು. ಇದೊಂದು ವ್ಯವಸ್ಥಿತ ತಂತ್ರವೂ ಆಗಿತ್ತು. ಇವರ್‍ಯಾರು ಭೂಮಿಗೆ ಒಡೆಯರಾಗಿರಲಿಲ್ಲ ಹಾಗೂ ವೃತ್ತಿಯಾಗಿ ವ್ಯವಸಾಯವನ್ನು ಮಾಡುತ್ತಿರಲಿಲ್ಲ. ಏಕೆಂದರೆ ಅವೆರಡರಿಂದಲೂ ಅಸ್ಪೃಶ್ಯರನ್ನು ದೂರ ಇಡಲಾಗಿತ್ತು. ಹೊಲಗಳಲ್ಲಿ ಕೆಲಸ ಮಾಡುವ ಜೀತದಾಳುಗಳಾಗಿ ಸಮಾಜದಲ್ಲಿ ಅಸ್ತಿತ್ವವೇ ಇಲ್ಲದ ರೀತಿಯಲ್ಲಿ ಜೀವನ ನಡೆಸುವ ಒತ್ತಾಯಕ್ಕೆ ಅವರು ಒಳಗಾಗಿದ್ದರು. ಅಸ್ಪೃಶ್ಯರು ಎನ್ನುವ ಪದದ ಸೃಷ್ಟಿ ಶೋಷಣೆ ನಡೆಸುವುದಕ್ಕಾಗಿಯೇ ಆಯಿತು ಎನ್ನುವುದನ್ನು ಇಲ್ಲಿ ಗಮನಿಸಬೇಕಾಗುತ್ತದೆ.

ಭೂಮಿಯ ಒಡೆಯ ಮತ್ತು ಜೀತದಾಳುವಿನ ಸಂಬಂಧ ಶಾಶ್ವತವಾಗಿರುತ್ತಿತ್ತು. ಇದರಿಂದ ಒಡೆಯನಿಗೆ ವಿಧೇಯರಾದ ಆಳುಗಳು ದೊರಕುತ್ತಲೇ ಇರುವಂತಾಯಿತು. ಇದು ಒಡೆಯನ ಒಡೆತನವನ್ನು ಗಟ್ಟಿಗೊಳಿಸಿದರೆ ಜೀತದಾಳುವಿನ ಜೀತವನ್ನು ಶಾಶ್ವತವನ್ನಾಗಿಸಿತು. ಜೀವನ ಪೂರ್ತಿ ಇನ್ನೊಬ್ಬರ ಒಳಿತಿಗಾಗಿ ದುಡಿಯುವ ಈ ವರ್ಗವನ್ನು ಅಸ್ಪೃಶ್ಯರನ್ನಾಗಿ ಪರಿಗಣಿಸಿದ್ದು ಆಶ್ಚರ್ಯಕರವಾಗಿ ಕಂಡು ಬರುತ್ತದೆ. ಪ್ರಭುತ್ವಕ್ಕೆ ಇದೊಂದು ಸಾಮಾಜಿಕ ಪಿಡುಗಾಗಿ ಕಂಡು ಬರಲಿಲ್ಲ ಧಾರ್ಮಿಕ ಪ್ರಭುತ್ವಕ್ಕೆ ಶರಣಾಗಿದ್ದ ರಾಜ ಪ್ರಭುತ್ವ ಆ ಕುರಿತು ಯೋಚಿಸುವಂತೆಯೂ ಇರಲಿಲ್ಲ. ಇದರಿಂದಾಗಿ ಪುರೋಹಿತಶಾಹಿ ವ್ಯವಸ್ಥೆ ಶುದ್ಧ–ಅಶುದ್ಧ, ನಿರ್ಮಲ– ಮಲಿನ ಭಾವನೆಗಳನ್ನು ಜಾತಿಯ ಹಿನ್ನೆಲೆಯಿಂದ ಯಾವ ಅಡೆತಡೆಯೂ ಇಲ್ಲದೆ ಆಚರಿಸಲು ಪ್ರಯತ್ನಿಸತೊಡಗಿತು.

ಉತ್ಪಾದಕ ಅಂಶವಾಗಿ ಗುರಿತಿಸಿಕೊಂಡ ಭೂಮಿ ಆರ್ಥಿಕತೆಯಲ್ಲಿ ಪ್ರಮುಖ ಸ್ಥಾನವನ್ನು ಹೊಂದಿತ್ತು. ಭೂಮಾಲಿಕತ್ವವನ್ನು ಹೊಂದುವುದು ಗೌರವದ ಪ್ರತಿಷ್ಠೆಯ ಅಂಶವಾಗುವುದರಿಂದ ಸಾಮಾಜಿಕ ಸ್ಥಾನ ಮಾನಗಳನ್ನು ಪಡೆಯಲು ಕಾರಣವಾಗಿತ್ತು. ಚರಿತ್ರೆಯ ಕಾಲದಿಂದಲೂ ಗಮನಿಸಿದಾಗ ಭೂಮಿಯ ಒಡೆತನ ಏಕರೂಪದ್ದಾಗಿರಲಿಲ್ಲ. ಪ್ರಭುತ್ವ ವ್ಯವಸ್ಥೆಯ ಒಳಗಡೆ ರಾಜನಿಗೆ ಸೇರಿದ, ಭೂಮಿ, ಖಾಸಗಿ ಭೂಮಿ, ಸಾಮುದಾಯಿಕ ಅಥವಾ ಜಂಟಿ ಒಡೆತನದ ಭೂಮಿ ಹಾಗೂ ದಾನದ ರೂಪದಲ್ಲಿ ಪಡೆದ ಭೂಮಿ ಎಂದು ಗುರುತಿಸಲಾಗಿದೆ. ಚಕ್ರವರ್ತಿಗಳಿಗೆ ಸಾಮಂತರು, ಸಾಮಂತರಿಗೆ ಪಾಳೇಗಾರರು , ಪಾಳೇಗಾರರಿಗೆ ಸ್ಥಳೀಯ ಗ್ರಾಮಗಳ ಒಡೆಯರು ಗ್ರಾಮಗಳ ಒಡೆಯರಿಗೆ ಗೇಣಿದಾರರು, ಒಕ್ಕಲು ಮಕ್ಕಳು, ಕಪ್ಪ ಕಾಣಿಕೆಗಳನ್ನು ಕೊಡುವ ಕ್ರಮ ಸಾಮಾನ್ಯ ರೂಢಿಯಲ್ಲಿತ್ತು. ಈ ಶ್ರೇಣೀಕರಣ ವ್ಯವಸ್ಥೆಯ ಮತ್ತು ಭೂ ಮಾಲಿಕತ್ವದ ಹಿನ್ನೆಲೆಯ ಅಳತೆಗೋಲುಗಳಾಗಿದ್ದವು. ಹಾಗಾಗಿ ಶಾಸನಗಳಲ್ಲಿ ಗುರುತಿಸಿರುವಂತೆ ಶ್ರೀಮಂತ ಭೂ ಮಾಲೀಕರು, ಮಧ್ಯಮ ಭೂಮಾಲೀಕರು ಹಾಗೂ ಬಡ ಭೂಮಾಲೀಕರು ಎಂದು ಗುರುತಿಸುತ್ತಿದ್ದರು.

ಈ ಭೂಮಾಲೀಕರು ತಮ್ಮ ಭೂಮಿಗೆ ಸಂಬಂಧಿಸಿದ ಕೆಲಸ ಕಾರ್ಯಗಳನ್ನು ಸ್ವತಂತ್ರವಾಗಿ ಮಾಡಬಹುದಿತ್ತು. ಭೂಮಿಯನ್ನು ದಾನದ ರೂಪದಲ್ಲಿ ವ್ಯಕ್ತಿ ಅಥವಾ ಸಂಸ್ಥೆಗೆ ನೀಡಿ ಅವರಿಗೆ ಭೂಮಿಯ ಒಡೆತನ ಪ್ರಾಪ್ತವಾಗುತ್ತಿತ್ತು. ಹೆಚ್ಚಾಗಿ ಫಲವತ್ತಾದ ಭೂಮಿಗಳನ್ನು ಬ್ರಾಹ್ಮಣರಿಗೆ ನೀಡುತ್ತಿದ್ದರು. ಇದು

ಬ್ರಹ್ಮದೇಯವಾಗಿದ್ದು ಹೊಸ ಬ್ರಾಹ್ಮಣ ಭೂ ಮಾಲೀಕ ವರ್ಗವನ್ನು ಸೃಷ್ಟಿಸಿತು. ದೇವಾಲಯಗಳಿಗೆ ನೀಡುತ್ತಿದ್ದ ದಾನ ದೇವದಾನವಾಗಿದ್ದು ಅದು ದೇವಾಲಯಗಳು ಭೂಮಾಲೀಕರಂತೆ ವರ್ತಿಸುವಂತೆ ಮಾಡಿತು. ಕೆರೆ ಕಾಲುವೆ ನಿರ್ಮಾಣಕ್ಕಾಗಿ, ಹಳ್ಳಿಯ ಮುಖಂಡರಿಗೆ, ದುಡಿದ ಜನರಿಗೆ ಅವರ ಸೇವೆಗಾಗಿಯೂ ಭೂಮಿ ದಾನವಾಗಿ ಲಭಿಸುತ್ತಿತ್ತು. ಧರ್ಮದ ಹೆಸರಲ್ಲಿ ಭೂಮಾಲೀಕತ್ವವನ್ನು ನಿಗ್ರಹಿಸುವ ಅಂಶಗಳೂ ಗೋಚರಿಸುತ್ತಿದ್ದವು. ಜಮೀನು ಮತ್ತು ಅಧಿಕಾರವನ್ನು ಪಡೆಯುವಲ್ಲಿ ಈ ತಂತ್ರಗಾರಿಕೆ ಹೆಚ್ಚು ಯಶಸ್ವಿಯಾಯಿತು. ಭೂಮಿ ಉತ್ಪಾದಕ ಅರ್ಥವ್ಯವಸ್ಥೆಯೊಳಗೆ ದಾಖಲುಗೊಂಡು ಪ್ರಮುಖ ಸ್ಥಾನ ಪಡೆದು ಸಮಾಜದಲ್ಲಿ ವಿವಿಧ ಸ್ತರಗಳ ಆರ್ಥಿಕತೆ ಕಾಣಿಸಿಕೊಂಡಿತು. ಸಂಕೀರ್ಣವಾದ ಸಾಮಾಜಿಕ ವ್ಯವಸ್ಥೆಯೊಳಗೆ ಸರಳ ರೇಖಾತ್ಮಕವಾದ ಯಾವ ರೂಪು ರೇಷೆಗಳೂ ಗೋಚರಿಸಲಿಲ್ಲ.

ವರ್ಣದಿಂದ ವೃತ್ತಿಯೋ, ವೃತ್ತಿಯಿಂದ ಜಾತಿಯೋ ಜಾತಿಯ ಪರ್ಯಾಯ ಕುಲವೋ ಕುಲದಿಂದ ಗುರುತಿಸಲ್ಪಡುವ ಕುಲಕಸುಬೋ ಒಟ್ಟಾರೆ ಆರ್ಥಿಕತೆಯಲ್ಲಿ ಭೂಮಿಯ ಒಡೆತನ ಪ್ರಮುಖ ಸ್ಥಾನವನ್ನು ಪಡೆಯಿತು. ಭೂಮಿಯ ಯಜಮಾನ್ಯದ ಅಂಶಗಳನ್ನು ಸರಳವಾಗಿ ಗುರುತಿಸುವುದಾದರೆ ಭೂಮಾಲೀಕರು, ಸ್ವತಂತ್ರ ಒಕ್ಕಲುಗಳು, ಗೇಣಿದಾರರು, ಕೃಷಿ ಕೂಲಿ ಕಾರ್ಮಿಕರು, ಮತ್ತು ಜೀತದಾಳುಗಳು ಎಂದು ವಿಂಗಡಿಸಬಹುದು. ಕೃಷಿ ಸಂಸ್ಕೃತಿಯ ಭಾಗವಾಗಿ ಬೆಳೆದು ಬಂದ ಸಮುದಾಯಗಳ ಕೊನೆಯಲ್ಲಿ ಹೀಗೆ ಗ್ರಹಿಸಲು ಸಾಧ್ಯವಾಗಿದೆ. ಭೂಮಿಯ ಒಡೆತನದ ಹಿನ್ನೆಲೆಯಲ್ಲಿ ಹೇಗೆ ವೃತ್ತಿಗಳು ಪಲ್ಲಟಗೊಂಡವು ಎನ್ನುವುದನ್ನು ಚರಿತ್ರೆ ಹೇಳಿದರೆ, ಮಧ್ಯಕಾಲೀನ ಯುಗದ ನಂತರದ ವಸಾಹತು ಶಾಹಿ ಆಡಳಿತದಲ್ಲಿ ಆದ ಸ್ಥಿತ್ಯಂತರಗಳನ್ನು ಗುರುತಿಸಬಹುದು. ಈಗಾಗಲೇ ಈ ಹಿಂದಿನ ಅಧ್ಯಾಯಗಳಲ್ಲಿ ಚರ್ಚಿಸಿರುವಂತೆ ಸಂಕೀರ್ಣವಾದ ಪಲ್ಲಟಗಳು ಆಗುತ್ತ ಸಾಗಿವೆ.

ಕೃಷಿ ಸಂಸ್ಕೃತಿ ಮತ್ತು ಅದಕ್ಕೆ ಪೂರಕವಾಗಿ ಹುಟ್ಟಿಕೊಂಡ ಆಯಗಾರಿಕೆಯ ವೃತ್ತಿಗಳನ್ನು ಮಾಡುತ್ತಿದ್ದವರು ಕೃಷಿ ಅನ್ವೇಷಣೆಗೊಂಡು ವಿಸ್ತರಣೆಗೊಂಡಂತೆಲ್ಲ ಪ್ರಮುಖ ಪಾತ್ರವಹಿಸಿದ್ದರು. ಕೃಷಿಯ ನಿರ್ವಹಣೆಯನ್ನು ಯಶಸ್ವಿಯಾಗಿ ನಡೆಸಬೇಕಾದರೆ ಆಯಗಾರಿಕೆಯ ಕುಲಕಸುಬುಗಳು ಅನಿವಾರ್ಯವಾಗಿತ್ತು. ಕೃಷಿಯ ಸ್ವರೂಪದಲ್ಲಿ ಆದ ಬದಲಾವಣೆ ಮೊದಲ ಬಾರಿಗೆ ಆಯಗಾರಿಕೆಯ ಕಸುಬುಗಳೂ ಪಲ್ಲಟಗೊಳ್ಳಲು ಕಾರಣವಾಯಿತು. ಆಹಾರದ ಬೆಳೆಯಿಂದ ವಾಣಿಜ್ಯ ಬೆಳೆಗೆ ಆದ ಪಲ್ಲಟ ಕೃಷಿ ಚಟುವಟಿಕೆಯಲ್ಲಿಯೇ ಸ್ಥಿತ್ಯಂತರವನ್ನು ತಂದಿತು. ಗದ್ದೆ ಕಳೆದು ತೋಟದ ಸ್ವರೂಪ ಬಂದಾಗ ಕೃಷಿ ಕೂಲಿಕಾರ್ಮಿಕರು, ಕೃಷಿ ಸಲಕರಣೆಗಳನ್ನು ಮಾಡುವವರೂ ಆಹಾರದ ಮೂಲವನ್ನು ಕಳಕೊಂಡರು. ಎರಡನೆಯ ಹಂತದಲ್ಲಿ ಕೃಷಿಯಿಂದ ಕೈಗಾರಿಕೆಗೆ ಸ್ಥಿತ್ಯಂತರಗಳಾದವು. ಕೃಷಿ ಕಾರ್ಯಗಳಿಗೆ ಪೂರಕವಾಗಿ ಯಂತ್ರವಿಜ್ಞಾನ ಮತ್ತು ತಂತ್ರವಿಜ್ಞಾನಗಳು ಮೊದಲಿಗೆ ಬಳಕೆಗೆ ಬಂದವು. ಕೈಗಾರಿಕೆಗಳು ಯಂತ್ರವಿಜ್ಞಾನದ ಕೌಶಲ್ಯ ಮತ್ತು ತಿಳುವಳಿಕೆಯನ್ನು ನಿರ್ವಹಿಸುವವರು ಆಯಗಾರಿಕೆಯ ವೃತ್ತಿಯ ಶ್ರಮಿಕ ವರ್ಗವೇ ಆಗಿತ್ತು. ಕೃಷಿಯನ್ನು ಇದರಿಂದ ವಿಸ್ತರಿಸಲು ಸಾಧ್ಯವಾಯಿತು. ಎರಡನೆಯ ಹಂತದಲ್ಲಿ ಕೃಷಿಗೆ ಆಯಗಾರಿಕೆಗೆ ಮಾರಕವಾದ ಕೈಗಾರಿಕೆಗಳು ಜಾರಿಗೆ ಬಂದವು. ಕೃಷಿಯನ್ನು ನಾಶಪಡಿಸುವುದರೊಂದಿಗೆ ಪರಿಸರದ ಹಾನಿಯಾಗಿ ಮಾನವ

ಕುಲಕ್ಕೂ ಹಾನಿಕಾರಕವಾಯಿತು. ಹಳ್ಳಿಯೊಂದಕ್ಕೆ ಬಂದಿಳಿಯುವ ಹಿಟಾಚಿ ಇಡೀ ಗ್ರಾಮದ ರೂಪುರೇಷೆಯನ್ನು ಬದಲು ಮಾಡುವುದರೊಂದಿಗೆ ಎಲ್ಲವನ್ನು ಸಮತಟ್ಟುಗೊಳಿಸುವ ಏರುತಗ್ಗುಗಳನ್ನು ಸಮಗೊಳಿಸುತ್ತಾ ಸಾಗಿತು. ಕೃಷಿ ಭೂಮಿಗಳೇ ಕೈಗಾರಿಕೆಗಳಾಗಿ ಪರಿವರ್ತನೆ ಹೊಂದಿದಾಗ ವಿಶಿಷ್ಟ ಕೌಶಲ್ಯದ ಕೃಷಿ ಕಾರ್ಯದ ವೃತ್ತಿ ನೈಪುಣ್ಯತೆ ಉಳಿಯಲು ಸಾಧ್ಯವೇ? ತಲೆಮಾರಿನಿಂದ ತಲೆಮಾರಿಗೆ ಕಣ್ಣಳತೆಯ ಅರಿವು ಕೈಯ್ಯಳತೆಯ ನಿಲುವುಗಳಲ್ಲಿ ತಾವು ಮಾಡುತ್ತಿದ್ದ ಕೆಲಸಗಳು ಮುಖಬೆಲೆ ಕಳೆದುಕೊಂಡವು. ಭೂಮಾಲೀಕರಾಗಿರಲಿ, ಗೇಣಿ ಒಕ್ಕಲಿನವರಾಗಲೀ, ಕೃಷಿ ಕೂಲಿ ಕಾರ್ಮಿಕರು, ಜೀತದಾಳುಗಳೇ ಆಗಿರಲಿ ಕೃಷಿಯೇ ಇಲ್ಲದ ಮೇಲೆ ಯಾವ ವೃತ್ತಿಗಳನ್ನು ಅವರು ಮುಂದುವರಿಸಲು ಸಾಧ್ಯ. ಪಾರಂಪರಿಕವಾದ ತಮ್ಮ ಕಸುಬುಗಳನ್ನು ತ್ಯಜಿಸಿ ಪರ್ಯಾಯ ವೃತ್ತಿಗಳನ್ನು ಕೈಗೊಂಡರು. ಎಂ.ಸಿ.ಎಫ್, ಕುದುರೆ ಮುಖ, ಎಂ.ಆರ್.ಪಿ.ಎಲ್ ನಂತಹ ಕಾರ್ಖಾನೆಗಳಲ್ಲಿ ದುಡಿಯುವಾಗ ಯಂತ್ರಗಳೊಂದಿಗೆ ಹಾಗೂ ಕಛೇರಿಗಳಲ್ಲಿ ದುಡಿಯುವುದು ಅವಶ್ಯವಾಗಿತ್ತು. ಆಸ್ಪತ್ರೆ, ಶಿಕ್ಷಣ ಸಂಸ್ಥೆಗಳು, ಕಾರ್ಖಾನೆಗಳು, ಸಾರಿಗೆ, ಸಂಪರ್ಕಗಳು, ಸರಕಾರಿ ಕೆಲಸಗಳು, ಉದ್ದಿಮೆಗಳು, ಬ್ಯಾಂಕ್ ಹಣಕಾಸು ಸಂಸ್ಥೆಗಳು, ಸಹಕಾರಿ ಸಂಘಗಳು ಹೀಗೆ ಆಧುನಿಕವಾದ ಸಂಸ್ಥೆ ಉದ್ದಿಮೆಗಳಲ್ಲಿ ದುಡಿಯುವ ಅನಿವಾರ್ಯತೆ ಒದಗಿತು. ಕೃಷಿ ಕಾರ್ಯಕ್ಕಿಂತ ಭಿನ್ನವಾದ ಓದಿದ ವಿದ್ಯಾವಂತ ವರ್ಗಕ್ಕೆ ಈ ಕೆಲಸಗಳು ಸಿಕ್ಕವು. ಅದರಲ್ಲೂ ಶ್ರೀಮಂತ ಭೂಮಾಲಿಕತ್ವವನ್ನು ಹೊಂದಿದ ಸಾಮಾಜಿಕವಾಗಿ ವಶೀಲಿ ಸ್ಥಾನಮಾನಗಳಿರುವವರಿಗೆ ಮೊದಲ ಆಧ್ಯತೆಗಳು ಸಿಕ್ಕವು. ಅವೆಲ್ಲಕ್ಕಿಂತ ಶ್ರೀಮಂತ ಭೂಮಾಲೀಕರ ಮಕ್ಕಳು ಡಾಕ್ಟರ್‌ಗಳು, ಇಂಜಿನೀಯರ್‌ಗಳಾಗಿ ದೇಶದಾದ್ಯಂತ ಮಾತ್ರವಲ್ಲ ವಿದೇಶಗಳಲ್ಲಿ ನೆಲೆನಿಂತು ಇನ್ನಷ್ಟು ಸ್ಥಿತಿವಂತರಾದರು. ಭೂಮಿಯ ಒಡೆತನದ ಸ್ವರೂಪ ಮತ್ತಷ್ಟು ವಿಸ್ತರಿಸಿತು ಮತ್ತು ಬದಲಾಯಿತು. ಹಳ್ಳಿಯಲ್ಲೊಂದು ಮನೆ ಇದ್ದರೂ ನಗರದಲ್ಲೊಂದು ಫ್ಲಾಟು, ಐಷಾರಾಮಕ್ಕೆ ಫಾರ್ಮ್ ಹೌಸ್‌ಗಳು ನಿರ್ಮಾಣಗೊಂಡವು. ಸ್ಥಿತಿವಂತರ ಮಕ್ಕಳಿಗೆ ಓದು, ವಿದ್ಯೆ ಉದ್ಯೋಗ ಸರಳವಾದಷ್ಟು ಉಳಿದ ವರ್ಗಕ್ಕೆ ಸಾಧ್ಯವಾಗಲಿಲ್ಲ.

ಖಾಸಗಿ ಭೂಮಿಯ ಒಡೆತನ ಹೊಂದಿದ ಸಣ್ಣ ಹಿಡುವಳಿದಾರರಿಗೆ ಅತ್ತ ಕಡೆ ಕೃಷಿಯನ್ನು ಮಾಡುವುದು ಲಾಭದಾಯಕವೆನಿಸಲಿಲ್ಲ. ಅವರು ಅಲ್ಪ ಸ್ವಲ್ಪ ಗದ್ದೆಗಳನ್ನು ಸಾಗುವಳಿ ಮಾಡಿದರೂ ಅದರ ವೆಚ್ಚವೇ ಹೆಚ್ಚೆನಿಸಿತು. ಆದರೂ ಕೃಷಿ ಚಟುವಟಿಕೆಗಳನ್ನು ಕೈ ಬಿಡದೆ ಉಪಕಸುಬುಗಳು, ಸಣ್ಣ ಪುಟ್ಟ ಕೆಲಸಗಳನ್ನು ಮಾಡತೊಡಗಿದರು. ಸಮೀಪದ ಅಂಗಡಿ ಮುಗ್ಗಟ್ಟುಗಳಲ್ಲದೆ ಕಾರ್ಖಾನೆಗಳಲ್ಲಿ ಕಾರಕೂನರಾಗಿಯೂ ದುಡಿಯತೊಡಗಿದರು. ಉನ್ನತ ಸ್ಥಾನಮಾನಗಳ ಕೈತುಂಬಾ ಸಂಬಳದ ಕೆಲಸಗಳು ಲಭಿಸದೆ ಇದ್ದರೂ ಸಣ್ಣ ಪುಟ್ಟ ಉದ್ಯೋಗ ಮಾಡುವುದು ಅನಿವಾರ್ಯವಾಯಿತು. ದೊಡ್ಡ ದೊಡ್ಡ ಅಂಗಡಿ ಮುಗ್ಗಟ್ಟುಗಳ ವ್ಯವಹಾರಗಳನ್ನು ನಡೆಸುವಷ್ಟು ಆದಾಯ ಇವರಲ್ಲಿಲ್ಲ. ಹಾಗಾಗಿ ಭೂಮಾಲೀಕರು ಸ್ಥಾಪಿಸಿದ ವಿಸ್ತಾರವಾದ ಭೂಮಿಯ ಬಲದಿಂದ ಹೂಡಿಕೆಯಾದ ಹಣಕಾಸಿನ ಸಂಸ್ಥೆಗಳಲ್ಲಿ ಈ ವರ್ಗದ ಜನರಿಗೆ ದುಡಿಯುವುದು ಅನಿವಾರ್ಯವಾಯಿತು. ಇವರ ಮಕ್ಕಳು ಓದಿ ಉನ್ನತ ಸ್ಥಾನವನ್ನೇರುವುದು ಬಹಳ ಕಡಿಮೆ. ಶಾಲಾ ಮಾಸ್ತರರಾಗಿಯೋ, ಆಸ್ಪತ್ರೆಗಳ ನರ್ಸ್‌ಗಳಾಗಿಯೋ ಕೆಲಸ ಮಾಡಿದರು. ಪರಿಣಾಮ ಮಧ್ಯಮ

ವರ್ಗವೊಂದರ ಉದಯವಾಯಿತು. ಈ ವರ್ಗ ಮೇಲ್ವರ್ಗ ಮತ್ತು ಮೇಲ್ಜಾತಿಯವರೊಂದಿಗೆ ಸ್ಪರ್ಧಿಸುತ್ತ ತಮ್ಮ ಅಸ್ಮಿತೆಯನ್ನು ಉಳಿಸಿಕೊಳ್ಳಲು ಪ್ರಯತ್ನಿಸಿದರು. ತಮ್ಮ ಮಕ್ಕಳು ವೈದ್ಯರಾಗುವ ಇಂಜಿನಿಯರ್‌ಗಳಾಗುವ ಕನಸಿನಲ್ಲಿ ಕೃಷಿ ಕಾರ್ಯಗಳು ಹಿನ್ನೆಡೆಗೆ ಸರಿದವು, ಸ್ವತಂತ್ರವಾದ ಭೂಮಿಯ ಒಡೆತನ ಇದ್ದುದರಿಂದ ಇದ್ದ ಅಲ್ಪ ಸ್ವಲ್ಪ ಭೂಮಿಯನ್ನು ಉಳ್ಳವರಿಗೆ ದಕ್ಕಿದ ಬೆಲೆಗೆ ಮಾರಾಟ ಮಾಡಿ ಪಟ್ಟಣ ಸೇರುವ ಪ್ರಯತ್ನಗಳೂ ನಡೆದವು.

ಗೇಣಿದಾರರಾಗಿ ಬಾಳುತ್ತಿದ್ದವರು ತಾವು ಬೆವರು ಸುರಿಸಿ ಬೆಳೆದ ಬೆಳೆಯಲ್ಲಿ ಅರ್ಧಕ್ಕಿಂತ ಹೆಚ್ಚು ಭೂಮಾಲೀಕರಿಗೆ ಗೇಣಿಯಾಗಿಯೇ ಕೊಡಬೇಕಾಗುತ್ತಿತ್ತು. ಗೇಣಿ ಕೊಡಲಿಲ್ಲವೆಂದರೆ ಅವರನ್ನು ಹೆದರಿಸಿ ಬೆದರಿಸಿ ರಾತ್ರಿ ಹಗಲಾಗುವುದರ ಒಳಗಾಗಿ ಒಕ್ಕಲೆಬ್ಬಿಸುವ ಕಾರ್ಯವೂ ಇತ್ತು. ತಾನು ಗೇಣಿದಾರನೆಂದು ಸಾಬೀತುಪಡಿಸಲು ಗೇಣಿ ರಶೀದಿ ಇದ್ದರೂ, ವಾಸವಿದ್ದ ಮನೆ ಅಧಿಕಾರದ ಬಲ, ಹಣ ಬಲದಿಂದ ಕ್ಷಣಾರ್ಧದಲ್ಲಿ ಗದ್ದೆಯಾಗಿಯೋ ತೋಟವಾಗಿಯೋ ಪರಿವರ್ತನೆಯಾಗುತ್ತಿತ್ತು. ಕೃಷಿಯನ್ನು ಬಿಟ್ಟು ಬೇರೆ ಕೂಲಿ ನಾಲಿ ಮಾಡಿ ಬದುಕಬೇಕಾದ ಅನಿವಾರ್ಯತೆಯೂ ಇತ್ತು. ಕಟ್ಟಡ ಕಾರ್ಮಿಕರಾಗಿಯೋ, ಅದಕ್ಕೆ ಪೂರಕವಾದ ಇನ್ನಿತರ ಕೆಲಸಗಳಲ್ಲಿ ತೊಡಗಿಕೊಳ್ಳುತ್ತಲೋ ಬಾಳುವುದು ಅನಿವಾರ್ಯವಾಗಿತ್ತು. ಉಳುವವನೇ ಹೊಲದೊಡೆಯ ಎಂಬ ಒಕ್ಕಲು ಮಸೂದೆ ಕಾನೂನು ಬಂದಾಗ ಗೇಣಿದಾರರಿಗೆ ಎಲ್ಲರಿಗೂ ಭೂಮಿಯ ಒಡೆತನ ಸಿಗಲಿಲ್ಲ. ಅಧಿಕಾರ ಕೇಂದ್ರದಲ್ಲಿ ಆಡಳಿತದಲ್ಲಿದ್ದ ಭೂಮಾಲೀಕರು ಕಾನೂನಿನ ಸುಳಿವು ಸಿಕ್ಕಾಗಲೇ ಗೇಣಿದಾರರನ್ನು ಒಕ್ಕಲು ಎಬ್ಬಿಸಿ ಭೂಮಿಯನ್ನು ತಮ್ಮ ಅಧೀನಕ್ಕೆ ಒಳಪಡಿಸಿಕೊಂಡರು. ಮತ್ತೆ ಕೆಲವು ಭೂಮಾಲೀಕರು ಗೇಣಿದಾರರ ಬಗ್ಗೆ ಮೃದು ಧೋರಣೆ ತಳೆದು ಅವರು ಉಳುಮೆ ಮಾಡುತ್ತಿದ್ದ ಭೂಮಿಯನ್ನು ಅವರಿಗೇ ಒಡೆಯರಾಗುವ ಅವಕಾಶವನ್ನು ಒದಗಿಸಿಕೊಟ್ಟರು. ಭೂಮಾಲೀಕರಾದ ಗೇಣಿದಾರರು ಕೃಷಿಯನ್ನು ಮುಂದುವರಿಸಿದರು. ಹದಿನೈದು ವರ್ಷಗಳವರೆಗೆ ಭೂಮಿಯನ್ನು ಪರಭಾರೆ ಮಾಡಬಾರದು ಎಂಬ ಕಾನೂನುಇದ್ದುದರಿಂದ ತಮಗೆ ಲಭಿಸಿದ ಭೂಮಿಯಲ್ಲಿ ದುಡಿಯುತ್ತಲೇ ಗೇಣಿ ಕೊಡಬೇಕಾದ ಸಂಕಟದಿಂದ ಮುಕ್ತರಾದರು. ಗೇಣಿ ಕೊಟ್ಟು ಬದುಕುತ್ತಿದ್ದವರಿಗೆ, ಗೇಣಿ ಇಲ್ಲದೆ ಕೃಷಿ ಕಾರ್ಯ ಮಾಡುವುದು ತ್ರಾಸದಾಯಕವೆನಿಸಿತು. ದುಡಿಯುವ ತಲೆಮಾರು ಹಳಬರಾದಂತೆಲ್ಲಾ ಯುವ ತಲೆಮಾರು ತಾವು ಪಡೆದ ಅಲ್ಪ ಸ್ವಲ್ಪ ಶಿಕ್ಷಣದಿಂದ ಹೊರ ದುಡಿಮೆಯ ರುಚಿ ಹತ್ತಿದರು. ಹಣದ ಸ್ವರೂಪದಲ್ಲಿ ನಿಗದಿತವಾಗಿ ಸಿಗುವ ಸಂಬಳದ ಮುಂದೆ, ಬೆವರು ಸುರಿಸಿ ದುಡಿದರೂ ಅಕಾಲಿಕ ಮಳೆ ರೋಗ, ಕ್ರಿಮಿ ಕೀಟಗಳಿಂದ ನಿಗದಿತ ಇಳುವರಿ ಲಭಿಸುತ್ತದೆ ಎನ್ನುವ ಅಭದ್ರತೆಯಿಂದ ಕೃಷಿಯ ಕಡೆಗೆ ಗಮನ ಕಡಿಮೆಯಾಯಿತು. ಪರ್ಯಾಯ ಬೆಳೆಗಳನ್ನಾಗಲೀ, ಅದನ್ನು ಲಾಭದಾಯಕಗೊಳಿಸುವ ಮಾರುಕಟ್ಟೆ ಯನ್ನಾಗಲೀ ರೈತರು ತಾವೇ ಅನ್ವೇಷಿಸಬೇಕಾದಾಗ ಕೃಷಿ ಚಟುವಟಿಕೆಗಳ ಮಧ್ಯೆ ಅಂತಹ ವ್ಯವಹಾರಗಳಿಗೆ ಹಣಕಾಸಿನ ಬೆಂಬಲವೂ ಇಲ್ಲದೆ ಸಾಲದ ಶೂಲಗಳನ್ನು ಏರಿದರು. ಒಂದಿಷ್ಟು ಗದ್ದೆ ಸಾಗುವಳಿಗಾಗಿ ಮಕ್ಕಳು ಹೊರ ದುಡಿಮೆಗೆ ತೆರಳಿದ ಮನಿಯಾರ್ಡರ್‌ನ ಬಲದಿಂದ ಕೃಷಿ ಚಟುವಟಿಕೆಗಳನ್ನು ತಮ್ಮ ಅಗತ್ಯತೆಗಳಿಗಾಗಿ ಮುಂದುವರಿಸಿದರು. ಯುವ ಪೀಳಿಗೆ ಹಳ್ಳಿಗಳನ್ನು ತ್ಯಜಿಸಿ ನಗರ ಸೇರಿದರೂ ಊರುಗಳಲ್ಲಿ ಒಬ್ಬರೋ,

ಇಬ್ಬರೋ ಮಕ್ಕಳು ಕೃಷಿಗಾಗಿ ನಿಂತರು. ತಂದೆಯ ಕಾಲಕ್ಕೆ ಆಸಕ್ತಿದಾಯಕವಾಗಿದ್ದ ಕೃಷಿ ಮಗನ ಕಾಲಕ್ಕೆ ಉತ್ಸಾಹದ ಕಾರ್ಯ ಚಟುವಟಿಕೆಯಾಗಲಿಲ್ಲ. ಇಲ್ಲಿಯೂ ಮುಂದಿನ ಪೀಳಿಗೆ ಕೃಷಿಯನ್ನು ವಿಸ್ತರಿಸಿದ ಮತ್ತು ಕೃಷಿ ಚಟುವಟಿಕೆಗಳ ಬಗೆಗೆ ನಿರಾಸಕ್ತಿ ತೋರಿದ ಎರಡೂ ವೈರುಧ್ಯಗಳೂ ನಡೆದವು. ಮನೆ ತುಂಬ ಮಕ್ಕಳಿದ್ದ ಕಾಲಕ್ಕೆ ಹಿರಿಯರು ಪರ ಊರಿಗೆ ತೆರಳಿ ಹಣ ಸಂಪಾದಿಸಿ ಕಳುಹಿಸಿದರೆ ಕಿರಿಯರು ಮನೆ ಮಾರು ಕೃಷಿ ಭೂಮಿಯನ್ನು ನೋಡಿಕೊಂಡು ಮನೆಯಲ್ಲೇ ನೆಲೆ ನಿಂತರು. ಜಾಣತನದಿಂದ ಸಾಗುವಳಿಯ ಮತ್ತು ಹೊರ ದುಡಿಮೆಯ ಕೆಲಸವನ್ನು ನಿರ್ವಹಿಸುತ್ತಾ ಯಶಸ್ವಿ ಕೃಷಿಕರಾದವರೂ ಇದ್ದಾರೆ. ಇನ್ನೊಂದು ನೆಲೆಯಲ್ಲಿ ಕೃಷಿಯ ಕಡೆಗೆ ಆಕರ್ಷಿತರಾಗದೆ ಹೊರ ದುಡಿಮೆಗೆ ಮಾತ್ರ ಗಮನಹರಿಸಿ ಆಹಾರದ ಸ್ವಾವಲಂಬನೆಯನ್ನು ಕಳಕೊಂಡವರೂ ಇದ್ದಾರೆ. ಒಂದೆರಡು ತಲೆಮಾರುಗಳಲ್ಲಿ ಅಲ್ಪ ಸ್ವಲ್ಪ ವಿದ್ಯಾವಂತರಾದವರಿಗೆ ಬೇರೆ ಕಸುಬುಗಳು ಮತ್ತು ವೃತ್ತಿ ಹೆಚ್ಚು ಆಕರ್ಷಣೀಯವಾಗಿ ಕಂಡಿತು. ತಲೆಮಾರುಗಳಲ್ಲಿ ಭೂಮಿ ಕುಟುಂಬದ ಒಳಗಡೆ ಭಾಗವಾಗಿ ಚೂರು ಚೂರುಗಳಾದಾಗ ಅದರಲ್ಲಿ ಬದುಕುವುದೂ ಕಷ್ಟವಾಗಿ ಪರಭಾರೆ ಮಾಡಿದವರೇ ಹೆಚ್ಚು. ಭೂಮಿ ಉಳಿಸಿಕೊಂಡವರು ಅದನ್ನು ಸಾಗುವಳಿ ಮಾಡದೆ ಅದನ್ನು ಹಡಿಲು ಹಾಕಿದರು. ಕಾರ್ತಿ ತಿಂಗಳ ಎಣೆಲು ಬೆಳೆಯೊಂದನ್ನು ಸುಲಭವಾಗಿ ಮಾಡಿ ಒಂದಿಷ್ಟು ಅಕ್ಕಿಯನ್ನು ಉತ್ಪಾದಿಸಿಕೊಂಡರು. ನಗರಗಳಿಗೆ ಬೇರೆ ಊರುಗಳಿಗೆ ವಲಸೆ ಉದ್ಯೋಗವನ್ನರಸಿ ತೆರಳುವುದು ಅನಿವಾರ್ಯವೆಂದು ಭಾವಿಸಿಕೊಂಡರು.

ಕೃಷಿ ಕೂಲಿ ಕಾರ್ಮಿಕರು ಮತ್ತು ಜೀತದಾಳುಗಳಾಗಿ ದುಡಿದವರು ಭೂಮಿಯ ಒಡೆಯರಾಗಿರಲಿಲ್ಲ. ಕೃಷಿ ಕೆಲಸಗಳನ್ನು ಮಾಡುತ್ತ ಹೊರ ದುಡಿಮೆಯಲ್ಲಿಯೇ ಜೀವನ ಸಾಗಿಸುತ್ತಿದ್ದವರಿಗೆ ಅನ್ನದ ಮೂಲ ಒಡೆಯರ ಮನೆಯಂಗಳವೇ ಆಗಿತ್ತು. ಭೂಮಿಯ ಒಡೆಯರಾದವರು ಕೃಷಿಯನ್ನು ಉದ್ದಿಮೆಯಾಗಿ ಪರಿವರ್ತಿಸಿಕೊಳ್ಳುತ್ತಾ ಹೋದಂತೆ ಕೃಷಿಯ ಸ್ವರೂಪವೂ ಬದಲಾಯಿತು. ಇಲ್ಲಿ ಮಾನವ ಶ್ರಮಕ್ಕಿಂತ ಯಂತ್ರಗಳ ಬಳಕೆ ಹೆಚ್ಚಾಯಿತು. ಕೃಷಿಯ ಕೂಲಿಯಾಳುಗಳಾಗಿದ್ದವರು ತಮ್ಮ ಕೌಶಲ್ಯಗಳಿಗೆ ಬೆಲೆಯಿಲ್ಲದಂತಾದಾಗ ಅನಿವಾರ್ಯವಾಗಿ ಬೇರೆ ದುಡಿಮೆಯ ಕಡೆಗೆ ಗಮನ ಹರಿಸಬೇಕಾಯಿತು. ಉತ್ಪಾದನೆಯ ವರ್ಗದಲ್ಲಿ ಗುರುತಿಸಿಕೊಳ್ಳುವವರಿಗೆ ಆರ್ಥಿಕವಾದ ಯಾವ ಬಲಗಳು ಇರಲಿಲ್ಲ. ತಮ್ಮ ಶ್ರಮವಷ್ಟೇ ಬಂಡವಾಳವಾಗಿದ್ದ ಅವರಿಗೆ ಬೇರೆ ರೀತಿಯ ದುಡಿಮೆಗಳಲ್ಲಿ ಗುರುತಿಸಿಕೊಳ್ಳುವುದೂ ಅನಿವಾರ್ಯವಾಗಿತ್ತು.

ಕೃಷಿ ಕೂಲಿ ಕಾರ್ಮಿಕರು ಆಯಗಾರಿಕೆಯ ವೃತ್ತಿಗಳನ್ನು ಉಪವೃತ್ತಿಗಳನ್ನಾಗಿ ಮಾಡಿಕೊಂಡಿದ್ದವರು ಕೃಷಿ ಬದುಕು ಕಡಿಮೆಯಾದಂತೆಲ್ಲಾ ತಮ್ಮ ಕುಲ ಕಸುಬುಗಳನ್ನು ಪಲ್ಲಟಗೊಳಿಸಬೇಕಾಯಿತು. ಕಮ್ಮಾರರ ಕಮ್ಮಟ ಶಾಲೆಗಳಿಗೆ ಬದಲಾಗಿ ಕಬ್ಬಿಣವನ್ನು ದೊಡ್ಡ ಪ್ರಮಾಣದಲ್ಲಿ ಕರಗಿಸಿ ಸಲಕರಣೆಗಳನ್ನಾಗಿ ಮಾಡುವ ಕಾರ್ಖಾನೆಗಳು ಸೃಷ್ಟಿಗೊಂಡವು. ಅಚ್ಚಿಗೆ ಎರಕ ಹೊಯ್ದು ಕುಡುಗೋಲು, ಹಾರೆ, ಪಿಕ್ಕಾಸು, ನೇಗಿಲು, ನುಗದ ಗುಂಡಲ ಅಚ್ಚು ಮಾಡುತ್ತಿದ್ದ ಕುಲುಮೆಗಳು ಮೂಲೆ ಸೇರಿದವು. ಮಣ್ಣಿನ ಪಾತ್ರೆಗಳನ್ನು ಮಾಡುತ್ತಿದ್ದ ಕುಂಬಾರರ ಪಾತ್ರೆಗಳ ಸ್ಥಾನಕ್ಕೆ ಅಲ್ಯೂಮಿನಿಯಂ, ಸ್ಟೀಲ್ ಪಾತ್ರೆಗಳು ಬಂದವು. ಭತ್ತ ನೆನೆ ಹಾಕಲು, ಬೇಯಿಸಲು ಸಿಮೆಂಟಿನ ಟ್ಯಾಂಕ್‌ಗಳಲ್ಲದೆ ಹಿತ್ತಾಳೆಯ ಹಂಡೆಗಳು ಬಳಕೆಯಾದವು. ಕೃಷಿಗೆ ಪೂರಕವಾದ

ಚಟುವಟಿಕೆಗಳಲ್ಲಿ ಪರ್ಯಾಯವಾದ ಕಚ್ಚಾವಸ್ತುಗಳ ಸಲಕರಣೆಗಳೂ ಬಳಕೆಯಾದವು. ಕಾರ್ಖಾನೆಗಳಲ್ಲಿ ನಿರ್ಮಿತವಾದ ಈ ಸಲಕರಣೆಗಳು ಕಡಿಮೆ ಬೆಲೆಗೆ ಲಭಿಸಿದಾಗ ಅದನ್ನು ಬಳಸಲಾರಂಭಿಸಿದರು.

ಪರಂಪರೆಯಿಂದ ಕುಲಕಸುಬಗಳು ನಶಿಸುತ್ತಾ ಹಿಂದುಳಿದ ವರ್ಗದವರು ತಮ್ಮ ಒಳಪಂಗಡಗಳ ಒಳಗಿನ ಕಸುಬುಗಳಲ್ಲಿ ಯಾವುದನ್ನಾದರೂ ಮಾಡಲು ಸಿದ್ಧರಿದ್ದರು. ಸಿಂಪಿಗ,ಆತ್ರ ದರ್ಜಿಯ ಕೆಲಸ ಮಾಡಬೇಕೆಂದಿದ್ದು, ಇಂದು ಎಲ್ಲ ಸಮುದಾಯದ ಜನರೂ ದರ್ಜಿಗಳಾಗಿದ್ದಾರೆ. ಪರಸ್ಪರ ಕೆಲಸಗಳು ಅದಲು ಬದಲಾಗುವುದರ ಮೂಲಕ ವೃತ್ತಿ ಪಲ್ಲಟಗೊಂಡಿತು. ಕುಂಬಾರ ಬಡಗಿಯಾಗಿ, ನೇಕಾರ ಗಾರೆ ಕೆಲಸದವನಾಗಿ, ಕ್ಷೌರಿಕ ಅಗಸನ ಕೆಲಸವನ್ನು ಮಾಡುವ ಪಲ್ಲಟ ಒಂದು ಹಂತದಲ್ಲಿ ನಡೆಯಿತು. ಅಧ್ಯಯನ ಬ್ರಾಹ್ಮಣರಿಗೆ ಮೀಸಲಿದ್ದುದು ಇಂಗ್ಲೀಷ್ ಶಿಕ್ಷಣ ಕ್ರಮದ ಜಾರಿಯಿಂದ ಬಡವರೂ ಸರಕಾರಿ ಶಾಲೆಗಳಲ್ಲಾದರೂ ನಾಲ್ಕಕ್ಷರ ಕಲಿಯಲು ಸಾಧ್ಯವಾಯಿತು. ಉನ್ನತ ವಿದ್ಯಾಭ್ಯಾಸವನ್ನು ಹೊಂದಿ ಉನ್ನತ ಸ್ಥಾನಗಳಿಗೆ ಏರಲಾಗದಿದ್ದರೂ ಸಣ್ಣ ಪುಟ್ಟ ಕೆಲಸಗಳನ್ನು ನಿರ್ವಹಿಸಿದರು. ನಗರೀಕರಣ ಮತ್ತು ಆಧುನಿಕತೆಯು ಹುಟ್ಟು ಹಾಕಿದ ಹೊಸ ಸ್ವರೂಪದ ಶ್ರಮದಾಯಕವಾದ ಉದ್ಯೋಗಗಳಲ್ಲಿ ಕೃಷಿ ಕೂಲಿ ಕಾರ್ಮಿಕರು ಮತ್ತು ಅವರ ಮಕ್ಕಳೇ ಗುರುತಿಸಿಕೊಂಡರು. ಸಾರಿಗೆ ಸಂಪರ್ಕದ ಬಸ್‌ಗಳಲ್ಲಿ ಚಾಲಕ ನಿರ್ವಹಕರಾಗಿ, ಮಾಲ್‌ಗಳಲ್ಲಿ ಸಹಾಯಕರಾಗಿ, ಕಾರ್ಖಾನೆಗಳಲ್ಲಿ ಕಾರಕೂನರಾಗಿ ದುಡಿಯುತ್ತಿದ್ದರು. ನಗರಗಳು ಬೆಳೆದಂತೆಲ್ಲ ನಗರಕೇಂದ್ರ ಭಾಗಗಳಲ್ಲಿ ಸಣ್ಣ ಸಣ್ಣ ಮನೆಗಳಲ್ಲಿ ಒಂದರ್ಥದಲ್ಲಿ ಸ್ಲಮ್‌ಗಳಲ್ಲಿ ಬಾಳುವುದಷ್ಟೇಅವರ ದುಡಿಮೆಯಿಂದ ಬಾಳುವುದು ಸಾಧ್ಯವಾಗುತ್ತಿತ್ತು. ಶ್ರೀಮಂತರು ವಾಸವಾಗಿರುವ ಏರಿಯಾಗಳ ಕಡೆ ತಲೆ ಹಾಕಲೂ ಅವರಿಗೆ ಸಾಧ್ಯವಿಲ್ಲ. ನಗರದಲ್ಲೂ ಬಡವರು ಮತ್ತು ಶ್ರೀಮಂತರ ಮಧ್ಯದ ವ್ಯತ್ಯಾಸ ಕಣ್ಣಿಗೆ ರಾಚುವಂತೆ ಇಂದಿಗೂ ಗೋಚರಿಸುತ್ತದೆ.

ಜೀತದಾಳುಗಳಾಗಿ ದುಡಿಯುತ್ತಿದ್ದು ಅಸ್ಪೃಶ್ಯರಂತೆ ನಡೆಸಿಕೊಳ್ಳುತ್ತಿದ್ದ ಕಾಡಿನ ಬುಡಕಟ್ಟು ಸಮುದಾಯಗಳಿಗೆ ಕಾಡಿನಿಂದ ನಾಡಿಗೆ ಬಂದು ಕೃಷಿ ಜಗತ್ತಲ್ಲಿ ದಾಖಲುಗೊಳ್ಳುವುದೇ ಒಂದು ಹೋರಾಟ. ಕೃಷಿ ಕಾರ್ಯ ಮತ್ತು ಅದಕ್ಕೆ ಪೂರಕವಾದ ವಸ್ತುಗಳಾದ ಗೆರಸೆ, ಬುಟ್ಟಿ, ಹೆಡಿಗೆ, ಅಳತೆಯ ಮಾಪನಗಳಾದ ಸೇರು, ಪಾವು, ಸಣ್ಣ ಹೆಡಿಗೆ, ಹೀಗೆ ಹಲವಾರು ಸಲಕರಣೆಗಳನ್ನು ತಯಾರಿಸುತ್ತಿದ್ದರು. ಕಾಡಿಗೆ ತೆರಳಿ ಅಲ್ಲಿಯ ಬಿಳಲುಗಳನ್ನು ಆಯ್ದು ತಂದು ಈ ವಸ್ತುಗಳನ್ನು ನಿರ್ಮಿಸುತ್ತಿದ್ದರು. ಬಿಳಲನ್ನು ಗುರುತಿಸಿ ಸಂಗ್ರಹಿಸಿ ಬೇಕಾದಂತೆ ಬಳಸಿಕೊಂಡು ನಿರ್ಮಿಸುವುದು ಸುಲಭ ಸಾಧ್ಯವಾದ ಕೆಲಸವಲ್ಲ. ಬಹಳಷ್ಟು ದೈಹಿಕ ಶ್ರಮ, ತಾಳ್ಮೆಯಿಂದ ನಿರ್ವಹಿಸುವ ಈ ಜ್ಞಾನ ಕೌಶಲ್ಯ ಕೃಷಿ ಜಗತ್ತು ಕ್ಷಯವಾಗುತ್ತಿದ್ದಂತೆ ಬೆಲೆಯನ್ನು ಕಳಕೊಂಡಿತು. ಯಾವುದೇ ತುಂಡು ಭೂಮಿಯ ಒಡೆತನ ಇಲ್ಲದೆ ಕೇವಲ ಮಾನವ ಶ್ರಮದಿಂದ ಬಾಳಿದ ಜೀತದಾಳುಗಳಾಗಿ ನಿಗದಿತವಾದ ಕೂಲಿ ಇರಲಿಲ್ಲ. ಒಡೆಯನ ಮನೆಯ ದುಡಿತ ಮಾತ್ರ ನಿರಂತರವಾಗಿ ಇತ್ತು. ಕೃಷಿ ಕಡಿಮೆಯಾಗುತ್ತಿದ್ದಂತೆ ಅವರಿಗೆ ಸಿಕ್ಕ ಪರ್ಯಾಯ ಕೆಲಸಗಳಾದರೂ ಯಾವುದು? ನಗರದ ಬೀದಿಗಳನ್ನು ಗುಡಿಸುವ ಪೌರಕಾರ್ಮಿಕರಾಗಿ ಅಲ್ಲಿಯೂ ದಿನಗೂಲಿಗಳಾಗಿಯೇ ಕಾರ್ಯ ನಿರ್ವಹಿಸಬೇಕಾಯಿತು. ಕೊಳಚೆ ಬಾಚುವ ಕೆಲಸದಿಂದ ಆಧುನಿಕ ಸಮಾಜ ವ್ಯವಸ್ಥೆಯಲ್ಲೂ ಅಸ್ಪೃಶ್ಯರನ್ನಾಗಿಯೇ ಉಳಿಸಿಕೊಳ್ಳಲಾಯಿತು.

ಕರಾವಳಿಯಲ್ಲಿ ಕುದ್ಮುಲ್ ರಂಗರಾಯರು ೧೮೩೦ ರಲ್ಲಿಯೇ ಕೊರಗರಿಗಾಗಿ ಶಾಲೆಗಳನ್ನು ಡಿ.ಸಿ.ಎಂ ಸಂಸ್ಥೆಗಳನ್ನು ತೆರೆದರೂ ಇಂದಿಗೂ ಕೊರಗರ ಶೈಕ್ಷಣಿಕ ಮಟ್ಟ ಮತ್ತು ಜೀವನ ಮಟ್ಟ ಸುಧಾರಣೆಯಾಗಿಲ್ಲ. ಕೂಲಿಯಾಳುಗಳಾಗಿ ದುಡಿಯುತ್ತಿರುವ ಇವರು ಅತ್ಯಂತ ಕನಿಷ್ಠತಮ ಕೂಲಿಯನ್ನೇ ಪಡೆಯುತ್ತಾರೆ. ಇಲ್ಲದೆ ಹೋದರೆ ಅವರಿಗಿರುವ ಆಯ್ಕೆ ಪೌರಕಾರ್ಮಿಕ ವೃತ್ತಿ. ತಮ್ಮ ಕುಲಕಸುಬುಗಳನ್ನು ಸರಕಾರದ ಸಹಾಯಧನದಿಂದ ಮುಂದುವರಿಸಿಕೊಂಡು ಬಂದರೂ ಮಾರುಕಟ್ಟೆ ಇಲ್ಲದೆ ಸರಿಯಾದ ಬೆಲೆ ಸಿಗದೆ ಮತ್ತೆ ಕಡು ಬಡವರಾಗಿಯೇ ಉಳಿದಿದ್ದಾರೆ. ಆಧುನಿಕ ಶಿಕ್ಷಣಕ್ಕೂ ಪೂರ್ವ ಪ್ರಮಾಣದಲ್ಲಿ ತೆರೆದುಕೊಂಡಿಲ್ಲ. ಉಳಿದ ಸಮುದಾಯಗಳ ಸ್ಥಿತಿಯೂ ಭಿನ್ನವಾಗಿಲ್ಲ. ಬೇಟೆ ಮತ್ತು ಕೃಷಿಯ ಭಾಗವಾಗಿ ಬಾಳುತ್ತಿದ್ದವರಿಗೆ ಇಂದು ಬೇಟೆಯಾಡಲು ಕಾಡೂ ಉಳಿದಿಲ್ಲ. ಕೃಷಿ ಮಾಡಲು ಗದ್ದೆಯೂ ಉಳಿದಿಲ್ಲ. ಆಹಾರದ ಮೂಲಕ್ಕಾಗಿ ಮತ್ತೆ ಶ್ರಮಿಕರಾಗಿಯೇ ಉಳಿಯ ಬೇಕಾದ ಅನಿವಾರ್ಯತೆಯಿದೆ. ಭೂ ರಹಿತರಾಗಿ ತೀರಾ ಕೆಟ್ಟ ಸಾಮಾಜಿಕ ಮತ್ತು ಆರ್ಥಿಕ ಸ್ಥಿತಿಯಲ್ಲಿರುವ ಇವರಿಗೆ ಆಹಾರದ ಸ್ವಾವಲಂಬನೆಯಂತೂ ಕನಸಿನ ಮಾತೇ ಆಗುಳಿಯುತ್ತದೆ. ಸಮಾಜದಲ್ಲಿ ಭೂಮಿ ಎಂಬುದು ಇಂದಿಗೂ ಸ್ವಾಭಿಮಾನದ ಪ್ರಶ್ನೆಯಾಗಿದೆ. ಸಾಮಾಜಿಕ ಅಂತಸ್ತಿನ ಸ್ಥಾನಮಾನದ ಪ್ರಶ್ನೆಯಾಗಿದೆ. ಸಾಮಾಜಿಕ ಮತ್ತು ಆರ್ಥಿಕ ಸ್ಥಾನಮಾನಕ್ಕೂ ಭೂ ಒಡೆತನಕ್ಕೂ ಸಂಬಂಧವಿದೆ. ಇಂದಿಗೂ ದಲಿತರು ಸರಕಾರ ಉಚಿತವಾಗಿ ಕೊಟ್ಟ ಊರ ಹೊರಗಿನ ಗುಡ್ಡಗಳಲ್ಲೂ, ಕೇರಿಗಳಲ್ಲೂ ಬದುಕುತ್ತಿದ್ದಾರೆ. ಮೂಲಭೂತ ಅವಶ್ಯಕತೆಗಳಿಗೂ ಪರದಾಡುವಂತಹ ಸ್ಥಿತಿಯಲ್ಲಿದ್ದು, ಅತಿ ಕಡು ಬಡವರಾಗಿಯೇ ಜೀವನ ನಿರ್ವಹಣೆ ಮಾಡುತ್ತಿದ್ದಾರೆ. ಪರಿಪೂರ್ಣವಲ್ಲದ ವಿದ್ಯಾಭ್ಯಾಸ, ಮೀಸಲಾತಿ ಇದ್ದರೂ ಎದುರಿಸಲಾಗದ ಸ್ಪರ್ಧೆ, ಸರಕಾರದ ನಿಯಮಾವಳಿಯಂತೆ ಒದಗಿಸಲಾಗದ ದಾಖಲಾತಿಗಳು, ಬಡವರೂ ನಿರಕ್ಷರರೂ ಆದ ಸಮುದಾಯಗಳ ಮೊದಲ ತಲೆಮಾರು ಪೂರ್ಣ ಸ್ವತಂತ್ರರಾಗಿ ಆರ್ಥಿಕ ಸ್ವಾವಲಂಬಿಗಳಾಗಲು ಸಾಧ್ಯವಾಗುತ್ತಿಲ್ಲ. ಮೀಸಲಾತಿಯಲ್ಲೂ ಕೇವಲ ೮% ಫಲಾನುಭವಿಗಳನ್ನು ಮಾತ್ರ ಪರಿಪೂರ್ಣಗೊಳಿಸಿಕೊಂಡ, ದಲಿತ ಸಮುದಾಯ ತಮ್ಮ ಕುಲಕಸುಬುಗಳನ್ನು ದಾಟಿ ವೃತ್ತಿಯನ್ನು ಪಲ್ಲಟಗೊಳಿಸಿಕೊಳ್ಳಲು ಸಾಧ್ಯವಾಗಿಲ್ಲ. ಮೇಲ್ವರ್ಗದ, ಮೇಲ್ಜಾತಿಯ ಬಂಡವಾಳ ಶಾಹಿಗಳಂತೆ ವ್ಯಾಪಾರೀ ಕ್ಷೇತ್ರದಲ್ಲಿ ಗುರುತಿಸಿಕೊಳ್ಳುವ ಕಾರ್ಖಾನೆಗಳ ಮಾಲೀಕರಾದವರ ಸಂಖ್ಯೆಯೂ ಕೋಟಿಗೊಬ್ಬನಂತಿದೆ. ಇಂದಿಗೂ ದಲಿತರು ತಮ್ಮ ದೈಹಿಕ ಕ್ಷಮತೆ ಮತ್ತು ಸಾಮರ್ಥ್ಯವನ್ನು ಬಯಸುವ ಕಾರಕೂನರಾಗಿ, ಕೂಲಿಯಾಳುಗಳಾಗಿ, ಕಟ್ಟಡ ಕಾರ್ಮಿಕರಾಗಿ ದುಡಿಯುತ್ತಿದ್ದಾರೆ. ದುಡಿದರೆ ಅನ್ನ ಇಲ್ಲದಿದ್ದರೆ ಇಲ್ಲ ಎಂಬ ಸ್ಥಿತಿ ಇಂದಿಗೂ ಇದೆ. ದುಡಿಮೆಯಲ್ಲಿ ಲಿಂಗ ವ್ಯತ್ಯಾಸವಿಲ್ಲದಿದ್ದರೂ, ಪಡೆಯುವ ಸಂಬಳದಲ್ಲಿ ವ್ಯತ್ಯಾಸವಿದೆ. ಹಿಂದಿನಿಂದಲೂ ಗಂಡು ಮತ್ತು ಹೆಣ್ಣು ವ್ಯತ್ಯಾಸವಿಲ್ಲದೆ ದುಡಿಯುತ್ತಿದ್ದ ಸಮುದಾಯಗಳಲ್ಲಿ ಶ್ರಮದ ಹಂಚಿಕೆಯೂ ಸಮಾನವಾಗಿತ್ತು.

ಆಧುನಿಕತೆ ತಂದ ವೈಪರೀತ್ಯಗಳಲ್ಲಿ ಒಂದೆಡೆ ಜಾತಿಯ ಸ್ವರೂಪಗಳು ಸಂಕೀರ್ಣವಾದರೆ ಇನ್ನೊಂದೆಡೆ ವೃತ್ತಿಯೂ ತೀರಾ ಸಂಕೀರ್ಣವಾಗುತ್ತ ಪಲ್ಲಟಗೊಂಡಿತು. ವೃತ್ತಿಯ ಸ್ವರೂಪಗಳು ಬದಲಾಗುವುದರೊಂದಿಗೆ ಪಾರಂಪರಿಕ ಕಸುಬುಗಳ ಕೌಶಲ್ಯಕ್ಕಿಂತ, ಆಧುನಿಕತೆ, ಯಾಂತ್ರಿಕತೆ , ತಾಂತ್ರಿಕತೆಯ

ಹೊಸ ಆವಿಷ್ಕಾರಗಳು ಮತ್ತು ಅವುಗಳೊಂದಿಗೆ ಕಾರ್ಯ ರೂಪಕ್ಕಿಳಿಸಿ ಮಾಡಬೇಕಾದ ಕಾರ್ಯಕ್ಷಮತೆಗಳು ಪ್ರಮುಖವಾದವು. ಕೃಷಿ ಮತ್ತು ವ್ಯಾಪಾರ ಆರಂಭದ ವೃತ್ತಿ ಪಲ್ಲಟಗಳಿಗೆ ಕಾರಣವಾಯಿತು. ವರ್ಣವ್ಯವಸ್ಥೆಯಲ್ಲೂ ಕಸುಬುಗಳು ಪಲ್ಲಟಗೊಂಡು ಕ್ಷತ್ರಿಯ ಮತ್ತು ಬ್ರಾಹ್ಮಣರು ಸಾಮಾಜಿಕ ಘನತೆಯನ್ನು ಕಂಡುಕೊಂಡಿದ್ದನ್ನು ಈಗಾಗಲೇ ಗಮನಿಸಿದ್ದೇವೆ. ಅನ್ನದ ಮೂಲ ಕೃಷಿಯೇ ಆಗಿದ್ದರೂ ಅಧಿಕಾರ ಮತ್ತು ಪ್ರಭುತ್ವ ಅಧ್ಯಯನ ಮತ್ತು ವ್ಯಾಪಾರದ ಕಡೆಗೆ ವಾಲಿತ್ತು.

ಕೃಷಿ ಸಂಸ್ಕೃತಿಯಿಂದಲೇ ವೃತ್ತಿಗಳು ಪಲ್ಲಟಗೊಂಡವು ಎನ್ನುವ ಸರಳ ತೀರ್ಮಾನಕ್ಕಿಂತ ಕಾಲಾಂತರದಲ್ಲಿ ಸಾಮಾಜಿಕ ಆರ್ಥಿಕ ಕಾರಣಗಳಿಗಾಗಿ ವೃತ್ತಿಗಳು ಪಲ್ಲಟವಾಗುತ್ತ ಬಂದಿವೆ. ನಾಗರಿಕತೆಯ ಅಂಶವಾಗಿ ಗುರುತಿಸುವ ಕೃಷಿ ಸಂಸ್ಕೃತಿಯ ಬೇರೆ ಬೇರೆ ಹಂತದಲ್ಲಿ ಇದು ಬೇರೆ ಬೇರೆ ಸ್ವರೂಪವನ್ನು ಪಡೆಯುತ್ತಾ ಸಾಗಿತು. ಕೃಷಿಯ ಅನ್ವೇಷಣೆಯ ಹಂತ, ವಿಸ್ತರಣೆಯ ಹಂತ, ನಿರ್ವಹಣೆ, ಬದಲಾವಣೆ ಮತ್ತು ಕಾಣೆ ಎನ್ನುವ ಐದು ಹಂತಗಳಲ್ಲೂ ವೃತ್ತಿಗಳ ಸ್ವರೂಪಗಳು ಬದಲಾಗಲು ಒಂದೊಂದು ಹಂತದಲ್ಲಿ ಅನೇಕ ಕಾರಣಗಳಿದ್ದವು. ರಾಜಕೀಯವಾದ, ಕೌಟುಂಬಿಕವಾದ ಕಾರಣಗಳು ಇಲ್ಲಿ ಪ್ರಮುಖವಾದವು. ವಸಾಹತು ಶಾಹಿ ಆಡಳಿತದ ಪೂರ್ವದಲ್ಲಿ ಆದ ವೃತ್ತಿ ಪಲ್ಲಟ ಒಂದು ಸ್ವರೂಪದ್ದಾಗಿದೆ. ರಾಷ್ಟ್ರ ಪರಿಕಲ್ಪನೆಯಲ್ಲಿ ರಾಷ್ಟ್ರೀಯ ಚಳುವಳಿಯ ನಂತರ ಸ್ವತಂತ್ರಗೊಂಡ ಭಾರತದ ಆರ್ಥಿಕಾಭಿವೃದ್ಧಿ , ಹಸಿರು ಕ್ರಾಂತಿ, ಕೈಗಾರಿಕಾ ಕ್ರಾಂತಿಗಳು ಪ್ರಮುಖ ಸ್ಥಿತ್ಯಂತರಗಳು. ಕೃಷಿ ಚಟುವಟಿಕೆಗಳನ್ನು ವೈಜ್ಞಾನಿಕವಾಗಿ ಯಂತ್ರಗಳ ಸಹಾಯದಿಂದ ಮಾಡುವುದರೊಂದಿಗೆ ಆಯಗಾರಿಕೆಯ ಕಸುಬುಗಳೊಂದಿಗೆ ಸಾಂಪ್ರದಾಯಿಕ ಕೃಷಿಯೂ ಹಿನ್ನೆಡೆಗೆ ಸರಿಯಿತು. ಕಡಿಮೆ ಭೂಮಿ ಕಡಿಮೆ ಶ್ರಮ ಮತ್ತು ಹೆಚ್ಚು ಇಳುವರಿಯನ್ನು ಪಡೆಯುವ ಉದ್ದೇಶದೊಂದಿಗೆ ಕೃಷಿ ಚಟುವಟಿಕೆಗಳು ಬಿರುಸುಗೊಂಡವು. ವಿಸ್ತಾರವಾದ ಕೃಷಿ ಭೂಮಿಗಳು ಶ್ರೀಮಂತ ಬಂಡವಾಳ ಶಾಹಿಗಳಿಗೆ ಕೈಗಾರಿಕೆಗಾಗಿ ಉದಾರವಾಗಿ ನೀಡಲಾಯಿತು. ಕೃಷಿ ಅಲ್ಲೂ ಕುಂಠಿತಗೊಂಡಿತು.

೧೯೭೦ಳರಲ್ಲಿ ಬಂದ ಒಕ್ಕಲು ಮಸೂದೆ ಕಾನೂನು ಭೂಮಿಯ ಒಡೆತನದಲ್ಲಿ ಪಲ್ಲಟವನ್ನು ತರುವುದರೊಂದಿಗೆ ವೃತ್ತಿಯೂ ಪಲ್ಲಟಗೊಂಡಿತು. ಭೂಮಿ ಕಳಕೊಂಡ ಭೂ ಮಾಲೀಕರು ಪರ್ಯಾಯ ಜೀವನೋಪಾಯಕ್ಕಾಗಿ ಹೊರನಡೆದು ವ್ಯಾಪಾರ ವ್ಯವಹಾರಗಳನ್ನು ಅಭಿವೃದ್ಧಿ ಪಡಿಸಿದರು. ತಾವು ಪಡೆದ ಅಕ್ಷರಾಭ್ಯಾಸದಿಂದ ಆಡಳಿತಶಾಹಿಯಲ್ಲೂ ಗುರುತಿಸಿಕೊಂಡರು. ವಸಾಹತು ಆಡಳಿತಕ್ಕೆ ಹತ್ತಿರಾದವರಿಗೆ ಮೇಲ್ವರ್ಗದವರಿಗೆ ಉಚಿತವಾಗಿ ಭೂಮಿಯ ಒಡೆತನವೂ ಸಿಕ್ಕಿತ್ತು. ಹಳ್ಳಿಯ ಶಾನುಭೋಗರು ಮತ್ತು ಪಟೇಲರು ಭೂಮಾಲೀಕರಾದ ಮೇಲ್ವರ್ಗದವರೇ ಆಗಿದ್ದು ಆ ಮೂಲಕ ತಮ್ಮ ಕೃಷಿಯೊಂದಿಗೆ ಉಪ ವೃತ್ತಿಯನ್ನು ಗುರುತಿಸಿಕೊಂಡರು. ಒಕ್ಕಲುಗಳಾಗಿ, ಗೇಣಿದಾರರಾಗಿದ್ದವರೂ ಕೃಷಿಯನ್ನು ನಿರ್ವಹಿಸಿದರೂ, ಭೂಮಿಯ ಒಡೆತನದೊಂದಿಗೆ ಕುಟುಂಬಗಳೂ ವಿಭಕ್ತಗೊಂಡವು.ಕೃಷಿ ಚಟುವಟಿಕೆಗೆ ಮಾನವ ಸಂಪನ್ಮೂಲದ ಕೊರತೆಯಿಂದ ತ್ರಾಸದಾಯಕವೆನಿಸಹತ್ತಿತ್ತು. ಅಲ್ಪ ಸ್ವಲ್ಪ ಅಕ್ಷರ ಜ್ಞಾನವು ಹೊರವಲಸೆಗೆ ಕಾರಣವಾಗಿ ಮೇಲ್ವರ್ಗದವರ ಮಾದರಿಯನ್ನೇಅವರೂ ಅನುಸರಿಸಿದರು. ಸಣ್ಣ-ಪುಟ್ಟ ಉದ್ಯೋಗ, ವ್ಯವಹಾರಗಳಲ್ಲಿ ತಮ್ಮನ್ನು ದಾಖಲುಗೊಳಿಸಿದರು.

ನಗರಗಳ ಸೃಷ್ಟಿಯಿಂದ ಹುಟ್ಟಿದ ಹೊಸ ರೂಪದ ಉದ್ಯೋಗಗಳು ಮತ್ತು ಅವುಗಳ ಕೌಶಲ್ಯಗಳನ್ನು ಕರಗತ ಮಾಡಿಕೊಂಡು ಹೊಸ ಪೀಳಿಗೆ ದುಡಿಯಲಾರಂಭಿಸಿತು. ನವ ನಾಗರಿಕತೆ ಸವಲತ್ತುಗಳ ಆಗರವಾಗಿ, ಹೆಚ್ಚು ಶ್ರಮ ಪಡದೆ ಬದುಕುವುದೇ ಸುಖವೆನಿಸಿ ಬದುಕಿನಲ್ಲಿ ಐಷಾರಾಮತೆ ಹೆಚ್ಚಿತು. ಜಾಗತೀಕರಣವು ಇಡೀ ಜಗತ್ತನ್ನೇ ಹಳ್ಳಿಯಾಗಿಸಿ, ಹಳ್ಳಿಯನ್ನು ಜಗತ್ತಿಗೆ ಸಂಪರ್ಕಿಸಿ, ಮುಕ್ತ ಮಾರುಕಟ್ಟೆಯಲ್ಲಿ ಕೃಷಿಯೂ ಉದ್ದಿಮೆಯಾಗಿ ಬೆಳೆಯಿತು. ಈ ಸ್ಪರ್ಧೆಯನ್ನು ಸಣ್ಣ ಹಿಡುವಳಿದಾರರಿಗೆ ಎದುರಿಸಲಾಗಲಿಲ್ಲ. ಸರಕಾರದ ಯೋಜನೆಗಳು ಸೌಲಭ್ಯಗಳು ದೊಡ್ಡ ಹಿಡುವಳಿದಾರರಿಗೆ ಮುಖ್ಯವಾಯಿತೇ ಹೊರತು ತುಂಡು ಭೂಮಿಯ ಬಡ ರೈತರು ಆತ್ಮಹತ್ಯೆಯ ದಾರಿ ಹಿಡಿದರು. ಯಾವುದೇ ಬೆಳೆಗೆ ಬೆಂಬಲ ಬೆಲೆಯೂ ಲಭಿಸಿದರೂ ಅದು ಹೆಕ್ಟೇರ್‌ಗಟ್ಟಲೆ ಬೆಳೆದವರಿಗೆ  ಮಾತ್ರ ಪ್ರಯೋಜನ ಎನ್ನುವಂತಿತ್ತು.  ಬೆಳೆದ ಬೆಳೆಗಳಿಗೆ ಮಾರುಕಟ್ಟೆಯ ಕೊರತೆ, ಅಸಮಾನ ಸ್ಪರ್ಧೆ, ಹೆಚ್ಚಿನ ಕೃಷಿ ಸಾಲಗಳು ಕೃಷಿಕರ  ಮಕ್ಕಳು ಕೃಷಿಕರಾಗಿಯೇ ಮುಂದುವರಿಯಲು ಹಿಂಜರಿಯುವಂತೆ ಮಾಡಿತು. ಪರಿಣಾಮ ಅನ್ಯ ಉದ್ಯೋಗಗಳನ್ನು ಅನ್ವೇಷಿಸುವುದು ಅನಿವಾರ್ಯವಾಯಿತು. ಕೃಷಿ ಕೂಲಿ ಕಾರ್ಮಿಕರು ಮತ್ತು ಜೀತದಾಳುಗಳ ಕುಟುಂಬದ ಪರಿಸ್ಥಿತಿಯೂ ಇದಕ್ಕಿಂತ ಭಿನ್ನವಾಗಿರಲಿಲ್ಲ. ಕೃಷಿ ಕಾಣೆಯಾದಂತೆಲ್ಲ ಅನ್ಯ ಉದ್ಯೋಗಗಳ ಅರಸುವಿಕೆಯಲ್ಲಿ  ಸಾಗುವ ಅವಶ್ಯಕತೆಯಿತ್ತು.  ತಮ್ಮ ದೈಹಿಕ ಶ್ರಮ ಮತ್ತು ಕೌಶಲ್ಯಗಳನ್ನು ಬೇರೆ ಸ್ವರೂಪದಲ್ಲಿ ಬಳಸಿಕೊಂಡರು.

ಆಧುನಿಕ ಜಗತ್ತಿನಲ್ಲೂ ಪಲ್ಲಟಗೊಂಡ ವೃತ್ತಿಗಳು ಏಕಸ್ವರೂಪದ ಏಕತಾನತೆಯಲ್ಲಿ ಮುಂದುವರಿಯಲಿಲ್ಲ. ಕೌಶಲ್ಯ, ಸ್ವರೂಪಗಳು ಮತ್ತೆ ಮತ್ತೆ ಹೊಸತನದತ್ತ ಮುಖ ಮಾಡಿತು. ತಂತ್ರಜ್ಞಾನದಲ್ಲಿ ಆಗುತ್ತಿರುವ ಹೊಸ ಸಂಶೋಧನೆಗಳು ವೈಜ್ಞಾನಿಕ ಅಂಶಗಳು ವೃತ್ತಿಯನ್ನು ಪಲ್ಲಟಗೊಳಿಸುತ್ತ ಹೋದವು. ಕೃಷಿ ಸಂಸ್ಕೃತಿಯ ಆರಂಭದ ಹಂತದಿಂದ ಇಂದಿನವರೆಗೂ ವೃತ್ತಿಗಳು ಪಲ್ಲಟಗೊಳ್ಳುತ್ತ ಹೋದವು. ಇಂದಿನ ಇತಿಹಾಸ, ಸಂಸ್ಕೃತಿಯ ಭಾಗವಾಗಿ ಸಾಮಾಜಿಕ ಮುಂಚಲನೆಯ ಕಾರಣವಾಗಿ ವೃತ್ತಿ ಪಲ್ಲಟ ಎನ್ನುವುದು ಹಲವಾರು ಹಂತಗಳನ್ನು ದಾಟಿ ಮುನ್ನಡೆದಿದ್ದರೂ ಇಂದು ಸಹಜವೆಂಬಂತೆ ಸ್ವೀಕರಿಸಲ್ಪಟ್ಟಿದೆ. ಆರಂಭಿಕವಾಗಿ ಹಲವು ವಿರೋಧ ಮತ್ತು ಪ್ರತಿರೋಧಗಳನ್ನು ಎದುರಿಸಿ ಬದಲಾವಣೆ ಜಗದ ನಿಯಮ ಎಂಬಂತಾಗಿದೆ. ಇದರಿಂದ ಕೆಡುಕುಗಳೂ, ಒಳಿತುಗಳೆರಡೂ ಸಂಭವಿಸಿದೆ. ಒಟ್ಟು ಸಮಾಜ ಜೀವನ, ಜೀವನ ಮೌಲ್ಯ ಮತ್ತು ಸಾಂಸ್ಕೃತಿಕ ಅನನ್ಯತೆಯ ಮೇಲೂ ಪರಿಣಾಮವನ್ನು ಬೀರಿವೆ. ವೃತ್ತಿ ಪಲ್ಲಟದ ನಿರಂತರತೆ ಮುಂದುವರಿಯುತ್ತಲೇ ಇದೆ.

ನಾಗರಿಕತೆ ಬೆಳೆದು ಬಂದಂತೆಲ್ಲಾ ಕೃಷಿ ಸಂಸ್ಕೃತಿಯೂ ಬೆಳೆಯಿತು ಎಂಬ ಸಾಮಾನ್ಯ ಗ್ರಹಿಕೆಯಿದೆ. ವ್ಯವಸಾಯದ ಜಗತ್ತು ಆಹಾರದ ಅನ್ವೇಷಣೆಯಿಂದ ತೊಡಗಿ ಕೃಷಿ ವಿಸ್ತರಣೆಗೊಂಡಂತೆಲ್ಲ ಬೆಳೆಯನ್ನು ಬೆಳೆಯುವ  ವಿಧಾನ ಬೆಳೆಸುವ ಬೆಳೆಗಳು, ಶ್ರಮ ವಿಭಜನೆ ಪಡೆಯುವ ಇಳುವರಿ ಇಲ್ಲಿಯೂ ವ್ಯತ್ಯಾಸವನ್ನು ಹೊಂದಲು ಸಾಧ್ಯವಾಯಿತು. ಆಹಾರದ ಅವಶ್ಯಕತೆಗೆ ಮನೆಯ ಅಗತ್ಯಕ್ಕಾಗುವಷ್ಟು  ಬೆಳೆದ ಅಕ್ಕಡಿ ಬೆಳೆ, ಪರ್ಯಾಯ ಬೆಳೆ, ಉಪಬೆಳೆಗಳೊಂದಿಗೆ ದಿನನಿತ್ಯದ ಖರ್ಚು ವೆಚ್ಚಗಳ ಕಡೆಗೆ ಮಾತ್ರ  ಗಮನ ಹರಿಸಲಾಗಿತ್ತು. ಅಲ್ಲಿ ವ್ಯವಹಾರದ ಹಣಕಾಸಿನ ಲೆಕ್ಕಾಚಾರ ಇರಲಿಲ್ಲ. ಮತ್ತು ತಮ್ಮ ಅಗತ್ಯಗಳಿಗೆ ತಕ್ಕಂತೆ

ಅನುಕೂಲವಾಗುವಂತೆ ಬೆಳೆಯನ್ನು ಬೆಳೆಯುತ್ತಿದ್ದರು. ಹೆಚ್ಚು ಇಳುವರಿ ಪಡೆಯಬೇಕು, ಅತಿಯಾದ ಲಾಭ ಪಡೆಯಬೇಕು ಎಂಬ ದೂರಾಲೋಚನೆ ಇರಲಿಲ್ಲ. ಹಸಿವು ಮತ್ತು ಅವಶ್ಯಕತೆ ಮಾತ್ರ ಮುಖ್ಯವಾಗಿತ್ತು. ಕಾಲ ಕಳೆದಂತೆ ಕೃಷಿಯ ಸ್ವರೂಪವೂ ಬದಲಾಗುತ್ತ ಬಂದಿದ್ದು ಇತಿಹಾಸವಾಗಿದೆ.

ಕೃಷಿಯ ಕಾರ್ಯ ಚಟುವಟಿಕೆ ವಿಸ್ತರಣೆಗೊಂಡಂತೆಲ್ಲ ಅದನ್ನು ಅವಲಂಭಿಸಿ ಬದುಕುವವರ ಸಂಖ್ಯೆ ಹೆಚ್ಚಿದೆ. ಭೂಮಿಯಲ್ಲಿ ಬೀಜವೊಂದನ್ನು ಬಿತ್ತಿ ಅದು ಮೊಳಕೆಯೊಡೆದು ಫಸಲನ್ನು ಪಡೆಯ ಬೇಕಾದರೆ ಕಾರ್ಯ ಚಟುವಟಿಕೆಯೂ ಬೇರೆ ಬೇರೆ ಸ್ವರೂಪವನ್ನು ಪಡೆದು ಮುಂದುವರಿದಿದೆ. ಅಲ್ಲದೆ ಪ್ರಾದೇಶಿಕವಾಗಿಯೂ ಕೃಷಿ ಮಾಡುವ ಪರಂಪರೆಯ ಕೆಲಸವೂ ಏಕರೂಪವಾಗಿಲ್ಲ. ಎಲ್ಲವೂ ಪ್ರದೇಶದಿಂದ ಪ್ರದೇಶಕ್ಕೆ ಬೆಳೆಯುವ ಬೆಳೆಗಳಿಗೆ ಅನುಗುಣವಾಗಿ ವ್ಯತ್ಯಾಸವಾಗುತ್ತ ಹೋಗುತ್ತದೆ. ಕೃಷಿಗೆ ಪೂರಕವಾಗಿ ನಡೆಸುವ ಆಯಗಾರಿಕೆಯ ವೃತ್ತಿಗಳೂ ಕಾರ್ಯ ಕೌಶಲ್ಯ ಮತ್ತು ಸ್ವರೂಪದಲ್ಲಿ ಭಿನ್ನತೆಯನ್ನು ಪಡೆಯುತ್ತದೆ. ಹೀಗೆ ಅಲ್ಪ ಸ್ವಲ್ಪ ಹಾಗೂ ಸೂಕ್ಷ್ಮ ವ್ಯತ್ಯಾಸಗಳಿದ್ದಾಗಲೂ ಕೂಡಾ ಕೃಷಿಯ ಸ್ವರೂಪಗಳು, ಬೆಳೆ ಬೆಳೆಯುವ ಕ್ರಮಗಳೂ ವ್ಯತ್ಯಾಸವಾಗುತ್ತಾ ಸಾಗಿದವು. ಬೆಳೆಯೊಂದನ್ನು ಬೆಳೆಯಬೇಕಾದರೆ ಅದಕ್ಕೆ ಪೂರಕವಾದ ಎಲ್ಲಾ ಕೆಲಸಗಳೂ ಅದರಲ್ಲೂ ಮುಖ್ಯವಾಗಿ ಕಬ್ಬಿಣ ಮತ್ತು ಮರದ ಸಲಕರಣೆಗಳನ್ನು ತಯಾರಿಸುವವರು, ಕಾಡುತ್ಪತ್ತಿಗಳಿಂದ ತಯಾರಿಸುವ ಸಲಕರಣೆಗಳನ್ನು ತಯಾರಿಸುವವರು ಹೀಗೆ ಪ್ರತಿಯೊಬ್ಬರ ಕಾಯಕವೂ ಕೃಷಿಗೆ ಪೂರಕವಾಗಿ ಕೃಷಿಯ ಕೆಲಸಗಳನ್ನು ಹೆಚ್ಚು ಸರಳವಾಗಿ ಮತ್ತು ಶಿಸ್ತುಬದ್ಧವಾಗಿ ಮಾಡಲು ಸಾಧ್ಯವಾಗಿದೆ. ಈ ಕೆಲಸಗಳು ಇದ್ದಕ್ಕಿದ್ದಂತೆ ಅನ್ವೇಷಿಸಿದುದಲ್ಲ. ಕೆಲಸದ ನೈಪುಣ್ಯ, ಜಾಣ್ಮೆ, ಕೌಶಲ್ಯಗಳೂ ಮುಖ್ಯವಾಗಿತ್ತು. ಪ್ರಾದೇಶಿಕವಾಗಿಯೂಈ ಸಲಕರಣೆಗಳು ಭಿನ್ನವಾಗಿದ್ದವು ಎನ್ನುವ ಅಂಶ ಮುಖ್ಯವಾದುದು.

ಕರಾವಳಿಯಲ್ಲಿ ಬಳಸುತ್ತಿದ್ದ ನೇಗಿಲು, ನೊಗ, ಹಾರೆ, ಗುದ್ದಲಿ, ಹಲಗೆಯ ಸ್ವರೂಪದಲ್ಲಿ ಬೇರೆ ಪ್ರದೇಶಗಳಲ್ಲಿ ಬಳಸುವುದು ಕಡಿಮೆ. ಅವು ಗಾತ್ರ, ವಿನ್ಯಾಸ, ಬಳಸುವ ವಿಧಾನವೂ ವಿಭಿನ್ನವಾದುದು. ಕಬ್ಬಿಣದ ಸಲಕರಣೆಗಳಿಗೂ ಈ ಮಾತು ಅನ್ವಯಿಸುತ್ತದೆ. ಇದಲ್ಲದೆ ನೊಗವನ್ನು ಕಟ್ಟಲು ಬಳಸುವ ಹಗ್ಗದಂತಹ ಸಾಧನವನ್ನು ಈ ಹಿನ್ನೆಲೆಯಲ್ಲಿ ಗಮನಿಸಬಹುದು. ತೆಂಗಿನ ನಾರಿನಿಂದ ತಯಾರಿಸುವ ಹಗ್ಗದ ಬೇರೆ ಬೇರೆ ವಿನ್ಯಾಸ ಮತ್ತು ಸ್ವರೂಪಗಳೂ ಮುಖ್ಯ. ನೊಗ ಬಿಗಿಯಲು, ಸೊಪ್ಪು ಸದೆ ಕಟ್ಟಲು, ಪೈರು ಕಟ್ಟಲು ಹೀಗೆ ಎಲ್ಲ ಸ್ವರೂಪದ ಬಳಕೆಯಲ್ಲೂ ವಿಭಿನ್ನತೆಯಿದೆ. ಕೃಷಿಗೆ ಪೂರಕವಾಗಿ ಹಲವಾರು ಆಯಗಾರಿಕೆಯ ವೃತ್ತಿಗಳು ಹುಟ್ಟಿಕೊಂಡವು. ವ್ಯವಸಾಯದ ಬದುಕು ಮಾತ್ರವಲ್ಲದೆ ದಿನನಿತ್ಯದ ಜೀವನ ನಿರ್ವಹಣೆ ಮಾಡಲು ಕೆಲವು ಕಸುಬುಗಳು ಹುಟ್ಟಿಕೊಂಡವು. ಆಯಾಯ ಪ್ರದೇಶಗಳಲ್ಲಿ ಸಿಗುವ ಪ್ರಾಕೃತಿಕವಾದ ಬಿಳಲು, ಬಳ್ಳಿ, ಬೇರು, ಮುಳ್ಳು, ಮರದ ಎಲೆ, ತೊಗಟೆ, ಸೋಗೆ ಇವುಗಳನ್ನು ಬಳಸಿಕೊಂಡು ತಮ್ಮ ನಿತ್ಯದ ಬದುಕಿಗೆ ಅವಶ್ಯವಾದ ವಸ್ತುಗಳನ್ನು ತಯಾರಿಸುತ್ತಿದ್ದರು. ಬುಟ್ಟಿ, ಹೆಡಿಗೆ, ಗೆರಸೆ, ತರಗೆಲೆ ತುಂಬುವ ಜೀಲ, ಕುರ್ಕಿಲ್, ಕುರ್ವೆ ಗಳಲ್ಲದೆ ನಿತ್ಯ ಬದುಕಿಗೆ ಅವಶ್ಯವಾದ ಗ್ರಹಬಳಕೆಯ ವಸ್ತುಗಳನ್ನು ತಯಾರಿಸುತ್ತಿದ್ದರು. ಮನುಷ್ಯನ ಜೀವನ ಆವರ್ತನದಲ್ಲಿ ಅವಶ್ಯವಾದ ವಸ್ತುಗಳನ್ನು ತಯಾರಿಸಿಕೊಂಡು ತಮ್ಮದೇ ಒಂದು ಕುಲ ಕಸುಬನ್ನಾಗಿ ರೂಢಿಸಿಕೊಂಡರು. ಕ್ಷೌರ, ಬಟ್ಟೆ ಮಡಿ ಮಾಡುವ ಅಗಸ, ಎಣ್ಣೆ ತೆಗೆಯುವ ಗಾಣಿಗ, ಬಟ್ಟೆ ನೇಯುವ

ನೇಕಾರ, ಮಣ್ಣಿನ ಪಾತ್ರೆ ತಯಾರಿಸುವ ಕುಂಬಾರ, ನಾಟಿ ಮದ್ದು ತಯಾರಿಸುವ ವೈದ್ಯ, ವಾಲಗ ಊದುವ ಶೇರಿಗಾರ, ಊರನ್ನು ಕಾಯುವ ತಳವಾರ, ಹೀಗೆ ಎಲ್ಲ ಕುಲಕಸುಬುಗಳನ್ನು ಮಾಡುತ್ತ ಬದುಕು ಸಾಗಿಸುತ್ತ ಕೃಷಿಗೆ ಪೂರಕವಾದ ಚಟುವಟಿಕೆಗಳನ್ನು ಮಾಡುತ್ತಿದ್ದರು.

ಕೃಷಿ ಸಂಸ್ಕೃತಿಯು ವಿಸ್ತರಣೆಗೊಳ್ಳುತ್ತ ಹೋದ ಹಾಗೆ ವೃತ್ತಿಗಳು ವಿಸ್ತಾರಗೊಳ್ಳುತ್ತ ಹೋದವು. ಆಹಾರದ ಅನ್ವೇಷಣೆಯ ಹಂತದಲ್ಲಿ ಕೃಷಿ ಅವಿಷ್ಕಾರಗೊಳ್ಳದೆ ಇದ್ದ ಸಂದರ್ಭದಲ್ಲಿ ಹಸಿವು ನೀಗಿಸುವುದು ಮಾತ್ರ ಮುಖ್ಯ ಕಾಯಕವಾಗಿತ್ತು. ಆಹಾರದ ಮೂಲವನ್ನು ದಾಟಿ ವ್ಯವಸಾಯ ಸಂಪತ್ತಿನ ಮೂಲವಾದಾಗ ಅತ್ಯಂತ ಹೆಚ್ಚು ವಿಸ್ತಾರದ ಭೂಮಿಯ ಒಡೆತನವನ್ನು ಹೊಂದಿದವರು, ಅಧಿಕಾರ ಕೇಂದ್ರದಲ್ಲೂ ಗುರುತಿಸಿಕೊಂಡು ಅತ್ಯಂತ ವಿಸ್ತೃತ ಭೂಮಿಯಲ್ಲಿ ಕೃಷಿ ಕಾರ್ಯ ನಡೆಸಬೇಕಾದರೆ ಅತ್ಯಂತ ಹೆಚ್ಚು ಸಂಖ್ಯೆಯ ಆಳುಗಳ ಅವಶ್ಯಕತೆಯಿದ್ದ ಕಾರಣ ಅದಕ್ಕೆ ಪೂರಕವಾಗಿ ಆಯಗಾರಿಕೆಯ ವೃತ್ತಿಗಳು ವಿಸ್ತೃತವಾದವು. ದುಡಿಮೆ ಮತ್ತು ಹೊಟ್ಟೆ ತುಂಬ ಅನ್ನ ಮೂಲ ಅವಶ್ಯಕತೆಯಾಗಿದ್ದ ಕಾಲವನ್ನು ದಾಟಿ ಸಂಪತ್ತಿನ ಕ್ರೋಢೀಕರಣ ಮುಖ್ಯವೆನಿಸಿದಾಗ ಹೆಚ್ಚು ಪ್ರದೇಶದಲ್ಲಿ ಸಾಗುವಳಿ ಕೆಲಸ ನಡೆಸುವುದು ಅವಶ್ಯಕವಾಗಿತ್ತು. ದುಡಿಯುವುದು ಮತ್ತು ಬದುಕುವುದು ಮಾತ್ರ ತಿಳಿದಿದ್ದ ಸಮುದಾಯಕ್ಕೆ ಶ್ರಮವೇ ಬದುಕಿನ ಧರ್ಮವಾಗಿತ್ತು. ತಾವು ಪ್ರಕೃತಿಯೊಂದಿಗೆ ಒಡನಾಡುತ್ತ ಅರ್ಥೈಸಿಕೊಂಡ ಸತ್ಯ ಮತ್ತು ಕಾಣ್ಕೆಗಳು ಅವರಲ್ಲಿ ಬೇರೆ ಬೇರೆ ಸ್ವರೂಪದ ಕಾರ್ಯ ಚಟುವಟಿಕೆಗಳನ್ನು ಸೃಜನಾತ್ಮಕವಾಗಿ ನಿರೂಪಿಸುವ ಆಯಾಮಗಳು ಮುಖ್ಯವೆನಿಸಿದವು. ಕೃಷಿಗೆ ಪೂರಕವಾದ ಆಯಗಾರಿಕೆ ವೃತ್ತಿಯಲ್ಲದೆ ಕಡಲ ತಡಿಯಲ್ಲಿ ಬದುಕುವ ಮೊಗವೀರರು ಸಮುದ್ರದ ಉಪ್ಪು ನೀರಿನೊಂದಿಗೆ ಸೆಣಸಾಡುತ್ತಲೇ ಬದುಕು ಕಟ್ಟಿದವರು. ನೀರಿನೊಂದಿಗೆ ಸೆಣಸಾಟ ಮತ್ತು ಮಣ್ಣಿನೊಂದಿಗಿನ ಸೆಣಸಾಟ ಎರಡೂ ರೀತಿಯ ದುಡಿಮೆ ಸಾಧ್ಯವಾಯಿತು. ಬೇರೆ ಬೇರೆ ವೃತ್ತಿಗಳನ್ನು ಮಾಡುತ್ತಿದ್ದವರು ಕಾಲಾಂತರದಲ್ಲಿ ಬೇಸಾಯಗಾರರಾದದ್ದು ಒಂದು ರೀತಿಯ ಸ್ಥಿತ್ಯಂತರವಾದರೆ, ವಸಾಹತುಶಾಹಿಯ ಪರಿಣಾಮ ಕೃಷಿಕರು ಪರಿಣಿತ ಕಾರ್ಮಿಕರಾಗಿ ಕಾರ್ಖಾನೆಗಳ ಮಾನವ ಶ್ರಮದಲ್ಲಿ ಪಾಲು ಪಡೆದದ್ದು ಎರಡನೆಯ ಹಂತದ ಬದಲಾವಣೆ. ಮೂರನೆಯ ಹಂತದಲ್ಲಿ ಕೃಷಿ ಕೂಲಿ ಕಾರ್ಮಿಕರಾಗಿದ್ದವರು ಸರಕಾರದ ಒಕ್ಕಲು ಮಸೂದೆ ಕಾನೂನಿಂದ ಭೂಮಿಯ ಯಜಮಾನರಾಗಿ ಸಣ್ಣ ಹಿಡುವಳಿದಾರರಾಗಿದ್ದು ಮತ್ತೊಂದು ರೀತಿಯ ಸ್ಥಿತ್ಯಂತರವಾಗುತ್ತದೆ. ಜಮೀನ್ದಾರರಿಗೆ ವಿಸ್ತಾರವಾದ ಭೂಮಿ ಇದ್ದು ಸಂಪತ್ತು ಯಥೇಚ್ಚವಾಗಿ ಸಂಗ್ರಹವಿತ್ತು. ಅವರ ಗದ್ದೆಗಳಲ್ಲಿ ದುಡಿಯುವ ಜಾತಿಯ ಕಾರಣಕ್ಕೆ ಜೀತದಾಳುಗಳಾಗಿ ದುಡಿಯುತ್ತಿದ್ದವರು ಸ್ವಲ್ಪ ನಿರಾಳವಾದರು. ಸಣ್ಣ ತುಂಡು ಭೂಮಿ ಕುಟುಂಬದ ಆದಾಯವನ್ನು ನಿಭಾಯಿಸಲು ಸಾಧ್ಯವಿಲ್ಲ. ಜಮೀನ್ದಾರರಾಗಿ ಸಂಪತ್ತಿನ ಒಡೆಯರಾಗಿದ್ದವರು ಇಂಗ್ಲೀಷ್ ಶಿಕ್ಷಣ ಕಲಿತರು, ಶಿಕ್ಷಣದ ಪ್ರಾಯೋಜನಿಕ ದೃಷ್ಟಿಯನ್ನು ಪಡೆದು ಮನೆಯಿಂದ ಹೊರ ಹೊರಟಾಗ 'ದುಡಿಮೆ ಎನ್ನುವ ಪರಿಭಾಷೆಯ ಅರ್ಥ ವಿಸ್ತರಿಸಲ್ಪಟ್ಟಿತು. ಬೆವರು ಸುರಿಸಿ ದುಡಿಯುವುದಕ್ಕಿಂತ ನಾಲ್ಕಕ್ಷರ ಕಲಿತು ಸಿಗುವ ಉದ್ಯೋಗಕ್ಕೆ ಹೆಚ್ಚಿನ ಆದಾಯವಿದೆ ಎಂಬ ಲೆಕ್ಕಾಚಾರಗಳು ಹೆಚ್ಚಾದಾಗ ಕೃಷಿಯನ್ನು ಲಾಭ ನಷ್ಟಗಳ ಹಿನ್ನೆಲೆಯಲ್ಲಿ ನೋಡಲಾಯಿತು. ವೃತ್ತಿಯ ಹಿನ್ನೆಲೆಯಲ್ಲಿ ಗಮನಿಸಿದಾಗ ವೃತ್ತಿಯಿಂದ ಜಾತಿ ಎಂಬ ಸರಳ ನಿಷ್ಪತ್ತಿಯನ್ನು

ಗಮನಿಸಿದರೆ ಒಕ್ಕಲುತನ ಮಾಡುವರೇ ಕೃಷಿಕರು ಎಂದು ಸಾರಸಗಟಾಗಿ ಹೇಳಲಾಗುವುದಿಲ್ಲ. ಕೃಷಿಯನ್ನು ಮಾಡಬೇಕೆಂದು ಆಯ್ಕೆ ಮಾಡಿಕೊಂಡವರಿಗಿಂತ ಭಿನ್ನವಾಗಿ ಕೆಲವು ಸಮುದಾಯಗಳು ಕೃಷಿಯಿಂದ ದೂರ ಉಳಿದು ತಮ್ಮದೇ ಆದ ಕುಲಕಸುಬುಗಳನ್ನು ಆಯ್ಕೆ ಮಾಡಿಕೊಂಡು ಬಾಳಿದರು. ಈ ಕಸುಬುಗಳು, ಕೃಷಿಗೆ ಪೂರಕವಾಗಿದ್ದರೂ ಆ ದುಡಿಮೆಯಲ್ಲಿ ಅವರ ಅಸ್ಮಿತೆಯಿತ್ತು. ಆಯಗಾರಿಕೆಯ ವೃತ್ತಿಗಳೊಂದಿಗೆ ಬಾಳಿದ ಸಮುದಾಯಗಳಿಗೆ ತಮ್ಮ ಕುಲಕಸುಬುಗಳ ಕೌಶಲ್ಯವೂ ತಾವು ಮಾಡುವ ಕೆಲಸಗಳಲ್ಲಿ ಜ್ಞಾನ ಮತ್ತು ಶ್ರದ್ಧೆಯನ್ನು ವಿಸ್ತರಿಸುವಂತಿತ್ತು. ಈ ಪಾರಂಪರಿಕ ತಿಳುವಳಿಕೆ ಕೆಲಸವನ್ನು ನೋಡುತ್ತ, ಮಾಡುತ್ತ ನೈಪುಣ್ಯವನ್ನು ಹೆಚ್ಚಿಸಿಕೊಳ್ಳಲು ಸಾಧ್ಯವಾಯಿತು.

ದುಡಿಮೆಯ ಅರ್ಥವನ್ನು ಬದಲಾಯಿಸಿಕೊಂಡ ಕಾಲಘಟ್ಟವಿದು. ವಸಾಹತುಶಾಹಿ ಆಡಳಿತದ ರೂಪುರೇಷೆಗಳು ತಳವೂರಿ ಕರಾವಳಿಯನ್ನು ತಮ್ಮ ವ್ಯಾಪಾರದ ಕೇಂದ್ರವಾಗಿರಿಸಿದವರಿಗೆ ಇಲ್ಲಿಯ ಜನ ಜೀವನವನ್ನು ಅರ್ಥೈಸುವುದೂ ಮುಖ್ಯವಾಗಿತ್ತು. ತಮಗೆ ತಿಳಿಯದ ಭಾಷೆ, ಜನರ ರೀತಿ ನೀತಿಗಳ ಮಧ್ಯೆ ಜನ ಸಾಮಾನ್ಯರ ವಿಶ್ವಾಸಗಳಿಸಿಕೊಳ್ಳುವುದೂ ಮುಖ್ಯವಾಗಿತ್ತು.ತಾವು ನಡೆಸುತ್ತಿದ್ದ ಸಾಮಾಜಿಕ ಕಾರ್ಯಗಳಲ್ಲಿ ಮುಖ್ಯವಾಗಿ ಶಿಕ್ಷಣದ ಪ್ರಸಾರ ಮತ್ತು ಬಹಳ ನಿಧಾನವಾಗಿ ನಡೆದ ಮತಾಂತರದ ಪ್ರಕ್ರಿಯೆಗಳು ಸಾಮಾಜಿಕ ವ್ಯವಸ್ಥೆಯಲ್ಲಿ ಸಂಚಲನವನ್ನು ಉಂಟು ಮಾಡಿತು. ಇದು ವ್ಯಕ್ತಿಗತವಾದ ಬದುಕನ್ನು ಪಲ್ಲಟಗೊಳಿಸಿತು.

**೩.೪ ಕೃಷಿ ಸಂಸ್ಕೃತಿ ಮತ್ತು ವೈಯಕ್ತಿಕ ಬದುಕಿನ ಪಲ್ಲಟ**

ಕೃಷಿ ಅನ್ವೇಷಣೆಗೊಂಡು ಹಂತ ಹಂತವಾಗಿ ವಿಸ್ತರಣೆಗೊಂಡಂತೆಲ್ಲ ನಾಗರಿಕವಾಗುತ್ತ ಸಾಗಿದ ಮನುಷ್ಯರ ಬದುಕಿನ ರೀತಿ ನೀತಿಗಳು ಬದಲಾದವು. ಸಮೂಹದ ಪ್ರಜ್ಞೆಯಾದ ವ್ಯವಸಾಯದಲ್ಲಿ ಸಾಂಘಿಕ ಶ್ರಮದ ಅವಶ್ಯಕತೆ ಅತಿ ಅಗತ್ಯವಾಗಿತ್ತು. ಅವಿಭಕ್ತ ಕುಟುಂಬಗಳಲ್ಲಿ ಮನೆ ತುಂಬ ಜನವಿದ್ದರೆ ದುಡಿಯುವ ಜರೂರತ್ತು ಇತ್ತು. ಮಾತೃಮೂಲ ಕುಟುಂಬ ವ್ಯವಸ್ಥೆಯಲ್ಲಿ ಹೆಣ್ಣನ್ನು ಕುಟುಂಬದ ಕೇಂದ್ರದಲ್ಲಿರಿಸಿ ಭೂಮಿಯನ್ನು ಅವಳ ಮೂಲಕ ಗುರುತಿಸಿಕೊಂಡು ಸಮಷ್ಠಿಯ ಹಿತ ಕಾಯಲಾಯಿತು. ದುಡಿಯುವುದೂ ಮತ್ತು ಉಣ್ಣುವುದಷ್ಟೇ ಬದುಕಿನ ಭಾಗವಾಗಿದ್ದ ಆಗಿನ ಕಾಲಧರ್ಮಕ್ಕೆ ಬೇರಾವ ಚಿಂತನೆಯೂ ಪ್ರಮುಖವಾಗಿರಲಿಲ್ಲ. ವಿಸ್ತಾರವಾದ ಹರವಿನ ಗದ್ದೆಗಳಿದ್ದಷ್ಟು ದುಡಿಮೆಗೆ ಬರ ಇರಲಿಲ್ಲ. ಜೀವನದ ಸಹಜಶೀಲತೆಯ ಭಾಗವಾಗಿದ್ದ ಬೆಳೆ ಬೆಳೆಯುವ ಕಾಯಕ ಕೃಷಿಕನ ಕ್ರೀಯಾಶೀಲತೆಯೇ ಆಗಿತ್ತು. ಇನ್ನೊಂದೆಡೆ ಊರಿಗೆ ಊರೇ, ಇಡೀ ಗ್ರಾಮಕ್ಕೆ ಗ್ರಾಮವೇ ಒಡೆಯನೊಬ್ಬನ ಅಧೀನಕ್ಕೆ ಒಳಪಟ್ಟು ಪಾಳೇಗಾರನಾಗಿ ಉಳಿಯಲು ಕಾರಣವಾಯಿತು. ದುಡಿಯುತ್ತಿರುವ ಕೈಗಳು ಅರೆಹೊಟ್ಟೆ ಉಂಡರೂ ದುಡಿಮೆ ಎಂದಿಗೂ ತಪ್ಪಲಿಲ್ಲ. ಹಾಗಿದ್ದು ಬೇರೆಯವರ ಗದ್ದೆಯಲ್ಲಿ ಮಾಡುವ ಕೆಲಸಕ್ಕೆ ಏನೋ ಒಂದಿಷ್ಟು ಕೂಲಿ ಲಭಿಸುತ್ತಿತ್ತು. ವಸತಿ ಮತ್ತು ಆಹಾರದ ಮೂಲ ಒಡೆಯನ ಭೂಮಿ ಮತ್ತು ಗದ್ದೆಗಳೇ ಆಗಿದ್ದು ಬೇಟೆ, ಪಶುಪಾಲನೆ ಪೂರಕ ವೃತ್ತಿಗಳೇ ಆಗಿತ್ತು. ಭೂಮಿ ಸಂಪತ್ತಿನ ಮೂಲವಾಗಿ ಪರಿವರ್ತನೆ ಹೊಂದಂದಿನಿಂದ ಬೇಟೆಯೂ ಉಪ ಕಸುಬಾಗಿ ಜನಬಳಕೆಯಲ್ಲಿತ್ತು.

ಖಾಸಗಿ ಭೂಮಿಯ ಒಡೆತನದ ಪ್ರಶ್ನೆ ಸಂಸ್ಕೃತಿಯಲ್ಲಿ ಹಲವಾರು ಪಲ್ಲಟಗಳನ್ನು ಸೃಷ್ಟಿಸಿತು. ಭೂಮಿಯ ಒಡೆತನಕ್ಕಿರುವ ಸಾಮಾಜಿಕ ಪ್ರಾಮುಖ್ಯತೆ ಮನಗಂಡು ಸಮುದಾಯಗಳಿಗೆ ತಾವು ಭೂಮಿಯ ಒಡೆಯರಾಗುವುದು ಅತ್ಯಂತ ಜರೂರು ಮತ್ತು ತುರ್ತು ಎಂಬ ವಿಚಾರಗಳೂ ಮನದಟ್ಟಾಗಿತ್ತು. ಈ ಅವಶ್ಯಕತೆ ಮತ್ತು ಅನಿವಾರ್ಯತೆಗಳ ಮಗ್ಗುಲಲ್ಲಿ ವೈಯಕ್ತಿಕತೆಯ ಪ್ರಶ್ನೆಗಳೂ ಹುಟ್ಟಿಕೊಂಡವು. ಭೂಮಿ ಸಮೂಹದ ಪ್ರಜ್ಞೆಯಾಗಿ, ಹೊಂದಿದ್ದ ಕುಟುಂಬಗಳೂ ವಿಘಟನೆಗೊಳ್ಳದೆ ಮನೆತನದ ಗೌರವದ ಪ್ರಶ್ನೆಗಳಾಗಿ ಸಂಸ್ಕೃತಿಯ ಭಾಗವಾಗಿ ಆರಾಧನಾ ವಲಯದಲ್ಲೂ ಗುರುತಿಸಿಕೊಂಡು ಬಾಳುತ್ತಿದ್ದವು. ಆರ್ಥಿಕ, ಸಾಂಸ್ಕೃತಿಕ, ದಾರ್ಮಿಕ, ರಾಜಕೀಯ ಮನ್ನಣೆಗಳಿಂದ ಹಳ್ಳಿಗಳಲ್ಲಿರುವ ಕುಟುಂಬಗಳು ಹೆಚ್ಚಾಗಿ ಅವಿಭಕ್ತ ಕುಟುಂಬಗಳೇ ಆಗಿದ್ದವು. ಸಾಮಾನ್ಯವಾಗಿ ಕಾಣಸಿಗುತ್ತಿದ್ದ ಸಮುದಾಯಗಳೆಂದರೆ ವರ್ಗ ಪರಂಪರೆಯ ಹಿನ್ನೆಲೆಯಲ್ಲಿ ಭೂ ಮಾಲೀಕರು ಮತ್ತು ಭೂರಹಿತರು ಭೂಮಿಯ ಅಧಿಕಾರ ಇಲ್ಲದವರಿಗೆ ಆಹಾರ ಮತ್ತು ದುಡಿಮೆಯ ಮೂಲ ಭೂಮಿಯ ಒಡೆಯರ ಮನೆಗಳೇ ಆಗಿತ್ತು. ಭೂ ರಹಿತರ ವೈಯಕ್ತಿಕ ಬದುಕಿನಲ್ಲಿ ಅಂತಹ ಮಹತ್ತರ ವ್ಯತ್ಯಾಸಗಳೇನೂ ಘಟಿಸುತ್ತಿರಲಿಲ್ಲ. ಭೂ ಮಾಲೀಕರು ಮಾತ್ರ ಅಧಿಕಾರಶಾಹಿ ಕೇಂದ್ರದ ತುತ್ತ ತುದಿಯಲ್ಲಿದ್ದು ಕೈತುಂಬ ಆಳುಕಾಳು, ಹೊಟ್ಟೆ ತುಂಬ ಅನ್ನ, ಓಡಾಡುವ ಸ್ವಾತಂತ್ರ್ಯ, ಸುಖ ಅನುಭೋಗದ ಸವಲತ್ತುಗಳನ್ನು ನಿರಂತರವಾಗಿ ಅನುಭವಿಸುವವರೇ ಆಗಿದ್ದರು. ಸಹಜವಾಗಿಯೇ ತಾವು ಭೂಮಿಯ ಒಡೆಯರಾಗಬೇಕೆಂಬ ವಾಂಛೆ ಭೂರಹಿತರಲ್ಲಿಯೂ ಇತ್ತು. ಭೂಮಿಯ ಒಡೆಯರಿಗೆ ನಿಗದಿತ ಸ್ವರೂಪದ ಫಸಲನ್ನು ನೀಡಿ ಗೇಣಿದಾರರಾಗಿ ದುಡಿಯುವ ವರ್ಗವೊಂದು ಸೃಷ್ಟಿಯಾಯಿತು. ಚಾಲುಗೇಣಿ ಮತ್ತು ಮೂಲಗೇಣಿ ನೀಡುವ ಕೃಷಿ ಒಕ್ಕಗಳಲ್ಲದೆ ಕೃಷಿ ಕೂಲಿ ಕಾರ್ಮಿಕರದೇ ಇನ್ನೊಂದು ವರ್ಗವಿತ್ತು. ಅತ್ಯಂತ ಮೇಲ್‌ಸ್ತರದಲ್ಲಿ ಶ್ರೀಮಂತ ಜಮೀನ್ದಾರರು ಕೃಷಿ ಭೂಮಿಯ ಒಡೆಯರಾಗಿದ್ದರೆ, ಮಧ್ಯಮ ವರ್ಗದವರು ಗೇಣಿದಾರರಾಗಿದ್ದರು. ಕಡು ಬಡವರಾಗಿ ಭೂರಹಿತ ಕೃಷಿ ಕೂಲಿ ಕಾರ್ಮಿಕರಿದ್ದರು.

ಕೃಷಿ ಆಹಾರದ ಮೂಲವಾಗಿದ್ದು ಅದಕ್ಕೆ ಪೂರಕವಾಗಿ ನಡೆಸುತ್ತಿದ್ದ ಆಯಗಾರಿಕೆಯ ವೃತ್ತಿಗಳೂ ವಂಶದಿಂದ ವಂಶಕ್ಕೆ ಮುಂದುವರಿದುಕೊಂಡು ಬಂದಿತ್ತು. ಪಾರಂಪರಿಕವಾಗಿ ಇದ್ದ ಈ ಕುಲಕಸುಬುಗಳು ಯಾವಾಗ ನಿಧಾನವಾಗಿ ಪಲ್ಲಟಗೊಂಡವೋ ವೈಯಕ್ತಿಕ ಬದುಕು ಸ್ಥಿತ್ಯಂತರಕ್ಕೆ ಒಳಗಾಯಿತು. ಸಾಮುದಾಯಿಕ ದುಡಿಮೆ, ಸಾಮುದಾಯಿಕ ಆಹಾರ, ಸಾಮುದಾಯಿಕ ಸಂಪತ್ತು ನಿಧಾನವಾಗಿ ವೈಯಕ್ತಿಕತೆಯೆಡೆಗೆ ವಾಲಿತು. ಇದರ ಹಿಂದಿರುವ ಕಾರಣಗಳು ನೂರಾರು. ಆರಂಭದಲ್ಲಿ ಇದ್ದ ಪಾಳೇಗಾರಿಕೆ ಮತ್ತು ಉಂಳಿಗಮಾನ್ಯ ವ್ಯವಸ್ಥೆಯನ್ನು ಮೀರುವಂತೆ ಆಹಾರದ ಬೆಳೆಗಿಂತ ವಾಣಿಜ್ಯ ಬೆಳೆಗಳನ್ನು ಬೆಳೆದದು ಪ್ರಮುಖ ಅಂಶವಾಗಿತ್ತು. ಆಹಾರದ ಮೂಲದಿಂದ ವ್ಯಾಪಾರದ ಮೂಲಕ್ಕೆ ಬದಲಾಗುವಾಗ ವ್ಯಾಪಾರಕ್ಕಾಗಿ ಬಂದ ವಿದೇಶೀಯರು ಅವರು ನಡೆಸಿದ ಆಡಳಿತ, ಭೂಮಿಯನ್ನು ವ್ಯವಹರಿಸಿದ ರೀತಿ, ಪಡೆದ ಭೂ ಕಂದಾಯಗಳು ಮುಖ್ಯವಾದವು. ಭೂಮಿಯನ್ನು ಮೊದಲ ಬಾರಿಗೆ ಅಳತೆ ಮಾಡಿ ವರ್ಗೀಕರಿಸಿದ ಬ್ರಿಟಿಷರು ಸಾಹಸ ಪ್ರವೃತ್ತಿಯವರೇ ಆಗಿದ್ದರು. ಮನುಷ್ಯ ಪ್ರವೇಶಗಳಿಲ್ಲದ ಕಾಡುಗಳಲ್ಲೂ ಟೀ, ಕಾಫಿ,ಗಳಂತಹ ವಾಣಿಜ್ಯ ಬೆಳೆಗಳನ್ನು ಬೆಳೆದರು. ರಬ್ಬರ್, ಶುಂಠಿಯಂತಹ ಬೆಳೆಗಳೂ ನಿಧಾನಕ್ಕೆ ರಂಗ ಪ್ರವೇಶ ಪಡೆದವು. ಬರಿಯ

ವ್ಯಾಪಾರ ಮಾತ್ರವಾಗಿ ಉಳಿಯದೆ ಸಮಾಜ ಸುಧಾರಣೆಯ ವಿಚಾರಕ್ಕಾಗಿ ಶಿಕ್ಷಣವನ್ನು ಎಲ್ಲರಿಗೂ ನೀಡುವ ಪ್ರಯತ್ನ ಮಾಡಿದರು. ಜತೆ ಜತೆಗೆ ನಿಧಾನವಾಗಿ ಮತಾಂತರಗಳೂ ನಡೆದವು. ಧರ್ಮ ಮತ್ತು ಆರ್ಥಿಕತೆ ಪ್ರಮುಖ ಅಂಶವಾಗಿ ಸಾಮಾಜಿಕವಾದ ಕುಟುಂಬ ವ್ಯವಸ್ಥೆಯಲ್ಲೂ ವಿಘಟನೆಗಳು ಉಂಟಾದವು. ಆಧುನಿಕತೆಯ ಪ್ರಭಾವದಿಂದ ಕುಟುಂಬ ಕೇಂದ್ರಿತವಾದ ಬದುಕು ವ್ಯಕ್ತಿ ಕೇಂದ್ರಿತವಾಗಿ ಬದಲಾಯಿತು.

ವಸಾಹತುಶಾಹಿ ಆಡಳಿತದ ಪ್ರಭಾವದಿಂದ ಪಾಶ್ಚಾತ್ಯ ಸಂಸ್ಕೃತಿಯ ಬಗೆಗಿನ ಕುತೂಹಲ, ಇಂಗ್ಲಿಷ್ ಶಿಕ್ಷಣದಓದು, ಅತ್ಯಂತ ಮೇಲ್‌ಸ್ತರದ ಸಮುದಾಯದಲ್ಲಿ ಬದಲಾವಣೆಯನ್ನು ತಂದಿತು. ಅಸ್ಪೃಶ್ಯತೆ, ಅಸಮಾನತೆ, ಹಸಿವು, ಬಡತನ, ಕಡು ಬಡವರಾಗಿದ್ದ ಜನರಿಗೆ ಸಾಮಾಜಿಕ ಸ್ಥಾನಮಾನಗಳಿಗಾಗಿ ಮತಾಂತರಕ್ಕೆ ಪ್ರಚೋದನೆ ನೀಡಿತು.ಮಿಶನರಿಗಳು ಮತ್ತು ಬ್ರಿಟಿಷರು ಸಮಾಜ ಸುಧಾರಣೆ ಹೆಸರಿನಲ್ಲಿ ನಡೆಸಿದ ಮತಾಂತರಗಳು ಸಮುದಾಯಗಳ ಸಾಮಾಜಿಕ ಬಹಿಷ್ಕಾರಕ್ಕೆ ಕಾರಣವಾಯಿತು. ಕುಟುಂಬಕ್ಕೆ ಕುಟುಂಬವೇ ಹಳ್ಳಿಗೆ ಹಳ್ಳಿಯೇ ಮತಾಂತರಗೊಂಡಾಗ ಅವರಿಗೆ ಆದಾಯದ ಮೂಲ ಹುಡುಕುವುದು ಅವಶ್ಯವಾಗಿತ್ತು. ಭೂಮಿಯ ಒಡೆಯರು ಅವರಿಗೆ ಕೆಲಸವನ್ನು ನಿರಾಕರಿಸಿದರು ಅದಕ್ಕಾಗಿಯೇ ಬನಿಯನ್ ಫ್ಯಾಕ್ಟರಿಗಳನ್ನು, ಪತ್ರಿಕಾ ಪ್ರಕಟಣೆಯ ಅಚ್ಚು ಕೇಂದ್ರಗಳನ್ನು, ಹಂಚಿನ ಕಾರ್ಖಾನೆಗಳನ್ನು ತೆರೆದರು. ಇದುವರೆಗೆ ಗದ್ದೆ ಕೆಲಸವೇ 'ದುಡಿಮೆ' ಯಾಗಿದ್ದ ಜನರಿಗೆ ದುಡಿಮೆಯ ಪರಿಭಾಷೆಯೇ ಬದಲಾಯಿತು. ಬುತ್ತಿಗಂಟು ಕೊಂಡೊಯ್ದು ಬೆಳಗಿನಿಂದ ಸಂಜೆಯವರೆಗೆ ದುಡಿಯುವುದು ವಾರದ ಅಥವಾ ತಿಂಗಳ ಕೊನೆಯಲ್ಲಿ 'ಕೂಲಿ'ಯನ್ನು ಹಣದ ಸ್ವರೂಪದಲ್ಲಿ ಸಂಬಳವಾಗಿ ಪಡೆದರು. ಮತಾಂತರಗೊಂಡ ಜನರಿಗೆ ಆರ್ಥಿಕ ಭದ್ರತೆ ಒದಗಿಸಲು ಒಂದೆಡೆ ಕಾರ್ಖಾನೆಗಳನ್ನು ತೆರೆದರು. ಇನ್ನೊಂದೆಡೆ ಕೃಷಿ ಭೂಮಿಗಳನ್ನೇ ವಿಸ್ತರಿಸಿದರು. ಹಳ್ಳಿಗಳ ಮೂಲೆ ಮೂಲೆಗೆ ತೆರಳಿ, ನದಿ ಬದಿಯ ಭೂಮಿಗಳಲ್ಲದೆ ಕಾಡಿನ ಬದಿಯ ಭೂಮಿಗಳನ್ನು ಕೃಷಿ ಯೋಗ್ಯವಾಗಿಸಿ ಅವರ ಆಹಾರ ಮೂಲವನ್ನು ಹುಡುಕಲಾಯಿತು. ಮಿಶನರಿಗಳ ಪ್ರಭಾವಕ್ಕೆ ಒಳಗಾದ ಸಮುದಾಯಗಳಿಗೆ ಈ ಭೂಮಿಯನ್ನು ಉಚಿತವಾಗಿ ನೀಡಿದ್ದಲ್ಲದೆ ಭೂಮಿಯ ಒಡೆತನವೂ ಇದರಿಂದ ಪ್ರಾಪ್ತಿಯಾಯಿತು. ಇದರ ಪರಿಣಾಮವಾಗಿ ಕೌಟುಂಬಿಕ ಬದುಕು ಮತ್ತು ವೈಯಕ್ತಿಕ ಬದುಕಿನ ರೀತಿ ನೀತಿಗಳು ಬದಲಾದವು. ಆಹಾರದ ಸ್ವಾವಲಂಬನೆಯೊಂದಿಗೆ ಆರ್ಥಿಕವಾಗಿ ಬಲಿಷ್ಠರಾಗುವಂತೆ ಪ್ರಯತ್ನಿಸಲಾಯಿತು.

ಜಮೀನ್ದಾರ ಮತ್ತು ಪಾಳೇಗಾರಿಕೆ ಕುಟುಂಬಗಳಲ್ಲಿ ಇಂಗ್ಲೀಷ್ ಶಿಕ್ಷಣದ ಪ್ರಭಾವದಿಂದ ವಿದೇಶಕ್ಕೆ ಉನ್ನತ ಶಿಕ್ಷಣಕ್ಕಾಗಿ ತೆರಳುವವರ ಸಂಖ್ಯೆ ಹೆಚ್ಚಾಯಿತು. ಅಲ್ಲಿರುವ ಸಾಮಾಜಿಕ ಮುಕ್ತತೆ ಮತ್ತು ಸ್ವಾತಂತ್ರ್ಯ ಹೆಚ್ಚು ಆಕರ್ಷಣೆಯಾದದ್ದರಿಂದ ಅವರು ಮರಳಿ ಹಳ್ಳಿಗೆ ಮುಖ ಮಾಡಲಿಲ್ಲ. ಬ್ರಿಟಿಷರ ದೀರ್ಘಕಾಲದ ಆಳ್ವಿಕೆ ಮತ್ತು ನಿಧಾನವಾಗಿ ಆರಂಭವಾದ ರಾಷ್ಟ್ರೀಯ ಚಳುವಳಿ ಹೊಸ ಸಂಚಲನವನ್ನು ಉಂಟು ಮಾಡಿತು. ಕೃಷಿಕರು ಮತ್ತು ರೈತರ ಮೇಲೆ ಹೇರಿದ್ದ ಹೆಚ್ಚುವರಿ ತೆರಿಗೆಗಳು ರೈತ ಚಳುವಳಿಯನ್ನು ಹುಟ್ಟು ಹಾಕಿತು. ಒಂದೆಡೆ ಶಿಕ್ಷಣದಿಂದ ಪಡೆದ ಸಾಮಾಜಿಕ ಮುಕ್ತತೆ ಇನ್ನೊಂದೆಡೆ ಬದಲಾದ ದುಡಿಮೆಯ ಸಂಪತ್ತಿನ ಪರಿಭಾಷೆ ಕೃಷಿ ಚಟುವಟಿಕೆಯ ಮೇಲೆ ಹೇರಲ್ಪಟ್ಟ ಹೆಚ್ಚುವರಿ ಕಂದಾಯಗಳು ಪರಂಪರೆಯ ಬದುಕಿನ ಗತಿಯನ್ನು ಬದಲಾಯಿಸಿದವು. ಪ್ರಭುತ್ವದ ವಿರುದ್ಧ ಹುಟ್ಟಿಕೊಂಡ ಆಂತರಿಕ ದಂಗೆಗಳು ಚಳುವಳಿಯ

ಸ್ವರೂಪವನ್ನು ಪಡೆಯಿತು. ರೈತರನ್ನೇ ಮುಖ್ಯ ಕೇಂದ್ರವಾಗಿರಿಸಿ ಚಳುವಳಿಯನ್ನು ಹತ್ತಿಕ್ಕಲು ನಡೆಸಿದ ಪ್ರಯತ್ನ ಒಂದೆಡೆಯಾದರೆ, ಶ್ರೀಮಂತ ಜಮೀನುದಾರರ ಆಮಿಷಕ್ಕೊಳಗಾಗಿ ಕೆಲವರು ಬ್ರಿಟಿಷರ ಪರ ನಿಂತರು. ಈ ರೀತಿಯ ವೈರುಧ್ಯಗಳ ಮಧ್ಯೆಯೇ ಕೃಷಿಗೆ ಪರ್ಯಾಯವಾಗಿ ಕೈಗಾರಿಕೆಗಳು ಸ್ಥಾಪನೆಗೊಂಡವು. ಬಂಡವಾಳ, ದುಡಿಮೆ, ಅರ್ಥಿಕತೆ ಮತ್ತು ಆದಾಯಗಳ ಪರಿಭಾಷೆಯಲ್ಲಿ ಹುಟ್ಟಿಕೊಂಡ ಜೀವನಕ್ರಮ ಮತ್ತು ಜೀವನ ಮೌಲ್ಯಗಳು ಸ್ಥಿತ್ಯಂತರಗೊಂಡವು. ವ್ಯಕ್ತಿನಿಷ್ಠ ಚಿಂತನೆಗಿಂತ ಸಮುದಾಯ ಚಿಂತನೆಯನ್ನು ಹೊಂದಿದ್ದ ಕೃಷಿ ಸಂಸ್ಕೃತಿ ಎಲ್ಲರೂ ದುಡಿಯುವ ಮತ್ತು ಎಲ್ಲರೂ ಉಣ್ಣುವ, ಹಂಚಿ ತಿನ್ನುವ ವಿಚಾರಗಳಿಗಿಂತ ಸಂಗ್ರಹ ಪ್ರವೃತ್ತಿ ಹೆಚ್ಚಾಯಿತು. ಸಂಪತ್ತು ಧಾನ್ಯದ ರಾಶಿಯಿಂದ ದುಡ್ಡಿನ ರಾಶಿಗೆ ಬದಲಾದಾಗ ಕೂಡಿಸುವ ಪ್ರವೃತ್ತಿ, ಉಳಿತಾಯದ ಪರಿಕಲ್ಪನೆ, ನಾಳಿನ ಅಲೋಚನೆ ಭವಿಷ್ಯದ ದೂರಾಲೋಚನೆ ,ಮುಂದಿನ ಪೀಳಿಗೆಗಾಗಿ ಕೂಡಿ ಹಾಕುವ ಚಿಂತನೆಗಳು ಹೆಚ್ಚುತ್ತಾ ಹೋಯಿತು. ಕೃಷಿಕನೊಬ್ಬ ಕೃಷಿ ಮಾಡಿದರೆ ವ್ಯಕ್ತಿಗತವಾಗಿ ಅವನಿಗಲ್ಲದೆ ಇಡಿಯ ಸಮುದಾಯಕ್ಕೂ ಸಲ್ಲುತ್ತದೆ. ಗದ್ದೆಯಲ್ಲಿ ಕೆಲಸ ಮಾಡುವ ಭೂ ರಹಿತ ಕೃಷಿ ಕೂಲಿ ಕಾರ್ಮಿಕರಲ್ಲದೆ ಸುತ್ತಲೂ ಇರುವ ಸಕಲ ಜೀವರಾಶಿಗಳಿಗೂ ಆಹಾರದ ಮೂಲವಾಗಿತ್ತು. ಒಂದಿಷ್ಟು ಬೆಳೆದ ಭೂಮಿಗೆ ದುಡಿದ ಪ್ರಾಣಿ ಜಗತ್ತಿಗೂ ಸಲ್ಲುತ್ತಿತ್ತು. ನಾನು ದುಡಿಯುವುದು ನಾನು ಮತ್ತು ನನ್ನ ಕುಟುಂಬವನ್ನು ಚೆನ್ನಾಗಿ ನೋಡಿಕೊಳ್ಳಲು ಎಂಬುದೇ ಮೌಲ್ಯವಾಗಿಸಿ ಉದಾತ್ತತೆಯ ಲೋಕದೃಷ್ಟಿ ಹಿಂದಕ್ಕೆ ಸರಿಯಿತು. ಕಣ್ಣಿಗೆ ಪಟ್ಟಿಕೊಂಡಂತೆ ಬೆಳೆದ ಈ ಸಾಮಾಜಿಕ ಬೆಳವಣಿಗೆ ಬಹಳ ವೇಗವಾಗಿ ವರ್ಗ ಸಮಾಜವೊಂದರ ಸೃಷ್ಟಿಗೂ ಕಾರಣವಾಯಿತು. ಪರಿಣಾಮ ವರ್ಗ ಸಂಘರ್ಷಗಳು ಮುನ್ನೆಲೆಗೆ ಬಂದವು.

ಭೂಮಿ ಕುಟುಂಬದ ಆಸ್ತಿಯಾಗಿದ್ದು, ದುಡಿಮೆಯೂ ಕುಟುಂಬಕ್ಕೆ ಸಲ್ಲುತ್ತಿದ್ದು, ವ್ಯಕ್ತಿಗತ ಆಶೋತ್ತರಗಳು ಮುನ್ನೆಲೆಗೆ ಬಾರದೆ ಅದುಮಿಡಲ್ಪಟ್ಟಿತು. ನಾನು ನನ್ನ ಕುಟುಂಬ ಎನ್ನುವುದು ಹಿಂದೆ ಸರಿದು ವ್ಯಕ್ತಿಗತವಾದ ಭೂಮಿಯ ಒಡೆತನ ಕಲ್ಪನೆಗಳು ಹುಟ್ಟಿಕೊಂಡು ವಿಶಾಲವಾದ ಬೈಲುಗದ್ದೆಗಳ ಮಧ್ಯೆ ಸಣ್ಣ **'ಅಮರೆ'** ಗಳು ಹುಟ್ಟಿಕೊಂಡವು. ಎಲ್ಲರೂ ಒಂದೇ ಮನೆಯಲ್ಲಿದ್ದು ಮನೆ ಮಂದಿಗೆ ಭೂಮಿಯನ್ನು ಸಾಗುವಳೀ ಮಾಡುತ್ತಿದ್ದವರು ಗದ್ದೆ ಸಾಲುಗಳನ್ನು ಹಂಚಿಕೊಂಡರು. ಮೊದಲ ತಲೆಮಾರಿನಲ್ಲಿ ಅವಿಭಕ್ತ ಕುಟುಂಬದಿಂದ ವಿಭಕ್ತ ಕುಟುಂಬಗಳಾದುದು ಎರಡನೇ ತಲೆಮಾರಿಗೆ ನ್ಯೂಕ್ಲಿಯರ್ ಫ್ಯಾಮಿಲಿಗಳಾದವು. ಒಂದು ಕುಟುಂಬ ಒಂದು ಕವರ್‌ನ ನೂರಾರು ಮಂದಿ ಒಟ್ಟಿಗೆ ಬಾಳುವುದನ್ನು ಕಲ್ಪಿಸಿಕೊಳ್ಳಲು ಸಾಧ್ಯವಾಯಿತು. ತಂದೆ ತಾಯಿ ಮಕ್ಕಳು ಸುಮಾರು ಎಂಟು –ಹತ್ತು ಜನರು ಒಂದು ಕುಟುಂಬವಾಯಿತು. ಮುಂದಿನ ತಲೆಮಾರಿಗೆ ಪಾಲಿಗೆ ಬಂದ ಗದ್ದೆಯೂ ಹರಿದು ಹಂಚಲ್ಪಟ್ಟು ಸ್ಕ್ವಾರ್‌ಫೀಟ್‌ಗಳಲ್ಲಿ ಭೂಮಿಯನ್ನು ಹಂಚಿಕೊಂಡರು. ಮುಂದಿನ ತಲೆಮಾರಿಗೆ ತುಂಡು ಭೂಮಿಯೂ ಉಳಿಯದೆ ಅಂಗೈಯಗಲದ ಭೂಮಿಗಳಲ್ಲಿ ಮಹಡಿ ಮನೆಗಳು ನಿರ್ಮಾಣವಾದವು. ಎಂಟು–ಹತ್ತು ಜನರಿದ್ದ ಕುಟುಂಬ ನಾಲ್ಕು–ಮೂರು ಸಂಖ್ಯೆಗೆ ಇಳಿದಾಗ ಕೃಷಿಯಿಂದ ವಿಮುಖರಾದದ್ದು ಮಾತ್ರವಲ್ಲ ಆದಾಯವೂ ಇಲ್ಲವೆಂದು ನಗರದ ಸಣ್ಣ ಪುಟ್ಟ ಕೆಲಸಗಳತ್ತ ಮುಖ ಮಾಡಿದರು. ಆರಕ್ಕೇರದ ಮೂರಕ್ಕೆ ಇಳಿಯದೆ ಬದುಕಿನಲ್ಲಿ ಕಂತು ಕಟ್ಟುತ್ತಲೇ ಜೀವನ ಕಳೆದರು. ವೈಯಕ್ತಿಕವಾಗಿ ಅವರಿಗಿದ್ದ ಲೋಕಜ್ಞಾನ, ಕೃಷಿ ಬದುಕಿನ ತಿಳುವಳಿಕೆಗಳೆಲ್ಲವೂ

ಮಾನ್ಯತೆಯನ್ನು ಕಳೆದುಕೊಂಡು, ಸಣ್ಣ ಪುಟ್ಟ ಉದ್ದಿಮೆ, ಕಾರ್ಖಾನೆಗಳಲ್ಲಿ ಅತ್ಯಂತ ಕೆಳಮಟ್ಟದ ಕಾರಕೂನರಾಗಿ ಕೆಲಸ ನಿರ್ವಹಿಸಬೇಕಾದ ಅನಿವಾರ್ಯತೆ ಒದಗಿತು. ಕೃಷಿ ಕೂಲಿ ಕಾರ್ಮಿಕರಾಗಿದ್ದ ತಳ ಸಮುದಾಯದ ಮಂದಿ ಪೌರಕಾರ್ಮಿಕರಾದರೆ, ಕೆಳ ಮಧ್ಯಮ ವರ್ಗದವರು ಖಾಸಗಿಯಾದ ಆಸ್ಪತ್ರೆ, ಶಾಲಾ ಕಾಲೇಜು, ಸಂಕೀರ್ಣಗಳಲ್ಲಿ, ಮಾಲ್‌ಗಳಲ್ಲಿ ಉದ್ದಿಮೆ, ಅಂಗಡಿ, ಹೋಟೇಲುಗಳಲ್ಲಿ ದುಡಿಯುವುದು ಅವಶ್ಯವಾಗಿತ್ತು. ಯಾವ ಸೇವಾ ಭದ್ರತೆಯೂ ಇಲ್ಲದೆ ಕೇವಲ ದುಡಿದರೆ ಉಣ್ಣಬಹುದು ಎಂಬ ದಿನಗೂಲಿಗಳಾಗಿ ದುಡಿಯಲಾರಂಭಿಸಿದರು. ಇಲ್ಲಿಯೂ ಅವರ ಬದುಕು ಸ್ಥಿತಿವಂತರಾಗುವುಕ್ಕೆ ಸಾಧ್ಯವಾಗಲಿಲ್ಲ. ಹಸಿವು–ಬಡತನ ಮೂಲಭೂತ ಅವಶ್ಯಕತೆಗಳು ದಿನನಿತ್ಯದ ಗೋಳಾದವು.

ಭೂಮಿಯ ಮಾಲೀಕರಾಗಿ ಉನ್ನತ ಶಿಕ್ಷಣ ಪಡೆದ ಮೇಲ್ವರ್ಗದವರು ಉನ್ನತ ಸ್ಥಾನ– ಮಾನಗಳನ್ನು ಸಹಜವಾಗಿಯೇ ಹೊಂದಿದ್ದರು. ತಾವು ಪಡೆದ ಶಿಕ್ಷಣದ ಕಾರಣವಾಗಿ ಕೃಷಿಯಿಂದ ಹಿಂದೆ ಸರಿದರೂ ಉಳುಮೆ ಮಾಡುತ್ತಿದ್ದ ಭೂಮಿಯನ್ನೇ ಬಂಡವಾಳವಾಗಿ ಪರಿವರ್ತಿಸಿ ಉದ್ದಿಮೆಗಳನ್ನು ಸ್ಥಾಪಿಸಿದರು. ಹಂಚಿನ ಕಾರ್ಖಾನೆ, ಗೇರು ಬೀಜದ ಕಾರ್ಖಾನೆಗಳಲ್ಲದೆ ಹೋಟೇಲು, ಉದ್ದಿಮೆ, ಅಂಗಡಿ, ಮುಗ್ಗಟ್ಟುಗಳು, ವಿದೇಶೀ ವ್ಯಾಪಾರಗಳೇ ಅಲ್ಲದೆ ಭೂಮಿಯನ್ನೇ ವಿಕ್ರಯ ಮಾಡುವ ರಿಯಲ್ ಎಸ್ಟೇಟ್ ಉದ್ದಿಮೆದಾರರಾಗಿಯೂ ಪರಿವರ್ತನೆ ಹೊಂದಿದ್ದರು. ಗದ್ದೆಯಲ್ಲಿ ರಾತ್ರಿ ಹಗಲುಗಳನ್ನು ಒಂದು ಮಾಡಿಯಾದರೂ ಹೊಟ್ಟೆ ಬಟ್ಟೆಗೆ ಕಂಗೆಡುತ್ತಿದ್ದ ಹಿರಿ ತಲೆಮಾರಿನ ಮುಂದೆ ಯುವಕರು ಭೂಮಿಯ ವ್ಯವಹಾರ ಜ್ಞಾನದಲ್ಲಿ ನಿಪುಣರಾದರು. ಭೂಮಿಯನ್ನು ಒಂದಕ್ಕೆ ಹತ್ತರಂತೆ ವಿಕ್ರಯಗೊಳಿಸುವ ಸಾಮರ್ಥ್ಯಕ್ಕೆ ಸರಕಾರಿ ಕಚೇರಿಗಳಲ್ಲಿ ವ್ಯವಹರಿಸಬೇಕಾದರೆ ನಾಲ್ಕಕ್ಷರ ಕಲಿತಿರುವುದು ಪ್ರಮುಖ ಅರ್ಹತೆಯಾಗಿತ್ತು. ಹಿರಿ ತಲೆಮಾರು ಹೆಬ್ಬೆಟ್ಟಿನಲ್ಲೇ ಕಾಲ ಕಳೆದು ದುಡಿದು ತಿಂದವರನ್ನು ಮೂಲೆಗೆ ಕೂರಿಸಿ ಯುವಕರು ಕುಟುಂಬದ ಯಜಮಾನರಾದರು. ಸಾರ್ವಜನಿಕ ಸ್ಥಳಗಳಲ್ಲಿ ಗುರುತಿಸಿಕೊಳ್ಳುವುದು ಅವಶ್ಯವಿದ್ದುದರಿಂದ ಸಣ್ಣ –ಪುಟ್ಟ ರಾಜಕೀಯದಲ್ಲಿ ಅಸ್ತಿತ್ವ ಉಳಿಸಿಕೊಳ್ಳುವ ಪ್ರಯತ್ನ ನಡೆಯಿತು. ರಾತ್ರಿ–ಹಗಲೆನ್ನದೆ ದುಡಿದ ಒಂದು ತಲೆಮಾರಿನ ಪರ್ಯಾಯವಾಗಿ ಗರಿ–ಗರಿ– ಬಟ್ಟೆ ಧರಿಸಿದ ಯುವಕರು ರಾತ್ರಿ–ಹಗಲುಗಳಲ್ಲಿ ಕಾರ್ಯಕ್ರಮಗಳಲ್ಲಿ ಭಾಗವಹಿಸುವುದೇ ಸಾಮಾಜಿಕ ಗುರುತಿಸಿಕೊಳ್ಳುವಿಕೆ ಎನ್ನಿಸಿತು. ಹೊರಗಿನ ಓಡಾಟಗಳಿಂದ ನೂರಾರು ಜನರ ಸಂಪರ್ಕ ಪರಿಚಯ, ಸಮುದಾಯದ ಮುಂದಾಳತ್ವವೂ ಲಭಿಸಿ ರಾಜಕೀಯದ ಅಧಿಕಾರದ ಆಕಾಂಕ್ಷಿಗಳಾಗಿಯೂ ಪ್ರಾಮುಖ್ಯತೆ ಪಡೆದರು. ದುಡಿದರೆ ಮಾತ್ರ ತಿನ್ನಬಹುದು ಎಂಬ ಲೋಕೋಕ್ತಿಯೇ ಇದರಿಂದ ವ್ಯತ್ಯಯಗೊಂಡಿತು. ಇಂತಹ ಅಧಿಕಾರ ಮುಂದಾಳತ್ವ ಲಭಿಸದೆ ಹೋದ ಕೆಳ ಸಮುದಾಯದ, ಆರ್ಥಿಕವಾಗಿ ಭೂಮಿಯ ಒಡೆತನವನ್ನು ಹೊಂದಿಲ್ಲದ ಕುಟುಂಬದ ಮಕ್ಕಳು, ಈ ನಾಯಕರ ಚೇಲಾಗಳಾದರು. ದುಡಿಯದೆ ಬದುಕುವ ಮಾರ್ಗಕ್ಕೆ ಪೂರಕವಾಗಿ ಇವರನ್ನು ತಮ್ಮ ಹಿಂಬಾಲಕರಾಗಿಯೂ ಮುಂದೆ ಬಂದ ನಾಯಕರು ಬೆಳೆಸಿದರು. ಕೆಲಸ ಬೊಗಸೆ ಇಲ್ಲದೆ ಸುಮ್ಮನೆ ಸೋಮಾರಿ ಕಟ್ಟೆಗಳಲ್ಲಿ ಕಾಲಕಳೆಯುವ ಯುವಕರು ನೂರಾರು ರೀತಿಯ ಸಂಘಟನೆಗಳನ್ನು ಕಟ್ಟಿಕೊಳ್ಳಲು ಪ್ರಯತ್ನಿಸಿದರು. ಸಹಜವಾಗಿಯೇ ಅಲ್ಲಿ ಧರ್ಮ ಮತ್ತು ಧಾರ್ಮಿಕ ಸಂಸ್ಕೃತಿ ರಕ್ಷಣೆಯ ಕಟ್ಟಾಳುಗಳಾದರು ಪರಿಣಾಮ ಹಳ್ಳಿ

ಹಳ್ಳಿಗಳಲ್ಲಿ ಹುಟ್ಟಿಕೊಂಡ ಇಂತಹ ಸಂಘಟನೆಗಳಿಂದ ಗುಂಪುಗಾರಿಕೆ, ಸಂಘರ್ಷ ನಾಯಕತ್ವಕ್ಕಾಗಿ ಹೋರಾಟಗಳೂ ಆರಂಭವಾದವು. ಬಹಳ ಸುಲಭವಾಗಿ ದುಡ್ಡು ಮಾಡುವ ವಾಮ ಮಾರ್ಗಗಳೇ ಪ್ರಾಮುಖ್ಯತೆ ಪಡೆದು ದುಡ್ಡಿದ್ದವನೇ ದೊಡ್ಡಪ್ಪನಾಗುದದಲ್ಲದೆ ಭೂಮಿಯಿದ್ದೂ ದುಡಿಲ್ಲದವನು ನಿಷ್ಪ್ರಯೋಜಕನಾದನು. ಆ ಭೂಮಿಗೆ ಬೆಲೆ ಬರುವಂತೆ ಗಿರಾಕಿಗಳನ್ನು ತರುವ ಮಾರಾಟ ಮಾಡಿಸುವ ದಂಧೆಯಲ್ಲಿ ಸ್ಥಳೀಯ ಯುವಕರೇ ಪ್ರಮುಖ ಪಾತ್ರ ವಹಿಸಿದರು. ಭೂಮಿಯನ್ನು ಮಾರುವ ದಲ್ಲಾಳಿಗಳೇ ಒಂದಕ್ಕೆರಡರಷ್ಟು ದೋಚಿಕೊಳ್ಳುವಾಗ ಪ್ರತಿಯೊಬ್ಬರಿಗೂ ದುಡಿಯದೇ ತಿನ್ನುವ ಈ ವ್ಯವಹಾರವೇ ಹೆಚ್ಚು ಆಕರ್ಷಕವೂ ಪ್ರಾಮುಖ್ಯತೆಯನ್ನು ಪಡೆಯಿತು.

ಒಂದನ್ನು ಎರಡನ್ನಾಗಿಸುವುದಲ್ಲ, ಅದನ್ನು ಹತ್ತನ್ನಾಗಿಸುವುದೆಂದರೆ ಯಾರಿಗೆ ಆ ಆದಾಯ ಬೇಡವೆನಿಸುತ್ತದೆ?. ರಿಯಲ್ ಎಸ್ಟೇಟ್ ಉದ್ದಿಮೆದಾರರೇ ಹುಟ್ಟಿಕೊಂಡು ಊರಿನ ಮೂಲೆ ಮೂಲೆಗೆ ಬಂದ ಹಿಟಾಚಿಗಳು ಕ್ಷಣಾರ್ಧದಲ್ಲಿ ಪಾರಂಪರಿಕವಾಗಿ ಬೆಳೆ ಬೆಳೆದ ಗದ್ದೆಗಳನ್ನೆಲ್ಲ ಸಮತಟ್ಟಾದ ಭೂಮಿಯಾಗಿಸಿ ಸೈಟಾಗಿಸಿದರು. ಒಂದಕ್ಕೆ ಹತ್ತರಷ್ಟಾಗಿ ಭೂಮಿಯ ಬೆಲೆಯನ್ನು ಹೆಚ್ಚಿಸಿ ಮಾರಾಟವಾದಾಗ ಭೂಮಿಯನ್ನು ಮಾರಾಟವೆಂದು ಘೋಷಿಸಿ ಮಣ್ಣಿನ ಬೆಲೆಯನ್ನು ಹೆಚ್ಚಿಸಿದರು. ಒಂದು ಪ್ರದೇಶದಿಂದ ಇನ್ನೊಂದು ಪ್ರದೇಶಕ್ಕೆ ಕಡಿಮೆ ಬೆಲೆಯಲ್ಲಿ ದೊಡ್ಡ ಪ್ರಮಾಣದ ಭೂಮಿಯನ್ನು ಖರೀದಿಸಿ ಕಾಲಾಂತರದಲ್ಲಿ ಸಣ್ಣ ಸಣ್ಣ ಸೈಟುಗಳಾಗಿ ಮಾರಿದರೂ ಹಣದ ಶೇಖರಣೆ ಹೆಚ್ಚುತ್ತಾ ಹೋಗಿ ಅಸಮಾನ ಹಂಚಿಕೆಯಿಂದ ಭೂ ರಹಿತರು ಇನ್ನಷ್ಟು ದಯನೀಯ ಸ್ಥಿತಿಗೆ ಇಳಿದರು.

ಪ್ರತಿಯೊಬ್ಬನೂ ತನಗೊಂದು ಮನೆ ಬೇಕು ಎಂಬ ಖಾಸಗಿತನ ವೈಯಕ್ತಿಕತನಗಳಿಗಾಗಿ ಹಸಿರು ಕಾಣೆಯಾಗುತ್ತ ಕಾಂಕ್ರೀಟು ಕಾಡು ಹೆಚ್ಚುತ್ತಾ ಹೋಯಿತು. ಕುಟುಂಬವೂ ಒಂದು ತಲೆಮಾರಿನ ಅರಿವನ್ನು ಮಾತ್ರ ಹೊಂದಿ ತನ್ನ ಹಿಂದಿನ ತಲೆಮಾರಿನ ಬಗೆಗೆ, ಕಾಳಜಿ ಇಲ್ಲವಾಯಿತು. ತಂದೆ–ತಾಯಿ, ಅಜ್ಜ–ಅಜ್ಜಿಯ ಸಂಬಂಧಗಳೇ ಬಹಳ ಭಾರವೆನಿಸಿತು. ನಾನು ನನ್ನ ಹೆಂಡತಿ ಮಕ್ಕಳು/ ಮಗು ಇಷ್ಟು ಮಾತ್ರ ಕುಟುಂಬವೆನಿಸಿತು. ತೀರಾ ಸಂಕೀರ್ಣ ಮತ್ತು ಸಂಕುಚಿತ ಕುಟುಂಬದಲ್ಲೂ ನಾನು, ನನ್ನದೇ ಮೇಲ್ಪಂಕ್ತಿ ಪಡೆದು ಹಂಚಿ ತಿನ್ನುವುದೇ ಇಂದಿನ ಮೌಲ್ಯವಲ್ಲ ಎಂಬಂತಾಯಿತು. ಕುಟುಂಬವೂ ಪರಿಪೂರ್ಣವಾದ ಕುಟುಂಬವಾಗುಳಿಯದೆ ಮುರಿದ ಸಂಸಾರಗಳ ಸಂಖ್ಯೆಯೂ ಹೆಚ್ಚುತ್ತ ಹೋಯಿತು. ಸ್ವಂತಿಕೆ, ನನ್ನತನಗಳೇ ಮುನ್ನೆಲೆಗೆ ಬಂದುದರಿಂದ ವೈಯಕ್ತಿಕವಾದ ಬದುಕು ಸುಖ ಭೋಗಗಳ ಹಪಾಹಪಿಯಲ್ಲಿ ಮುಳುಗೇಳುವಂತಾಯಿತು. ಕೃಷಿ ಸಂಸ್ಕೃತಿಯ ಪಲ್ಲಟದ ಈ ಸೂಕ್ಷ್ಮ ವ್ಯತ್ಯಯ ಸಮಾಜ, ಸಮುದಾಯ, ಚಿಂತನೆಗಿಂತ ಸಂಘರ್ಷಗಳೇ ಹೆಚ್ಚಾಗಿ ಹಿಂಸೆ–ಗಲಭೆಗಳ ಬದುಕಿನ ಮಾಮೂಲಿ ಸಂಗತಿಯಾಗಿತ್ತು. ಆದರ್ಶವೆಲ್ಲ ಕೇವಲ ಕಲ್ಪನೆಯಾಗಿ ವಾಸ್ತವದ ನಿಷ್ಠುರತೆ ಅರಗಿಸಿಕೊಳ್ಳಲಾಗದ ಸತ್ಯವೇ ಆಯಿತು.

ಹೆಣ್ಣನ್ನು ಕೇಂದ್ರದಲ್ಲಿರಿಸಿ ಕಟ್ಟಿಕೊಂಡ ಕುಟುಂಬ ಮತ್ತು ಭೂಮಿಯ ಒಡೆತನ ಪೂರ್ತಿಯಾಗಿ ಪಲ್ಲಟಗೊಂಡಿತು. ವಿಘಟನೆಗೊಳ್ಳದೆ ಇರುವ ಕುಟುಂಬಗಳಲ್ಲಿ ಪೂರ್ತಿ ಭೂಮಿಯ ಒಡೆತನ ಹೆಣ್ಣಿನ ಅಧೀನದಲ್ಲಿ ಗಂಡು ಪ್ರತೀಕ ಮುಂದಾಳುವಾಗಿ 'ತಮೆರಿ' ಯಾಗಿದ್ದನು. ಯಾವಾಗ ಗದ್ದೆಗೆ ಅಮರೆಗಳು

ಬಂದು ಗದ್ದೆಗಳು ಹರಿದು ಹಂಚಿ ಹೋದವೋ ಭೂಮಿಯ ಒಡೆತನವೂ ಹೆಣ್ಣಿನ ಮುಷ್ಠಿಯಿಂದ ಗಂಡಿನ ಅಧೀನಕ್ಕೆ ಸರಿಯಿತು. ಹೆಣ್ಣನ್ನು ಕೇಂದ್ರದಲ್ಲಿರಿಸಿ ಕಟ್ಟಿದ ಕುಟುಂಬವೂ ನಿಧಾನವಾಗಿ ಪಿತೃಪ್ರಧಾನ ಕುಟುಂಬವಾಗಿ ಪರಿವರ್ತನೆ ಹೊಂದುತ್ತಾ ಹೋಯಿತು. ಹೆಣ್ಣು ವಿಕ್ರಯದ ವಸ್ತುವೆನಿಸಿ ಅವಳಿಗೂ ಬೆಲೆ ಕಟ್ಟುವಂತೆ ವಧು ದಕ್ಷಿಣೆಗೆ ಬದಲಾಗಿ ವರದಕ್ಷಿಣೆಯೇ ಬಹಳ ಅಗತ್ಯ ಮತ್ತು ಪ್ರತಿಷ್ಠೆಯ ಅಂಶವಾಗಿತ್ತು. ವರದಕ್ಷಿಣೆಗಾಗಿ ಮೊದಲ ತಲೆಮಾರಿನಲ್ಲಿ ಗದ್ದೆಗಳನ್ನು ವಿಕ್ರಯಿಸಿ ಅದ್ಧೂರಿಯ ಮದುವೆ ಮಾಡುವುದೇ ಮುಖ್ಯವಾಯಿತು. ಭೂರಹಿತರಾದ ಕುಟುಂಬಕ್ಕೆ ಹೆಣ್ಣು ಕೊಡದೇ ಇದ್ದವರು ಯಾರಲ್ಲಿ ದುಡ್ಡಿದೆ ಅವನಿಗೆ ಹೆಣ್ಣು ಕೊಡಲು ತುದಿಗಾಲಲ್ಲಿ ನಿಂತರು, ಒಕ್ಕಲುಗಳಾಗಿದ್ದವರು ವ್ಯಾಪಾರ ವ್ಯವಹಾರದಲ್ಲಿ ಮುಂಬೈ, ದುಬೈ ವಲಸೆಗಳಿಂದ ಸ್ಥಿತಿವಂತರಾದಾಗ ಭೂಮಿಯ ಒಡೆತನವನ್ನು ಹೊಂದುವುದು ಪ್ರಮುಖವೆನಿಸಲಿಲ್ಲ. ನಿಷ್ಪ್ರಯೋಜಕ ಭೂಮಿ ಮತ್ತು ಅವಿವಾಹಿತಳಾಗುಳಿದ ಹೆಣ್ಣು ಮಕ್ಕಳು ಕುಟುಂಬಕ್ಕೆ ಭಾರವಾಗಿ ವಾರೀಸುದಾರರಿಲ್ಲದ ಗದ್ದೆಗಳಾದರು. 'ತಮೆರಿ' ಯಾಗಬೇಕಾದವರು ಬೆನ್ನು ತಿರುಗಿಸಿ ನಿಂತಾಗ ಹೆಣ್ಣು ದುಡಿಮೆಗೆ ಹೊರ ನಡೆಯುವುದು ಅನಿವಾರ್ಯವಾಯಿತು. ಗಂಡು ಹೆಣ್ಣುಗಳಿಬ್ಬರೂ ಹೊರ ದುಡಿಮೆಯವರಾದಾಗ ಕುಟುಂಬದ ಸ್ವರೂಪವೂ ಬದಲಾಯಿತು. ಹೆಣ್ಣನ್ನು ಕೇಂದ್ರೀಕರಿಸಿದ ಭೂಮಿ ಮಾನ್ಯತೆ ಕಳೆದುಕೊಂಡು ಗಂಡ ಮತ್ತು ಹೆಂಡತಿ ಮಕ್ಕಳು ಕುಟುಂಬದಲ್ಲಿ ಗಂಡನಿಗೆ ಪ್ರಾಧಾನ್ಯತೆ ದೊರೆತು ಮನೆಯ ಯಜಮಾನನಾದವನು ಮಾತ್ರ ಮೂಲೀಯವೂ ಪಿತೃಪ್ರಧಾನ ಕುಟುಂಬದ ಮೌಲ್ಯಗಳನ್ನು ಹೊಂದಿ ನಿಧಾನವಾಗಿ ಸ್ಥಿತ್ಯಂತರಗೊಳ್ಳುತ್ತ ಬಂತು. ಕುಟುಂಬ ವ್ಯವಸ್ಥೆಯ ರೂಪುರೇಷೆಗಳು ಬದಲಾದುದರಿಂದ ಸಮಾಜದ ಮೌಲ್ಯಗಳೂ ಪರಿವರ್ತನೆ ಹೊಂದುತ್ತ ಸಾಗಿತು.

ಒಟ್ಟು ಕೃಷಿ ಸಂಸ್ಕೃತಿ ಮತ್ತು ವೈಯಕ್ತಿಕ ಬದುಕಿನ ಪಲ್ಲಟ ಎರಡು ಸ್ವರೂಪದಲ್ಲಿ ಪ್ರಮುಖವಾಗಿ ನಡೆದಿವೆ. ಭೂಮಿಯ ಕಾರಣಗಳಿಂದ ವೈಯಕ್ತಿಕ ಬದುಕು ಸುಧಾರಿಸುವುದು, ಅದರ ಮೂಲಕ ಕೃಷಿಯ ವಿಸ್ತರಣೆ, ಬದಲಾವಣೆಗಳಾದುದು ಒಂದು ಪ್ರಮುಖ ಹಂತ. ಎರಡನೆಯ ಅಂಶದಲ್ಲಿ ಭೂಮಿಯ ಸಂಸರ್ಗವನ್ನೇ ಪೂರ್ಣವಾಗಿ ತ್ಯಜಿಸಿ ಉದ್ಯೋಗ ಮಾಡುವುದು, ಆದಾಯದ ಮೂಲವನ್ನು ಬೇರೆ ದಿಕ್ಕಿನಿಂದ ಅನ್ವೇಷಿಸುವುದು ಮುಖ್ಯವಾದುದು. ಕೃಷಿ ಸಂಸ್ಕೃತಿಯಲ್ಲಿ ತೊಡಗಿಸಿಕೊಂಡಿದ್ದವರು ಎರಡು ರೀತಿಯಲ್ಲಿ ಪಲ್ಲಟಗಳನ್ನು ಗುರುತಿಸಿಕೊಂಡರು. ಭೂಮಿಯೊಂದಿಗಿನ ಸಂಬಂಧವನ್ನು ಕಳಚಿ ಮತ್ತು ಸಂಬಂಧವನ್ನು ಇರಿಸಿಕೊಂಡು ಕೃಷಿ ಬದುಕನ್ನು ಬಾಳಿದರು.

**೨.೫ ಕೃಷಿ ಸಂಸ್ಕೃತಿ ಪಲ್ಲಟ ಪಾರಂಪರಿಕ ಕೃಷಿಕ ಸಮುದಾಯಗಳು**

ಕೃಷಿ ಸಂಸ್ಕೃತಿ ಪಲ್ಲಟವಾಗುತ್ತ ಸಾಗಿದ್ದರಿಂದ ಪಾರಂಪರಿಕ ಕೃಷಿಕ ಸಮುದಾಯಗಳು ಕೃಷಿಯನ್ನೇ ನೆಚ್ಚಿ ಬದುಕುವುದು ಅಸಾಧ್ಯವಾಯಿತು. ಭೂ ಮಾಲೀಕರು, ಸಣ್ಣ ಹಿಡುವಳಿದಾರರು, ಕೃಷಿ ಕೂಲಿ ಕಾರ್ಮಿಕರು ಮತ್ತು ಭೂ ರಹಿತರ ಬದುಕಿನ ಸ್ವರೂಪವು ಬದಲಾಯಿತು. ಕೃಷಿಗೆ ಪೂರಕವಾಗಿ ನಡೆಯುತ್ತಿದ್ದ ಪಾರಂಪರಿಕ ಆಯಗಾರಿಕೆಯ ವೃತ್ತಿಯ ಮಂದಿಯೂ ತಮ್ಮ ಕೌಶಲ್ಯದ ದುಡಿಮೆಗಳ ಮಾನ್ಯತೆಯನ್ನು ಕಳೆದುಕೊಂಡರು.

ಕಮ್ಮಾರ, ಬಡಗಿ, ಕುಂಬಾರ, ಮಡಿವಾಳ, ಕ್ಷೌರಿಕ, ಬುಟ್ಟಿ ಹೆಣೆಯುವ ಕಾಯಕ, ಕೃಷಿ ಸಲಕರಣೆಗಳನ್ನು ಸಿದ್ಧಗೊಳಿಸುವ ಕಾರ್ಯಗಳಿಗೆ ಸಹಜವಾಗಿಯೇ ಬೇಡಿಕೆ ತಗ್ಗಿತು. ಕೃಷಿ ಚಟುವಟಿಕೆಗಳೇ ಇಲ್ಲವಾದಾಗ ಈ ದುಡಿಮೆ ಮತ್ತು ಕೌಶಲ್ಯ ಬೆಲೆ ಕಳಕೊಂಡುದರಿಂದ ಕಸುಬುದಾರರು ನೆಲೆ ಕಳೆದುಕೊಂಡರು. ಹೊಟ್ಟೆ ಪಾಡಿಗಾಗಿ ಆಹಾರದ ಮೂಲವಾಗಿದ್ದುದು, ಹಸಿವೆಯನ್ನು ನೀಗಿಸಲಾಗದೆ ಹೋದಾಗ ಪರ್ಯಾಯವೊಂದರ ಅನ್ವೇಷಣೆ ಈ ಸಮುದಾಯಕ್ಕೆ ಅವಶ್ಯವಾಗಿತ್ತು.

ಕೃಷಿಯನ್ನು ವಿಸ್ತರಣೆ ಮಾಡುವ ಹಂತದಲ್ಲಿ ಅಲ್ಲಲ್ಲಿ ಗುಂಪುಗಳಾಗಿದ್ದ ಬುಡಕಟ್ಟು ಸಮುದಾಯಗಳು ಕೃಷಿ ಕೂಲಿ ಕಾರ್ಮಿಕರಾದವರು ಈಗ ಮತ್ತೆ ಹೊಟ್ಟೆಯ ಹಸಿವಿನ ಪ್ರಶ್ನೆ ಎದುರಿಸುವಂತಾಯಿತು. ತಾವು ಮಾಡುತ್ತಿದ್ದ ಕಸುಬುಗಳಿಗೆ ಮತ್ತು ಕೌಶಲ್ಯದ ಜ್ಞಾನಕ್ಕೂ ಬೆಲೆ ಇಲ್ಲದಂತಾಯಿತು. ಕಾಡು –ಮೇಡುಗಳನ್ನು ಸುತ್ತಿ ಸಂಗ್ರಹಿಸುತ್ತಿದ್ದ ಬಿಳಲು, ನಾರು, ದಂಟುಗಳಿಂದ ತಯಾರಿಸುತ್ತಿದ್ದ ಸಲಕರಣೆಗಳ ಅಗತ್ಯತೆಯೇ ಇಲ್ಲದೇ ಹೋದಾಗ ಆ ಪಾರಂಪರಿಕ ತಿಳುವಳಿಕೆಯೇ ಕಾಣೆಯಾಗುತ್ತ ಬಂತು. ಕಣ್ಣಳತೆ ಕೈಯ್ಯಳತೆಯ ಮಾಪನಗಳಲ್ಲಿ ಸಿದ್ಧಗೊಳ್ಳುತ್ತಿದ್ದ ಕರಕುಶಲ ಸಾಮಾಗ್ರಿಗಳು ಹಿನ್ನೆಲೆಗೆ ಸರಿದವು. ಒಂದು ಕಾಲದ ಸಾಮುದಾಯಿಕ ಆಶಯದ ಮೌಲ್ಯದ ಪ್ರಾಮುಖ್ಯತೆಯೂ ಮಹತ್ವ ಕಳಕೊಂಡಿತು.

ಚಾಲುಗೇಣಿ ಮೂಲಗೇಣಿಗಳಿಂದ ಸಾಗುವಳಿ ಕಾರ್ಯ ಮಾಡುತ್ತಿದ್ದ ಸಣ್ಣ ಹಿಡುವಳಿದಾರರು ಪಾಳೇಗಾರಿಕೆ ವ್ಯವಸ್ಥೆಯಲ್ಲಿ ಗೇಣಿ ಕೊಟ್ಟೇ ಸುಸ್ತಾಗುತ್ತಿದ್ದರು. ರಾಷ್ಟ್ರೀಯ ಚಳುವಳಿ ಸ್ವತಂತ್ರ ಭಾರತದ ಆಡಳಿತ, ಒಕ್ಕಲು ಮಸೂದೆ ಕಾನೂನು ಬಂದಾಗ ಹಂತ ಹಂತವಾಗಿ ಒಂದಿಷ್ಟೇ ಸ್ವತಂತ್ರರಾಗುತ್ತ ಬಂದು ಸ್ವಾತಂತ್ರ್ಯದ ಸುಖವನ್ನು ಅನುಭವಿಸುವ ಪ್ರಯತ್ನ  ಮಾಡಿದರು. ಒಕ್ಕಲಾಗಿದ್ದವರು ಭೂಮಿಯ ಸ್ವಂತ ವಾರೀಸುದಾರರಾದಾಗ ಪಾಳೆಗಾರನಿಗೆ ಸರಿಸಮನಾಗಿ ಸಾಗುವಳಿ ಮಾಡಲಾಗಿಲ್ಲ. ಬಿಟ್ಟಿ ಆಳು ಜೀತಕ್ಕಿದ್ದು ದುಡಿದಂತೆ ಇಲ್ಲಿ ಆಗಲಿಲ್ಲ. ಸಣ್ಣ ಹಿಡುವಳಿ ದೊಡ್ಡ ಪ್ರಮಾಣದ ರೈತರೊಂದಿಗೆ ಅಸಮಾನ ಸ್ಪರ್ಧೆ ಅನಿವಾರ್ಯವಾಯಿತು.  ಪಾರಂಪರಿಕವಾಗಿ ಬಂದ ಗದ್ದೆಯನ್ನು ಕೃಷಿ ಮಾಡಿದರೆ ಸಿಗುವ ಅದಾಯಕ್ಕಿಂತ ಹೊರಗಿನ ದುಡಿಮೆಯ ಆದಾಯ ಹೆಚ್ಚೆನಿಸಿತು. ಕಾಂಕ್ರೀಟು ಕಾಡು ಕಟ್ಟುವ ಕೆಲಸದಲ್ಲಿ ಮೊದಲ ತಲೆಮಾರು ಗುರುತಿಸಿಕೊಂಡು, ವಿದ್ಯೆ ಕಲಿತ ಎರಡನೇ ತಲೆಮಾರಿನ ಮಕ್ಕಳಿಗೆ ಗದ್ದೆ ಕೆಲಸ ಲಾಭದಾಯಕನಿಸಲಿಲ್ಲ. ಸಣ್ಣ ಹಿಡುವಳಿಯ ಬೆಳೆಗೆ ಮಾಡುವ ಖರ್ಚು ಮತ್ತು ಬರುವ ಉತ್ಪತ್ತಿಗಳ ಲೆಕ್ಕಾಚಾರವನ್ನು ಹಾಕಿ ಅದು ಪ್ರಯೋಜನವಿಲ್ಲದ್ದೆನಿಸಿ ಹೊರ ದುಡಿಮೆ ಮತ್ತು ದೂರದೂರುಗಳಿಗೆ ವಲಸೆ ಅನಿವಾರ್ಯವಾಯಿತು. ಮುಂಬೈ, ದುಬೈಗಳಲ್ಲದೆ ಹಳ್ಳಿಯಿಂದ ನಗರಕ್ಕೆ ವಲಸೆ ಬಂದರು.  ನಗರದಿಂದ ಯುವಕರಂತೂ ವಿದೇಶಗಳಿಗೆ ಗುಳೇ ಹೊರಟರು. ಹಳ್ಳಿಗಳೆಲ್ಲ  ಮುದುಕರ ಆವಾಸ ಸ್ಥಾನಗಳಾಗಿ ಯುವಕರು ನಗರ ಸೇರುವುದು 'ಕೆಟ್ಟು ಪಟ್ಟಣ ಸೇರಿ'ದಂತಾಯಿತು. ಅಲ್ಲಿ ಬದುಕು ಕಟ್ಟಲು ಯತ್ನಿಸಿ ತಮ್ಮ ಮನೆ, ಮಾರುಗಳನ್ನು  ನಿರ್ಮಿಸುವುದೇ ಅವರಿಗೆ ಹರಸಾಹಸವೆನಿಸಿತು. ಭೂರಹಿತರಾಗಿ ಹಳ್ಳಿಯಲ್ಲಿ ತಮ್ಮ ಅಸ್ತಿತ್ವಕ್ಕಾಗಿ ಹೋರಾಡುತ್ತಿದ್ದವರೆಲ್ಲ ಆಯಗಾರರಾಗಿ ದುಡಿಯುತ್ತಿದ್ದವರಿಗೂ ಕೃಷಿ ಕಡಿಮೆಯಾದಂತೆಲ್ಲಾ ಬದುಕಿನ ಜೀವನೋಪಾಯವೂ ಕಡಿಮೆಯಾಯಿತು. ತಮ್ಮ ದುಡಿಮೆಯ ಕೌಶಲ್ಯವನ್ನು ಕಳೆದುಕೊಳ್ಳಬೇಕಾದಂತಹ ಅನಿವಾರ್ಯ ಪರಿಸ್ಥಿತಿ ಒದಗಿತು. ಕೃಷಿ

ಚಾಲ್ತಿಯಲ್ಲಿದ್ದಾಗ ಅದಕ್ಕೆ ಪೂರಕವಾಗಿದ್ದ ಎಲ್ಲ ಸಣ್ಣ ಪುಟ್ಟ ಕೆಲಸಗಳೂ ಪ್ರಕೃತಿಗೆ ಹತ್ತಿರವಾಗಿದ್ದವು. ಒಂದೆಡೆ ಕೃಷಿಗೆ ಯಂತ್ರಗಳ ಬಳಕೆ ಮತ್ತು ರಾಸಾಯನಿಕವಾದ ಕೃಷಿ ಪದ್ಧತಿ ಹೆಚ್ಚು ಇಳುವರಿಯನ್ನು ಪಡೆಯಲು ಸಹಾಯಕವೆಂಬ ನಂಬಿಕೆ ಇತ್ತು. ಕೃಷಿಯ ಸ್ವರೂಪದಲ್ಲಿ ಆದ ಪಲ್ಲಟದಿಂದಾಗಿಯೂ ಪಾರಂಪರಿಕ ಕೃಷಿಕ ಸಮುದಾಯಗಳೂ ತಮ್ಮ ಕುಲಕಸುಬಿನ ವೃತ್ತಿಯನ್ನು ಕಳಕೊಂಡವು. ಸಾಂಪ್ರದಾಯಿಕವಾಗಿ ಕೃಷಿ ಮಾಡುತ್ತಿದ್ದವರು ಪರಂಪರೆಯ ಕೃಷಿ ಚಟುವಟಿಕೆಗಳಿಗಾಗಿ ಹೆಚ್ಚು ಮಾನವ ಶ್ರಮ ಮತ್ತು ಕಾಲವನ್ನು ಬಳಸಬೇಕಾಗುತ್ತಿತ್ತು. ಓಬಿರಾಯನ ಕಾಲದ ತಿಳುವಳಿಕೆಗಳೆಂದು ಇವುಗಳನ್ನು ಹೀಗಳೆದು ಕೃಷಿಯಲ್ಲಿ ಹೊಸ ಅನ್ವೇಷಣೆಗಳು, ಪ್ರಯೋಗಗಳು ಬಂದವು. ಹೊಸ ತಳಿಗಳ ಆವಿಷ್ಕಾರದೊಂದಿಗೆ ವೈಜ್ಞಾನಿಕವಾದ ಕೃಷಿಯಿಂದ ಇಳುವರಿಯನ್ನು ಹೆಚ್ಚು ಮಾಡುವುದು ಮೊದಲ ಅದ್ಯತೆಯಾಗಿತ್ತು. ವೈಜ್ಞಾನಿಕ ಕೃಷಿ ಯಾಂತ್ರಿಕ ಸಲಕರಣೆಗಳು ಕೃಷಿ ಕಾರ್ಯವನ್ನು ಸುಲಭಗೊಳಿಸಿದರೂ ಪಾರಂಪರಿಕವಾದ ಕೃಷಿಕ ಸಮುದಾಯಗಳು ತಮ್ಮ ಕೆಲಸಗಳನ್ನು ಕಳಕೊಂಡರು. ಪರ್ಯಾಯವಾಗಿ ಬೇರೆ ಉದ್ಯೋಗಗಳನ್ನು ಅರಸುವುದು ಅವರಿಗೆ ಅನಿವಾರ್ಯವಾಗಿತ್ತು. ಕೃಷಿಕರು ಆಹಾರದ ಬೆಳೆಯಿಂದ ವಾಣಿಜ್ಯ ಬೆಳೆಗೆ ಪಲ್ಲಟವಾಗುತ್ತಿದ್ದಂತೆ ದುಡಿಮೆಯ ಮೂಲ ಆಹಾರ ಧಾನ್ಯಗಳಿಂದ ದುಡ್ಡಿನೆಡೆಗೆ ಬದಲಾಯಿತು.

ಭತ್ತದ ಕೃಷಿಗೆ ಪರ್ಯಾಯವಾಗಿ ಅಡಿಕೆ ಬೆಳೆ ಬಂದಾಗ ಗದ್ದೆ ಸಾಗುವಳಿಯ ಕೆಲಸಗಳಿಗಿಂತ ಭಿನ್ನವಾದ ಕೆಲಸಗಳು ಅಡಿಕೆ ಬೆಳೆಯಲ್ಲಿತ್ತು. ಗದ್ದೆ ಕೆಲಸ ಮತ್ತು ತೋಟದ ಕೆಲಸದ ಸ್ವರೂಪದ ವ್ಯತ್ಯಾಸದೊಂದಿಗೆ ಕೌಶಲ್ಯವೂ ಭಿನ್ನವಾಗಿತ್ತು. ಅಡಿಕೆ ಕೊಯಿಲು, ಅಡಿಕೆ ಹೆಕ್ಕುವ, ಅಡಿಕೆ ಒಣಗಿಸುವ, ಸಿಪ್ಪೆ ತೆಗೆಯುವ ಈ ಕೆಲಸಗಳಿಗೂ ಆರಂಭದಲ್ಲಿ ಮಾನವ ಶ್ರಮ ಬಳಕೆಯಾದರೂ ನಿಧಾನವಾಗಿ ಅಲ್ಲೂ ಯಂತ್ರಗಳ ಬಳಕೆಯಾಯಿತು. ನೀರಾವರಿ, ಕೊಯಿಲುಗಳಿಗೆ ಬಳಸಲ್ಪಡುವ ಯಂತ್ರಗಳೊಂದಿಗೆ, ಅಡಕೆಗಳನ್ನು ಪಕ್ವಗೊಳಿಸುವ ಕೆಲಸಕ್ಕೂ ಯಂತ್ರದ ಬಳಕೆಯಾಯಿತು. ಕೃಷಿ ಕಾರ್ಯವನ್ನು ಬಲ್ಲ ಕೃಷಿ ಕೂಲಿ ಕಾರ್ಮಿಕರು ಮೊದಲಿಗೆ ತಮ್ಮ ಕೆಲಸಗಳನ್ನು ಕಳಕೊಂಡರು. ಮೊದಲ ಬಾರಿಗೆ ತಮ್ಮ ಹೊಟ್ಟೆಪಾಡಿನ ಪರ್ಯಾಯ ಕೆಲಸವೊಂದನ್ನು ಹುಡುಕುವುದು ಅವರಿಗೆ ಅನಿವಾರ್ಯವಾಗಿತ್ತು. ಜೀತವಾಗಿದ್ದವರು ದುಡಿಮೆಗೆ ಒಡೆಯನ ಮನೆಯಂಗಳಕ್ಕೆ ನೋಡುತ್ತಿದ್ದವರಿಗೆ ತಮ್ಮ ಕೌಶಲ್ಯವನ್ನು ಬದಲಾಯಿಸಿಕೊಳ್ಳುವುದೂ ಅವರಿಗೆ ಅವಶ್ಯವಾಗಿತ್ತು. ಬದಲಿ ದುಡಿಮೆಯ ಮೂಲಗಳನ್ನು ಹುಡುಕುತ್ತಾ ಸಾಗುವಾಗ ಆರಂಭಗೊಂಡ ಸಣ್ಣ ಪುಟ್ಟ ಉದ್ದಿಮೆ ಕೈಗಾರಿಕೆಗಳು ಹೊಟ್ಟೆ ಪಾಡಿನ ಮೂಲಗಳಾದವು. ಜೀತದಿಂದ ಮುಕ್ತಿ ಪಡೆಯುವುದು ಪಾಳೇಗಾರಿಕೆ ವ್ಯವಸ್ಥೆಯಲ್ಲಿ ಅಷ್ಟು ಸುಲಭವಿಲ್ಲದ ಕಾರಣ ಪರ್ಯಾಯವೊಂದನ್ನು ಅನ್ವೇಷಿಸಲೇ ಬೇಕಾಗಿತ್ತು. ಬೇರೆ ಸ್ಥಳಗಳಿಗೆ ವಲಸೆ ಮತ್ತು ಮಕ್ಕಳನ್ನು ದೂರದ ಕಾಫಿ, ಚಹಾ ತೋಟಗಳಿಗೆ ಜೀತ ಕೂಲಿ ಕಾರ್ಮಿಕರಾಗಿ ಆರಂಭದ ಹಂತದಲ್ಲಿ ಕಳುಹಿಸಿದರು. ಕಳುಹಿಸಿದ ಮಕ್ಕಳು ಮರಳಿ ಬಂದವರು, ಅಲ್ಲೇ ಉಳಿದವರು, ಅಳಿದವರೂ ಇದ್ದರು, ಮೊದಲ ಹಂತದಲ್ಲಿ ಕರಾವಳಿ ಬಿಟ್ಟು ಘಟ್ಟ ಪ್ರದೇಶಗಳಿಗೆ ಕೂಲಿಯಾಳುಗಳಾಗಿ ತೆರಳಿದವರು ಕೃಷಿ ಕೂಲಿ ಕಾರ್ಮಿಕರು, ಕೃಷಿಯೇತರ ಕುಟುಂಬದ ಮಂದಿ. ಎರಡನೇ ಹಂತದಲ್ಲಿ ಕೃಷಿ ಕುಟುಂಬದ ಮಕ್ಕಳೇ ವಿದ್ಯಾವಂತರಾಗಿ ದೂರದೂರುಗಳಿಗೆ ವಲಸೆ ಹೋದರು. ಬಹಳ ಮುಖ್ಯವಾಗಿ ಕೃಷಿ

ಕುಟುಂಬಗಳೂ ಬಹಳ ವಿಸ್ತಾರವಾದ ಕೃಷಿ ಭೂಮಿಗಳಿದ್ದರೂ, ಅವಿಭಕ್ತ ಕುಟುಂಬಗಳಲ್ಲಿ ಎಲ್ಲರಿಗೂ ಸಮಪಾಲು ಸಮ ಬಾಳು ಇರಲಿಲ್ಲ. ಪರಿಣಾಮ ಹೊಟ್ಟೆಯ ಹಸಿವಿಗಾಗಿ ಹೋರಾಟ ಅನಿವಾರ್ಯವಾಗಿತ್ತು. ಆಂತರಿಕ ಭಿನ್ನಾಭಿಪ್ರಾಯಗಳ ಮಧ್ಯದ ಹೋರಾಟದಲ್ಲಿ ಆಗ ತಾನೇ ಆರಂಭಗೊಂಡ ಶಿಕ್ಷಣ ಪಡೆಯುವ ಪ್ರಯತ್ನಗಳು ನಡೆದವು. ಪೂರ್ಣ ಪ್ರಮಾಣದಲ್ಲಿ ಸುಶಿಕ್ಷಿತರಾಗದಿದ್ದರೂ ಅಕ್ಷರ ಜ್ಞಾನವನ್ನು ಪಡೆದ ಉಳ್ಳವರ ಮಕ್ಕಳು ಮುಂಬೈಯಂತಹ ನಗರಗಳಿಗೆ ವಲಸೆ ಹೋದರು. ಭೂಮಿಯ ವಿಸ್ತಾರವಾದ ಒಡೆತನವಿದ್ದರೂ ಅವಿಭಕ್ತ ಕುಟುಂಬಗಳಲ್ಲಿದ್ದ ಕಲಹ ಕಚ್ಚಾಟಗಳು ಹೊರ ದುಡಿಮೆ ಆದಾಯದ ಮೂಲವೆಂದು ಪರಿಭಾವಿಸಲು ಸಾಧ್ಯವಾಯಿತು.

ಕರಾವಳಿಗೆ ಮಿಶನರಿಗಳ ಆಗಮನ ಸಾಮಾಜಿಕ ಜೀವನದಲ್ಲಿದ್ದ ಸ್ಥಿತ್ಯಂತರಗಳು ಹೊಸ ಆಲೋಚನಾ ಕ್ರಮವೊಂದರ ಬಗ್ಗೆ ಯೋಚಿಸುವಂತೆ ಮಾಡಿತು. ಕುಟುಂಬದ ಪರಿಕಲ್ಪನೆಯಲ್ಲಿ ಹುಟ್ಟಿಕೊಂಡ ಮಹತ್ವದ ಬದಲಾವಣೆ ಸ್ತ್ರೀ ಕೇಂದ್ರಿತ ನೆಲೆಯಿಂದ ಪುರುಷ ಕೇಂದ್ರಿತ ನೆಲೆಗೆ ನಿಧಾನವಾಗಿ ಪಲ್ಲಟಗೊಂಡಿತು. ವ್ಯಕ್ತಿ ಪ್ರಜ್ಞೆಯನ್ನು ಮೊದಲು ಹುಟ್ಟು ಹಾಕಿದ ಶಿಕ್ಷಣ ಕ್ರಮ ಭವ್ಯತೆ, ರಮ್ಯತೆಗಳ ಭಾವಕ್ಕಿಂತಲೂ ವಸ್ತುನಿಷ್ಠತೆಯ ಕಡೆಗೆ ತುಡಿಯಿತು. ಎಲ್ಲವನ್ನು ಪ್ರಾಯೋಗಿಕವಾಗಿ ಮತ್ತು ಪ್ರಾಯೋಜನಿಕ ದೃಷ್ಠಿಯಿಂದ ನೋಡುವ ದೃಷ್ಟಿಕೋನ ಹುಟ್ಟಿಕೊಂಡಿತು. ಹೆಣ್ಣನ್ನು ಕೇಂದ್ರೀಕರಿಸಿ ಕುಟುಂಬದ ಆಸ್ತಿಯಾಗಿ ಸರ್ವರೂ ದುಡಿಯುತ್ತಿದ್ದ ಭೂಮಿಯಲ್ಲಿ ಸಮಷ್ಠಿಯ ಚಿಂತನೆ ಇತ್ತೇ ಹೊರತು ವ್ಯಷ್ಠಿಯ ಚಿಂತನೆ ಇರಲಿಲ್ಲ. ಹೆಣ್ಣು ವಂಶವನ್ನು ಬೆಳೆಸುವವಳು ಮಾತ್ರವಲ್ಲ ಸಂಪತ್ತಿನ ಒಡತಿಯಾಗಿದ್ದೂ, ದುಡಿಮೆಯೇ ಮುಖ್ಯವಾಗಿತ್ತೇ ಹೊರತು ಬೇಕಾದ ವಿಚಾರಗಳಿಗೂ ಮಾನ್ಯತೆ ಇರಲಿಲ್ಲ.

ಮಿಶನರಿಗಳ ಶಿಕ್ಷಣ, ಸಮಾಜಸೇವೆ ಸಂಸ್ಕೃತಿ ಚಿಂತನೆಯ ಭಾಗವಾಗಿ ನಡೆಸಿದ ಮತಾಂತರಗಳು ಸ್ಥಳೀಯರಿಗೆ ಅದರಲ್ಲೂ ಅಸ್ಪೃಶ್ಯರಿಗೆ ತಮ್ಮ ಸಮುದಾಯಗಳಿಂದ ಹೊರ ನಡೆಯುವ ರಹದಾರಿಯಾಗಿತ್ತು. ಭೂ ಹಿಡುವಳಿದಾರರು, ಗೇಣಿದಾರರು, ಕೃಷಿ ಕೂಲಿ ಕಾರ್ಮಿಕರು ಮತ್ತು ಜೀತದಲ್ಲೇ ಜೀವನ ಕಳೆದವರಿಗೆ ಬದಲಾವಣೆಯ ಅವಕಾಶವೊಂದು ಲಭಿಸಿದಾಗ ಕೆಲವು ಸಮುದಾಯಗಳು ಈ ಅವಕಾಶವನ್ನು ಸದುಪಯೋಗಪಡಿಸಿಕೊಂಡರು. ಮತಾಂತರಗೊಂಡವರಿಗೆ ಲಭಿಸಿದ ಶಿಕ್ಷಣ, ಭೂಮಿಯ ಒಡೆತನ, ಆರ್ಥಿಕ ಸ್ವಾವಲಂಬನೆ, ಸಾಮಾಜಿಕ ಬಹಿಷ್ಕಾರಗಳಿಂದ ತಮ್ಮನ್ನು ತಾವು ರಕ್ಷಿಸಿಕೊಳ್ಳಲು ಅವಶ್ಯಕವಾಗಿತ್ತು. ಪರಿಣಾಮ ಕೃಷಿ ಕಾರ್ಯ ಚಟುವಟಿಕೆಗಳಲ್ಲಿದ್ದ ಸಮುದಾಯಗಳಿಗೆ ಹೊಸ ರೀತಿಯ ದುಡಿಮೆಯ ಪರಿಭಾಷೆಯೊಂದನ್ನು ನಿರೂಪಿಸಲಾಗಿತ್ತು. ಕೃಷಿಯನ್ನು ಬಿಟ್ಟು ಬದುಕಿಲ್ಲ ಎಂದವರಿಗೆ ಕೃಷಿಯೇತರ ಕೆಲಸಗಳೂ ಪರಿಚಿತವಾದವು. ಮತಾಂತರಗೊಂಡವರಿಗಾಗಿ ಭೂಮಿಯ ಒಡೆತನ ನೀಡುವಾಗ ಕಾಡನ್ನು ಕಡಿದು ಗದ್ದೆ ಮಾಡಿದ್ದು, ನದಿ ಬದಿಯ ಭೂಮಿಗಳನ್ನು ಗದ್ದೆಗಳಾಗಿ ಪರಿವರ್ತಿಸಲಾಯಿತು. ಒಂದೆಡೆ ಕೃಷಿ ವಿಸ್ತರಣೆಯಾದರೆ ಇನ್ನೊಂದೆಡೆ ಕೃಷಿಗಾಗಿ ಭೂಮಿಯನ್ನು ಹದಗೊಳಿಸುವ ಕೆಲಸದಿಂದ ತೊಡಗಿ ಎಲ್ಲ ರೀತಿಯ ಉದ್ಯೋಗಗಳು ಲಭ್ಯವಾದವು. ಕೃಷಿ ಮತ್ತು ಕೃಷಿಗೆ ಪೂರಕವಾಗಿ ಕೆಲಸಗಳು ಸೃಷ್ಟಿಯಾಗುವುದರೊಂದಿಗೆ ಸಣ್ಣ ಪುಟ್ಟ ಉದ್ದಿಮೆಗಳೂ ಸ್ಥಾಪಿಸಲ್ಪಟ್ಟವು. ಬನಿಯನ್ ಕಂಪೆನಿ, ಹೊಲಿಗೆ ತರಬೇತಿ, ಪತ್ರಿಕಾಲಯಗಳು, ಹಂಚಿನ

ಕಾರ್ಖಾನೆಗಳು, ತಂತ್ರಜ್ಞಾನದ ಸಣ್ಣ ಪುಟ್ಟ ಯಂತ್ರಗಳ ಅಚ್ಚು ಮೊಳೆ ಜೋಡಣೆಯ ಕೆಲಸಗಳು ಸೃಷ್ಟಿಯಾದವು. ದುಡಿಮೆ ಮತ್ತು ಉದ್ಯೋಗದ ಪರಿಭಾಷೆ ಬದಲಾದಂತೆ ಆದಾಯದ ಪರಿಕಲ್ಪನೆ ಬದಲಾಯಿತು. ಧಾನ್ಯದ ಸ್ವರೂಪದಿಂದ ದುಡ್ಡಿನ ಸ್ವರೂಪಕ್ಕೆ ಬದಲಾದಾಗ ಸಂಗ್ರಹಣೆಯ ಪ್ರವೃತ್ತಿಯು ಹೆಚ್ಚಾಯಿತು.

ಆರ್ಥಿಕತೆಯ ಸಿದ್ಧಾಂತ ಪರಿಭಾಷೆಗಳು ಕಾಲಕಳೆದಂತೆ ಬದಲಾಗುತ್ತ ಸಾಗಿತು. ಕರಾವಳಿಯಲ್ಲಿ ಆರಂಭಗೊಂಡ ಬ್ಯಾಂಕ್ ಉದ್ದಿಮೆ ಸಂಪತ್ತನ್ನು ದುಡ್ಡಿನ ರೂಪದಲ್ಲೂ ಶೇಖರಿಸುವ ಇರಾದೆಗಳು ಹೆಚ್ಚಿದವು. ಭೂಮಿಯ ವಿಸ್ತಾರದ ಒಡೆತನದಿಂದ ಶ್ರೀಮಂತಿಕೆಯನ್ನು ಗುರುತಿಸುತ್ತಿದ್ದ ಕಾಲಕ್ಕಿಂತ ಭಿನ್ನವಾಗಿ ಬ್ಯಾಂಕ್ ಬ್ಯಾಲೆನ್ಸ್ ಮುಖ್ಯವಾಯಿತು. ಹಣಕಾಸಿನ ವ್ಯವಹಾರದ ಲೆಕ್ಕಾಚಾರಗಳು ಪ್ರಾಮುಖ್ಯ ಪಡೆದವು. ಅಲ್ಪ ಸ್ವಲ್ಪ ವಿದ್ಯೆ ಕಲಿತಿದ್ದ ಮೊದಲ ತಲೆಮಾರು ಹಳ್ಳಿಯ ಸಂಕಷ್ಟಕ್ಕೆ ಕಂಗೆಟ್ಟು ಮುಂಬೈ ಓಡಿದವರೆಲ್ಲ ಹೊಟ್ಟೆಪಾಡಿಗಾಗಿ ಹೋಟೇಲುಗಳಲ್ಲಿ ದುಡಿಯಲಾರಂಭಿಸಿದರು. ಹಗಲು ಹೋಟೇಲಿನ ದುಡಿಮೆ, ರಾತ್ರಿ ಶಾಲೆಯ ಓದಿನಿಂದ ವೈಯಕ್ತಿಕವಾಗಿ ತಾವು ವಿದ್ಯಾವಂತರಾಗಿ ಬ್ಯಾಂಕ್, ಸರ್ಕಾರಿ, ಖಾಸಗಿ ಕಂಪೆನಿಗಳಲ್ಲಿ ಕೆಲಸ ಮಾಡಿದ್ದಲ್ಲದೆ ನಿಗದಿತವಾದ ಮನಿಯಾರ್ಡರನ್ನು ಹಳ್ಳಿಯ ಮನೆ ಮಂದಿಗೆ ರವಾನಿಸುತ್ತಿದ್ದರು. ಕರಾವಳಿಯ ಆರ್ಥಿಕತೆ ಎಂದರೆ 'ಮನಿಯಾರ್ಡರ್ ಆರ್ಥಿಕತೆ' ಎಂಬ ಪರಿಭಾಷೆಯೇ ಬೆಳೆಯಿತು. ಇಪ್ಪತ್ತನೇ ಶತಮಾನದ ಆರಂಭ ಮತ್ತು ೧೯೩೦-೪೦ ರ ದಶಕದ ಈ ಮೊದಲ ತಲೆಮಾರು ರಾತ್ರಿ ಶಾಲೆಯ ಓದು , ಹಗಲಿಗ ದುಡಿಮೆಯಿಂದ ಬಾಳಿದರೂ ಊರಿನ ನಂಟನ್ನು ಬಿಡಲಿಲ್ಲ. ವರ್ಷ ಎರಡು ವರ್ಷಕ್ಕೊಮ್ಮೆ ಹಳ್ಳಿಗೆ ಮರಳಿ ತಮ್ಮ ಕುಟುಂಬದ ಮನೆ ಊರಿನ ಅಭಿವೃದ್ಧಿಯ ಪಾಲುದಾರಿಕೆಯಲ್ಲಿ ನಂಟನ್ನು ಇಟ್ಟುಕೊಂಡರು. ಎರಡನೇ ತಲೆಮಾರಿಗಾಗುವಾಗ ಈ ನಂಟು ಕಡಿಮೆಯಾಗುತ್ತ ಬಂತು.

ವಸಾಹತು ಶಾಹಿ ಆಡಳಿತದಿಂದ ಉದಯವಾದ ಮಧ್ಯಮ ವರ್ಗ ಹೊರ ಸಂಪರ್ಕಗಳ ಮೂಲಕ ಆರ್ಥಿಕ ಅಭಿವೃದ್ಧಿಯನ್ನು ಹೊಂದಿ ತಮ್ಮ ಕುಟುಂಬ ಮನೆ ಮಾರುಗಳನ್ನು ಸುಸ್ಥಿತಿಯಲ್ಲಿರಿಸಿತು. ಕೇವಲ ಕೃಷಿಯನ್ನೇ ನೆಚ್ಚಿಕೊಂಡಿದ್ದ ಕುಟುಂಬಗಳ ಹಣಕಾಸಿನ ವಿಷಯದಲ್ಲಿ ಬಲಿಷ್ಠವಾಗಲಿಲ್ಲ. ಬೆನ್ನು ಬಾಗಿಸಿ ದುಡಿಯುವ ಅನಿವಾರ್ಯತೆ ಮತ್ತು ಬಡತನ ನಿತ್ಯದ ಮಾತಾಗಿತ್ತು. ಸಹಜವಾಗಿಯೇ ಕುಟುಂಬದ ಆರ್ಥಿಕ ಪರಿಸ್ಥಿತಿಯ ಉತ್ತಮಿಕೆಗೆ ಹೊರ ದುಡಿಮೆ ಅನಿವಾರ್ಯ ಎಂಬ ಮನೋಧರ್ಮ ಬೆಳೆದು ಬಂತು.

ಒಂದು ಕಾಲಕ್ಕೆ ದುಡಿಯುವುದು ಏನಿದ್ದರೂ ತಮ್ಮ ಜಮೀನು ಮತ್ತು ಹೊಲಗಳಲ್ಲಿ ಕೈಯ್ಯಾಳಾಗಿ ದುಡಿಯುವುದು ಅವಮಾನ ಎಂಬ ನಂಬಿಕೆ ಇತ್ತು. ಉಳ್ಳವರ ಮನೆಯ ಮಕ್ಕಳು ಯಾವಾಗ ಹೊರಗಿನ ಕೆಲಸ ಹಾಗೂ ವ್ಯವಹಾರಗಳನ್ನು ಮಾಡುತ್ತಾ ಸ್ಥಿತಿವಂತರಾದರೋ ಬಹುಸಂಖ್ಯಾತರಾದ ಮಧ್ಯಮ ವರ್ಗಕ್ಕೂ ಇದೇ ಆದರ್ಶವೆನಿಸಿತು. ಮಣ್ಣಲ್ಲಿ ಮಣ್ಣಾಗಿ ದುಡಿಯುವ ಕೆಸರು ಹಿಸುಕುವ ಕೆಲಸ ಮಾದರಿಯೆನಿಸದೆ 'ಬಿಳಿಕಾಲರ್' ಹುದ್ದೆಗಳನ್ನು ಅರಸುತ್ತಾ ನಗರಕ್ಕೆ ವಲಸೆ ಬರಲಾರಂಭಿಸಿದರು. ಒಳ್ಳೆಯ ವಿದ್ಯಾರ್ಹತೆಗಳಿದ್ದವರಿಗೆ ಉತ್ತಮ ಕೆಲಸಗಳು ಲಭಿಸಿದರೆ ಶಿಕ್ಷಣವನ್ನು ಅರ್ಧದಲ್ಲಿ ತ್ಯಜಿಸಿದ, ಅಂತಹ ವಿದ್ಯಾರ್ಹತೆ ಇಲ್ಲದವರಿಗೆ ಸಣ್ಣ ಪುಟ್ಟ ಉದ್ಯೋಗಗಳು ಲಭಿಸಿದವು. ಹಾಗಿದ್ದರೂ ಒಮ್ಮೆ ಪಟ್ಟಣ ಸೇರಿದವರು ಮರಳಿ ಹಳ್ಳಿ ಕಡೆ ಮುಖ

ಮಾಡಲಿಲ್ಲ. ನಗರದ ಸೌಲಭ್ಯ ಸೌಕರ್ಯಗಳನ್ನು ಅನುಭವಿಸಿದವರಿಗೆ ಹಳ್ಳಿಯಲ್ಲಿ ಆಹಾರ ಸ್ವಾವಲಂಬನೆಗಾಗಿ ಎಲ್ಲ ಇದ್ದರೂ ಯಾವ ಸವಲತ್ತು ಇಲ್ಲದ ಕೊಂಪೆ ಎಂದೆನಿಸಿತು. ಪರಿಣಾಮ ಕೃಷಿ ಕುಟುಂಬಗಳಲ್ಲಿ ಕೃಷಿ ಕೆಲಸಕ್ಕೆ ಬೇಕಾದ ಮಾನವ ಸಂಪನ್ಮೂಲವೂ ಅಲಭ್ಯವಾಯಿತು. ವಿಸ್ತಾರವಾದ ಗದ್ದೆಗಳಿದ್ದರೂ, ಗದ್ದೆಯ ಬುಡಕ್ಕೆ ನೇಗಿಲು ಹೊತ್ತೊಯ್ಯುವ ಉಳುಮೆ ಮಾಡುವ ಹುರುಪಿನಿಂದ ಕೃಷಿ ಚಟುವಟಿಕೆಗಳನ್ನು ಮಾಡುವ ಯುವಕರ ದಂಡು ಇಲ್ಲದೆ ಕೃಷಿ ಕಾರ್ಯಗಳಿಗೆ ಕೂಲಿಯಾಳುಗಳನ್ನೇ ನಂಬಿ ಪರಾವಲಂಬಿಗಳಾದಾಗ ಯಾಕಾದರೋ ಗದ್ದೆ ಸಾಗುವಳಿ ಎಂಬ ಪ್ರಶ್ನೆ ಹುಟ್ಟಿದ್ದು ವಾಸ್ತವ.

ಭೂಮಿಯ ಒಡೆತನ ಇಲ್ಲದ ಕೃಷಿ ಕೂಲಿ ಕಾರ್ಮಿಕರು ಮತ್ತು ಮಕ್ಕಳು ಒಂದು ಕಾಲಕ್ಕೆ ಹೊಟ್ಟೆಪಾಡಿಗಾಗಿ ಧಣಿಗಳ ಮನೆಯಂಗಳಕ್ಕೆ ಮುಖ ಮಾಡಿದವರಿಗೆ ಅಲ್ಲಿ ಕೆಲಸವಿದ್ದರೆ ಉಂಟು, ಇಲ್ಲದಿದ್ದರೆ ಇಲ್ಲ ಎಂಬ ದಾರುಣತೆ ಇತ್ತು. ಕರಾವಳಿಯಲ್ಲಿ ನಿಧಾನವಾಗಿ ತಲೆ ಎತ್ತಿ ನಿಂತ ಸಣ್ಣ ಪುಟ್ಟ ಉದ್ದಿಮೆಗಳು ಸಹಜವಾಗಿಯೇ ಕೆಳ ಮಾಧ್ಯಮ ವರ್ಗವನ್ನು ಆಕರ್ಷಿಸಿತು. ಮಿಶನರಿಗಳಿಂದ ಉಂಟಾದ ಕೈಗಾರಿಕೆಗಳ ಸ್ಥಾಪನೆಯ ಜತೆಗೆ ವ್ಯಾಪಾರದ ಸರಕಾಗಿ ಪೂರಕ ಉದ್ಯೋಗಗಳು ಹುಟ್ಟಿಕೊಂಡವು. ಬಹಳ ಮುಖ್ಯವಾಗಿ ೨೦ ನೇ ಶತಮಾನದ ಆರಂಭದಲ್ಲಿ ಶುರುವಾದ ಬೀಡಿ ಉದ್ದಿಮೆ, ಬಡವರಿಗೆ ಉಳ್ಳವರ ಮನೆಯ ದುಡಿಮೆಯನ್ನು ನಿರಾಕರಿಸುವ ಧೈರ್ಯ ನೀಡಿತು.

ಕರಾವಳಿಯಲ್ಲಿ ಆರಂಭಗೊಂಡ ಬ್ಯಾಂಕ್ ಉದ್ದಿಮೆ ಸಂಪತ್ತನ್ನು ದುಡ್ಡಿನ ರೂಪದಲ್ಲೂ ಶೇಖರಿಸುವ ಇರಾದೆಗಳು ಹೆಚ್ಚಿದವು. ಭೂಮಿಯ ವಿಸ್ತಾರದ ಒಡೆತನದಿಂದ ಶ್ರೀಮಂತಿಕೆಯನ್ನು ಗುರುತಿಸುತ್ತಿದ್ದ ಕಾಲಕ್ಕಿಂತ ಭಿನ್ನವಾಗಿ ಬ್ಯಾಂಕ್ ಬ್ಯಾಲೆನ್ಸ್ ಮುಖ್ಯವಾಯಿತು. ಹಣಕಾಸಿನ ವ್ಯವಹಾರದ ಲೆಕ್ಕಾಚಾರಗಳು ಪ್ರಾಮುಖ್ಯ ಪಡೆದವು. ಅಲ್ಪ ಸ್ವಲ್ಪ ವಿದ್ಯೆ ಕಲಿತಿದ್ದ ಮೊದಲ ತಲೆಮಾರು ಹಳ್ಳಿಯ ಸಂಕಷ್ಟಕ್ಕೆ ಕಂಗೆಟ್ಟು ಮುಂಬೈ ಓಡಿದವರೆಲ್ಲ ಹೊಟ್ಟೆಪಾಡಿಗಾಗಿ ಹೋಟೇಲುಗಳಲ್ಲಿ ದುಡಿಯಲಾರಂಭಿಸಿದರು. ಹಗಲು ಹೋಟೇಲಿನ ದುಡಿಮೆ, ರಾತ್ರಿ ಶಾಲೆಯ ಓದಿನಿಂದ ವೈಯುಕ್ತಿಕವಾಗಿ ತಾವು ವಿದ್ಯಾವಂತರಾಗಿ ಬ್ಯಾಂಕ್, ಸರ್ಕಾರಿ, ಖಾಸಗಿ ಕಂಪೆನಿಗಳಲ್ಲಿ ಕೆಲಸ ಮಾಡಿದ್ದಲ್ಲದೆ ನಿಗದಿತವಾದ ಮನಿಯಾರ್ಡರನ್ನು ಹಳ್ಳಿಯ ಮನೆ ಮಂದಿಗೆ ರವಾನಿಸುತ್ತಿದ್ದರು.

ಕರಾವಳಿಯಲ್ಲಿ ಬಹಳ ಮಂದಿ ಹೇಳುವಂತೆ ತಮ್ಮ ಮಕ್ಕಳು ಶಾಲೆಯ ಮೆಟ್ಟಿಲು ಹತ್ತಿದ್ದು, ಉಪ್ಪು ಮೆಣಸಿನ ಖರ್ಚು ನಿಭಾಯಿಸಿದ್ದು ಬೀಡಿ ಉದ್ದಿಮೆ. ಸುರುಳಿ ಸುತ್ತಿದ ಬೀಡಿ ಬದುಕನ್ನು ಕಂತು ಕಟ್ಟುತ್ತಲೇ ಪೂರೈಸಲು ಸಹಾಯಕವಾಯಿತು. ಅದರೊಂದಿಗೆ ಹಳ್ಳಿಯ ಮೂಲೆ ಮೂಲೆಗಳಲ್ಲಿ ಗೇರು ಬೀಜದ ಕಾರ್ಖಾನೆಗಳು ಸ್ಥಾಪನೆಗೊಂಡವು. ನದಿ ಬದಿಯ ಬಯಲಿನಲ್ಲಿ ಹಂಚಿನ ಕಾರ್ಖಾನೆಗಳು ಆರಂಭವಾಗಿ ಹೊಸ ರೀತಿಯ ಕೆಲಸದ ಕೌಶಲ್ಯವನ್ನು, ಶ್ರಮವನ್ನು ಜನರು ಕರಗತ ಮಾಡಿಕೊಂಡರು. ಬೀಡಿ ಉದ್ದಿಮೆ, ಗೇರು ಬೀಜದ ಕಾರ್ಖಾನೆ, ಹಂಚಿನ ಕಾರ್ಖಾನೆಗಳಲ್ಲಿ ಗಂಡು-ಹೆಣ್ಣು ಎನ್ನುವ ವ್ಯತ್ಯಾಸವಿಲ್ಲದೆ ಎಲ್ಲರೂ ದುಡಿಯುತ್ತಲೇ ಆದಾಯ, ಉಳಿತಾಯ ಎನ್ನುವ ಲೆಕ್ಕಚಾರಗಳು ಹೆಚ್ಚಾದವು. ದಿನನಿತ್ಯದ ಜೀವನ ನಿರ್ವಹಣೆಗಾಗಿ ಚಾಪೆಯಿಂದ ನೆಲಕ್ಕೆ ಹೊರಳಿ ಬದುಕುತ್ತಿದ್ದವರೆಲ್ಲ ಒಂದು ಸುಸ್ಥಿತಿಗೆ ಬರಲು

ಸಾಧ್ಯವಾಯಿತು. ಕಾಲದ ನಿರಂತರತೆಯಲ್ಲಿ ಈ ಉದ್ದಿಮೆಗಳು ಸುಸ್ಥಿರವಾಗಿ ಬೆಳೆದರೂ ಆಧುನಿಕತೆಯ ಎಲ್ಲ ಆಘಾತಗಳನ್ನು ತಾಳಿಕೊಳ್ಳಲು ಸಾಧ್ಯವಾಗದೆ ಹೋಯಿತು. ಜಾಗತೀಕರಣದ ಹೊಡೆತಕ್ಕೆ ಇವೆಲ್ಲ ನಿಧಾನಕ್ಕೆ ಕ್ಷಯಿಸಿದುದರಿಂದ ಬಡವರ ದೈನ್ಯ ಮತ್ತು ಬಡತನ ನಿರಂತರವಾಗಿ ಮುಂದುವರಿಯಿತು.

೨೦ ನೇ ಶತಮಾನದ ಬಹಳ ದೊಡ್ಡ ಸ್ಥಿತ್ಯಂತರವೆಂದರೆ, ಕೇಂದ್ರ ಸರ್ಕಾರ ಜಾರಿಗೆ ತಂದು ರಾಜ್ಯ ಸರ್ಕಾರದಲ್ಲಿ ದೇವರಾಜ ಅರಸು ಮುಖ್ಯ ಮಂತ್ರಿಯಾಗಿದ್ದಾಗ ಬಂದ ಒಕ್ಕಲು ಮಸೂದೆ ಕಾನೂನು, "ಉಳುವವನೇ ಹೊಲದೊಡೆಯ" ಎಂಬ ಘೋಷಣೆ ಸಾಮಾಜಿಕವಾಗಿ, ಆರ್ಥಿಕವಾಗಿ, ಬಹಳಷ್ಟು ಪಲ್ಲಟಗಳನ್ನು ಉಂಟು ಮಾಡಿತು. ಊರಿಗೆ ಊರೇ ಭೂಮಿಯ ಒಡೆಯರಾಗಿ ಪಾಳೇಗಾರರಂತೆ ಬಾಳಿದವರು ರಾತ್ರಿ ಹಗಲಾಗುವುದರ ಒಳಗಾಗಿ ಬೀದಿ ಪಾಲಾದರು. ತುಂಡು ಭೂಮಿಯ ಒಡೆತನವೂ ಇಲ್ಲದೆ ಗೇಣಿದಾರರಾಗಿ ಬದುಕುತ್ತಿದ್ದವರೆಲ್ಲ ಭೂ ಮಾಲೀಕರಾದರು. ಅತ್ಯಂತ ಅನಾಯಾಸವಾಗಿ ಬಂದ ಈ ಭೂಮಿಯ ಒಡೆತನವನ್ನು ನಿಭಾಯಿಸುವ ಜಾಣ್ಮೆ, ಕಲೆಗಾರಿಕೆಯನ್ನು ರೂಢಿಸುವುದು ಕ್ಲಿಷ್ಟವಾಯಿತು. ದುಡಿದು ಉಣ್ಣುತ್ತಿದ್ದ ಮಂದಿಗೆ ಬಂದ ಭೂಮಿಯ ಒಡೆತನದಿಂದ ಧಣಿಗೆ ಗೇಣಿ ಕೊಡಲು ಇಲ್ಲ, ಭೂಮಿ ಎಲ್ಲ ನಮ್ಮದೇ ಆದರೂ ತಾವೇ ಕಷ್ಟಪಟ್ಟು ದುಡಿಮೆ ಮಾಡುವುದೂ ಮುಖ್ಯವಾಗಿತ್ತು. ಮೊದಲ ತಲೆಮಾರು ಒಂದು ತುಂಡು ಭೂಮಿಯನ್ನು ಖಾಲಿಯಿರಿಸದೆ ಸಾಗುವಳಿ ಮಾಡುತ್ತ ಸಂಭ್ರಮಿಸಿದರೆ ಎರಡನೆ ತಲೆಮಾರು ಭೂಮಿಯನ್ನು ತಮ್ಮ ತಮ್ಮಲ್ಲೇ ಹಂಚಿಕೊಂಡರು. ತುಂಡು ತುಂಡಾದ ಗದ್ದೆ ಸಾಗುವಳಿಯ ಭೂಮಿಯನ್ನು ಕೃಷಿ ಮಾಡುವುದು ಸುಲಭ ಸಾಧ್ಯವಾಗಿ ಕಾಣಲಿಲ್ಲ. ಎಲ್ಲ ಕೆಲಸಗಳನ್ನು ತಾವು ಮಾಡುತ್ತ ಲೆಕ್ಕಚಾರದ ಕಡೆಗೆ ಗಮನಹರಿಸಿದಾಗ ಸಾಗುವಳಿ ಲಾಭದಾಯಕವಾಗಿರಲಿಲ್ಲ. ಆಹಾರದ ಬೆಳೆಯಿಂದ ವಾಣಿಜ್ಯ ಬೆಳೆಗೆ ಸಾಗುವುದರೊಂದಿಗೆ ಕುಲ ಕಸುಬುಗಳನ್ನು ಆಯ್ಕೆ ಮಾಡಿಕೊಂಡರು. ಹಾಗಿದ್ದು ಬೆಳೆ ಬೆಳೆಯುತ್ತ ಬಾಳುತ್ತಿದ್ದವರಿಗೆ ಕೃಷಿ ಲಾಭದಾಯಕವೆನಿಸಲಿಲ್ಲ. ಎರಡನೆಯ ತಲೆಮಾರು ಕೃಷಿಯ ಮೌಲ್ಯವನ್ನು ನಿಧಾನವಾಗಿ ಹಿಂದೆ ಸರಿಸುತ್ತ ಶ್ರಮದ ದುಡಿಮೆಗಿಂತ ಹಣದ ದುಡಿಮೆಯೇ ಪ್ರಮುಖ ಮೌಲ್ಯವಾಗಿ ಭಾಸವಾಯಿತು. ಗದ್ದೆ ಇದ್ದುದು ತೋಟವಾದುದು ಮನೆಯಲ್ಲಿ ಕೃಷಿ ಕೆಲಸ ಮಾಡುವ ಯುವಕರಿಲ್ಲ ಎಂದು ಸುಲಭದ ಮತ್ತು ಹೆಚ್ಚು ಲಾಭದಾಯಕವೆಂದೇ ಅಡಿಕೆ ತೋಟ ಬೆಳೆಯಿತು. ಅದರ ಜೊತೆ ಉಪ ಬೆಳೆಯಾಗಿ ಕೊಕ್ಕೋ, ವೀಳ್ಯದೆಲೆ, ಒಳ್ಳೆಮೆಣಸು ಬೆಳೆಗಳೂ ವಾಣಿಜ್ಯದ ಉದ್ದೇಶದಿಂದ ಬಂದವು. ಒಂದು ಹಂತದಲ್ಲಿ ತೆಂಗು ಕಂಗಿನ ನಡುವೆ ನೆಟ್ಟ ವೆನಿಲ್ಲಾ ಗಿಡಗಳು ಬಹಳಷ್ಟು ಧನಸಂಪಾದನೆಯ ದಾರಿಗಳಾಗಿಯೂ ಗೋಚರವಾಗಿ ಕೆಲವೇ ವರುಷಗಳಲ್ಲಿ ಭ್ರಮನಿರಸನವೂ ಗೊಂಡರು. ಕೃಷಿಯಲ್ಲಿ ಪರಂಪರಾಗತವಾಗಿ ಇದ್ದ ತಿಳುವಳಿಕೆ ಮತ್ತು ಜ್ಞಾನದ ಕೋಶಗಳು ನಾಶವಾಗುತ್ತ ಪುಸ್ತಕದ ತಿಳುವಳಿಕೆಯ, ಕೃಷಿ ಅಧಿಕಾರಿಗಳ ಲೆಕ್ಕಚಾರದ ಅಂಶಗಳೇ ಪ್ರಮುಖವಾದವು. ಬರಿಯ ಭತ್ತವನ್ನು ಮಾತ್ರ ಬೆಳೆದರೆ ಸಾಲದು, ಅದರೊಂದಿಗೆ ಇನ್ನಿತರ ಬೆಳೆಗಳನ್ನು ಬೆಳೆಯುವುದರಿಂದ ಆರ್ಥಿಕವಾಗಿ ಲಾಭವೂ ಇದೆ ಎಂಬ ಅಂಶವೂ ಮುಖ್ಯವಾಯಿತು. ಹಾಗಿದ್ದು ಅವರೆಲ್ಲರೂ ಕೃಷಿ ಬದುಕನ್ನೇ ಪೂರ್ಣ ಪ್ರಮಾಣದಲ್ಲಿ ಮುಂದುವರಿಸಿಕೊಂಡು ಹೋಗಲಿಲ್ಲ.

ಮೂರನೆಯ ತಲೆಮಾರಿನ ಕೃಷಿ ಕುಟುಂಬದ ಯುವಕರು ಜಾಗತೀಕರಣಕ್ಕೆ ಮುಖಾಮುಖಿಯಾದವರು. ಅವರಿಗೆ ಗದ್ದೆ-ತೋಟಗಳಿಂದ ಬರುವ ಆದಾಯ ಬಹಳ ಮಿತವಾದದು ಮತ್ತು ದೀರ್ಘಕಾಲದ ಶ್ರಮ ಮತ್ತು ಕಾಯುವಿಕೆಯೂ ಸಹನೀಯವೆನಿಸಲಿಲ್ಲ. ತಮ್ಮ ಹಿಂದಿನ ತಲೆಮಾರು ಗುಡ್ಡ ಅಗೆದು ಮಾಡಿದ ಗದ್ದೆಗಳನ್ನೆಲ್ಲ ಎಲ್ಲಿಯದೋ ಗುಡ್ಡದ ಮಣ್ಣು ತುಂಬಿಸಿ ಸೈಟುಗಳನ್ನಾಗಿ ಮಾಡಿದರೆ ಹೆಚ್ಚು ಬೆಲೆ ಬರುತ್ತದೆ ಆಲೋಚನೆ ಹೊಳೆಯಿತು. 'ರಿಯಲ್ ಎಸ್ಟೇಟ್ ಬಿಸಿನೆಸ್' ಎನ್ನುವುದು ಯಾವುದೇ ಬಂಡವಾಳವನ್ನು ತೊಡಗಿಸದೆ ಕೇವಲ ಮಾತಿನ ಬಂಡವಾಳದಿಂದ ನಡೆಸುವ ವಾಣಿಜ್ಯೋದ್ಯಮವಾಗಿ ಬೆಳೆಯಿತು. ಪಾಳೇಗಾರರು, ಜಮೀನ್ದಾರರು, ಗುತ್ತು ಮನೆಗಳ ಕುಟುಂಬಗಳಲ್ಲಿ ಒಕ್ಕಲು ಮಸೂದೆ ಕಾನೂನಿಂದ ಅಳಿದುಳಿದ ಭೂಮಿಯೂ ಉಳುವವರಿಲ್ಲದೆ ಪಾಳು ಬಿದ್ದಾಗ ಮಣ್ಣು ತುಂಬಿಸುವ ಕಾರ್ಯವೇ ಲಾಭದಾಯಕವೆನಿಸಿತು. ಮಾಲೀಕರ ಮಕ್ಕಳು ರಿಯಲ್ ಎಸ್ಟೇಟ್ ಉದ್ಯಮಿಗಳಾಗಿ ಹಣ ಬಾಚಿಕೊಳ್ಳುವುದನ್ನು ಕೆಳ ಮಧ್ಯಮ ಮತ್ತು ಮಧ್ಯಮ ವರ್ಗದವರೂ ಇದರ ಭಾಗಗಳಾಗಿ ಪರಿವರ್ತನೆ ಹೊಂದಿದರು. ಗದ್ದೆ ಸಾಗುವಳಿ ಮಾಡುವಾಗ ಎಷ್ಟು ಬೀಜ ಬಿತ್ತನೆಯಾಗುವ ಭೂಮಿ ಎಂದು ಇದ್ದ ಲೆಕ್ಕಾಚಾರ ಸೆನ್ಸ್ ಕೊಳಿಕೆ, ಸ್ಕ್ವಾರ್ ಫೀಟ್‌ಗಳಿಗೆ ಇಳಿಯಿತು. ಕೃಷಿಕರು ಭೂಮಿಯೊಂದಿಗೆ ಪರೀಕ್ಷಿಸುವಾಗ ಅದರ ನೀರು ಹರಿಯುವ ದಿಕ್ಕು, ಬೆಳೆಯುವ ಬೆಳೆಯ ಕ್ರಮ ಎಲ್ಲವನ್ನು ಸೂಕ್ಷ್ಮವಾಗಿ ಗಮನಿಸಿ ಫಲವಂತಿಕೆಯನ್ನು ನಿರ್ಧರಿಸುತ್ತಿದ್ದರು. ವಯಸ್ಸಾದ ಹಿರಿಯರ ಭೂಮಿ ಮತ್ತು ಕೃಷಿಯ ಬಗೆಗಿನ ಜ್ಞಾನವೆಲ್ಲವೂ ಮೂಲೆ ಸೇರಿ ಕೇವಲ ಕಾಗದ ಪತ್ರಗಳು ಪ್ರಾಮುಖ್ಯ ಪಡೆದವು. ಈ ಕಾಗದ ಪತ್ರಗಳ ತಿಳುವಳಿಕೆ ಇಲ್ಲದ ಹಿರಿಯರನ್ನು ಮೂಲೆಗೆ ಕೂರಿಸಲಾಯಿತು. ಯುವಕರು, ನಾಲ್ಕಕ್ಷರ ಕಲಿತವರು ಸಾಮಾಜಿಕವಾಗಿ ಗುರುತಿಸಿಕೊಂಡವರು, ಗ್ರಾಮ ಪಂಚಾಯತಿ ತಾಲೂಕು ಮತ್ತು ಜಿಲ್ಲೆ ಇಲ್ಲೆಲ್ಲಾ ರಾಜಕೀಯವಾಗಿ ಪ್ರಭಾವಯುತವಾಗಿರುವುದು ಭೂಮಿಯ ದಾಖಲು ಪತ್ರಗಳನ್ನು ಪಡೆಯಲು ಅವಶ್ಯವಾಗಿತ್ತು. ಅಧಿಕಾರ, ರಾಜಕೀಯದ ಪ್ರಭಾವ, ಸಾಮಾಜಿಕ ಸ್ಥಾನಮಾನಗಳಿಂದ ಯುವಕರು ಭೂಮಿಯ ಬಗೆಗಿನ ಧೃಢೀಕರಣ ಪತ್ರಗಳನ್ನು ಸಿದ್ಧಗೊಳಿಸುತ್ತಲೇ ಕುಟುಂಬದಲ್ಲಿ ಪ್ರಮುಖರಾದರು. ಅಧಿಕಾರ, ಪ್ರಭಾವ, ಸಾಮಾಜಿಕ ಮಾನ್ಯತೆಗಳು ಹಿರಿಯರಿಂದ ಕಿರಿಯರಿಗೆ ಪಲ್ಲಟಗೊಂಡಿತು. ಈ ರೀತಿಯ ಮಾನ್ಯತೆಗಾಗಿ ಸಾರ್ವಜನಿಕ ಸಭೆ, ಸಮಾರಂಭ ಕಾರ್ಯಕ್ರಮಗಳಲ್ಲಿ ಭಾಗವಹಿಸಿ ಗುರುತಿಸಿಕೊಳ್ಳುವುದೂ ಮುಖ್ಯವಾಗಿತ್ತು. ಎಷ್ಟೋ ಭೂಮಿಯ ದಾಖಲು ಪತ್ರಗಳು ಸರಿಯಾಗಿರದೆ ಒಡೆತನ ಮಾತ್ರ ಇದ್ದಾಗ ಅಂತಹ ಭೂಮಿಯನ್ನು ವಶಪಡಿಸಿಕೊಳ್ಳಲು ಸಣ್ಣ ಪುಟ್ಟ ಪುಂಡಾಟಿಕೆಯ ಗುಂಪುಗಾರಿಕೆಗಳು ಮುಖ್ಯವಾದವು. ಒಂದೆಡೆ ಅಧಿಕಾರ, ಹಣದ ಬಲ, ಜನದ ಬಲ, ಪುಂಡಾಟಿಕೆಯ ಬಲಗಳೆಲ್ಲ ಸೇರಿಕೊಂಡು "ಭೂ ಮಾಫಿಯಾ' ವಾಗಿ ಬೆಳೆಯಲು ಹೆಚ್ಚುಕಾಲ ಬೇಕಾಗಲಿಲ್ಲ. ಇಡೀ ಕುಟುಂಬ ಮತ್ತು ಸಾಮಾಜಿಕ ವ್ಯವಸ್ಥೆಯಲ್ಲಿ ಆದ ಈ ಸ್ಥಿತ್ಯಂರಗಳು ಸಾರ್ವಜನಿಕವಾಗಿ ಗುರುತಿಸಿಕೊಳ್ಳಲು ಸಂಘಟನೆಗಳನ್ನು ಸ್ಥಾಪಿಸಿದರು. ಶ್ರಮ, ದುಡಿಮೆ ಬೆವರುಗಳ ಲೋಕದಲ್ಲಿ ನಿರಾಳವಾಗಿ ಯೋಚಿಸಲು ಪುರುಸೊತ್ತಿಲ್ಲದವರು ಭಿನ್ನವಾಗಿ ಯಾರ ಭಯ ಅಂಕೆಗಳೂ ಇಲ್ಲದೆ ಕೈಯ್ಯಲ್ಲಿ ಓಡಾಡುವ ದುಡ್ಡು, ಅಧಿಕಾರ ದರ್ಪಗಳನ್ನು ಹುಟ್ಟುಹಾಕಿದ್ದು ಸುಳ್ಳಲ್ಲ. ಆರಂಭದಲ್ಲಿ ಪಾಳುಬಿದ್ದ ಭೂಮಿಗಳನ್ನು ಸೈಟುಗಳಾಗಿ ಪರಿವರ್ತಿಸಿ ಒಂದಕ್ಕೆ ಮೂರು-ನಾಲ್ಕು ಪಟ್ಟು ಬೆಲೆಯ ಮೂಲಕ ಒಂದಷ್ಟು ವ್ಯವಹಾರ

ನಡೆಸಿದರೂ ಅದು ದಂಧೆಯಾಗಿತ್ತು. ಕಾಲಕ್ರಮೇಣ ಭೂ ಮಾಫಿಯಾದ ಕದಂಬ ಬಾಹುಗಳು ಅಸಹಾಯಕರ, ನಿರ್ಗತಿಕರ, ಬಡವರ ಜಮೀನುಗಳನ್ನು ಹೆದರಿಸಿ ಬೆದರಿಸಿ ಕಿತ್ತುಕೊಳ್ಳುವಂತಹ ಹಂತಕ್ಕೂ ಬಂದು ತಲುಪಿತು. ಭೂಮಿಯನ್ನು ಆದರದ, ಗೌರವದ. ಪೂಜ್ಯ ಭಾವದಿಂದ ನೋಡುತ್ತಿದ್ದ ಕೃಷಿಕರೇ ಮಣ್ಣು ಮಾರಿಯೇ ದುಡ್ಡು ಮಾಡಿದರು. ಗುಡ್ಡದ ಮಣ್ಣು, ಬೈಲಿನ ಮಣ್ಣು, ನದಿಯ ಮರಳು, ಹೀಗೆ ಎಲ್ಲವೂ ದುಡ್ಡಿನ ಮೂಲಗಳೇ ಆದವು.

ಕೃಷಿ ಬದುಕಿನ ಭಾಗವಾಗಿ ಜೀವನದ ಮೌಲ್ಯವಾಗಿದ್ದ ಕಾಲಘಟ್ಟಕ್ಕೆ ಶ್ರಮವೇ ಬದುಕಿನ ಧರ್ಮವಾಗಿತ್ತು. ಬದಲಾದ ಕಾಲಘಟ್ಟಕ್ಕೆ ಧರ್ಮದ ಪರಿಭಾಷೆಗಳು ಬದಲಾಗಿ ಸಂಘರ್ಷ ನಿತ್ಯ ನಿರಂತರ ಸತ್ಯವಾಗಿತ್ತು. ಯುವ ಪೀಳಿಗೆಗೆ ಉಳಿಯುವ ವಿರಾಮದ ವೇಳೆಯನ್ನು ಕಳೆಯುವುದು ಹೇಗೆ ಎಂಬ ಪ್ರಶ್ನೆಯೂ ಎದುರಾಯಿತು. ಅಲ್ಲಲ್ಲಿ ಬೇರೆ ಬೇರೆ ಸಣ್ಣ ಪುಟ್ಟ ಗುಂಪುಗಳಲ್ಲಿ ಗುರುತಿಸಿಕೊಳ್ಳುವ ಮೂಲಕ ಉನ್ನತ ಸ್ಥಾನಮಾನಗಳನ್ನು ಪಡೆಯಲು ತಮ್ಮ ಅಸ್ಮಿತೆಯನ್ನು ಉಳಿಸಿಕೊಳ್ಳುವುದರೊಂದಿಗೆ ಬಲಿಷ್ಠರಾದರು. ತಮ್ಮ ಸಾಮಾಜಿಕ ಗುರುತಿಸುವಿಕೆಗೆ ಸಂಘಟನೆಗಳನ್ನು ಹುಟ್ಟು ಹಾಕುವುದು ಮತ್ತು ಕಾರ್ಯಕ್ರಮಗಳನ್ನು ಉತ್ಸವಗಳನ್ನು ಹಮ್ಮಿಕೊಳ್ಳುವುದು ಅವಶ್ಯವಾಗಿತ್ತು. ಸಾರ್ವಜನಿಕ ಬದುಕಿನಲ್ಲಿ ಸಿಗುವ ಸ್ಥಾನಮಾನಗಳಿಂದ ವ್ಯವಹಾರಿಕ ಜಗತ್ತಿನ ಎಲ್ಲ ಕೆಲಸ ಕಾರ್ಯಗಳನ್ನು ನೆರವೇರಿಸಿಕೊಳ್ಳಲು ಸಾಧ್ಯವಾಯಿತು. ಕಿರಿಯರ ಮುನ್ನಡೆಯಲ್ಲಿ ಹಿರಿಯರ ತಿಳುವಳಿಕೆ, ಜ್ಞಾನ, ಅನುಭವ ಪ್ರಕೃತಿಯೊಂದಿಗಿನ ಒಡನಾಟ ಇವ್ಯಾವುದೂ ಪ್ರಾಮುಖ್ಯ ಪಡೆಯದೆ ನಿಷ್ಪ್ರಯೋಜಕವೆನಿಸಿತು.

ಇನ್ನೊಂದೆಡೆ ಮೇಲ್ವರ್ಗದ, ಮೇಲ್ಜಾತಿಯ ಭೂಮಾಲೀಕರು ಮತ್ತು ಅವರ ಮಕ್ಕಳು ಭೂಮಿ ಕಳಕೊಂಡವರು ಮತ್ತು ಭೂಮಿ ಇದ್ದವರು ಪರ್ಯಾಯ ದಾರಿಗಳನ್ನು ಹುಡುಕಾಡಿದರು. ಹೋಟೇಲು ಉದ್ದಿಮೆ, ಸಣ್ಣ ಪುಟ್ಟ ವ್ಯವಹಾರಗಳಲ್ಲಿ ತೊಡಗಿಸಿಕೊಂಡು ಬದುಕಿನ ದಾರಿ ಕಂಡುಕೊಂಡರು ಅನ್ನವನ್ನು ದಾನ ಮಾಡಬೇಕೆಂದವರೇ ಅನ್ನವನ್ನು ಮಾರಾಟಕ್ಕಿಟ್ಟಾಗ ಉಡುಪಿ ಬ್ರಾಹ್ಮಣರು ಹೋಟೇಲು ಎಂಬ ಶೀರೋನಾಮೆ ಹೆಚ್ಚು ಜನಪ್ರಿಯವಾಯಿತು. ಕರಾವಳಿಯಿಂದ ಹೊರನಡೆದವರು, ಬ್ರಾಹ್ಮಣರಲ್ಲದಿದ್ದವರೂ ಬ್ರಾಹ್ಮಣರಾಗಿ ವ್ಯಾಪಾರ ವಹಿವಾಟುಗಳನ್ನು ಮುಂದುವರಿಸಿದರು. ತಮ್ಮ ವೃತ್ತಿಯನ್ನು ಪಲ್ಲಟಗೊಳಿಸಿದರು. ವೈಯಕ್ತಿಕವಾದ ಬದುಕು ಕುಟುಂಬದ ಬದುಕು ಮತ್ತು ಸಾಮಾಜಿಕ ಬದುಕಿನಲ್ಲೂ ಪಲ್ಲಟಗಳಾಗಲು ಸಾಧ್ಯವಾಯಿತು. ಪಾರಂಪರಿಕ ಕೃಷಿಕ ಸಮುದಾಯಗಳು ಒಂದೆಡೆ ತಮ್ಮ ಕುಲಕಸುಬುಗಳನ್ನು ಮೀರುತ್ತ ಬದಲಾದ ಸಾಮಾಜಿಕ ಪರಿಸ್ಥಿತಿಗೆ ಪ್ರತಿಸ್ಪಂದಿಸುತ್ತ ಸಕರಾತ್ಮಕವಾಗಿ ಮತ್ತು ನಕರಾತ್ಮಕವಾಗಿ ಪ್ರತಿಕ್ರಿಯಿಸುತ್ತ ಬೆಳೆದರು. ಈ ಸಮುದಾಯಗಳಿಗೆ ಕೃಷಿ ಬದುಕು ಅರಗಿಸಿಕೊಂಡದ್ದು ಆದಾಯಕ್ಕಾಗಿ ಕೃಷಿಯಲ್ಲ. ಹೊಟ್ಟೆಪಾಡಿಗಾಗಿ ಪ್ರತಿಷ್ಠೆಗಾಗಿ, ಅಹಮಿಕೆಗಾಗಿ, ಕೃಷಿಕನೆಂಬ ಘನತೆಗಾಗಿ ಕೃಷಿಯನ್ನು ಮುಂದುವರಿಸಿಕೊಂಡು ಬಂದರು. ಕರಾವಳಿಯಲ್ಲಿ ಕೃಷಿ ಸಂಸ್ಕೃತಿಯ ಭಾಗವಾಗಿರುವ 'ಕಂಬಳ' ಇದನ್ನೇ ನಿರ್ದೇಶಿಸುತ್ತದೆ. ಮಾಗಣೆ, ಗುತ್ತು, ಊರಿನ ಅರಸರರ ಕಂಬಳಗಳು ಇಂದಿಗೂ ನಡೆಯುತ್ತಿರುವುದು ಕೃಷಿಯ ಭಾಗವಾಗಿ ಎನ್ನುವುದಕ್ಕಿಂತ ಕೃಷಿಕನೆಂಬ ಅಹಮಿಕೆಗಾಗಿ. ಕೃಷಿ ಘನತೆಯ ಗೌರವದ ಸಂಕೇತವಾಗಿತ್ತು. ಆ ಕೃಷಿ ಜಗತ್ತು ಇಂದು ತನ್ನ

ಮೂಲದ ಪ್ರಭಾವವನ್ನು ಕಳಕೊಂಡರೂ ಆಚರಣೆಯಲ್ಲಿ ಇಂದಿಗೂ ಕಂಬಳ ಕೋರ್ಟು ಆದೇಶಗಳ ತೂಗುಕತ್ತಿಗಳನ್ನು ಮೀರಿಯೂ ಕರಾವಳಿಯ ಅಸ್ಮಿತೆಯಾಗಿ ಚಾಲ್ತಿಯಲ್ಲಿದೆ.

ಇನ್ನೊಂದು ಹಂತದಲ್ಲಿ ಕರಾವಳಿಯಲ್ಲಿ ಕಾಲಿಟ್ಟ ಕೈಗಾರಿಕೆಗಳು ಸಾವಿರಾರು ಎಕರೆ ಭೂಮಿಯನ್ನು ಒತ್ತುವರಿ ಮಾಡಿಕೊಂಡವು. ಭೂಮಾಲೀಕ ಮತ್ತು ಒಕ್ಕಲು, ಜೀತದಾಳುಗಳು ಎಲ್ಲರೂ ಭೂರಹಿತರೇ ಆಗಿ ಸರಕಾರ ಕೊಟ್ಟ ತುಂಡು ಜಮೀನಲ್ಲಿ ತಮ್ಮ ಮನೆ ಮಾರು ನಿರ್ಮಿಸಿಕೊಳ್ಳಬೇಕಿತ್ತು. ಒಂದೆಡೆ ಭೂಮಿಯ ಆದಾಯವೂ ಇಲ್ಲವಾಗಿ ಸಣ್ಣ ಪುಟ್ಟ ಕೆಲಸಗಳನ್ನು ಮಾಡುತ್ತಾ ಇನ್ನೊಂದೆಡೆ ವಿದ್ಯಾವಂತರಾದವರಿಗೆ ಕುಟುಂಬಕ್ಕೊಂದು ಉದ್ಯೋಗ ಎಂಬಂತೆ ಲಭಿಸಿದ ಉದ್ಯೋಗವೂ ಇಡೀ ಕುಟುಂಬದ ಶ್ರೇಯಸ್ಸಿಗೆ ಪೂರಕವಾಗಿಯೂ ಮತ್ತು ಮಾರಕವಾಗಿಯೂ ಇತ್ತು. ಕರಾವಳಿಯ ಮಾತೃಮೂಲ ಕುಟುಂಬ ವ್ಯವಸ್ಥೆಯಲ್ಲಿ ಭೂಮಿಯ ಒಡೆತನ ಹೆಣ್ಣಿಗೆ ಅಧೀನದಲ್ಲಿದ್ದುದರಿಂದ ಭೂಮಿ ಒತ್ತುವರಿಯಾಗುವಾಗ ಸಿಕ್ಕ ನಗದು 'ಅವಳ; ಹೆಸರಿನಲ್ಲಿದ್ದರೂ ಅದರ ವ್ಯವಹಾರವನ್ನು ಮುನ್ನಡೆಸಿದವನು ಮಗನೋ, ಮಾವನೋ, ಅಳಿಯನೋ ಆಗಿದ್ದನು. ಆದಾಯ ಧಾನ್ಯದ ಸ್ವರೂಪದಲ್ಲಿದ್ದಾಗ ಎಲ್ಲವೂ ತುಪ್ಪೆಯಲ್ಲಿ ಕಲೆಂಬಿಯಲ್ಲಿ ಭದ್ರವಾಗಿ ಕಣ್ಣ ಮುಂದಿದ್ದರೂ ಈಗ ಯಾರೋ ಒಬ್ಬರ ಅಧೀನಕ್ಕೆ ಒಳಪಟ್ಟಿತು. ನವ ಪಿತೃಪ್ರಧಾನತೆ ಎನ್ನುವುದು ಇಡೀ ಕುಟುಂಬ ವ್ಯವಸ್ಥೆಯನ್ನು ಪಲ್ಲಟಗೊಳಿಸಿತು. ಭೂಮಾಲೀಕ ಮತ್ತು ಭೂರಹಿತ ಕುಟುಂಬಗಳ ಮಧ್ಯೆ ವಿವಾಹ ಸಂಬಂಧ ಕೊಳು ಕೊಡುಗೆಗಳಲ್ಲಿ ಬಹಳಷ್ಟು ಅಂತರವಿತ್ತು. ಭೂರಹಿತರಾದವರು ಹೊರದುಡಿಮೆಯಿಂದ ವ್ಯಾಪಾರ ವ್ಯವಹಾರಗಳಿಂದ, ವಿದ್ಯೆಯಿಂದ ಸಮಾಜದಲ್ಲಿ ಉನ್ನತ ಸ್ಥಾನಮಾನಗಳಿಗೇರಿದಾಗ ಅವರೊಂದಿಗೆ ವೈವಾಹಿಕ ಸಂಬಂಧಗಳು ಏರ್ಪಟ್ಟವು. ಹಣಕಾಸಿನ ವ್ಯವಹಾರ ದುಡ್ಡಿನ ಲೆಕ್ಕಾಚಾರ ಮಾತ್ರ ಮುಖ್ಯವಾಗಿ ಕುಟುಂಬಗಳು ಮತ್ತೊಮ್ಮೆ ಅವಿಭಕ್ತಗೊಂಡಿತು. ಉದ್ಯೋಗಾರ್ಥಿಯಾದವರು ಕುಟುಂಬದ ಆರ್ಥಿಕ ಸ್ಥಿತಿಯನ್ನು ಸುಧಾರಿಸಿ ಸದಸ್ಯರೆಲ್ಲರಿಗೂ ಶಿಕ್ಷಣ ನೀಡಿದ್ದು ಇದೆ. ಇನ್ನೊಂದು ನೆಲೆಯಲ್ಲಿ ಹೆಚ್ಚಾಗಿ ಉದ್ಯೋಗ ಪಡೆದ ಗಂಡುಮಕ್ಕಳು ತಮ್ಮ ಬೆಕ್ಕಿನ ಬಿಡಾರ ಬೇರೆ ಎಂದು ಹೆಂಡತಿ ಮಕ್ಕಳ ಜವಾಬ್ದಾರಿಯನ್ನು ಮಾತ್ರ ವಹಿಸಿಕೊಂಡು ಪಿತೃಪ್ರಧಾನತೆಯ ವಾರೀಸುದಾರರಾದರು. ಭೂಮಾಲೀಕರಾಗಿದ್ದ ಹೆಗ್ಗಳಿಕೆಯ ಪ್ರತಿಷ್ಠಿತ ಕುಟುಂಬಗಳ ಸಾಮಾಜಿಕ ಸ್ಥಾನಮಾನವೂ ಪಲ್ಲಟಗೊಂಡಿತು. ತಮ್ಮ ಕುಟುಂಬದ ಹೆಸರುಗಳು ಭೂಮಿಯ ಒಡೆತನಕ್ಕೆ ಸಂಬಂಧಪಟ್ಟಂತೆ ಗುತ್ತು, ಬೂಡು, ಭಾವನೆಗಳು ಕೇವಲ ಮದುವೆಯ ಆಮಂತ್ರಣ ಪತ್ರಿಕೆಯಲ್ಲಿ ಅವರ ಹೆಸರಿನ ಮುಂದೆ ಉಪನಾಮವಾಗಿ ಮಾತ್ರ ಬಳಸಲ್ಪಟ್ಟಿತು. ಹಿಂದಿನ ಯಜಮಾನ್ಯದ ಅಹಮಿಕೆಯನ್ನು ಕೆಲವು ಕುಟುಂಬಗಳು ಕಳೆದುಕೊಂಡು ಸರಳವಾಗಿ ಬದುಕಿದರೂ ಮತ್ತೆ ಕೆಲವರು ಅದೇ ಅಂತಸ್ತಿನ ಅಂತರಗಳನ್ನು ತಮ್ಮ ಮಾತು-ರೂಢಿಗಳಲ್ಲಿ ಉಳಿಸಿಕೊಂಡರು.

ಭೂಮಿಯನ್ನು ಕಳಕೊಂಡಾಗ ಬಿಡಿ ಒಕ್ಕಲು, ಜೀತದಾಳುಗಳಾಗಿದ್ದ ಕುಟುಂಬಗಳಿಗೆ ತಮ್ಮದೇ ಒಂದು ಸ್ವಂತ ಮನೆ, ಅಂಗಳ ಎಂಬ ಸ್ವಂತಿಕೆ ಲಭಿಸಿತ್ತು. ಯಾರ ಹಂಗಿಗೂ, ಯಾರ ಮನೆಯಂಗಳದ ದುಡಿಮೆಗೂ ಬದ್ಧರಾಗಿರಬೇಕಾದ ಅವಶ್ಯಕತೆಯಿರಲಿಲ್ಲ. ಒಕ್ಕಲು ಎಬ್ಬಿಸಿದ್ದಕ್ಕಾಗಿ ಸರಕಾರದಿಂದ ಸಿಕ್ಕ ಅಲ್ಪ ಸ್ವಲ್ಪ ಹಣವು ಬದುಕಿಗೆ ಆಧಾರವಾಗಿ ಮನೆ ಮಾರು ಮಕ್ಕಳು ವಿದ್ಯೆಗೆ ಪೂರಕವಾಗಿತ್ತು. ಮತ್ತೆ ಕೆಲವರಿಗೆ ಒಮ್ಮೆಲೆ ಸಿಕ್ಕ

ದೊಡ್ಡ ಮೊತ್ತದ ಹಣವನ್ನು ಹೇಗೆ ಉಪಯೋಗಿಸಿಕೊಳ್ಳಬೇಕು ಎಂದು ತಿಳಿಯದೆ ದುಶ್ಚಟಗಳ ದಾಸರಾದರು. ಹಣವನ್ನು ಪೋಲು ಮಾಡಿ ಮತ್ತೆ ಕೆಲವೇ ವರ್ಷಗಳಲ್ಲಿ ಅದೇ ದಾರಿದ್ರದ ಬದುಕನ್ನು ಬಾಳಬೇಕಾಯಿತು. ಒಕ್ಕಲು ಎಬ್ಬಿಸಿ ನಿರ್ವಸಿತರಾದ ಕೆಲವು ಕುಟುಂಬಗಳಿಗೆ ತಮ್ಮ ಹಳ್ಳಿಯ ಒಡನಾಟದ ಬದುಕನ್ನು ಮರೆಯುವುದು ಅಷ್ಟು ಸುಲಭ ಸಾಧ್ಯವಾಗಿರಲಿಲ್ಲ. ಒಳ್ಳೆಯ ಬಾಂಧವ್ಯಗಳಿದ್ದ ಧಣಿ ಒಕ್ಕಲು, ಬಿಡಿ ಒಕ್ಕಲು ಕುಟುಂಬಗಳು ಬಹಳಷ್ಟು ಖಿನ್ನತೆಯನ್ನು ಅನುಭವಿಸಿದರು. ವೈಯಕ್ತಿಕ, ಕೌಟುಂಬಿಕವಾಗಿ, ಸಾಮಾಜಿಕವಾಗಿಯೂ ಬಹಳಷ್ಟು ಪಲ್ಲಟಗಳಾದವು. ನಗರೀಕರಣದ ಎಲ್ಲ ಪ್ರಭಾವ ಮೌಲ್ಯಗಳು ನವನಾಗರಿಕತೆಗೆ ತೆರೆದುಕೊಂಡ ಹಳ್ಳಿಯ ಜನರಲ್ಲೂ ಕಾಣಿಸಿಕೊಂಡಿತು. ಅತ್ತ ನಗರವಾಸಿಗಳೂ ಆಗದೆ ಇತ್ತ ಹಳ್ಳಿಯ ಜನಸಾಮಾನ್ಯರೂ ಆಗದೆ ಮೂಲಭೂತ ಅವಶ್ಯಕತೆ ಆಹಾರದ ಸ್ವಾವಲಂಬನೆಗೆ ಪರಾವಲಂಭಿಗಳಾಗಬೇಕಾದ ದಯನೀಯ ಪರಿಸ್ಥಿತಿಯೂ ಒದಗಿ ಬಂತು. ಬಹಳ ಸಂಕೀರ್ಣವಾದ ಬಹುಮುಖಿ ಪಲ್ಲಟಗಳಿಂದ ಬದುಕು ಸರಳ ಸುಸೂತ್ರವೆನಿಸದೆ ಸಂಘರ್ಷದ ಪಡಿಪಾಟಲುಗಳು ನಿತ್ಯದ ರೇಜಿಗೆಯಾಗಿತ್ತು. ಕೃಷಿ ಜಗತ್ತು ಹಂತ ಹಂತವಾಗಿ ಬದಲಾದುದರಿಂದ ಕೃಷಿಯಲ್ಲೂ ಸಾಮಾಜಿಕ ಬದುಕಿನಲ್ಲೂ ಪಲ್ಲಟಗಳಾದವು.

ಅಧ್ಯಾಯ ೪

# ಸಾಹಿತ್ಯ ಮತ್ತು ಕೃಷಿ ಸಂಸ್ಕೃತಿಯ ಅಂತಃ ಸಂಬಂಧಗಳ ನೆಲೆಗಳು

ಸಾಹಿತ್ಯವೊಂದು ಸಾಮಾಜಿಕ ಸಂಸ್ಥೆ, ಸಾಮಾಜಿಕ ಸೃಷ್ಟಿಯಾದ ಭಾಷೆಯನ್ನು ತನ್ನ ಮಾಧ್ಯಮವಾಗಿ ಬಳಸುವಂಥದು. ಸಾಹಿತ್ಯ ಜೀವನವನ್ನು ಅನುಕರಿಸುತ್ತದೆ. ಮತ್ತು ಜೀವನ ಬಹಳ ಮಟ್ಟಿಗೆ ಒಂದು ಸಾಮಾಜಿಕ ತಥ್ಯವಾಗಿದೆ. ಪ್ರಾಕೃತಿಕ ಪ್ರಪಂಚ ಹಾಗೂ ವ್ಯಕ್ತಿಯ ಆಂತರಿಕ ಅಥವಾ ಆತ್ಮನಿಷ್ಠ ಪ್ರಪಂಚ ಕೂಡಾ ಸಾಹಿತ್ಯಿಕ ಅನುಕರಣದ ವಸ್ತುಗಳಾಗಿ ಬರಹಗಾರನೂ ಸಮಾಜದ ಒಬ್ಬ ಸದಸ್ಯನಾಗುತ್ತಾನೆ. ಒಂದು ನಿರ್ದಿಷ್ಟ ಸಾಮಾಜಿಕ ಸನ್ನಿವೇಶದೊಡನೆ ಒಂದು ಆರ್ಥಿಕ, ಸಾಮಾಜಿಕ ಮತ್ತು ರಾಜಕೀಯ ವ್ಯವಸ್ಥೆಯೊಡನೆ ಸಾಹಿತ್ಯದ ಸಂಬಂಧಗಳನ್ನು ಕುರಿತು ಪ್ರಶ್ನೆಗಳನ್ನು ಕೇಳಲಾಗುತ್ತದೆ. ಸಾಹಿತ್ಯದ ಮೇಲೆ ಸಮಾಜದ ಪ್ರಭಾವವನ್ನು ವಿವರಿಸಲು ಮತ್ತು ಲಕ್ಷಣೀಕರಿಸಲು ಸಮಾಜದಲ್ಲಿ ಸಾಹಿತ್ಯದ ಸ್ಥಾನವನ್ನು ನಿರ್ದೇಶಿಸಲು ಮತ್ತು ನಿರ್ಣಯಿಸಲು ಪ್ರಯತ್ನಗಳನ್ನು ಮಾಡಲಾಗುತ್ತದೆ. ಸಾಹಿತ್ಯವನ್ನು ಕುರಿತ ಈ ಸಮಾಜ ಶಾಸ್ತ್ರೀಯ ದೃಷ್ಟಿ ಮುಖ್ಯವಾಗಿ ಒಂದು ನಿಶ್ಚಿತ ಸಾಮಾಜಿಕ ತತ್ವ ದರ್ಶನವನ್ನುಳ್ಳವರೆಂದು ಹೇಳಿಕೊಳ್ಳುವುದರಿಂದ ಬೆಳೆದಿದೆ.

ಲೇಖಕರ ಕೃತಿಯ ಸಾಮಾಜಿಕ ಸಂಬಂಧಗಳು ಹಾಗೂ ಸೂಚನೆಗಳು ಏನಾಗಿದ್ದುವು ಮತ್ತು ಏನಾಗಿದೆ ಎಂಬುದನ್ನು ಮಾತ್ರವಲ್ಲದೆ ಅವು ಏನಾಗಿರಬೇಕಿತ್ತು ಎಂಬುದನ್ನು ಕೂಡಾ ವಿವರಿಸಲು ಸಾಧ್ಯವಾಗಿದೆ. ಬರಹಗಾರರು ಸಾಹಿತ್ಯದ ಮತ್ತು ಸಮಾಜದ ಅಭ್ಯಾಸಿಗಳು ಮಾತ್ರವಲ್ಲದೆ ಭವಿಷ್ಯದ ಚಿಂತಕರೂ ಹಾಗೂ ಸಾಮಾಜಿಕ ಕಾಳಜಿಯವರೂ ಆಗಿದ್ದರು. ಲೇಖಕರು ತಮ್ಮ ಅನುಭವವನ್ನು ಬದುಕಿನ ಸಮಗ್ರ ಪರಿಕಲ್ಪನೆಯನ್ನು ಅನಿವಾರ್ಯವಾಗಿ ವ್ಯಕ್ತಪಡಿಸುತ್ತಾರೆ, ಬದುಕಿನ ಅಖಂಡತೆಯನ್ನು ಒಂದು ನಿರ್ದಿಷ್ಟ ಕಾಲದ ಅಖಂಡ ಜೀವನವನ್ನು ಕೂಡ ಸಂಪೂರ್ಣವಾಗಿ ಸಶೇಷವಾಗಿ ವ್ಯಕ್ತಪಡಿಸುತ್ತಾರೆ ಎನ್ನುವುದು ಅಗತ್ಯವಾಗುತ್ತದೆ. ಜೀವನವನ್ನು ಪೂರ್ಣವಾಗಿ ವ್ಯಕ್ತಪಡಿಸಬೇಕು ತನ್ನ ಕಾಲ ಹಾಗೂ ಸಮಾಜಕ್ಕೆ ಪ್ರಾತಿನಿಧಿಕವಾಗಿರಬೇಕು ಎನ್ನುವುದು ನಿಶ್ಚಿತ ಮೌಲ್ಯ ನಿರ್ಣಾಯಾತ್ಮಕ ಮಾನದಂಡವಾಗುತ್ತದೆ.

ಪ್ರತಿಯೊಬ್ಬ ಲೇಖಕರೂ ಸಮಾಜದ ಒಬ್ಬ ಸದಸ್ಯನಾದುದರಿಂದ ಸಾಮಾಜಿಕ ಜೀವಿಯಾಗಿ ಅವರನ್ನು ಅಭ್ಯಸಿಸುವುದು ಸಾಧ್ಯ. ಬರಹಗಾರರ ಸಾಮಾಜಿಕ ಮೂಲ ಮತ್ತು ಅಂತಸ್ತು ಅವರ ಸಾಮಾಜಿಕ ಭಾವನಾ ವ್ಯವಸ್ಥೆಯನ್ನು ರೂಪಿಸುತ್ತವೆ. ಈ ಚಿತ್ರಣವು ಸಾಮಾಜಿಕ ಬದಲಾವಣೆ ಮತ್ತು ಬೆಳವಣಿಗೆಯನ್ನು ಅವಲಂಬಿಸಿದೆ ಎನ್ನುವುದೂ ಮುಖ್ಯ ಅಂಶವಾಗುತ್ತದೆ. ಸಂಸ್ಕೃತಿಯ ವಿಕಾಸದ ಹೆಜ್ಜೆಗಳಲ್ಲಿ ಸಾಮರಸ್ಯವನ್ನೂ ನಿಶ್ಚಿತವಾಗಿ ನಿರೂಪಣೆಯ ಬೇರುಗಳಾಗಿ ವಿಶ್ಲೇಷಿಸಿರುವುದನ್ನು ಗುರುತಿಸಬಹುದು.

ಲೇಖಕರ ಸಾಮಾಜಿಕ ನಿಷ್ಠೆ, ಧೋರಣೆ ಹಾಗೂ ಭಾವನಾ ವ್ಯವಸ್ಥೆಯನ್ನು ಅವರ ಬರಹಗಳಲ್ಲಿ ಸ್ಪಷ್ಟಪಡಿಸಿಕೊಳ್ಳಬಹುದು. ಬರವಣಿಗೆಯ ನಿಲುವಿನ ನಿಖರತೆಯನ್ನು ಹೇಳಿಕೆಗಳು, ತೀರ್ಮಾನಗಳು ಮತ್ತು ಚಟುವಟಿಕೆಗಳ ಮೂಲಕ ವಾಸ್ತವಿಕ ಸಾಮಾಜಿಕ ಸೂಚನೆಗಳೆಂದು ಗ್ರಹಿಸಲಾಗುತ್ತದೆ. ಬರಹಾರರು ಸಮಾಜದಿಂದ ಪ್ರಭಾವಿತರಾಗುವುದು ಮಾತ್ರವಲ್ಲ ಅವರೂ ಪ್ರಭಾವ ಬೀರುತ್ತಾರೆ. ಕಲೆ ಬದುಕನ್ನು ಕೇವಲ ಪ್ರತಿ ಕೃತಿಸುವುದಿಲ್ಲ. ಅದನ್ನು ರೂಪಿಸುತ್ತದೆ. ಸಾಹಿತ್ಯವೂ ಕಲೆಯ ಭಾಗವಾಗಿ ಸಮಾಜದ ನಡುವಣ ಸಂಬಂಧಗಳನ್ನು ಗಹನ ರೂಪವಾಗಿ, ವಾಸ್ತವಿಕವಾಗಿ ಬೇರೆ ಬೇರೆ ಪ್ರಕಾರಗಳಲ್ಲಿ ಪ್ರಕಟಗೊಳ್ಳುತ್ತದೆ. ಉತ್ಪಾದಕ ಶಕ್ತಿಯ ಸಾಮಾಜಿಕ ಸಂಬಂಧಗಳು ಲೇಖಕರ ಪ್ರಜ್ಞೆಯ ನಡುವೆ ನಿಶ್ಚಿತ ರೂಪ ಪಡೆದು ಮೂರ್ತವಾಗುತ್ತದೆ.

ಸಾಹಿತ್ಯಮತ್ತು ಸಮಾಜದ ಪರಿಭಾಷೆಯನ್ನು ವಿವಿಧ ಶಬ್ದಗಳಲ್ಲಿ ಸಾಂಕೇತಿಕ ಅಥವಾ ಅರ್ಥಪೂರ್ಣ ಸಂಬಂಧಗಳ ಸಾಂಗತ್ಯ, ಸಾಮರಸ್ಯ, ಸುಸಂಬದ್ಧತೆ, ಅನುಗುಣ, ರಚನಾ ಸಮತೆ, ಶೈಲಿಯ ಸಾದೃಶ್ಯಗಳ ಶಬ್ದಗಳಲ್ಲಿ ಅಥವಾ ಒಂದು ಸಂಸ್ಕೃತಿಯ ಐಕ್ಯವನ್ನು ವಿವಿಧ ಮಾನವ ಚಟುವಟಿಕೆಗಳ ಅಂತರ ಸಂಬಂಧವನ್ನು ನಾವು ಸೂಚಿಸಬಹುದು. ಯಾವುದೇ ಶಬ್ದದಲ್ಲಿ ಮಂಡಿಸಬಹುದು ಎಂಬುದು ಸ್ಪಷ್ಟ. ಪ್ರತಿ ಕಾಲಘಟ್ಟದಲ್ಲೂ ವಿವಿಧ ಸಾಧ್ಯತೆಗಳನ್ನು ಮತ್ತೆ ಮತ್ತೆ ವಿಶ್ಲೇಷಣೆಗೆ ಒಳಪಡಿಸುತ್ತಾರೆ. ಸಾಹಿತ್ಯ ರೂಪಗಳ ಸಾಮಾಜಿಕ ನಿರ್ಧಾರವನ್ನು ನಿರ್ಣಯಾತ್ಮಕವಾಗಿ ಸ್ಥಾಪಿಸುವುದು, ಸಾಧ್ಯವಾದಲ್ಲಿ ಮಾತ್ರ ಸಾಮಾಜಿಕ ಧೋರಣೆಗಳು ರಚನಾತ್ಮಕವಾಗಿ ಪರಿಣಮಿಸಿ ಒಂದು ಕಲಾಕೃತಿಯನ್ನು ಅದರ ಕಲಾ ಮೌಲ್ಯದ ಪರಿಣಾಮಕಾರಿ ಭಾಗಗಳಾಗಿ ಗ್ರಹಿಸಬಹುದು.

ಸಾಹಿತ್ಯ ತತ್ವವನ್ನು ಅರ್ಥೈಸಿಕೊಂಡು ಸಂಸ್ಕೃತಿಯ ಕುರಿತಾದ ಚಿಂತನೆಗಳನ್ನು ಅನ್ವಯಿಸಿಕೊಳ್ಳುವುದು ಅತೀ ಅವಶ್ಯ. ಸಂಸ್ಕೃತಿಯನ್ನು ಬರಿಯ ಮೇಲ್ನೋಟದ ಗ್ರಹಿಕೆಗಳ ಆಚೆಗೆ ತೆಗೆದುಕೊಂಡು ಹೋಗಿ ಅರ್ಥ ವಿಸ್ತರಣೆ ಮಾಡಿಕೊಳ್ಳಬೇಕು. ಅದು ಕೇವಲ ಆರ್ಥಿಕವಾಗಿ ತಳ ರಚನೆಗೆ ಅಧೀನವಾದ ಮೇಲು ರಚನೆಯಲ್ಲ. ನೈತಿಕ ಮೌಲ್ಯಗಳ ರಾಶಿಯೂ ಅಲ್ಲ, ನಿತ್ಯದ ಬದುಕಿಗೆ ಸಂಬಂಧಿಸಿದ ಸಾಮಾನ್ಯ ಸಂಗತಿ. ಸಂಸ್ಕೃತಿಯೂ ಸಮಾಜದ ಸಮಗ್ರ ಜೀವನ ವಿಧಾನ. ಸಂಸ್ಕೃತಿ ಸಾಮಾಜಿಕ ವಿಚಾರಗಳಿಗೆ ಅಧೀನವೋ, ಸ್ವಾಯತ್ತ ಅಸ್ತಿತ್ವವೂ ಅಥವಾ ಯಾವುದಕ್ಕೂ ಅಧೀನವಾಗಿರದೆ ಕೆಲವು ಸ್ತರಗಳಲ್ಲಿ ಪರಸ್ಪರ ಪ್ರಭಾವ ಬೀರುವ ಗುಣವೂ ಇದ್ದರೂ ಕಟ್ಟುಪಾಡುಗಳ ಬೇಲಿಯಾಚೆಗೆ ಸಾಪೇಕ್ಷವಾಗಿ ಗಮನಿಸಬೇಕು. ಸಾಹಿತ್ಯ ಮತ್ತು ಸಂಸ್ಕೃತಿ ಪರಸ್ಪರ ಒಂದರೊಡನೊಂದು ಪ್ರಭಾವ ಬೀರುವ ಪ್ರಮುಖ ಪರಿಕಲ್ಪನೆಗಳೇ ಆಗಿವೆ.

ಸಾಹಿತ್ಯಕ್ಕೆ ಸಂಬಂಧಿಸಿದ ವಾಗ್ವಾದಗಳ ಸಂಕಥನವನ್ನು 'ಸಾಹಿತ್ಯ ಸಂಸ್ಕೃತಿ' ಎಂದು ಕರೆಯಲಾಗುತ್ತದೆ. ಇದನ್ನು ಡಿ. ಆರ್. ನಾಗರಾಜ ತಾತ್ವಿಕವಾಗಿ ವಿಶ್ಲೇಷಿಸುತ್ತಾರೆ. ಅವರ ಪ್ರಕಾರ 'ಸಾಹಿತ್ಯ ಸಂಸ್ಕೃತಿ ಎನ್ನುವುದು ಕೃತಿ ಪಠ್ಯ, ಲೇಖಕ, ಕೃತಿಯ ಉತ್ಪಾದನೆಯ ಪರಿಸರ, ಓದುಗ, ಆಶಯ, ಸೈದ್ಧಾಂತಿಕ ನೆಲೆಗಟ್ಟು ಚಾರಿತ್ರಿಕ ಪರಿಸರ ಇದೆಲ್ಲವನ್ನು ಒಳಗೊಂಡ ಸಂಕೀರ್ಣ ಶಕ್ತಿ ಸಾಹಿತ್ಯ ಸಂಸ್ಕೃತಿಯು ಸಾಹಿತ್ಯವನ್ನು ನಿಯಂತ್ರಿಸಲು ತನ್ನ ಶಕ್ತಿ ಮೀರಿ ಪ್ರಯತ್ನಿಸುತ್ತದೆ. ಏಕೆಂದರೆ ಅದು ಯಾವುದನ್ನು ಸಾಹಿತ್ಯ ಎಂದು ಕರೆಯುತ್ತದೋ ಅದು ಮಾತ್ರ ಸಾಹಿತ್ಯವಾಗುತ್ತದೆ. ವ್ಯಾಖ್ಯೆಯೊಂದರ ಮೂಲಕ ಆಕೃತಿಯನ್ನು ನಿರ್ದಿಷ್ಟಗೊಳಿಸುವುದೇ ಸಾಹಿತ್ಯ ಸಂಸ್ಕೃತಿಯ ಮುಖ್ಯ ಕೆಲಸ ಆದರೆ ಓದುಗರ ಅದೃಷ್ಟವಿರಬೇಕು. ಈ ಸಾಹಿತ್ಯ ಸಂಸ್ಕೃತಿಗಳ ಸರ್ವಾಧಿಕಾರತ್ವವನ್ನು ಮೀರಿ ಸಾಹಿತ್ಯದ ವ್ಯಾಖ್ಯೆ ಬದಲಾಗುತ್ತ ಹೋಗುತ್ತದೆ.

ಕನ್ನಡದಲ್ಲಿ 'ಸಾಹಿತ್ಯ ಸಂಸ್ಕೃತಿ' ಪರಿಕಲ್ಪನೆಯ ಬೆಳೆ ಶುರುವಾಗಿದೆ. ಈ ವಿಚಾರದ ಲೇಖನಗಳನ್ನು ಓದುತ್ತಾ ಹೋದಂತೆ ನಾವು ಕನ್ನಡ ಸಾಹಿತ್ಯ ಸಂಸ್ಕೃತಿಯೊಂದಿಗೆ ಕನಿಷ್ಟವಾದ ಒಂದು ಸಂಬಂಧವನ್ನು ಸ್ಥಾಪಿಸಿಕೊಳ್ಳುತ್ತ ಸಾಗುತ್ತೇವೆ. ಸಾಹಿತ್ಯ, ಸಂಸ್ಕೃತಿ, ಕೃತಿ ಸಂಸ್ಕೃತಿ ಎಂಬ ವಿಮರ್ಶಾ ಲೇಖನ ಸಂಕಲನಗಳ ಹೆಸರುಗಳು ಸಾಹಿತ್ಯ ಕತೆಯನ್ನೇ ಪ್ರಧಾನ ಕಾಳಜಿಯನ್ನಾಗಿ ಮಾಡಿಕೊಂಡಿರುವುದನ್ನು ಸೂಚಿಸುತ್ತಿರಬಹುದು. ಸಾಹತ್ಯಿಕ ಚಟುವಟಿಕೆಗಳು ಸಾಂಸ್ಕೃತಿಕ ಅಧ್ಯಯನಗಳಲ್ಲಿ ಲಗತ್ತಿಸುವ, ಚರಿತ್ರೆ, ಸಮಾಜ, ರಾಜಕಾರಣದ

ಆಯಾಮಗಳನ್ನು ಒಳಗೊಳ್ಳಲು ಸಾಧ್ಯವಾಗದ ಒಂದು ಅಂಶವನ್ನು ಸೂಚಿಸುತ್ತಿರಬಹುದು. ಆದರೆ 'ಸಾಹಿತ್ಯ ಸಂಸ್ಕೃತಿ ಎಂಬ ಪರಿಭಾಷೆ ಸಾಹಿತ್ಯ ವಿದ್ಯಾಮಾನಗಳನ್ನು ನಿಗ್ರಹಿಸುವ ಮತ್ತು ಪಾರ್ಶ್ವಿಕವಾಗಿ ವಿಶ್ಲೇಷಿಸುವ ಎಂಬ ಅರ್ಥದಲ್ಲಿ ಬಳಸುವ ಸಾಹಿತ್ಯಿಕ ಚಿಂತನೆಯನ್ನೇ ಒಂದು ತತ್ವಶಾಸ್ತ್ರೀಯವಾದ ಹುಡುಕಾಟಕ್ಕೆ ಅನ್ವಯಿಸುವುದು ಎಂದು ಅಧ್ಯಯನಗಳು ವಿಶಾದವಾದ ಒಳನೋಟಗಳನ್ನು ಇನ್ನಷ್ಟು ವಿಸ್ತರಿಸಿಕೊಳ್ಳಲು ಬಯಸುತ್ತದೆ.

ಸಾಹಿತ್ಯದ ತಾತ್ವಿಕತೆ ಸಂಸ್ಕೃತಿಯ ಅನನ್ಯತೆಯು ಜತೆಗೂಡಿದಾಗ ಮಾನವರ ನಾಗರಿಕತೆಯ ಇತಿಹಾಸದ ಬದುಕಿನ ಒಂದು ಭಾಗವಾದ ಕೃಷಿಯೂ ಇಲ್ಲಿ ಸೇರ್ಪಡೆಗೊಳ್ಳಲು ಸಾಧ್ಯವಾಗಿದೆ. ಕೃಷಿ ಜನ ಜೀವನದ ನಾಗರಿಕತೆಯು ಸಾಗಿ ಬಂದಿರುವ ಒಂದು ಪ್ರಮುಖ ಅಂಶವಾಗಿದೆ. ಕೃಷಿ ಜಗತ್ತಿನ ವಿಸ್ತೃತತೆ ಮಾನವರ ಬದುಕಿನ ಆಲೋಚನಾಕ್ರಮಗಳಲ್ಲಿ ವಿಚಾರ ಚಿಂತನೆಗಳಲ್ಲಿ ವ್ಯತ್ಯಾಸಗಳಾಗಿರುವುದು ಸಹಜ. ಮಾನವರ ಜಗತ್ತು ನಾಗರಿಕವಾಗುತ್ತಾ ಬಂದ ದಾಖಲಾತಿಗಳಾಗಿ ಕೃಷಿ ಸಂಸ್ಕೃತಿ ಉಲ್ಲೇಖನೀಯ. ಈ ಸ್ಥಿತ್ಯಂತರವನ್ನು ಸಾಹಿತ್ಯದ ಸ್ವರೂಪದಲ್ಲಿ ಅಭಿವ್ಯಕ್ತಿಗೊಳಿಸಲಾಗಿದೆ. ನಮ್ಮ ಮಹಾಕಾವ್ಯಗಳಾದ ರಾಮಾಯಣ ಮತ್ತು ಮಹಾಭಾರತವನ್ನು ಕೃಷಿ ಸಂಸ್ಕೃತಿಯನ್ನು ವಿಸ್ತರಣೆಗೊಳಿಸುವ ವಿವಿಧ ಆಯಾಮಗಳು ದಾಖಲಾಗಿರುವ ಕೃತಿಗಳು ಎಂದು ಈಗಾಗಲೇ ಅಧ್ಯಯನಕಾರರು ಕಾಡು ಮತ್ತು ನಾಡಿನ ಮಧ್ಯದ ಸಂಘರ್ಷಕ್ಕೆ ಕೃಷಿ ಹೇಗೆ ವಿಸ್ತರಣೆಗೊಂಡಿದೆ ಎಂದು ಚರ್ಚಿಸುತ್ತಾರೆ. ರಾಜ್ಯವನ್ನು ಬಿಟ್ಟಿರುವ ರಾಜಕುಮಾರನ ಮಗ ರಾಮಾಯಣದ ನಾಯಕ ರಾಮ ಉತ್ತರ ಭಾರತದಿಂದ ದಕ್ಷಿಣ ಭಾರತಕ್ಕೆ ಸಾಗುವ ಪಯಣದ ದಾರಿಯ ಉಲ್ಲೇಖಗಳಿವೆ. ನಾಡಿನ ರಾಮ ಕಾಡಿಗೆ ತೆರಳಿ, ಭೂಮಿಯನ್ನು ವನವಾಸದ ಹೆಸರಲ್ಲಿ ವಿಸ್ತರಿಸುತ್ತಲೇ ಮತ್ತೆ ನಾಡಿಗೆ ಮರಳುತ್ತಾನೆ. ಹೀಗೆ ಮರಳಿದರೂ ಮುಂದಿನ ಪೀಳಿಗೆಯ ಮಕ್ಕಳು (ಲವ–ಕುಶ) ಕಾಡಿನಲ್ಲಿ ಬೆಳೆಯುವುದು ಮತ್ತೆ ನಾಡಿಗೆ ಮರಳುವುದು ಕಾಡು ಮತ್ತು ನಾಡಿನ ಅವಿನಾಭಾವತೆಯನ್ನು ಹೇಳುತ್ತದೆ. ಸಂಸ್ಕೃತಿಯ ವಿಕಾಸದ ಅಂಶಗಳನ್ನು ಈ ಹಿನ್ನೆಲೆಯಲ್ಲಿ ಗುರುತಿಸಬಹುದು.

ಕೃಷಿ ಬದುಕಿನ ಭಾಗವಾಗಿ ಸಂಸ್ಕೃತಿ ವಿಕಾಸದ ಹೆಜ್ಜೆ ಗುರುತುಗಳಲ್ಲಿ ದಾಖಲಿಸಿಕೊಂಡ ಜನರು ಅಭಿವ್ಯಕ್ತಿ ಮಾಧ್ಯಮವಾಗಿ ತಮ್ಮ ಭಾವ ಪ್ರಪಂಚವನ್ನು ಬೇರೆ ಬೇರೆ ಸ್ವರೂಪದಲ್ಲಿ ವ್ಯಕ್ತಪಡಿಸಿದ್ದಾರೆ. ನಂಬಿಕೆ, ಆಚರಣೆ, ಆರಾಧನೆ, ಕ್ರೀಡೆ, ವಿಧಿನಿಷೇಧಗಳು, ಆಹಾರ, ಉಡಿಗೆ ತೊಡಿಗೆಗಳನ್ನು ಕೃಷಿ ಸಂಸ್ಕೃತಿಯೊಂದಿಗೆ ಸಮೀಕರಿಸಿ ಸಾಹಿತ್ಯಿಕ ರೂಪಗಳಾಗಿಯೂ ಪ್ರಕಟಪಡಿಸಿದ್ದಾರೆ. ಇವೆಲ್ಲವೂ ಬದುಕಿನ ಜೀವನ ಆವರ್ತನ ಮತ್ತು ಕೃಷಿ ಜಗತ್ತಿನ ವಾರ್ಷಿಕ ಆವರ್ತನವನ್ನು ಹೀಗೆ ಗ್ರಹಿಸಿ ಪೋಷಿಸಿಕೊಂಡು ಬರಲಾಗಿದೆ. ಅದು ಜನಪದರ ಆಡುಮಾತಿನ ರೂಪದಲ್ಲಿರುವ ಮೌಖಿಕ ಮತ್ತು ಗ್ರಂಥಸ್ಥ ಸಾಹಿತ್ಯವಾಗಿಯೂ ಇದನ್ನು ಗುರುತಿಸಿಕೊಳ್ಳಬಹುದು.

ಕರಾವಳಿಯ ಭೌಗೋಳಿಕತೆ ಮತ್ತು ಇಲ್ಲಿ ಬೆಳೆಯುವ ಆಹಾರದ ಮತ್ತು ವಾಣಿಜ್ಯ ಬೆಳೆಗಳ ವೈಶಿಷ್ಟ್ಯವೂ ಸಾಹಿತ್ಯಿಕವಾಗಿ ದಾಖಲಾದ ಸ್ವರೂಪ ಮಹತ್ವದ್ದು. ಸಂಸ್ಕೃತಿಯ ಸೂಕ್ಷ್ಮ ಎಳೆಗಳಲ್ಲಿ ಗಮನಿಸುವಾಗ ಹೆಚ್ಚಿನ ಎಲ್ಲಾ ನಂಬಿಕೆ, ಆಚರಣೆ, ಆರಾಧನೆಗಳು ಪ್ರಾಕೃತಿಕವಾಗಿ ಬೆಳೆಯುವ ಕಾರ್ತಿ ತಿಂಗಳ

ಬೆಳೆ ಎಣೆಲು ಬೇಸಾಯಕ್ಕೆ ಹೆಚ್ಚು ಅನ್ವಯಿಸುತ್ತದೆ ಎಂದು ತಿಳಿಯುತ್ತದೆ. ಸಹಜವಾಗಿ ಬೆಳೆಯುವ ಭತ್ತದ ಕೃಷಿಯೊಂದಿಗೆ ಕಟ್ಟಿರುವ ಹಾಡು, ಆಚರಣೆ, ಆರಾಧನೆಗಳು ಸಂಸ್ಕೃತಿ ಅನನ್ಯತೆಯ ಮೂಲ ಬೇರುಗಳು. ಈ ಅಂಶವನ್ನು ಗ್ರಹಿಸಿ ಅರ್ಥೈಸುವುದರ ಮೂಲಕ ವ್ಯವಸಾಯದ ಮೂಲ ನೆಲೆಗಳನ್ನೂ ಅರ್ಥೈಸಬಹುದು . ಜನರು ಏನನ್ನು ಬದುಕಿದ್ದರೋ ಅದನ್ನು ಅನುಭವಿಸಿ ಅಭಿವ್ಯಕ್ತಿಸುವ ಬೇರೆ ಬೇರೆ ಮಾಧ್ಯಮಗಳನ್ನು ಕಂಡುಕೊಂಡದ್ದರಿಂದ ಸಾಹಿತ್ಯ ಸಂಸ್ಕೃತಿಗಳೆರಡೂ ಒಂದೆರಡನೊಂದು ಬೆಸೆದುಕೊಂಡಿದೆ. ಈ ಅಂತಃ ಸಂಬಂಧದ ನೆಲೆಗಳನ್ನು ಅರ್ಥೈಸುವುದರ ಮೂಲಕ ಕರಾವಳಿಯ ಬದುಕಿನ ನಾಡಿ ಮಿಡಿತವೂ ಅರ್ಥ ಗ್ರಾಹ್ಯವಾಗುತ್ತದೆ.

**೪.೧ ಮೌಖಿಕ ಸಾಹಿತ್ಯ ಮತ್ತು ಕೃಷಿ ಸಂಸ್ಕೃತಿ**

ಕರ್ನಾಟಕದ ಕರಾವಳಿ ಬಹು ಭಾಷೆಗಳನ್ನಾಡುವ ಪರಿಸರದ ಬೀಡಾದರೂ ವ್ಯವಹಾರದ ಪ್ರಮುಖ ಭಾಷೆಯಾಗಿ ತುಳುವಿದೆ. ಯಾವುದೇ ಜಾತಿ, ಸಮುದಾಯ ಧರ್ಮಕ್ಕೆ ನಿರ್ದಿಷ್ಟಗೊಳಿಸಿಕೊಳ್ಳದೆ ಚಂದ್ರಗಿರಿಯಿಂದ ಸೀತಾನದಿಯವರೆಗೆ ತುಳು ಭಾಷೆ ಅತ್ಯಂತ ಶ್ರೀಮಂತವಾಗಿ ಬೆಳೆದಿದೆ. ಭಾಷೆ, ಬದುಕು, ಮತ್ತು ಸಂಸ್ಕೃತಿ ಪರಸ್ಪರ ಪೂರಕವಾದುದರಿಂದ ಜನರು ತಮ್ಮ ಶ್ರಮ, ವಿರಾಮ, ದುಃಖ, ದುಗುಡ, ದುಮ್ಮಾನ, ಆಶಯ ಆಕಾಂಕ್ಷೆಗಳನ್ನೆಲ್ಲಾ ಪದವಾಗಿ ಕಟ್ಟಿ ಬಾಳಿದ್ದಾರೆ. ಜನ ಮತ್ತು ಪದ ಸೇರಿ ಆದ ಜಾನಪದದ ಅರಿವು ಸಂಸ್ಕೃತಿ ನಿರ್ವಚನಕ್ಕೂ ಅಗತ್ಯವಾದುದು. ಈ ಪ್ರದೇಶದ ಪ್ರಧಾನ ಕಸುಬು ಬೇಸಾಯ. ಭತ್ತ, ತೆಂಗು ಮುಂತಾದ ಆಹಾರದ ಬೆಳೆಗಳ ಜತೆಗೆ ಕಾಳು ಮೆಣಸು, ಅಡಿಕೆಯಂತಹ ವಾಣಿಜ್ಯ ಬೆಳೆಗಳನ್ನು ಬೆಳೆಯುತ್ತಿದ್ದರು. ಇದಕ್ಕೆ ಪೂರಕವಾದ ಕೆಲವು ಕುಲಕಸುಬುಗಳು ಕರಾವಳಿಯಲ್ಲಿ ಚಾಲ್ತಿಯಲ್ಲಿತ್ತು. ಕಮ್ಮಾರರು, ಬಿಲ್ಲವರು, ಕುಂಬಾರರು, ಬಡಗಿಗಳು, ಕೊರಗರು, ಕೃಷಿ ಕೂಲಿ ಕಾರ್ಮಿಕ ವರ್ಗದ ಉಳಿದ ಜಾತಿಯ ಜನರು ಇದ್ದರು. ಪಶ್ಚಿಮ ಸಮುದ್ರ ಕರಾವಳಿಯಲ್ಲಿ ಮೀನುಗಾರಿಕೆಯನ್ನೇ ಪ್ರಧಾನ ಕಸುಬನ್ನಾಗಿ ಮಾಡಿಕೊಂಡಿರುವ ಮೊಗವೀರರು ಎಂಬ ವರ್ಗದವರು ಇದ್ದಾರೆ.

ಜಾನಪದದ ಅಧ್ಯಯನವನ್ನು ನಡೆಸಲು ಮಾಡುವ ಕ್ಷೇತ್ರಕಾರ್ಯ ಸಂಬಂಧ ಮಾಹಿತಿ ಸಂಗ್ರಹದ ಕೆಲಸಗಳು ಕಳೆದ ಶತಮಾನದಲ್ಲಿ ಹೆಚ್ಚು ತುರ್ತಾಗಿ ನಡೆದಿದೆ. ವರ್ತಮಾನದಲ್ಲಿ ಸಂಗ್ರಹಿಸಿದ ಮಾಹಿತಿಗಳನ್ನು ವಿವಿಧ ಜ್ಞಾನಶಿಸ್ತುಗಳ ಆನ್ವಯಿಕತೆಗೆ ಅಳವಡಿಸುತ್ತ ಸಂಸ್ಕೃತಿಯನ್ನು ಅರ್ಥೈಸುವ ಅಧ್ಯಯನಗಳು ಪ್ರಸ್ತುತವಾಗಿವೆ. ಜನಪದದ ಸಾಂಸ್ಕೃತಿಕ ಅಭಿವ್ಯಕ್ತಿಗಳಾದ ಜಾನಪದವು ಕ್ರೀಯಾಶೀಲವಾಗಿರುವ ಬಗೆಯನ್ನು ಚರ್ಚಿಸುವುದು ಇಂದಿನ ಜಾನಪದ ಅಧ್ಯಯನದ ಮುಖ್ಯ ಗುರಿಯಾಗಿದೆ. ಜಾನಪದವನ್ನು ಮುಖ್ಯವಾಗಿ ನಾಲ್ಕು ವಿಭಾಗಗಳಲ್ಲಿ ಈಗಾಗಲೇ ಗುರುತಿಸಲಾಗಿದೆ. ಜನಪದ ಸಾಹಿತ್ಯ, ಭೌತಿಕ ಸಂಸ್ಕೃತಿ, ಸಾಮಾಜಿಕ ಆಚರಣೆಗಳು, ರಂಗ ಪ್ರದರ್ಶನ ಮತ್ತು ಸಂಪ್ರದಾಯಗಳು ಜಾನಪದವು ಒಂದು ನಿರ್ದಿಷ್ಟ ಸಮುದಾಯದ ಅಭಿವ್ಯಕ್ತಿ ಮಾಧ್ಯಮಗಳಾಗಿರುವುದರಿಂದ ಜಾನಪದವನ್ನು ಪರಂಪರೆಯ ಅಧ್ಯಯನದ ಮುಖ್ಯ ಆಕಾರವಾಗಿ ಪರಿಭಾವಿಸಲಾಗುತ್ತದೆ. ವೈಜ್ಞಾನಿಕವಾಗಿ ಜಾನಪದ ಶಾಸ್ತ್ರ (Folkloristçi) ಮತ್ತು ಸಾಂಸ್ಕೃತಿಕ ಮಾನವ ವಿಜ್ಞಾನ(cultural Anthropology) ಗಳ ಅಧ್ಯಯನ ಇಂದು ಹೆಚ್ಚು ಪ್ರಸ್ತುತವಾಗಿದೆ. ಮಾನವ ವಿಕಾಸದ

ಹಂತದೊಂದಿಗೆ ಬದಲಾದ ಸ್ಥಿತ್ಯಂತರಗಳನ್ನು ಅರ್ಥೈಸಿಕೊಳ್ಳಲು ಈ ರೀತಿಯಾದ ಅಧ್ಯಯನ ಸಹಕಾರಿ, ಕರಾವಳಿ ಕರ್ನಾಟಕದ ಕೃಷಿ ಸಂಸ್ಕೃತಿಯ ಪಲ್ಲಟದ ನಿರ್ವಚನವನ್ನು ಅರ್ಥೈಸಿಕೊಳ್ಳಲು ತುಳುವಿನಲ್ಲಿರುವ ಜನಪದ ಸಾಹಿತ್ಯವನ್ನು ನಿರ್ದಿಷ್ಟ ಮಿತಿಯೊಳಗೆ ಅಳವಡಿಸಿಕೊಳ್ಳಲಾಗಿದೆ. ಕೃಷಿ ಸಂಸ್ಕೃತಿ ಮತ್ತು ಜಾನಪದವೇ ಒಂದು ಪ್ರೌಢ ಪ್ರಬಂಧದ ಅಧ್ಯಯನದ ವಿಷಯವಾಗುವಷ್ಟು ವ್ಯಾಪ್ತಿಯುಳ್ಳದ್ದಾಗಿದೆ. ಪ್ರಸ್ತುತ ಈ ಪ್ರಬಂಧದಲ್ಲಿ ಸಾಹಿತ್ಯವನ್ನಷ್ಟೇ ಒಂದು ಮಿತಿಯಲ್ಲಿ ವಿಶ್ಲೇಷಣೆಗೆ ಒಳಪಡಿಸಲಾಗಿದೆ.

ಈಗಾಗಲೇ ಸಂಗ್ರಹಗೊಂಡ ಪಠ್ಯರೂಪದಲ್ಲಿ ಪ್ರಕಟವಾದ ಬೇರೆ ಬೇರೆ ಶಿಸ್ತಿನಲ್ಲಿ ಅಧ್ಯಯನಕ್ಕೆ ಅಳವಡಿಸಿದ ಜನಪದ ಸಾಹಿತ್ಯ ಸಂಗ್ರಹದ ಮರು ಓದಿನಿಂದ ಹೊಸ ಹೊಳಹುಗಳು ಲಭ್ಯವೇ ಎಂದು ಅರ್ಥೈಸಲು ಇಲ್ಲಿ ಪ್ರಯತ್ನಿಸಲಾಗಿದೆ.

**೪.೧.೧ ಮೌಖಿಕ ಸಾಹಿತ್ಯ:**

ತುಳುವಿನ ಜಾನಪದ ಸಾಹಿತ್ಯವು ಅಗಾಧವಾಗಿದ್ದು ಪಾಡ್ದನ, ಸಂಧಿ, ಕಬಿತೆ, ಗಾದೆ, ಉರಲ್, ಒಗಟು, ಅಜ್ಜಿಕತೆ, ಐತಿಹ್ಯ, ಕುಣಿತದ ಹಾಡುಗಳು, ಜನಪದ ಗೀತೆಗಳಾದ, ನಾವಿಕರ ಹಾಡು, ಪ್ರಣಯಗೀತೆಗಳು, ಶಿಶುಪ್ರಾಸಗಳು, ಮದುವೆ ಹಾಡುಗಳು, ಮೀನನ್ನು ಕುರಿತ ಬಿಡಿ ಹಾಡುಗಳು ಎಂದು ಬಹುಪ್ರಕಾರಗಳಲ್ಲಿ ಮತ್ತು ಬಹುಪಾಠಾಂತರಗಳಲ್ಲಿ ಲಭ್ಯವಿದೆ. ಅತ್ಯಂತ ವಿಸ್ತಾರವಾದ ಜನಪದ ಸಾಹಿತ್ಯದಲ್ಲಿ ಅಧ್ಯಯನಕ್ಕೆ ಪೂರಕವಾದ ಪಾಡ್ದನಗಳನ್ನು ಮತ್ತು ಕಬಿತೆಗಳನ್ನು ಇಲ್ಲಿ ಆಯ್ಕೆ ಮಾಡಿಕೊಳ್ಳಲಾಗಿದೆ. ಹಾಡುಗಬ್ಬಗಳಾದ ಮಹಾ ಕಾವ್ಯದ ಪರಂಪರೆಯ ಪಾಡ್ದನಗಳು ಚಾರಿತ್ರಿಕ, ಸಾಮಾಜಿಕ, ಸಾಂಸ್ಕೃತಿಕ ನಿರೂಪಣೆಗಳನ್ನು ಒಳಗೊಂಡು ಧಾರ್ಮಿಕ ಪರಿಕಲ್ಪನೆಯ ಆಯಾಮದೊಳಗೆ ಪ್ರವೇಶ ಪಡೆಯುತ್ತವೆ. ಭೂತಾರಾಧನೆಯ ಆರಾಧನಾ ಪರಂಪರೆಯಲ್ಲಿ ಭೂತಗಳ ಚರಿತ್ರೆಯನ್ನು ಹೇಳುವಂತೆ ನಿರೂಪಣೆಗೊಳ್ಳುವ ಈ ಸಂಕಥನಗಳನ್ನು ಸಾಹಿತ್ಯಿಕ ನೆಲೆಯ ಅಧ್ಯಯನದಿಂದ ಪರಿಭಾವಿಸಲಾಗಿದೆ.

ಭೂತಗಳ ಪಾಡ್ದನಗಳು ಭೂತಗಳ ಹುಟ್ಟು ಅಥವಾ ಉಗಮ ಭೂತದ ಮಹಾತ್ಮೆ-ಸಾಹಸ, ಭೂತದ ಪ್ರಸರಣ ಎಂದು ಅರ್ಥೈಸಿಕೊಂಡು ವಿಶ್ಲೇಷಿಸಲಾಗಿದೆ. ಧಾರ್ಮಿಕ ರಂಗಭೂಮಿಯ ಸಾಹಿತ್ಯಿಕ ಭಾಗವಾದ ಪಾಡ್ದನಗಳನ್ನು, ಭೂತರಾಧನೆಯ ಸಂದರ್ಭಗಳ ಆಯಾ, ಭೂತಗಳ ಉತ್ಸವ ಆಚರಣೆಗಳ ನಿರ್ದಿಷ್ಟ ಸಂದರ್ಭದಲ್ಲಿ ಹಾಡುತ್ತಾರೆ. ಆರಾಧನಾ ಸಂದರ್ಭವಿಲ್ಲದೆಯೂ ಕೆಲವು ಪಾಡ್ದನಗಳನ್ನು ಹಾಡುತ್ತಾರೆ. ದೈವ ಕಥನಕ್ಕೆ ಹೊರತಾದ ಲೌಕಿಕ ವಸ್ತುಗಳುಳ್ಳ ಪಾಡ್ದನಗಳು ಬಹಳಷ್ಟಿದೆ.

ಕೃಷಿ ಸಂಸ್ಕೃತಿಯ ಒಂದು ಭಾಗವಾಗಿ ಪಾಡ್ದನ ಹಾಗೂ ಸಂಧಿಗಳನ್ನು ಕೃಷಿ ಚಟುವಟಿಕೆಯ ನಾಟಿಯ ಸಂದರ್ಭದಲ್ಲಿ ಹಾಡಲಾಗುತ್ತದೆ. ಭತ್ತದ ಸಣ್ಣ ಸಸಿ ಅಗೆಗಳನ್ನು ನೇಜಿ ಎಂದು ಕರೆಯುತ್ತಾರೆ. ಅಗೆ ನೇಜಿಯನ್ನು ತೆಗೆಯುವಾಗ ಮತ್ತು ತೆಗೆದ ನೇಜಿಯನ್ನು ನಾಟಿ ಮಾಡುವಾಗ ಈ ಪಾಡ್ದನಗಳನ್ನು ಹಾಡಲಾಗುತ್ತದೆ. ನೇಜಿ ತೆಗೆಯುವ ಮತ್ತು ನಾಟಿ ಮಾಡುವ ಈ ಪ್ರಕ್ರಿಯೆಯು ಒಂದು ವಿಧ್ಯುಕ್ತ ಆಚರಣೆಯಾಗಿದೆ. ಈ ಸಂದರ್ಭದಲ್ಲಿ ಹೆಚ್ಚು ಅನುಭವಿಯೊಬ್ಬಳು ಆರಂಭವನ್ನು ಮಾಡಿದರೆ ಉಳಿದವರು

ಆ ಹಾಡಿಗೆ ದನಿ ಸೇರಿಸುತ್ತಾರೆ. ಕೇವಲ ಗದ್ದೆ ಬೇಸಾಯದ ಕಾರ್ಯವಷ್ಟೇ ಅಲ್ಲದೆ ಶ್ರಮ ಸಂಸ್ಕೃತಿಯ ಉಳಿದ ಕೆಲಸಗಳನ್ನು ಮಾಡುವಾಗಲೂ ಹಾಡುತ್ತಾರೆ. ಬುಟ್ಟಿ ಹೆಣೆಯುವ, ಮೂರ್ತೆ ಇಳಿಸುವ, ಚಾಪೆ ಹೆಣೆಯುವ ಸಂದರ್ಭದಲ್ಲೂ ಹಾಡಲಾಗುತ್ತದೆ. ಮೇಲು ನೋಟಕ್ಕೆ ಇದು ಆಯಾಸ ಪರಿಹಾರ ಮತ್ತು ವಿರಾಮದೊಂದಿಗೆ ಮನೋರಂಜನೆಯಾದರೂ ತುಳುವರ ಸಾಂಸ್ಕೃತಿಕ ಜಗತ್ತಿನ ಮೌಲ್ಯಗಳನ್ನು ಸಂರಕ್ಷಿಸುವ ನೆಲೆಯಲ್ಲಿ ಪುನರಾವರ್ತಿಸಲಾಗುತ್ತದೆ.

"ವಸ್ತುವಿನ ದೃಷ್ಟಿಯಿಂದ ಪಾಡ್ದನಗಳನ್ನು ಸ್ಥೂಲವಾಗಿ ಈ ರೀತಿಯಾಗಿ ವಿದ್ವಾಂಸರು ವಿಂಗಡಿಸುವ ಪ್ರಯತ್ನವನ್ನು ಮಾಡಿದ್ದಾರೆ. ೧. ಅತಿಮಾನುಷ ವಸ್ತುಗಳುಳ್ಳ ಪಾಡ್ದನಗಳು ೨. ಅಲೌಕಿಕ ವಸ್ತುವುಳ್ಳ ಪಾಡ್ದನಗಳು೩. ಲೌಕಿಕ ವಸ್ತುವುಳ್ಳ ಪಾಡ್ದನಗಳೆಂದೂ ಅತಿಮಾನುಷ ವಸ್ತುಗಳಿರುವ ಪಾಡ್ದನಗಳನ್ನು ಅ) ಭೂತಗಳಿಗೆ ಸಂಬಂಧಿಸಿದ ಪಾಡ್ದನಗಳು ಆ)ಪೌರಾಣಿಕ ವ್ಯಕ್ತಿಗಳುಳ್ಳ ಪಾಡ್ದನಗಳೆಂದೂ ವಿಂಗಡಿಸಿದ್ದಾರೆ." (ರಾಜಶ್ರೀ–೨೦೦೮–ಪುಟ೫ )

"ತುಳುನಾಡಿನಲ್ಲಿ ಭೂತಕ್ಕೆ ಸಂಬಂಧಿಸಿದ ಪಾಡ್ದನಗಳು ಸಂಖ್ಯೆಯ ದೃಷ್ಟಿಯಿಂದ ಅಧಿಕವಾಗಿವೆ. ಭೂತಗಳ ಕುರಿತಂತೆ ಇರುವ ಪಾಡ್ದನಗಳು ಅವುಗಳ ಹುಟ್ಟು, ಉಗಮ, ಪ್ರಭಾವ, ಸಾಹಸ, ಕಾರ್ಣಿಕ ಹಾಗೂ ಪ್ರಸರಣಗಳಿಗೆ ಸಂಬಂಧಿಸಿರುತ್ತವೆ. ಒಂದೇ ಭೂತಕ್ಕೆ ಸಂಬಂಧಿಸಿದಂತೆ ಅನೇಕ ಪಾಡ್ದನಗಳು ಸಿಗುತ್ತದೆ. ಈ ಅನೇಕ ಪಾಡ್ದನಗಳು ಒಂದು ಪಾಡ್ದನದ ಭಿನ್ನ ಪಠ್ಯಕ್ಕಿಂತ ಹೊರತಾದುದು. ಅಂದರೆ ಒಂದು ಪಾಡ್ದನಕ್ಕೆ ಭಿನ್ನ ಭಿನ್ನಪಠ್ಯಗಳು ದೊರೆಯುವಂತೆಯೇ, ಒಂದು ಭೂತಕ್ಕೆ ಸಂಬಂಧಿಸಿದಂತೆ ವಸ್ತುವಿನ ದೃಷ್ಟಿಯಿಂದ ಭಿನ್ನತೆ ಇರುವ ಪಾಡ್ದನಗಳು ದೊರೆಯುತ್ತವೆ, ಒಂದೇ ಭೂತದ ಮೇಲಿರುವ ಹಲವಾರು ಪಾಡ್ದನಗಳನ್ನು ಆಯಾ ಭೂತದ ಉಗಮ, ಸಾಹಸ ಸಂಚಾರಕ್ಕೆ ಸಂಬಂಧಿಸಿದಂತೆ ಸಂಕಲಿಸುವ ಮೂಲಕ ಒಂದು ಪಾಡ್ದನ ಚಕ್ರವನ್ನು ಪಡೆಯಬಹುದು. ಇದನ್ನು ಭೂತದ ಮಹಾ ಕಾವ್ಯವೆಂದು ಕರೆಯಬಹುದು. ಉದಾ :ಜುಮಾದಿಯ ಉಗಮದ ಪಾಡ್ದನದ ಜತೆಗೆ ಕರ್ನಗೆ, ಪಂಚ ಜುಮಾದಿ, ಸಾರಾಳ ಜುಮಾದಿ, ಮರ್ಲ್ ಜುಮಾದಿ ಪಾಡ್ದನಗಳು ದೊರೆಯುತ್ತದೆ." (ವಿವೇಕ್ ರೈ.ಬಿ.ಎ ೧೯೮೫). ಒಂದು ಭೂತದ ಎಲ್ಲಾ ಪಾಡ್ದನಗಳನ್ನು ಒಟ್ಟು ಸೇರಿಸಿ ಲಾವಣಿ ಚಕ್ರ (ballad cycle)ದ ಸ್ವರೂಪದಲ್ಲಿ ವ್ಯವಸ್ಥೆಗೊಳಿಸಬಹುದು. ಇಂತಹ ಲಾವಣಿ ಚಕ್ರ ಪಾಡ್ದನದ ಜತೆ ಸೇರಿದಾಗ ಒಂದು ಪ್ರತ್ಯೇಕ "ಜನಪದ ಮಹಾಕಾವ್ಯ"(folk epic) ದ ವ್ಯಾಪ್ತಿಯನ್ನು ಪಡೆಯುತ್ತದೆ. ಇದನ್ನು ಜುಮಾದಿ ಚಕ್ರ (jumadi cycle) ಎನ್ನುತ್ತಾರೆ, ಜತೆ ಸೇರಿದಾಗ ಜುಮಾದಿ ಮಹಾಕಾವ್ಯ(jumadi epic) ರೂಪುಗೊಳ್ಳುತ್ತದೆ ಎಂದು ವಿವೇಕ್ ರೈಯವರು ವಿಶ್ಲೇಷಿಸುತ್ತಾರೆ ಇದನ್ನು. ಪಂಜುರ್ಲಿ, ಗುಳಿಗ ಮೊದಲಾದ ಭೂತಗಳ ಪಾಡ್ದನಗಳಿಗೂ ಅನ್ವಯಿಸಬಹುದು.

ಜನಪದ ಸಾಹಿತ್ಯದ ಪಠ್ಯವಾಗಿ ಪಾಡ್ದನಗಳನ್ನು ಆಯ್ಕೆ ಮಾಡಿಕೊಂಡ ಉದ್ದೇಶವೇ ಸಾಂಸ್ಕೃತಿಕ ಪಠ್ಯವಾಗಿ ಅರ್ಥೈಸುವುದು. ಕೃಷಿ ಸಂಸ್ಕೃತಿ ಪಲ್ಲಟವನ್ನು ಪಾಡ್ದನಗಳು ಹೇಗೆ ದಾಖಲುಗೊಳಿಸಿವೆ ಎನ್ನುವುದನ್ನು ಅರ್ಥೈಸುವುದಾಗಿದೆ. ಕೃಷಿ ಸಂಸ್ಕೃತಿ ಪಲ್ಲಟದ ಮುಖ್ಯ ಹಂತಗಳಾದ ಕೃಷಿಯ ಅನ್ವೇಷಣೆ,

ವಿಸ್ತರಣೆ, ನಿರ್ವಹಣೆ, ಬದಲಾವಣೆ ಮತ್ತು ಕಾಣೆ ಎಂಬ ಈ ಐದು ಹಂತಗಳಲ್ಲಿ ಮೊದಲ ಪಲ್ಲಟದ ವಿವರಣೆಗಳು ಮಾಹಿತಿ ಕೋಶವಾಗಿ ಲಭ್ಯವಾಗುತ್ತದೆ. ಕೃಷಿಯಲ್ಲಿ ಆದ ಈ ಸ್ಥಿತ್ಯಂತರ ಸಮಾಜದಲ್ಲಿ ಎರಡು ಧಾರೆಗಳಲ್ಲಿ ಗುರುತಿಸಲ್ಪಡುತ್ತದೆ.

**೧. ಕೃಷಿ ಸಂಸ್ಕೃತಿ ಮತ್ತು ವೃತ್ತಿ ಪಲ್ಲಟಗಳು.೨. ಕೃಷಿ ಸಂಸ್ಕೃತಿ ಮತ್ತು ವೈಯಕ್ತಿಕ ಬದುಕಿನ ಪಲ್ಲಟಗಳು**

ಪಲ್ಲಟದ ಫಲಿತಗಳು ಮೇಲ್ಮುಖ ಚಲನೆಯೇ ಕೆಳಮುಖವಾಗಿದೆಯೇ ಎನ್ನುವ ಚರ್ಚೆಗಳಿಗಿಂತ ಕೃಷಿ ಸಂಸ್ಕೃತಿ ಪಲ್ಲಟವಾಗುತ್ತಲೇ ಸಮಾಜದಲ್ಲಿ ಹೇಗೆ ಬದಲಾವಣೆಗಳಾದವು ಎನ್ನುವುದನ್ನು ಅರ್ಥೈಸಬಹುದು. ಇಲ್ಲಿ ಅತಿಮಾನುಷ ವೀರರಾಗಿ ಸಾಂಸ್ಕೃತಿಕ ನಾಯಕರಾಗಿ ಗುರುತಿಸಿಕೊಂಡಿರುವ ಕೋಟಿ –ಚೆನ್ನಯ್ಯರ ಪಾಡ್ದನ, ಕಾಂತಾಬಾರೆ–ಬುದಬಾರೆಯ ಪಾಡ್ದನ, ಪಂಜುರ್ಲಿ, ಪಾಡ್ದನ, ತೋಡ ಕುಕ್ಕಿನಾರ್ ಪಿಲಿ ಚಾಮುಂಡಿ ಪಾಡ್ದನ, ಕೋಡ್ದಬ್ಬು ತನ್ನಿಮಾನಿಗ, ಬಲೀಂದ್ರ ಪಾಡ್ದನಗಳನ್ನು ಮುಖ್ಯ ಆಕರವಾಗಿ ಇರಿಸಿಕೊಳ್ಳಲಾಗಿದೆ.

**೪.೧.೨ ಪಂಜುರ್ಲಿ ಪಾಡ್ದನ :** ಕೃಷಿ ಸಂಸ್ಕೃತಿಯ ಅನ್ವೇಷಣೆಯ ವಿವರಣೆಗಳು ಪಂಜುರ್ಲಿ ಪಾಡ್ದನದಲ್ಲಿ ಲಭ್ಯವಿದೆ. ಕಾಡು ಇಳಿದು ನಾಡಿಗೆ ಇಳಿಯುವ ಪಂಜುರ್ಲಿ ಭೂತ ಅಣ್ಣ ತಂಗಿಯರಾಗಿದ್ದು ಗಂಡ ಹೆಂಡಿರಾಗಿ ಗೆಡ್ಡೆ ಗೆಣಸುಗಳನ್ನು ಅಗೆದು ತಿಂದು ಬೆಳೆ ನಾಶ ಮಾಡುವ ವಿವರಣೆ ಲಭ್ಯವಾಗುತ್ತದೆ. ಬಿ.ಎ ವಿವೇಕ ರೈಯವರ ಪಂಜುರ್ಲಿ ಪಾಡ್ದನದ ವಿವಿಧ ಪಠ್ಯಗಳಾದ ಕುಪ್ಪೆ ಪಂಜುರ್ಲಿ, ಅಂಗಣ ಪಂಜುರ್ಲಿ, (ಅಂಗಣತ್ತಾಯ) ಪಾಡ್ದನಗಳಲ್ಲಿ ಈಶ್ವರನು ದೇವರಿಗಿಂತ ಹೆಚ್ಚಾಗಿ ಒಬ್ಬ ಕೃಷಿಕನಾಗಿ ಚಿತ್ರಿತನಾಗಿದ್ದಾನೆ. ಆತ ಬೆಳೆವ ಬೆಳೆಗಳು, ಬೆಳೆಯ ರಕ್ಷಣೆಗೆ ತೆಗೆದುಕೊಳ್ಳುವ ಕ್ರಮಗಳು, ಬೆಳೆಗಳಿಗೆ ಪರಿಸರದಿಂದ ಸಂಭವಿಸುವ ತೊಂದರೆಯ ವಿವರಗಳು ಇವೆ. ಹಂದಿ ಕೃಷಿಕನ ಮಿತ್ರನೂ ಹೌದು ಶತ್ರುವೂ ಹೌದು. ಕೃಷಿ ಅನ್ವೇಷಣೆಯ ಹಂತದಲ್ಲಿ ಹಂದಿ ತನ್ನ ದಾಡೆಯಿಂದ ಮಣ್ಣನ್ನು ಅಗೆಯುತ್ತಾ ಗೆಡ್ಡೆ ಗೆಣಸುಗಳನ್ನು ಆಹಾರವಾಗಿ ತಿನ್ನುತ್ತಿತ್ತು. ಹಂದಿ ತಿಂದು ಬಿಟ್ಟ ಗೆಡ್ಡೆ ಗೆಣಸುಗಳನ್ನು ಕೃಷಿಯ ಅನ್ವೇಷಣೆಯ ಹಂತದಲ್ಲಿ ಮನುಷ್ಯ ಅದರಲ್ಲೂ ಸ್ತ್ರೀಯರು ಸೂಕ್ಷ್ಮವಾಗಿ ಗಮನಿಸಿ ಆಹಾರದ ಅನ್ವೇಷಣೆಯೊಂದಿಗೆ ತಳಿಗಳನ್ನು, ಬೀಜಗಳನ್ನು ಸಂಗ್ರಹಿಸಿದರು. ಪಾಡ್ದನದಲ್ಲಿ ಬರುವ ವಿವರಗಳಂತೆ ಅಣ್ಣ ತಂಗಿಯರಾಗಿದ್ದವರು ಗಂಡ ಹೆಂಡತಿಯರಾದುದನ್ನು ಉಲ್ಲೇಖಿಸುತ್ತಾರೆ. ಆ ಹಂದಿಗಳನ್ನು ಬೇಟೆಯಾಡಿ ಕೊಂದಾಗ ಅದು ಎರಡು ಮರಿಗಳಿಗೆ ಜನ್ಮ ನೀಡಿತ್ತು. ಈಶ್ವರ ದೇವರು ಕಳುಹಿಸಿದ ಈ ಹಂದಿ ಜೋಡಿಗಳು ಸತ್ತಾಗ ಪಾರ್ವತಿ ಅದನ್ನು ಸಾಕುತ್ತಾಳೆ. ಮುದ್ದಿನಿಂದ ಬೆಳೆಸಿದ ಹಂದಿಯೂ ಈಶ್ವರನ ಬೆಳೆ ನಾಶ ಪಡಿಸಿದ್ದರಿಂದ ಈಶ್ವರ ದೇವರ ಶಾಪದ ಪರಿಣಾಮ ಹಂದಿ ತುಳುನಾಡಲ್ಲಿ ಕುಪ್ಪೆ ಪಂಜುರ್ಲಿ ಮತ್ತು ಜಾಗೆದ ಪಂಜುರ್ಲಿ ಎಂದು ಹೇಳುವ ಎರಡು ದೈವಗಳ ಪರಿಕಲ್ಪನೆಯಾಗಿ ಕೃಷಿಗೆ ಹತ್ತಿರವಾಗಿದೆ. ಕುಪ್ಪೆ ಪಂಜುರ್ಲಿ ಪಾಡ್ದನದಲ್ಲಿ ಬರುವ ಭತ್ತದ ತಳಿಯ ಪೈರಿನ ವಿವರಗಳನ್ನು ಗಮನಿಸಿದರೆ ಕೃಷಿ ಅನ್ವೇಷಣೆಯಾದ ಸತ್ಯದ ಬುಳೆ ಅತಿಕಾರ ಹಾಗೂ ದೇವ ಕಳಮೆ, ರಾಜಕಳಮೆ ಎಂದು ಉಲ್ಲೇಖಿಸುತ್ತಾರೆ.

ಜಾಗೆದ ಪಂಜುರ್ಲಿ ಪಾಡ್ದನದಲ್ಲಿ ಕೃಷಿ ಚಟುವಟಿಕೆಯ ವಿವರಗಳು ಸಿಗುತ್ತದೆ. ಗದ್ದೆ ಕೋರುವುದು, ಬಿತ್ತನೆ, ನಾಟಿ, ಬೆಳೆಯ ರಕ್ಷಣೆಗೆ ಬೇಲಿ ಹಾಕುವ ವಿವರಗಳು ಬರುತ್ತವೆ. ಅಲ್ಲಿ ಬರುವ ವಿವರಣೆಯೊಂದನ್ನು ಸೂಕ್ಷ್ಮವಾಗಿ ಗಮನಿಸಬಹುದಾಗಿದೆ. ಗೋರದಿರುವ ಗದ್ದೆ ಗೋರುತ್ತೇನೆ ನೆಡದ ಇರುವ ನೇಜಿ ನೆಡಿಸುತ್ತೇನೆ. ಬಿತ್ತದಿರುವ ಬೀಜ ಬಿತ್ತುತ್ತೇನೆಂದು ಬಿರ್ಮಣ ಬಲ್ಲಾಳರು ಹೇಳುತ್ತಾರೆ. ಗೋರದ ಗದ್ದೆಯನ್ನು ಗೋರಿದ್ದಾರೆ. ಬಿತ್ತದ ಬೀಜವನ್ನು ಬಿತ್ತಿದ್ದಾರೆ. ನೆಡದ ನೇಜಿ ನೆಡಿಸಿದ್ದಾರೆ. ಕಂಚಿನ ಕೋಟೆಯನ್ನು ಬಲಿದಿದ್ದಾರೆ, ಮುಳ್ಳಿನ ಬಾಗಿಲು ಕಟ್ಟಿಸಿದ್ದಾರೆ. ಕಬ್ಬಿಣದ ಬೇಲಿಯನ್ನು ಕಟ್ಟಿಸಿದ್ದಾರೆ. ಕಟ್ಟದಿರುವ ಕೋಟೆ ಕಟ್ಟಿಸಿದ್ದಾರೆ. ಮಣ್ಣಿನ ಗೋಡೆಯನ್ನು ಮೆತ್ತಿದ್ದಾರೆ. ಕಲ್ಲಿನ ದಾರಂದವನ್ನು ಹಾಕಿಸಿದ್ದಾರೆ ಎಂಬ ವಿವರಣೆಗಳನ್ನು ಗಮನಿಸಿದಾಗ, ಕೃಷಿ ಚಟುವಟಿಕೆಗಳು ಅನ್ವೇಷಣೆಗೊಂಡು ವಿಸ್ತರಣೆಗೊಂಡ ಹಂತಗಳನ್ನು ಗಮನಿಸಬಹುದು. ಕೃಷಿ ಭೂಮಿ ವಿಸ್ತಾರಗೊಂಡ ಸ್ವರೂಪದ ವೈಶಿಷ್ಟ್ಯ ವನ್ನು ಕಾಣಬಹುದು. ಗದ್ದೆಗಳನ್ನು ನಿರ್ಮಾಣ ಮಾಡಿದ , ಬಿತ್ತಿದ ಬೆಳೆಯನ್ನು ರಕ್ಷಿಸಿದ ವಿವರಣೆಗಳು ಬಹು ಮುಖ್ಯವಾದವು. ಹಾಗಾಗಿಯೇ ಕೃಷಿ ಸಂಸ್ಕೃತಿಯ ಅನ್ವೇಷಣೆಗೆ ಸಹಾಯಕವಾದ ಹಂದಿ ಭೂತವಾಗಿ ಆರಾಧನೆಗೆ ಒಳಗಾಗುತ್ತದೆ. ಕೃಷಿ ವಿಸ್ತರಿಸಿದ ಹಂತಕ್ಕೆ ಸಾಕ್ಷಿಯಾಗಿದೆ. ಪಂಜುರ್ಲಿ ಪಾಡ್ದನದ ಪಠ್ಯಗಳು ಜನಪದರು ಕಟ್ಟಿದ ಸಾಂಸ್ಕೃತಿಕ ಮಾನವ ಶಾಸ್ತ್ರದ ಎಳೆಗಳನ್ನು ಇಲ್ಲಿ ಗುರುತಿಸಬಹುದು. ಸಂಸ್ಕೃತಿ ವಿಕಾಸದ ಹಂತದಲ್ಲಿ ಅಣ್ಣ- ತಂಗಿಯರ ಮಧ್ಯೆ ನಿಷೇದವಿಲ್ಲದ ಲೈಂಗಿಕತೆಯನ್ನು ಪ್ರಾಣಿ ಜಗತ್ತಿನೊಂದಿಗೆ ಸಮೀಕರಿಸುತ್ತ ಪ್ರಾಣಿಯಾದ ಹಂದಿಯ ಸಾಮಿಪ್ಯದ ಸಖ್ಯದಿಂದಲೇ ಕೃಷಿ ಅನ್ವೇಷಣೆಯಾದ ವಿವರವನ್ನು ಹೇಳುತ್ತಾರೆ. ಪಾರ್ವತಿಯು ಮಕ್ಕಳಂತೆ ಸಾಕಿದ ಹಂದಿ ಬೆಳೆ ನಾಶ ಮಾಡಿತು ಎನ್ನುವ ವಿವರಗಳು ಸಾಂಸ್ಕೃತಿಕ ಮಾನವ ಶಾಸ್ತ್ರದ ಸೂಕ್ಷ್ಮ ಎಳೆಯ ಹೆಣಿಗೆಯನ್ನು ನಿರೂಪಿಸುತ್ತದೆ. ಕೃಷಿಯ ಅನ್ವೇಷಕಿಯಾದ ಹೆಣ್ಣಾದ ಪಾರ್ವತಿ (ಮೂಲ ಸ್ತ್ರೀ) ಹಂದಿಯನ್ನು ಮಕ್ಕಳಂತೆ ಸಾಕಿ ಮತ್ತೆ ಬೆಳೆನಾಶ ಪಡಿಸಿದ್ದರಿಂದಲೇ ಶಾಪಕ್ಕೆ ತುತ್ತಾಗಿ ಆರಾಧನೆಗೆ ಒಳಗಾಗುವ ವಿವರಗಳು ಇಲ್ಲಿವೆ.

ತುಳು ಜನಪದ ಸಾಹಿತ್ಯದಲ್ಲಿ ಪಂಜುರ್ಲಿ ಪಾಡ್ದನದ ಪಾಠಗಳನ್ನು ಅಭ್ಯಸಿಸುತ್ತ ಭೂತ ಪ್ರಸರಣದ ಒಂದು ನಕಾಶೆಯನ್ನು ವಿವೇಕ ರೈಯವರ ನೀಡಿದ್ದಾರೆ. ಅದು ಕಾಡಾದ ಸುಬ್ರಮಣ್ಯದಿಂದ ಕಡಲತೀರದ ಹೆಬ್ರಿಯವರೆಗೆ ಗೋಚರಿಸುತ್ತದೆ. ಈ ಭೂತದ ಪ್ರಸರಣದೊಂದಿಗೆ ಕೃಷಿ ಜಗತ್ತು ಕೂಡಾ ಕಾಡಿನಿಂದ ಆರಂಭಗೊಂಡು ಕರಾವಳಿ ತೀರದ ಉದ್ದಕ್ಕೂ ಪ್ರಸರಣಗೊಂಡಿದೆ ಎಂದು ಅರ್ಥೈಸಿ ಹೇಳಬಹುದು. ಅದು ಒಮ್ಮಿಂದೊಮ್ಮೆಗೆ ಉದ್ಭವಿಸುದುದು ಅಥವಾ ಏಕಪ್ರಕಾರವಾದುದಲ್ಲ. ಹಾಗಾಗಿ ದೇವಸ್ಥಾನದ ಅಂಗಳದಲ್ಲಿಯೂ ಪಂಜುರ್ಲಿದೈವವನ್ನು ನಂಬಿ ಅಂಗಣ ಪಂಜುರ್ಲಿ (ಅಂಗಣತ್ತಾಯ)ಯಾಗಿರಬೇಕು. ಕೃಷಿ ಅನ್ವೇಷಣೆಗೊಂಡು ವಿಸ್ತರಣೆಯಾದ ಹಂತವನ್ನು ಆರಾಧನಾ ಪರಂಪರೆಯಲ್ಲಿ ಹೀಗೆ ಕಟ್ಟಿಕೊಟ್ಟಿದ್ದಾರೆ ಎನ್ನಬಹುದು. ಕುಪ್ಪೆಟ್ಟು ಪಂಜುರ್ಲಿ ಜಾಗೆದ ಪಂಜುರ್ಲಿ ಎಂದು ಹೆಸರಿಸಿ ವಿಸ್ತರಿಸಿದ ಸ್ವರೂಪ ಕೃಷಿ ಜಗತ್ತು ವಿಸ್ತರಣೆಗೊಂಡದಕ್ಕೆ ಸಾಕ್ಷಿಯಾಗಿದೆ.

ಕೃಷಿ ಸಂಸ್ಕೃತಿ ಅನ್ವೇಷಣೆಗೊಂಡು ವಿಸ್ತರಣೆಯಾದ ಹಂತವನ್ನು ಕೃಷಿಯ ನಿರ್ವಹಣೆಯಲ್ಲಿ ಬದಲಾವಣೆಗಳಾಗಿ ಆದ ಸಾಮಾಜಿಕ ಸ್ಥಿತ್ಯಂತರಕ್ಕೆ ಕೋಟಿ-ಚೆನ್ನಯರ ಪಾಡ್ದನವನ್ನು ಪ್ರಮುಖವಾಗಿ

ಗಮನಿಸಬಹುದು. ಇದಕ್ಕೆ ಪೂರಕವಾಗಿ ಕಾಂತಬಾರೆ- ಬುದಬಾರೆಯ ಪಾಡ್ದನ, ಕೊರಗತನಿಯ-ತನ್ನಿಮಾನಿಗ ಪಾಡ್ದನವೂ ಪ್ರಮುಖವಾಗುತ್ತದೆ.

**೪.೧.೩ ಕೃಷಿ ಸಂಸ್ಕೃತಿ ಮತ್ತು ವೃತ್ತಿ ಪಲ್ಲಟಗಳು :**

ಕೃಷಿ ಸಂಸ್ಕೃತಿ ವಿಸ್ತರಣೆಗೊಂಡಂತೆಲ್ಲ ಜಾತಿ ಕಸುಬುಗಳನ್ನು ಮೀರಿ ಒಂದು ಸಮುದಾಯವು ಕೃಷಿಯನ್ನು ವೃತ್ತಿಯಾಗಿ ಆಯ್ಕೆ ಮಾಡಿಕೊಂಡಾಗ ಈಗಾಗಲೇ ಕೃಷಿಕರಾಗಿ ಭೂಮಿಯ ಒಡೆಯರಾದವರಿಂದ ಎದುರಾದ ವಿರೋಧಗಳನ್ನು ಪಾಡ್ದನ ಹೇಳುತ್ತದೆ. ಇಂದಿಗೂ ಭೂಮಿ ಪ್ರಶ್ನೆ ಬಹಳ ಗಂಭೀರವಾದ ಸಾಮಾಜಿಕ ಪಲ್ಲಟದ ಮತ್ತು ಚರ್ಚೆಯ ವಿಷಯವಾಗಿದ್ದು ಭೂಮಿಯ ಪರಿಕಲ್ಪನೆ, ಸಂಪತ್ತಿನ ಹಂಚಿಕೆ ಮತ್ತು ಅಧಿಕಾರ ಪರಸ್ಪರ ಒಂದಕ್ಕೊಂದು ಸಂಬಂಧ ಇರುವ ಸಂಗತಿಗಳಾಗಿದ್ದು ಆ ಬಗೆಗೆ ನಡೆದ ಚಾರಿತ್ರಿಕ ಹೋರಾಟವೇ ಕೋಟಿ ಚೆನ್ನಯರನ್ನು ಸಾಂಸ್ಕೃತಿಕ ವೀರರನ್ನಾಗಿಸಿದೆ.

ಕೋಟಿ ಚೆನ್ನಯ ಪಾಡ್ದನದ ಮಹಾ ಕಾವ್ಯವೂ ಕೇಂಜವ ಹಕ್ಕಿಗಳ ಸೃಷ್ಟಿ ಪುರಾಣದ ಕತೆಯೊಂದಿಗೆ ಆರಂಭಗೊಂಡ ದೇಯಿ ಬೈದೆದಿಯ ಪಾಡ್ದನವಾಗಿ ಮುಂದುವರಿದು ಕೋಟಿ -ಚೆನ್ನಯರ ಹುಟ್ಟು, ಬಾಲ್ಯ, ಹೋರಾಟದ ಕತೆಗಳೊಂದಿಗೆ ಕೊನೆಗೊಳ್ಳುತ್ತದೆ. ತಮ್ಮ ಬದುಕಿನುದ್ದಕ್ಕೂ ಸಂಘರ್ಷಗಳನ್ನು ಎದುರಿಸುತ್ತಲೇ ಬಾಳಿದ ಈ ಅವಳಿ ವೀರರು ದುರಂತ ಅಂತ್ಯವನ್ನು ಕಾಣುತ್ತಾರೆ. ವರ್ಗ, ವರ್ಣ, ವೃತ್ತಿ, ಅಧಿಕಾರ, ಅಂತಸ್ತು ಈ ಎಲ್ಲ ಅಸಮಾನತೆಗಳಿಗೆ ಬಲಿಪಶುವಾಗುವ ಕೋಟಿ ಚೆನ್ನಯರು ತುಳುನಾಡಿನ ಸಾಂಸ್ಕೃತಿಕ ವಿವರಗಳಿಗೆ ಪ್ರಮುಖ ಪ್ರತೀಕಗಳಾಗಿವೆ. ವ್ಯವಸ್ಥೆಯ ವಿರುದ್ಧ ಸೆಟೆದು ನಿಂತ ಅವರಲ್ಲಿ ಇರುವ ಅತ್ಯಂತ ಪ್ರಮುಖವಾದ ಮೌಲ್ಯವೇ "ಸತ್ಯದಲ್ಲಿ ಬಂದವರಿಗೆ ಎದೆಯಲ್ಲಿ ದಾರಿ, ಮೋಸದಲ್ಲಿ ಬಂದವರಿಗೆ -ಸುರಿಯದಲ್ಲಿ ದಾರಿ" ಎಂಬ ನಾಣ್ಣುಡಿ ಇದು. ಸತ್ಯದ ನಾಡಾದ ತುಳುನಾಡಿನ ಸಾರ್ವಕಾಲಿಕ ಮೌಲ್ಯವು ಆಗಿದೆ. ಕರಾವಳಿಯಾದ್ಯಾಂತ ಜನಪ್ರಿಯರಾಗಿ ಎಲ್ಲೆಡೆಯಲ್ಲೂ ಗರಡಿಗಳನ್ನು ಕಟ್ಟಿಸಿಕೊಂಡು ಆರಾಧನೆಗೊಳ್ಳುವ ಕೋಟಿ ಚೆನ್ನಯರ ಶ್ರದ್ಧಾ ಕೇಂದ್ರಗಳು ದೇಹ-ಮನಸ್ಸುಗಳನ್ನು ಹುರಿಗೊಳಿಸಬೇಕೆಂಬ ಆಶಯವನ್ನು ಹೊಂದಿದ್ದಾಗಿದೆ.

ಕರಾವಳಿಯಲ್ಲಿ ನಡೆದ ವರ್ಣ ಪಲ್ಲಟ ಮತ್ತು ವೃತ್ತಿ ಪಲ್ಲಟಗಳಿಗೆ ಕೋಟಿ ಚೆನ್ನಯ ಪಾಡ್ದನದ ಕಥಾನಕ ಸಾಕ್ಷಿಯಾಗಿದೆ. ಕೇಂಜವ ಹಕ್ಕಿಗಳು ನಾರಾಯಣ ದೇವರಿಗೆ ಸಂತತಿ ಉಳಿಯಲು ತತ್ತಿಯನ್ನು ತಮ್ಮ ರೆಕ್ಕೆಯಲ್ಲಿ ಜೋಡಿಸಿ ಕೊಂಡೊಯ್ಯುವಾಗ ಜಾರಿ ನೆಲಕ್ಕೆ ಬಿತ್ತು ಎನ್ನುತ್ತಾರೆ, ಜಲ ಸಂಸ್ಕೃತಿಯ ಮೂಲವು ಜೀವ ಸಂಸ್ಕೃತಿಯಾಯಿತು ಎಂದು ಇಲ್ಲಿ ಗುರುತಿಸಲು ಸಾಧ್ಯವಾಗಿದೆ.

ಕರಾವಳಿಯ ಪ್ರಮುಖ ಸಮುದಾಯವಾದ ಬಿಲ್ಲವರು, ಕುಲ ಕಸುಬಾಗಿ ಮೂರ್ತೆಗಾರಿಕೆಯನ್ನು ನಡೆಸುತ್ತ, ಕಾಡು ಮೇಡುಗಳನ್ನು ಸುತ್ತುತ್ತ ಬದುಕುತ್ತಿದ್ದ ಅವರಿಗೆ ಸಸ್ಯಗಳ ಕುರಿತಾದ ಜ್ಞಾನವೂ ಇತ್ತು. ರೋಗಗಳಿಗೆ ಮದ್ದುಗಳನ್ನು ನೀಡಿ ಗುಣಪಡಿಸುತ್ತಿದ್ದುದರಿಂದ ಬೈದ್ಯರಾಗಿಯೂ ಗುರುತಿಸಿಕೊಂಡಿದ್ದರು. ಈ ವೃತ್ತಿಗಳನ್ನು ದಾಟಿ ಅವರು ತಮ್ಮ ತೋಳ್ಬಲ ಮತ್ತು ಶ್ರಮ ಸಂಸ್ಕೃತಿಯ ಬಲದಿಂದ ಕೃಷಿ ಚಟುವಟಿಕೆಗೆ

ಪಾಲು ಪಡೆಯಲು ಯತ್ನಿಸಿದಾಗ ಎದುರಾದ ಪ್ರತಿರೋಧವೂ ಬಹಳ ಮುಖ್ಯ ಸಾಮಾಜಿಕ ಬೆಳವಣಿಗೆಯಾಗಿದೆ .ಕೋಟಿ –ಚೆನ್ನಯರ ತಾಯಿ ಬ್ರಾಹ್ಮಣ ಕನ್ಯೆಯಾಗಿದ್ದು, ಋತುಮತಿಯಾಗುವ ಮೊದಲು ವಿವಾಹಿತಳಾಗದ್ದರಿಂದ ಆಕೆಯನ್ನು ಕಣ್ಣಿಗೆ ಬಟ್ಟೆ ಕಟ್ಟಿ ಕಾಡಿಗೆ ಬಿಟ್ಟಿದ್ದರು. ರಜಸ್ವಲೆಯಾದ ಹೆಣ್ಣಿನ ರಕ್ತ ಭೂಮಿಗೆ ಬಿದ್ದರೆ ಶಾಪ ಎಂಬ ನಂಬಿಕೆಯ ಪಿತೃ ಪ್ರಧಾನ ವ್ಯವಸ್ಥೆಯಲ್ಲಿ ಹೆಣ್ಣಿನ ಫಲವಂತಿಕೆಯನ್ನು ನಿರಾಕರಿಸಲಾಗಿತ್ತು. ಆಕೆಯನ್ನು ಮೂರ್ತೆ ಕೆಲಸದ ಸಾಯನ ಬೈದ್ಯ ತಂದು ಪೋಷಿಸಲು ತನ್ನ ಒಡೆಯನಾದ ಪೆರುಮಲೆ ಬಲ್ಲಾಳನಿಂದ ಅನುಮತಿ ಪಡೆದು ಕರೆತಂದು ಕಾಂತಣ್ಣ ಬೈದ್ಯನಿಗೆ ಮದುವೆ ಮಾಡಿಕೊಟ್ಟನು. ತನ್ನ ಅಣ್ಣನಿಂದ ಕಲಿತ ನಾಟಿ ಮದ್ದಿನ ವಿದ್ಯೆಯನ್ನು ಅವಳು ಮುಂದುವರಿಸುತ್ತಾಳೆ. ಒಂದು ಹೆಣ್ಣು ಮಗುವನ್ನು ಆಕೆ ಹೆತ್ತಳು ಅವಳನ್ನು ಏಳನೆ ವರ್ಷದಲ್ಲಿ ಪಯ್ಯ ಬೈದ್ಯನಿಗೆ ಮದುವೆ ಮಾಡಿಕೊಡಲಾಗುತ್ತದೆ.

ಬೇಟೆಯಾದ ಬೋಂಟೆ ಮಾರಿಗೆ ಹೋದ ಪೆರ್ಮಲೆ ಬಲ್ಲಾಳರಿಗೆ ಕಾಲಿಗೆ ಒಂದು ನಂಜಿನ ಮುಳ್ಳು ಚುಚ್ಚಿ ಸಾಯನ ಬೈದ್ಯನಿಗೆ ಕರೆ ಬರಲು, ಕಣ್ಣು ಕಾಣಿಸುವುದಿಲ್ಲವೆಂದು ದೇಯಿ ಬೈದಿತಿಯನ್ನು ಕಳುಹಿಸುತ್ತಾರೆ. ತುಂಬು ಬಸಿರಿ ದೇಯಿ ಬೈದಿತಿ ವಿನಂತಿಯ ಮೇರೆಗೆ ಬೂಡಿಗೆ ಬರುತ್ತಾಳೆ. ಅವನ ಕಾಲಿನಿಂದ ಮುಳ್ಳು ಕಿತ್ತು ಗುಣಪಡಿಸಿದಾಗ , ಮತ್ಸರದಿಂದ ಬಿರ್ಮಣ ಬೈದ್ಯ ಆಕೆಯನ್ನು ಮಾಟ ಮಾಡಿಸಿ ಕೊಲ್ಲುತ್ತಾನೆ. ಆಕೆ ಹೆತ್ತ ಕೋಟಿ – ಚೆನ್ನಯರೆಂಬ ಅವಳಿ ಮಕ್ಕಳನ್ನು ಪೆರ್ಮಲೆ ಬಲ್ಲಾಳನು ಪೋಷಿಸುತ್ತಾನೆ. ಬೆಳೆಯುತ್ತ ಬಂದ ಯುವಕರಿಗೆ ಬಲ್ಲಾಳ ನೀಡಿದ ಆಶ್ವಾಸನೆಯಂತೆ ದುಡಿದು ತಿನ್ನುವ ಅವರಿಗೆ "ವಿದ್ಯೆ ಬುದ್ಧಿ ತಿಳಿದರೆ ದುಡಿಯಲು ಕಂಬಳದ ಗದ್ದೆ ಕೊಡುತ್ತೇನೆ" ಎಂದಿದ್ದನ್ನು ನೆನಪಿಸಿ ಅವನಿಂದ ಗದ್ದೆಯನ್ನು ಕೋಟಿ ಚೆನ್ನಯರ ಸಾಗುವಳಿಗೆಂದು ಪೆರುಮಲೆ ಬಲ್ಲಾಳನಿಂದ ಕೇಳಿ ಪಡೆಯುತ್ತಾರೆ.. ಪ್ರಧಾನಿ ಬುದ್ಯಂತನಿಗೆ ಮಕ್ಕಳಾಟದಲ್ಲಿ ಹುಟ್ಟಿಕೊಂಡ ಹಗೆತನವು ಮುಂದುವರಿಯಲು, ಬುದ್ಯಂತನ ಗದ್ದೆಯ ಕೆಳಗಿನ ಗದ್ದೆಯನ್ನು ಬಲ್ಲಾಳನು ಇವರಿಗೆ ಸಾಗುವಳಿಗೆ ಕೊಟ್ಟನು. ಸಂಘರ್ಷ ಇಲ್ಲಿಂದ ಆರಂಭವಾಗುತ್ತದೆ. ಮೇಲಿನ ಗದ್ದೆಯು ಬುದ್ಯಂತನದಾಗಿದ್ದು ಕೋಟಿ– ಚೆನ್ನಯರದ್ದು ಅಕ್ಕ ಪಕ್ಕದ ಗದ್ದೆಗಳಾದ ಕಾರಣ ವೈ ಮನಸ್ಸು ಹೆಚ್ಚುತ್ತದೆ.

ತನಗಿಂತ ಕೆಳಜಾತಿಯವನೊಬ್ಬ ಗದ್ದೆ ಸಾಗುವಳಿ ಮಾಡುವ ಸಾಮರ್ಥ್ಯ ಹೊಂದಿದಾಗ ಜಮೀನ್ದಾರಿ ಬುದ್ಯಂತನ ವಿರೋಧ ಸರಳವಾದುದಲ್ಲ. ಕೃಷಿ ಸಂಸ್ಕೃತಿ ವಿಸ್ತರಣೆಗೊಂಡು ಗಣಗಳು ಗ್ರಾಮಗಳಾಗಿ ಆ ಗ್ರಾಮಗಳಲ್ಲಿ ಪಾಳೇಗಾರಿಕೆ ಮತ್ತು ಊಳಿಗಮಾನ್ಯ ಪದ್ಧತಿಯು ಚಾಲ್ತಿಯಲ್ಲಿತ್ತು. ಕೃಷಿ ಅನ್ವೇಷಣೆ, ವಿಸ್ತರಣೆಯಾಗಿ ನಿರ್ವಹಣೆಯ ಹಂತಕ್ಕೆ ಬಂದ ಹಂತದಲ್ಲಿ ಕೃಷಿ ಕಾರ್ಯಕ್ಕೆ ಹೆಚ್ಚಿನ ಸಂಖ್ಯೆಯ ಕೂಲಿಯಾಳುಗಳ ಅವಶ್ಯಕತೆಯಿತ್ತು. ತಮ್ಮ ಗದ್ದೆಗಳಲ್ಲಿ ಆಳುಗಳಾಗಿ ದುಡಿಯದೆ ತಾವೇ ಕೃಷಿ ಮಾಡುತ್ತೇವೆ ಎನ್ನುವ ಅವಕಾಶವನ್ನು ಬೇಡಿದುದು ಪಾಳೇಗಾರಿಕೆಗೆ ನೀಡಿದ ಮೊದಲ ಸಡ್ಡು. ಅದಕ್ಕೆ ಪ್ರತಿಯಾಗಿ ತಮ್ಮ ಕೃಷಿ ಕಾರ್ಯಗಳನ್ನು ವಿಸ್ತರಣೆ ಮಾಡಿಕೊಂಡದ್ದು ಇನ್ನೊಂದು ರೀತಿಯಲ್ಲಿ ಉಳ್ಳವರಿಗೆ ಸವಾಲಾಯಿತು. ಗದ್ದೆಯ ಕೆಲಸ ವಿವರಗಳು, ಕೆಲಸದಾಳುಗಳಿಗೆ ಅಳೆಯುವ 'ಪಡಿಯರಿ'ಯ ವಿವರಗಳು ಪಾಡ್ದನದ ಪಠ್ಯದಲ್ಲಿ ಬರುತ್ತದೆ.

ಕೋಟಿ –ಚೆನ್ನಯರು ಬಿತ್ತಿದ ಗದ್ದೆಯಲ್ಲಿ ಸೂಜಿ ಮೊನೆಯಂತೆ ಚಿಗುರಿದ ಭತ್ತದ ಸಸಿಗಳು ನಾಶವಾಗುವಂತೆ–ಮಳೆನೀರನ್ನು ತುಂಬಿಸಿ ಬೆಳೆ ಹಾಳು ಮಾಡುತ್ತಾನೆ ಬುದ್ಯಂತ, ಇದು ಸತ್ಯದ ಬೆಳೆ ಇದನ್ನೇಕೆ ನಾಶ ಪಡಿಸಿದಿರಿ ಎನ್ನುವ ಮಾತಿಗೆ ಅವನಲ್ಲಿ ಉತ್ತರವಿಲ್ಲ. ಕಂಬಳ ನಡೆಸುವುದರ ಬಗ್ಗೆ ಹುಟ್ಟಿಕೊಂಡ ವಿವಾದವು ಇದೇ ಬಗೆಯದು. ಕಂಬಳ ಸಂಪತ್ತು ಮತ್ತು ಭೂಮಿಯ ಒಡೆತನದ ಪ್ರತೀಕವಾಗಿ ಆಚರಿಸುವ ಆಚರಣೆ, ಕಂಬಳ ನಡೆಸಲು ಬುದ್ಯಂತ ಶುಭದಿನ ಕೇಳಲು ತೆರಳಿ ಬಲ್ಲಾಯನಲ್ಲಿ ಹೇಳುವ ಸುಳ್ಳು, ಅಮವಾಸ್ಯೆಯಂದು ಅವರಿಗೆ ಶುಭದಿನವೆಂದು ತಿಳಿಸಿ ಅವಮಾನ ಮಾಡುವ ಪ್ರಸಂಗ, ಪ್ರತಿಯಾಗಿ ಕೋಟಿ ಚೆನ್ನಯರು ಒಂದೇ ದಿನ ನಡೆಸಿದ ಕಂಬಳಕ್ಕೆ ಕೋಟಿ ಚೆನ್ನಯರು ಗದ್ದೆಯಲ್ಲಿ ತಮ್ಮ ಮತ್ತು ಜನಬಲ, ಬೆಂಬಲ ಧನಬಲದ ಪ್ರಭಾವವನ್ನು ವ್ಯಕ್ತಪಡಿಸುತ್ತಾರೆ. ಹೆಜ್ಜೆ ಹೆಜ್ಜೆಗೂ ಕೋಟಿ–ಚೆನ್ನಯರನ್ನು ಹೀಯಾಳಿಸುವ ಅವಕಾಶವನ್ನು ಆತ ಬಿಟ್ಟುಕೊಡುವುದಿಲ್ಲ. ಸುಗ್ಗಿಯ ಬೆಳೆಗೆ ನಡೆಸುವ ಕಂಬಳದ ಆಚರಣೆಯ ಸಂದರ್ಭದಲ್ಲಿ ಉಂಟಾಗುವ ಸಂಘರ್ಷ ಮತ್ತು ಕೋಟಿ ಚೆನ್ನಯರು ಬುದ್ಯಂತನ ಗದ್ದೆಗೆ ಇಳಿಸಿದ ಕೋಣವನ್ನು ಕೊಂಬು ಹಿಡಿದು ನಿಲ್ಲಿಸಿದಾಗ ಅವರಾಡುವ ಮಾತುಗಳು 'ನಿಮಗೆ ಹಗೆಯಿದ್ದರೆ ನಮ್ಮಲ್ಲಿ ತೀರಿಸಿಕೊಳ್ಳಿ ಇವು ಪಡುಮಲೆ ರಾಜ್ಯದಿಂದ ಕಾಡಿ ಬೇಡಿ ತಂದವುಗಳು. ಕೇಳಿಕೆಯಂತೆ ತಂದ ಕೋಣಗಳು ವಿಧೇಯರಾದ ಆಳುಗಳು" ಎಂದು ನುಡಿಯುತ್ತಾರೆ. ಪ್ರಾಣಿ ಜಗತ್ತನ್ನು ಕೃಷಿಕರಾದ ಕೋಟಿ– ಚೆನ್ನಯರು ಗೌರವಿಸುತ್ತ ಸಂರಕ್ಷಿಸುವದರೊಂದಿಗೆ ವ್ಯವಸಾಯ ಬರಿಯ ಹೊಟ್ಟೆ ಬಟ್ಟೆಯ ಪ್ರಶ್ನೆಯಾಗದೆ ಬದುಕಿನ ಭಾಗವೇ ಆಗಿದೆ.

ಕಾಂತಬಾರೆ ಮತ್ತು ಬುದಬಾರೆ ಪಾಡ್ದನದಲ್ಲಿ ಈ ಸಾಂಸ್ಕೃತಿಕ ವೀರರು ಬಿಲ್ಲವರಾಗಿದ್ದು ಜೈನ ಸಾಮಂತ ಅರಸರ ಆಸರೆಗೆ ಸಿಕ್ಕು ಚೌಟ ಅರಸನೊಂದಿಗೆ ಹೋರಾಡಿ ಸಾವನ್ನಪ್ಪಿದ ವಿವರಗಳಿವೆ. ಉಳ್ಳೂರು ಗುತ್ತಿನ ರಾಣಿ ಉಳ್ಳು ಪೆರ್ಗಡ್ತಿಗೆ ಸುರತ್ಕಲ್ ಕಟ್ಟೆಯಲ್ಲಿ ಅನಾಥಳಾಗಿ ಸಿಕ್ಕ ಬಿಲ್ಲವರ ಹುಡುಗಿಯನ್ನು ಮನೆಗೆ ಕರೆತಂದು ಬಿಲ್ಲವರ ಹುಡುಗನಿಗೆ ಮದುವೆ ಮಾಡಿ ಕೊಡುತ್ತಾರೆ. ಅರಮನೆಯ ಬಾವಿಯ ನೀರು ಕುಡಿದು ಮಾಯಕದ ಗರ್ಭ ಧರಿಸಿ ಅವಳಿ ಮಕ್ಕಳನ್ನು ಪಡೆದು ಆಕೆ ಸಾಯುತ್ತಾಳೆ. ಅತಿಮಾನುಷ ವ್ಯಕ್ತಿತ್ವದವರಾಗುವ ಈ ಯುವಕರು ಮುಲ್ಕಿ ಸೀಮೆ ಅರಸರ ಬೆಂಬಲಕ್ಕೆ ನಿಂತು ಅವರಿಗಾಗಿ ಯುದ್ಧದಲ್ಲಿ ಹೋರಾಡಿದರು. ಮುಲ್ಕಿಯ ಅರಸು ಕಂಬಳವನ್ನು ಸೀಮಂತೂರಿಗೆ ವಿಸ್ತರಿಸಿ ಅಲ್ಲಿಯೂ ಕಂಬಳ ನಡೆಸಿದರು. ಬರಿಯ ಯುದ್ಧ ವೀರರಲ್ಲ, ಕೃಷಿಕರೂ ಆಗಿದ್ದರು, ಇವರ ಬಗೆಗಿರುವ ಐತಿಹ್ಯವನ್ನು ಗಮನಿಸಿದರೆ ರಾತ್ರಿ–ಬೆಳಗಾಗುವುದರೊಳಗೆ ಗುತ್ತಿನ ಮನೆ ಮುಂದಿನ ಬಾಕಿಮಾರು ಗದ್ದೆಯನ್ನು ಉತ್ತು ಗದ್ದೆ ನಾಟಿ ಮಾಡಿದ್ದರು. ವಿರೋಧದ ನಡುವೆಯೂ ಗದ್ದೆ ಸಾಗುವಳಿ ಮಾಡಿದ್ದಲ್ಲದೆ ನೀರು ಹರಿದು ಹೋಗುವ ದೊಡ್ಡ ಕಣಿಯೊಂದನ್ನು ತೆಗೆಯುತ್ತಾರೆ ಎಂಬ ಉಲ್ಲೇಖವೂ ಇದೆ.

ಕಂಬಳವನ್ನು ವಿಜೃಂಭಣೆಯಿಂದ ನಡೆಸುವ ಇವರು ಪಂಥಾಹ್ವಾನದಂತೆ ಗದ್ದೆ ನಾಟಿ ಮಾಡಿ ಕೋಳಿಯಾಗಿ ಕೂಗಿದ ಬಬ್ಬುವಿನ ದನಿ ಕೇಳಿ ತಾವೇ ತೆರೆದ ಬಾವಿಯಲ್ಲಿ ಮಾಯಕವಾದರು ಎಂಬ ಉಲ್ಲೇಖವಿದೆ. ಬಿಲ್ಲವನೊಬ್ಬ ವೃತ್ತಿ ಪಲ್ಲಟ ಮಾಡಿಕೊಂಡಾಗ ಎದುರಾದ ವಿರೋಧವಿದು.

ಕರಂಗೋಲು ಕುಣಿತದ ಹಾಡು ಮತ್ತು ಕೆಲವು ಕಬಿತೆಗಳಲ್ಲಿಯೂ ಕೃಷಿಯ ವರ್ಣನೆ ವಿವರಣೆ ಬರುತ್ತದೆ. ಗದ್ದೆ ಸಾಗುವಳಿಯಲ್ಲಿ ನೇಜಿ ನೆಡುವಾಗ ಹಾಡುವ ಗೀತೆಗಳು ಕಬಿತೆಗಳು, ಹೆಂಗಸರು ಮಾತ್ರ ನಾಟಿ ಮಾಡುವುದು ಕರಾವಳಿಯಲ್ಲಿ ಸಾಮಾನ್ಯವಾಗಿದ್ದು ಈ ಸಂದರ್ಭ ಕೃಷಿಯ ವಿವರಗಳೊಂದಿಗೆ ಸ್ವರೂಪ ವೈವಿಧ್ಯವನ್ನು ನೀಡುತ್ತವೆ.

**೪.೧.೪ ಕೃಷಿ ಸಂಸ್ಕೃತಿ ಮತ್ತು ವೈಯಕ್ತಿಕ ಬದುಕಿನ ಪಲ್ಲಟಗಳು**

ಕೃಷಿ ಅನ್ವೇಷಣೆಗೊಂಡು ಹಂತದಿಂದ ವಿಸ್ತರಣೆಗೊಳ್ಳುತ್ತ ನಿರ್ವಹಣೆಯ ಹೊಣೆ ಗಂಡಿನ ಹೆಗಲಿಗೆ ಬಂದಂತೆಲ್ಲ ಜಮೀನ್ದಾರಿ ವ್ಯವಸ್ಥೆ ಹುಟ್ಟಿಕೊಂಡಿತು. ಹಸಿವು ಮತ್ತು ಆಹಾರದ ಪ್ರಶ್ನೆಯಾಗಿದ್ದುದು ಆದಾಯದ ಪರಿಕಲ್ಪನೆಯಲ್ಲಿ ಸ್ಥಿತ್ಯಂತರಗೊಂಡಾಗ ಮೊದಲಿಗೆ ಕೃಷಿಗೆ ಪೂರಕವಾದ ಆಯಗಾರಿಕೆಯನ್ನು ಮಾಡುತ್ತಿದ್ದ ಜನರು ತಮ್ಮ ವೃತ್ತಿಯನ್ನೇ ಪಲ್ಲಟಗೊಳಿಸಿದರು. ಹೀಗೆ ವೃತ್ತಿ ಪಲ್ಲಟಗೊಂಡುದರಿಂದ ವೈಯಕ್ತಿಕ ಬದುಕಿನಲ್ಲೂ ಪಲ್ಲಟಗಳಾದವು. ಜನಪದ ಸಾಹಿತ್ಯದಲ್ಲಿರುವ ಉಲ್ಲೇಖವನ್ನೇ ಗಮನಿಸಿದರೆ ಕೋಟಿ ಚೆನ್ನಯ ಪಾಡ್ದನದಲ್ಲಿ ಬ್ರಾಹ್ಮಣಳಾದವಳು ಬೈದ್ಯೆಳಾದುದು, ಅವಳ ಮಕ್ಕಳು ಮೂರ್ತೆ, ವೈದ್ಯ ಮಾಡದೆ ಕೃಷಿಕರಾದ್ದರಿಂದ ವೈಯಕ್ತಿಕವಾಗಿ ಅವರ ಬದುಕಿನಲ್ಲಿ ಆದ ಸ್ಥಿತ್ಯಂತರಗಳೂ ಬಹಳ ಮುಖ್ಯ. ಬಹಳ ವಿರೋಧವನ್ನು ಎದುರಿಸಿಯೂ ಅವರು ಕೃಷಿಯೊಂದಿಗೆ ಸೆಣಸಾಡುತ್ತಲೇ ತಮ್ಮ ಭೂಮಿಯ ಒಡೆತನವನ್ನು ಸಾಬೀತು ಪಡಿಸಲು ಪ್ರಯತ್ನಿಸಿದ್ದರು. ಯಾಕೆಂದರೆ ಕೃಷಿಯಲ್ಲಿ ಕೂಲಿ ಕಾರ್ಮಿಕ ವರ್ಗವೊಂದಿತ್ತು. ಹಾಗೆ ಕಾರ್ಮಿಕರಾಗದೆ ತಾವೇ ಗದ್ದೆ ಸಾಗುವಳಿಯನ್ನು ಕಲಿಯುವುದು ಮತ್ತು ಅದರಲ್ಲಿ ಸಮರ್ಥರಾಗುವುದರಿಂದ ಅವರ ಸಾಮಾಜಿಕ ಆರ್ಥಿಕ ಬದುಕಿಗೆ ಬಲ ಬಂದಿತ್ತು. ರಾಜಕೀಯವಾಗಿಯೂ ಬಲ್ಲಾಳ ಬುದ್ಯಂತರಲ್ಲಿ ಸೆಣಸಾಡಲು ಸವಾಲೊಡ್ಡಲು ಸಾಧ್ಯವಾಯಿತು. ಭೂಮಿಯ ಪರಿಕಲ್ಪನೆಯನ್ನು ಈ ಹಿನ್ನೆಲೆಯಲ್ಲಿಯೇ ನಾವು ಗ್ರಹಿಸಲು ಸಾಧ್ಯ. ಕಾಂತಾಬಾರೆ ಬುದಾಬಾರೆ ಪಾಡ್ದನವೂ ಇದಕ್ಕೆ ಸಾಕ್ಷಿಯಾಗಿದೆ. ಇಂದಿಗೂ ಕರಾವಳಿಯಲ್ಲಿರುವ ಬಂಟ –ಬಿಲ್ಲವರ ಮಧ್ಯದ ಸ್ಪರ್ಧೆ ಸಂಘರ್ಷ ಗಮನಿಸಬಹುದು.

**೪.೧.೫ ಕಬಿತ**

ತುಳು ಜನಪದ ಸಾಹಿತ್ಯದಲ್ಲಿ ಕಬಿತಗಳು ಶ್ರಮದ ಆಯಾಸವನ್ನು ಪರಿಹರಿಸುವಕೆಲಸದ ಹಾಡುಗಳೆಂದೇ ಚಿರಪರಿಚಿತವಾಗಿದೆ. ಒಂದು ವಿಶಿಷ್ಟ ರೀತಿಯ ಜನಪ್ರಿಯ ಹಾಡುಗಳಾದ ಕಬಿತಗಳನ್ನು ಹಾಡುವವರು ಹೆಚ್ಚಾಗಿ ಹೆಣ್ಣು ಮಕ್ಕಳಾಗಿರುತ್ತಾರೆ. ಸಾಮಾನ್ಯವಾಗಿ ಬೈಲು ಗದ್ದೆಗಳಲ್ಲಿ ನೇಜಿ ನೆಡುವಾಗ ಈ ಕಬಿತೆಗಳನ್ನು ಹಾಡುತ್ತಾರೆ. ಒಬ್ಬಾಕೆ ಕಬಿತ ಒಂದು ಸಾಲನ್ನು ಹಾಡಿದ ಮೇಲೆ ಪ್ರತಿಬಾರಿಯೂ ಪಲ್ಲವಿಯನ್ನು ಹಾಡುವುದು ಕಬಿತೆಯ ಕ್ರಮ. ಸಣ್ಣ ಕಬಿತೆಗಳಿಂದ ಬಹಳ ದೀರ್ಘವಾದ ಕಬಿತಗಳು ಪಾಠಾಂತರಗಳೂ ಸಾಕಷ್ಟಿವೆ. ಕಬಿತೆಗಳಲ್ಲಿ ಕತೆ ಇರುವುದು ಬಹಳ ಅಪರೂಪ. ಕೆಲವು ಕಬಿತೆಗಳು ಮಾತ್ರ ಕೃಷಿ ಚಟುವಟಿಕೆಯನ್ನು ವಿವರಣಾತ್ಮಕವಾಗಿ ತುಳುವಿನಲ್ಲಿ ಬಹಳ ಸೂಕ್ಷ್ಮ ಎಳೆಗಳೊಂದಿಗೆ ನಿರೂಪಿಸುತ್ತಾರೆ. ಭತ್ತದ ಬೆಳೆ ಬೆಳೆಯುವ ವಿವಿಧ ಹಂತಗಳ ನಿರೂಪಣೆ ಬೇರೆ ಬೇರೆ ಬೆಳೆಗಳ ಹೆಸರು ಬರುತ್ತದೆ. ತುಳುವಲ್ಲಿ 'ಬೇಲೆ' ಎಂದರೆ ಕೆಲಸ ಎಂದು ಅರ್ಥ. 'ಓ ಬೇಲೆ" ತುಳುವಿನ ಅತ್ಯಂತ ಜನಪ್ರಿಯವಾದ ಕಬಿತೆ. ಹಲವಾರು ಭಿನ್ನ

ಪಾಠಗಳು ಮತ್ತು ಎಲ್ಲೆಡೆ ಲಭ್ಯವಾಗುವ ಕವಿತೆ ಇದಾಗಿದೆ. ಇದರ ವಸ್ತುವಿನಲ್ಲಿ ಅಂತಹ ವ್ಯತ್ಯಾಸವಿಲ್ಲ. ವಿವರಣೆಯಲ್ಲಿ ಮಾತ್ರ ವ್ಯತ್ಯಾಸವಿದೆ. ಸಾಗುವಳಿಗೆ ಭೂಮಿಯನ್ನು ಸಿದ್ಧಗೊಳಿಸುವ ಹಂತದಿಂದ ಹಿಡಿದು ಕಟಾವು ಒಕ್ಕಣೆಯ ಹಂತದ ವಿವರಣೆಗಳು ಇಲ್ಲಿ ಲಭ್ಯವಾಗುತ್ತದೆ.

**ಓ ಬೇಲೆ:** ಕಂಬಳ ಗದ್ದೆಗೆ ಸುಗ್ಗಿ ಬೆಳೆಯಾಗಿ ಅತಿಕಾರ ಬೆಳೆಯನ್ನು ಬೆಳೆಯಬೇಕು. ಬೇಗ ನೇಜಿ ಹಾಕಿ, ಹಟ್ಟಿ ಗೊಬ್ಬರದೊಂದಿಗೆ ಉಳುಮೆ ಮಾಡಬೇಕು. ಕೋಣಗಳನ್ನು ಹೇಗೆ ಪೋಷಿಸಬೇಕು ಎನ್ನುವ ವಿವರಣೆಯೂ ಇದೆ. ಅಕ್ಕಚ್ಚು, ಬೇಯಿಸಿದ ಭತ್ತ ಜಾನುವಾರುಗಳಿಗೆ ಕೊಡಬೇಕು ಎನ್ನುವ ವಿವರಣೆಯೊಂದಿಗೆ ಬಿತ್ತಲು ಹತ್ತು ಹನ್ನೆರಡು ಮುಡಿ ಭತ್ತವನ್ನು ಮನೆಯ ಅಟ್ಟದಿಂದ ಕೆಳಗಿಳಿಸುತ್ತಾರೆ. ಬಿತ್ತಿದ ಬೀಜಕ್ಕೆ ಪ್ರಕೃತಿಯ ಇತರ ಜೀವಿಗಳಿಂದ ತೊಂದರೆಯಾಗುವ ವಿವರಣೆಯೂ ಬಂದಿದೆ. ಬಿತ್ತಿದ ನೇಜಿಯನ್ನು ಕಾಡಿನ ಗುಬ್ಬಿ ಹಕ್ಕಿಗಳು ಹೆಕ್ಕಿ ತಿನ್ನುತ್ತವೆ. 'ಅತಿಕಾರ' ಬೆಳೆಯ ಮೊಳಕೆಯನ್ನು ಬಿದಿರಿನ ಮೊಳಕೆಗೆ ಹೋಲಿಸಲಾಗಿದೆ. ಬಿದಿರಿನ ಒಂದು ಮೊಳಕೆಯಿಂದ ನೂರಾರು ಮೊಳಕೆಯ ಬಿದಿರುಗಳು ಹುಟ್ಟುತ್ತವೆ. ಸಮೃದ್ಧಿಯ ಸಂಕೇತವಾಗಿ ಬಿದಿರಿನ ಚಿಗುರನ್ನು ಹೂಳುತ್ತಾರೆ.

ಕೆಲಸದಾಳು ನೇಜಿ ನೆಡಲು ಆಳುಗಳನ್ನು ಕರೆಯಲು ಹೋಗುವ ವಿವರಣೆ, ಅವರಿಬ್ಬರ ಮಧ್ಯೆ ಇದ್ದ ಒಡನಾಟದ ಆತ್ಮೀಯತೆ, ಒಡೆಯನ ವೇಷ ಬಟ್ಟೆ ಬರೆಗಳನ್ನು ಧಣಿಗೆ ಕೊಟ್ಟು ಆತ ಕೆಲಸದಾಳುಗಳನ್ನು ಕರೆಯಲು ಅಪ್ಪಣೆ ಮಾಡುವ ವಿವರಣೆಗಳಿವೆ. ಬೈರರ ಹೆಣ್ಣು ಮಕ್ಕಳು ಕೆಲಸಕ್ಕೆ ಕರೆದಾಗ 'ಬುಟ್ಟಿ' ಕೆಲಸಕ್ಕೆ ಬರಲಾರೆವು ಎನ್ನುತ್ತಾರೆ. (ನಟ್ಟೇತ ಬೇಲೆಗ್ ಬಿಟ್ಟೇತ ಬೇಲೆಗ್ ಎಂಕುಳು ಬರಯೊ) (ನಾಟಿ ಕೆಲಸಕ್ಕೆ ಜೀತದ ದುಡಿಮೆಗೆ ನಾವು ಬರಲಾರೆವು) (ಬುಟ್ಟಿಯೆಂದರೆ ಕೂಲಿಯಿಲ್ಲದ ದುಡಿಮೆ) ಊಳಿಗ ಮಾನ್ಯತೆ ಮತ್ತು ಜೀತವನ್ನು ಕೃಷಿಯಲ್ಲಿ ಅಳವಡಿಸಿಕೊಂಡ ರೀತಿ ಮತ್ತು ಅದನ್ನು ಹೆಣ್ಣು ಮಕ್ಕಳು ನಿರಾಕರಿಸಿದಾಗ ಬಲತ್ಕಾರದಿಂದ ಅವರನ್ನು ಕೆಲಸಕ್ಕೆ ಕರೆದೊಯ್ಯಲಾಗುತ್ತದೆ. ಗಂಡಂದಿರು ಮಣ್ಣಿನ ಕೆಲಸಕ್ಕೆ ಹೋಗಿದ್ದಾರೆ ಅಲ್ಲಿ ಇಲ್ಲಿಗಿಂತ ಹೆಚ್ಚಿನ ಕೂಲಿ ಸಿಗುತ್ತದೆ ಎನ್ನುವಲ್ಲಿ ದುಡಿಮೆಯ ನಿರಾಕರಣೆ ಮತ್ತು ಆಯ್ಕೆ ಇದ್ದಾಗಲೂ ಅವರ ಮೇಲೆ ಒತ್ತಡ ಹೇರಲಾಗುತ್ತದೆ. ಒತ್ತಾಯ ಪೂರ್ವಕವಾಗಿ ಕರೆತಂದ ಹೆಣ್ಣಾಳುಗಳಲ್ಲಿ ಮೂವತ್ತು ಮಂದಿ ಕರಿಯರು, ಮೂವತ್ತು ಮಂದಿ ಬಿಳಿಯರು, ಇವರನ್ನು ತನ್ನ ಚಟಕ್ಕಾಗಿ ನೀರಡಿಕೆಗೆ ಕಳ್ಳು ಕುಡಿದೆ, ಬಾಯಿ ತುರಿಕೆಗೆ ಎಲೆ ಅಡಿಕೆ ಜಗಿಯಲು ತಡವರಿಸುತ್ತಾನೆ ಒಡೆಯನ ವೇಷ ತೊಟ್ಟ ಹೊಲೆಯ. ವೇಷ ಧರಿಸಿದ ತಕ್ಷಣಕ್ಕೆ ಅವನ ಜಾಯಮಾನದಂತೆ ವರ್ತಿಸುವ ಉಳ್ಳಾಯ ಕೆಲಸ ಬೇಗನೇ ಮುಗಿಯಬೇಕೆಂದು ಹಾರಾಡಿದ್ದರಿಂದ ಅವನ ಪತ್ನಿ ಗರ್ಭವತಿಯಾಗುತ್ತಾಳೆ. ಹೆಣ್ಣಿನ ಫಲವಂತಿಕೆಯನ್ನು ಭೂಮಿಯ ಫಲವಂತಿಕೆಯೊಂದಿಗೆ ಇಲ್ಲಿ ಸಮೀಕರಿಸಲಾಗಿದೆ. ಹೆಣ್ಣಿನ ದುಡಿಮೆ ಮತ್ತು ವಿರಾಮಗಳನ್ನು ಅದೇ ಅರ್ಥದಲ್ಲಿ ಪರಿಭಾವಿಸಿದ ಜನರು ಅವಳ ದುಡಿಮೆಯನ್ನು ನಿರಾಕರಿಸಲಿಲ್ಲ. ಪಾಳೇಗಾರಿಕೆ ವ್ಯವಸ್ಥೆಯ ಭಾಗವಾಗಿ ಕೃಷಿ ವಿಸ್ತರಣೆಯಾದ ಅಂಶದೊಂದಿಗೆ ಘಟ್ಟದ ಮೇಲಿನಿಂದ ಕೂಲಿಯಾಳುಗಳು ಕರಿಯರು ಬಿಳಿಯರು ಎಂದರೆ ಕಾಡಿನ ಬುಡಕಟ್ಟು ಸಮುದಾಯದವರನ್ನು ಕೃಷಿ ಕಾಯಕಕ್ಕೆ ಆಳುಗಳಾಗಿ ಜೀತಕ್ಕೆ ಹೇಗೆ ಬಳಸಿಕೊಳ್ಳಲಾಗಿದೆ ಎನ್ನುವ ವಿವರಣೆ ಸಿಗುತ್ತದೆ. ಕೃಷಿ ವಿಸ್ತರಣೆಯಾದ ಹಂತದ ಸ್ಥಿತ್ಯಂತರವನ್ನು ಇಲ್ಲಿ ಗುರುತಿಸಬಹುದು. ಗಂಡ

ಮಕ್ಕಳು, ಮನೆ ಮಠಗಳನ್ನು ಬಿಟ್ಟು ಬರುವ ಇವರನ್ನು ನಡೆಸಿಕೊಂಡ ಅಮಾನವೀಯತೆಯ ವರ್ಗ ಸಂಘರ್ಷಕ್ಕೂ ಇದು ಸಾಕ್ಷಿಯಾಗಿದೆ. ಮೇಲ್ನೋಟಕ್ಕೆ ದುಡಿಮೆಯ ಸಾಮರಸ್ಯದ ವಿವರಗಳಿದ್ದರೂ ಕೆಲಸ (ಬೇಲೆ) ಕ್ಕಾಗಿ ದುಡಿಸಿಕೊಂಡ ದಬ್ಬಾಳಿಕೆಯನ್ನು ಓ ಬೇಲೆ ಕಬಿತೆ ಧ್ವನಿಸುತ್ತದೆ.

ಬಾಯಮ್ಮ ಒಬ್ಬಳು ಸಂತೆಗೆ ಹೋಗಿ ತರಕಾರಿ ವ್ಯಾಪಾರ ಮಾಡಿ ಅವಳ ಹೆಸರು, ತರಕಾರಿ, ಬೆಳೆ ಮತ್ತು ತಳಿಯ ಹೆಸರುಗಳ ಸರಳ ವಿವರಣೆ ನೀಡುತ್ತದೆ. ಇಲ್ಲಿ ತುಳುನಾಡಿನಲ್ಲಿ ಬೆಳೆಯುವ ಕೃಷಿಯ ವಿವರಣೆ ಬರುತ್ತದೆ. 'ಗೋವಿಂದ ಬದನೆ' ಕಬಿತದಲ್ಲಿ ಕೃಷಿ ವ್ಯಾಪಾರ ಹಂತಕ್ಕೆ ಬಂದ ವಿವರಣೆ ಪೇಟೆಗಳಲ್ಲಿ ಮಾರಾಟ ಮಾಡುವ ವಿವರಗಳು ಮುಖ್ಯ. ಬದನೆಗಳನ್ನು ಬೇರೆ ಬೇರೆ ಪೇಟೆಗಳಲ್ಲಿ ವಿಕ್ರಮಿಸುವ ಉಲ್ಲೇಖವಿದೆ. ತರಕಾರಿ ಬೆಳೆಯೊಂದು ಆಹಾರದ ಹಂತದಿಂದ ವ್ಯಾಪಾರದ ಹಂತಕ್ಕೆ ಸಾಗಿದ್ದನ್ನು ಗಮನಿಸಬಹುದು.

ಕಂಬಳದ ವಿವರಣೆಯನ್ನು ಹೇಳುವ "ಈಜೋ ಮಂಜೊಟ್ಟಿ ಗೋಣಾ" ಕಬಿತೆಯನ್ನು ಹಾಡುತ್ತಾರೆ. ನಿರ್ದಿಷ್ಟವಾದ ಕಥೆ ಇರುವ ಕಥನ ಕವನದ ಮಾದರಿಯ ಕಬಿತೆಯನ್ನು ಗದ್ದೆಯಲ್ಲಿ ಕೋಣ ಉಳುತ್ತಿರುವಾಗ ಹಾಡಬಾರದೆಂಬ ನಿಷೇಧವಿದೆ. ಆಳ್ವರು ಬೇಸಾಯಗಾರನಾಗಿ ಚಿತ್ರಿತವಾದ ಈ ಕಬಿತ ಅವರು ನಡೆಸುವ ಕೃಷಿ ಚಟುವಟಿಕೆಯ ವಿವರ, ಸುಬ್ರಹ್ಮಣ್ಯದ ಕುಳ್ಕುಂದ ಜಾತ್ರೆಯಿಂದ ಜಾನುವಾರುಗಳನ್ನು ತರುವ ವಿವರ ಬರುತ್ತದೆ. ಜುಮಾದಿ ಭೂತಕ್ಕೆ ಹರಕೆ ಹೇಳಿ ಆಳು ಕಾಳುಗಳೊಂದಿಗೆ ಕೋಣ ತಂದು ಕಂಬಳಕ್ಕೆ ಕೋಣಗಳನ್ನು ಕೊಂಡೊಯ್ಯುವ ವಿವರ ಬರುತ್ತದೆ. ಕೆಲವೊಂದು ಭಿನ್ನ ಪಾಠಗಳಲ್ಲಿ ಭೂತಕ್ಕೆ ಹರಕೆ ಸಲ್ಲಿಸದೆ ಇದ್ದುದರಿಂದ ಕೋಣ ಕಂಬಳ ಗದ್ದೆಯಲ್ಲಿ ಮಾಯವಾಗುತ್ತದೆ ಎಂಬುದಾಗಿ ವಿವರಿಸುತ್ತವೆ. ಜಮೀನ್ದಾರಿ ರೈತರೊಬ್ಬರು ನಡೆಸುವ ಪಾಳೇಗಾರಿಕೆ ನಿರೂಪಣೆಗಳೊಂದಿಗೆ ಕಬಿತೆ ಕೊನೆಯಾಗುವುದು. ಹೋಗುವಾಗ ಬೊಳ್ಳ ಮದುಮಗ ಬರುವಾಗ ಒಡತಿ ಮದುಮಗಳು, ಬೀಜ ತೆಗೆಯದ ಕೋಣ ಫಲವಂತಿಕೆಯ ಸಂಕೇತ. ಗರ್ಭಿಣಿ ಹೆಣ್ಣು ಫಲವಂತಿಕೆಗೆ ರೂಪಕ. ಭೂಮಿಯ ಫಲವಂತಿಕೆಯನ್ನು ಸಂತತಿಯ ಮುಂದುವರಿಕೆಯನ್ನು ಬಯಸುತ್ತ ನಡೆಸುವ ಆಚರಣೆ ಇದಾಗಿದೆ. ಇದಕ್ಕೆ ಪೂರಕವಾಗಿ ಕಂಬಳವೂ ಫಲವಂತಿಕೆಯ ಸಂಕೇತವೇ ಆಗಿದೆ. ಕಂಬಳದ ಫಲವಂತಿಕೆ ಬೀಜ ತೆಗೆಯದ ಕೋಣದ ಫಲವಂತಿಕೆ, ಮನೆಯೊಡತಿಯ ಫಲವಂತಿಕೆಯನ್ನು ಸಮೀಕರಿಸಿ ಹಾಡುವ ಈ ಕಬಿತೆ ಕೃಷಿ ಭೂಮಿಯ ಫಲವಂತಿಕೆಯ ಆಶಯದಿಂದ ನಿರೂಪಣೆಗೊಂಡ ಕೃಷಿಯ ಆರಂಭದ ಹಂತದ ಪ್ರಾಚೀನತೆಯನ್ನು ನಿರೂಪಿಸುವಂತಿದೆ.

'ಇದಕ್ಕೆ ಪೂರಕವಾಗಿ ಹಾಡುವ ಇನ್ನೊಂದು ಕಬಿತ ಏದಾ ಬಲ್ಲ ಮಗ ದೂಜ ಕೆಮ್ಮೈರಾ' ಕೆಂಪು ಬಣ್ಣದ ಹೋರಿಯ ಫಲವಂತಿಕೆ, ಚೆಲುವು, ಮೈಬಣ್ಣ, ಅಂಗಾಂಗಗಳ ವರ್ಣನೆ ದೈಹಿಕ ಸಾಮರ್ಥ್ಯಗಳನ್ನು ಅತಿಶಯವಾಗಿ ಹಾಡುತ್ತ ಕಬಿತದ ಕೊನೆಯಲ್ಲಿ ಒಬ್ಬರಿಗೊಬ್ಬರು ಕೆಸರು ನೀರು ಎರಚುತ್ತಾ ಪರಸ್ಪರರನ್ನು ಅಪ್ಪಿಕೊಳ್ಳುತ್ತಾರೆ. ಇದನ್ನು 'ಪಿಲೆ ಪತ್ತುನೆ' ಎಂದು ಕರೆಯುತ್ತಾರೆ. ಮೇಲ್ನೋಟಕ್ಕೆ ತೀರಾ ತಮಾಷೆಯಾಗಿ ಕಾಣುವ ಈ ಪ್ರಕ್ರಿಯೆ ಗಂಡು ಹೆಣ್ಣಿನ ಲೈಂಗಿಕತೆಯಿಂದ ಭೂಮಿಯಲ್ಲಿ ಬೆಳೆ ಬರಲು ಸಾಧ್ಯ ಎನ್ನುವ ಆಶಯವನ್ನು ಹೊಂದಿರುವಂತಹುದು. ಕೃಷಿ ಕಾರ್ಯ ಆರಂಭದ ಹಂತ 'ತಂತ್ರ' ವಿದ್ಯೆಗೆ ಇದು ಸಾಕ್ಷಿಯಾಗಿದೆ. ತನು ಕೇಂದ್ರಿತ ತಂತ್ರದಿಂದ ಕೃಷಿ ಬೆಳೆದಿದೆ. 'ಟ್ರುವೆಲ್ ಬಾಲೆ ಬಾಲೆ ಪೊಲಿಯೇ ಕಬಿತೆ'

ಯಲ್ಲಿ ಶಿವ ಪಾರ್ವತಿಯರು ಕೃಷಿಕರಾಗಿ ತುಳುನಾಡಿನ ಪರಿಸರದಲ್ಲಿ ಬಾಳುವುದರ ವಿವರಣೆ ಇದೆ. ಸಾವಿರ ಮುಡಿ ಬೆಟ್ಟು ಗದ್ದೆ ನೂರು ಮುಡಿ ಬೈಲು ಗದ್ದೆಯ ಒಡೆಯನಾದ ಶಿವನು ಗುಡ್ಡ ಅಗೆದು ಬೆಟ್ಟು ಗದ್ದೆಗಳನ್ನು ನಿರ್ಮಾಣ ಮಾಡಿದ ವಿವರಣೆಯ ಮೂಲಕ ಕೃಷಿಯ ವಿಸ್ತರಣೆಯನ್ನು ಹೇಳುತ್ತದೆ.

ಓಯ್ಯ ಕಬಿತ ಗದ್ದೆ ಕೆಲಸ ಮುಗಿಯುವ ಹಂತದಲ್ಲಿ ಕೆಲಸದ ತೀವ್ರತೆಯನ್ನು ವೇಗವನ್ನು ಹೆಚ್ಚಿಸುವಂತೆ ಈ ಕಬಿತೆಯನ್ನು ಹಾಡಲಾಗುತ್ತದೆ. ಹತ್ತು ತಾಯಿಯ ಮಕ್ಕಳು ಒಂದೇ ತಾಯಿಯ ಮಕ್ಕಳಂತೆ ನಗುತ್ತಾ ನಲಿಯುತ್ತಾ ಮೊಟ್ಟೆ ಇಡುವ ಹೇಂಟೆ ಕೋಳಿಯಂತೆ ದನಿಯೇರಿಸಿ ಕೂಗುತ್ತಾ ನಾಟಿ ಮಾಡೋಣ ಎನ್ನುವಲ್ಲಿ ಕೃಷಿಯ ಎಲ್ಲ ಸಮುದಾಯದ ಜನರನ್ನು ಒಳಗೊಳ್ಳುವ ಕೃಷಿ ವಿಸ್ತರಣೆಯ ವಿವರವಿದೆ.

ಕಬಿತಗಳ ಅಧ್ಯಯನದಿಂದ ಕೃಷಿ ಪಲ್ಲಟದ ಹಂತಗಳನ್ನು ಅವಲೋಕಿಸಲೂ ಸಾಧ್ಯವಾಗುತ್ತದೆ. ಕೃಷಿ ಅನ್ವೇಷಣೆಗೊಂಡು ವಿಸ್ತರಣೆ, ನಿರ್ವಹಣೆಗಳನ್ನು ಹೇಳುತ್ತಾ ವ್ಯಾಪಾರದ ಸರಕಾಗಿಯೂ ಬದಲಾವಣೆಯಾಗಿರುವುದಕ್ಕೆ ಸಾಕ್ಷಿಯಿದೆ. ಮಾತ್ರವಲ್ಲ ಕರಾವಳಿಯಲ್ಲಿ ನೆಲೆ ನಿಂತ ಜನ ಸಮುದಾಯಗಳು ಕೃಷಿಯನ್ನೇ ಅವಲಂಭಿಸಿ ಬಾಳಿದ ವಿವರಗಳೂ ಇವೆ. ಅದು ವ್ಯಾಪಾರದ ಹಂತಕ್ಕೆ ಬಂದು ವ್ಯವಹಾರದ ಮೂಲವಾಗಿ ದುಡ್ಡು –ಕಾಸಾಗಿಯೂ ಪರಿವರ್ತನೆಯನ್ನು ಹೊಂದಿತು. ಬಾಯಮ್ಮಳು ನಡೆಸುವ ಬದನೆ ಮಾರಾಟ ಮತ್ತು ಅದಕ್ಕೆ ಸೇರಿಕೊಂಡ ಗೋವಿಂದ ನಾಮ ಎರಡೂ ನೇರ ಗೋವಿಂದ ಬದನೆಯ ಸಾಲಾಗುವಾಗ ಒಂದೆಡೆ ಸಂಸ್ಕೃತೀಕರಣ ಇನ್ನೊಂದೆಡೆ ವ್ಯಾಪಾರೀಕರಣ ಗೋಚರವಾಗುತ್ತದೆ. ಇಂದು ಉಡುಪಿಯ ಕೃಷ್ಣನ ಪರ್ಯಾಯಕ್ಕೆ ಮಟ್ಟುಗುಳ್ಳದ ಅನಿವಾರ್ಯತೆ ಮತ್ತು ಆ ತಳಿಯನ್ನು ಅಭಿವೃದ್ಧಿ ಪಡಿಸಿದ ರೀತಿ ಬಹಳ ಮುಖ್ಯ. ಬದನೆಯು ಆಹಾರ ಸಂಸ್ಕೃತಿಯ ಭಾಗವಾಗಿ ಮಾಂಸಹಾರಕ್ಕೆ ಪರ್ಯಾಯವಾದ ಸಸ್ಯಾಹಾರವಾಗಿಯೂ ಇಂದು ಬೆಳೆದಿದೆ.

ಬಲಿಯೇಂದ್ರ ಪಾಡ್ದನವು ತುಳುವರ 'ತುಡರ ಪರ್ಬ'ದ ಆಚರಣೆಯಾಗಿ ಉಳಿದೆಲ್ಲಾ ಪ್ರದೇಶಗಳಿಗಿಂತ ಭಿನ್ನವಾಗಿ ಆಚರಣೆಗೊಳ್ಳುತ್ತದೆ. ಭೂಮಿಯ ಒಡೆಯನಾದ ಬಲಿಯೇಂದ್ರ ಭೂಮಿಯನ್ನು ಮೋಸದಿಂದ ದಾನ ಕೇಳಿದ ವಾಮನನ ಕುತಂತ್ರಕ್ಕೆ ಬಲಿಯಾಗಿ ತನ್ನ ರಾಜ್ಯವನ್ನು ಏಕಾ ಏಕಿ ಬಿಟ್ಟು ತೆರಳುವ ಬಲಿಯನ್ನು ಇಂದಿಗೂ ಬುಡಕಟ್ಟು ಸಮುದಾಯವಾದ ಹಲಸರು ಸಾಂಸ್ಕೃತಿಕ ವೀರನನ್ನಾಗಿ ಪರಿಭಾವಿಸಿದ್ದಾರೆ. ಕರಾವಳಿಯ ಕೃಷಿಕನಾದ ಬಲಿಗೆ ವಲಸಿಗ ಸಮುದಾಯವೊಂದು ದೇಶಾಂತರ ಕಳುಹಿಸಿ, ಮೋಸದಿಂದ ಅವನಿಂದ ಭೂಮಿಯನ್ನು ಕಸಿದುಕೊಂಡ ಕಥೆ ಈ ಪಾಡ್ದನದಲ್ಲಿದೆ. ಕೃಷಿಕರ ದೊಡ್ಡ ಹಬ್ಬ ಬಲಿ ಪಾಡ್ಯದಂದು ಬಲಿಯನ್ನು ಮರಳಿ ನಾಡಿಗೆ ಬಾ ಎಂದು ಕರೆಯುವ ಬಿನ್ನಹವಿದೆ. ಪ್ರಕೃತಿಯಲ್ಲಿ ಯಾವುದು ನಡೆಯಲು ಸಾಧ್ಯವಿಲ್ಲವೋ ಅದೆಲ್ಲವೂ ಸಾಧ್ಯವಾದಾಗ ನೀನು ಮರಳಿ ಬಾ ಎಂದು ವರ್ಷ ವರ್ಷವೂ ಕೂಗಿ ಕರೆಯುತ್ತಾ ಕೃಷಿಯ ಸಲಕರಣೆ, ಹಟ್ಟಿ, ದನ ಕರು, ಕೋಣ, ಗದ್ದೆ, ಬಾವಿ, ಗೊಬ್ಬರದ ರಾಶಿ ಕೊನೆಯಲ್ಲಿ ಅಂಗಳದ ತುಳಸಿಕಟ್ಟೆಯ ಮುಂದೆ ನಿಂತು ಕೂಗಿ ಕರೆಯಲಾಗುತ್ತದೆ. ದೀಪಾವಳಿ ಆಚರಣೆಯ ವಿಧಿಗಳಲ್ಲಿ ಮುಖ್ಯವಾದರೂ ಇಲ್ಲಿ ಬಲೀಂದ್ರನ ಪಾಡ್ದನ ಮತ್ತು ಅವನನ್ನು ಕೂಗಿ ಕರೆಯುವ ಹಾಡು ಬಹಳ ಮಹತ್ವವಾದುದು. ಮೂರು ಹೆಜ್ಜೆಯಿಂದ ಮೂರು ಲೋಕವನ್ನು ಅಳೆಯುವ ಸಾಮರ್ಥ್ಯದ ಬ್ರಾಹ್ಮಣ

ವಟುವಲ್ಲಿ ಇದನ್ನು ತಿಳಿಯದ ಬಲಿ ಕೇಳುತ್ತಾನೆ ಮೂರು ಹೆಜ್ಜೆ ಭೂಮಿಯಲ್ಲಿ ಏನು ಮಾಡುತ್ತೀರಿ ಎಂದಾಗ ಅವರು ಹೀಗೆ ಹೇಳುತ್ತಾರೆ. "ಮೂರಡಿ ಜಾಗದಲ್ಲಿ ಮನೆ, ಹಟ್ಟಿ ಕಟ್ಟಿಸುತ್ತೇನೆ. ಕೆರೆ ಬಾವಿ ತೋಡಿಸುತ್ತೇನೆ, ತೆಂಗು ಬಾಳೆ ಸೂರಣಗಡ್ಡೆ, ಗೆಣಸು ನೆಡಿಸುತ್ತೇವೆ. ಗೋರು ಕಂಬಳ ಮಾಡಿಸಿ ಪೂಕರೆ ಹಾಕಿಸುತ್ತೇವೆ. ದೇವರಿಗೆ ದೇವಾಲಯ, ದೈವಗಳಿಗೆ ಮಾಡ, ಬೆರ್ಮರಿಗೆ ಸಾನ, ನಾಗನಿಗೆ ಬನ ಕಟ್ಟಿಸುತ್ತೇವೆ. ಅಂಕ ಆಯನ ಮಾಡಿಸುತ್ತೇವೆ, ಕಂಬಳ ಮಾಡಿಸಿ ಪೂಕರೆ ಹಾಕಿಸಿ ಬಂಟ ಬಲಿ ಬರಿಸುತ್ತೇವೆ." ಎಂಬ ವಿವರಣೆಗಳು ಇವೆ. ತುಳುನಾಡಿನ ಕೃಷಿ ಕಂಬಳ ಭೂತಾರಾಧನೆ ಎಲ್ಲ ವಿವರಗಳು ಬರುತ್ತವೆ.

ಏಳು ಸಮುದ್ರದ ಆಚೆಗೆ ಬಲಿಯನ್ನು ಅರಗಿನ ಒಡಕು ದೋಣಿ ಮಯಣದ ಮೋಟು ಮಾಡಿಸಿ ದೋಣಿ ತುದಿಗೆ ಗೊಂಡೆ ಹೂ ಕಟ್ಟಿ ಏಳು ಕಡಲಾಚೆ ನೂಕುತ್ತಾರೆ. ಕಣ್ಣೀರು ಸುರಿಸುತ್ತ ಹಿಂತಿರುಗಿ ನೋಡುತ್ತಿರುವ ಬಲಿಯನ್ನು ಯಾಕೆ ಹಿಂತಿರುಗಿ ನೋಡುತ್ತೀಯಾ ಎಂದು ಬಾಲ ಬ್ರಹ್ಮಚಾರಿ ಮಾಣಿ ಕೇಳಿದಾಗ ನನ್ನ ಊರು ಜನರನ್ನು ಬಿಟ್ಟು ತೆರಳಲು, (ದನಕರು,ಗದ್ದೆ, ಸೀಮೆ) ಮನಸ್ಸು ಕೇಳದು ಎನ್ನುತ್ತಾನೆ. ಕಡೆಕಣ್ಣಿನಲ್ಲಿ ಕೊಡಿದುಃಖಹರಿಸುವ ಬಲಿಗೆ ಮಾಣಿ ಹೀಗೆ ಸಮಾಧಾನಿಸುತ್ತಾನೆ.(ದೀಪಾವಳಿಯಂದು ಕೃಷಿಗೆ ಸಂಬಂಧಿಸಿದ ಎಲ್ಲ ಸಲಕರಣೆಗಳೊಂದಿಗೆ ಭತ್ತದ ರಾಶಿ, ದನಕರು ಕೋಣಗಳನ್ನು ವಿಶೇಷವಾಗಿ ಪೂಜಿಸಲಾಗುತ್ತದೆ.) ಪ್ರತಿ ವರ್ಷವೂ ಹನ್ನೆರಡು ತಿಂಗಳಲ್ಲಿ ಆಟಿಯ ಅಮವಾಸ್ಯೆ, ಸೋಣದ ಸಂಕ್ರಮಣ, ಬೊಂತೆಲ್‌ನ ಕೊಡಿಪರ್ಬಕ್ಕೆ ನೀನು ಬಂದು ನಿನ್ನ ಜನರನ್ನು ನೋಡಿ ಹರಸು ಎನ್ನುತ್ತಾನೆ. ಪ್ರತಿವರ್ಷವೂ ಹನ್ನೆರಡು ತಿಂಗಳಲ್ಲಿ ಆಟಿಯ ಅಮಾಸ್ಯೆ, ಶ್ರಾವಣ ಸಂಕ್ರಮಣ, ಕನ್ಯಾಮಾಸದ ಕೊಡಿ ಹಬ್ಬಕ್ಕೆ ನಿಮ್ಮ ಬೆಳೆ ಭಾಗ್ಯ, ಜಾನುವಾರು ನೊಗ ನೇಗಿಲು, ಹಾರೆ, ಗುದ್ದಲಿ, ಗೆರಸೆ, ಬುಟ್ಟಿ ಬೆಳ್ಳಿ ಬಂಗಾರ, ಬದುಕು ಭಾಗ್ಯಗಳನ್ನು ಹೂ ಹಿಂಗಾರದಲ್ಲಿ ಸಿಂಗರಿಸಿ, ಧೂಪ ದೀಪದಲ್ಲಿ ಮಕ್ಕಳು ಮರಿಗಳನ್ನು ಕರೆದು ಪೂಜೆ ಮಾಡಿ ಗದ್ದೆಯ ಬದು ಸವರಿ ಮನೆ ಮನೆಯಲ್ಲಿ ಹಬ್ಬ, ಗದ್ದೆ ಗದ್ದೆಯಲ್ಲಿ ದೀಪ, ಬಾಗಿಲಿನಲ್ಲಿ ಬೆಳಕು ಮರ, ಭೂತಸ್ಥಾನಗಳಲ್ಲಿ ದೀಪಾವಳಿಯ ಕಂಬ, ಏಳು ನೆನೆಯ ದೀಪದಲ್ಲಿ ಆರು ದಿನದ ಬಲಿ, ಮೂರು ದಿನದ ಪೊಲಿ ಎಂದು ಬಲೀಂದ್ರನಿಗೆ ಪೂಜೆ ಮಾಡಬೇಕೆಂದು ನಾರಾಯಣ ದೇವರು ಕಟ್ಟಪ್ಪಣೆ ಮಾಡಿದರು. (ರಾಜಶ್ರೀ :ಪುಟ ೧೫೪) ಗದ್ದೆ ಮತ್ತು ಕೃಷಿಗೆ ಸಂಬಂಧಿಸಿದ ವಸ್ತುಗಳನ್ನು ಪೂಜಿಸುವುದು 'ಪೊಲಿ'ಯನ್ನು ಸಮೃದ್ಧಿಯನ್ನು ತರುತ್ತದೆ ಎಂದು ನಂಬಿಕೆ ಇದೆ.

ಬಲೀಂದ್ರ ಪಾಡ್ದನದಲ್ಲಿ ಭೂಮಿಯ ಪರಿಕಲ್ಪನೆ ಬದಲಾದ ಪರಿಗೆ ಸಾಕ್ಷಿಯಾಗಿದೆ. ಭೂಮಿಯ ಒಡೆತನ ಮತ್ತು ಸಂಪತ್ತಿನ ಒಡೆತನವನ್ನು ಸಮೀಕರಿಸುವ ಕೃಷಿ ಗದ್ದೆಗಳನ್ನು ಬಲಾತ್ಕಾರವಾಗಿ ಕಿತ್ತುಕೊಳ್ಳುವ ಮತ್ತು ಆ ವರ್ಗವನ್ನು ಭೂರಹಿತರನ್ನಾಗಿ ಮಾಡಿ ಸಾಮಾಜಿಕ ಅಸಮಾನತೆಯ ಮೂಲಕ ನಿಗ್ರಹಿಸುವ ವಿಚಾರಗಳೂ ಪ್ರಮುಖ ಸ್ಥಾನ ಪಡೆಯುತ್ತದೆ. ಕರಾವಳಿಯಲ್ಲಿ ಇಂದಿಗೂ ದಲಿತರು ಮತ್ತು ಬುಡಕಟ್ಟು ಸಮುದಾಯದ ಮಂದಿ ಯಾಕೆ ಕೃಷಿಕರಾಗಿಲ್ಲ ಎನ್ನುವುದಕ್ಕೂ ಇದು ಸಾಕ್ಷಿಯಾಗಿದೆ.

### ೪.೨ ಗ್ರಂಥಸ್ಥ ಸಾಹಿತ್ಯ ಮತ್ತು ಕೃಷಿ ಸಂಸ್ಕೃತಿ :

ಗ್ರಂಥಸ್ಥ ಸಾಹಿತ್ಯ ಎನ್ನುವ ಈ ಶೀರ್ಷಿಕೆಯನ್ನು ಸ್ಪಷ್ಟಪಡಿಸಿಕೊಳ್ಳುವುದಾದರೆ ಅಕ್ಷರ ಪ್ರಪಂಚದಲ್ಲಿ ದಾಖಲಾದ ಸಾಹಿತ್ಯ ಎಂಬ ಅರ್ಥದಲ್ಲಿ ಮಾತ್ರ ಪರಿಭಾವಿಸಲಾಗಿದೆ. ಇಲ್ಲಿ ಶ್ರೇಷ್ಠ –ಕನಿಷ್ಠ ಎನ್ನುವ ಯಾವ ವಾಗ್ವಾದಗಳಿಗೆ ಎಡೆಕೊಡದೆ ಅಕ್ಷರ ಸಂಸ್ಕೃತಿಗೆ ತೆರೆದುಕೊಂಡವರು ತಮ್ಮನ್ನು ಹೇಗೆ ನಿರ್ವಚಿಸಿಕೊಂಡಿದ್ದಾರೆ ಎನ್ನುವುದು ಇಲ್ಲಿರುವ ಪ್ರಮುಖ ಜಿಜ್ಞಾಸೆಯಾಗಿದೆ.

ಕರಾವಳಿ ಕರ್ನಾಟಕ, ಕನ್ನಡ ಸಾಹಿತ್ಯ ಚರಿತ್ರೆಯ ಮೈಲುಗಲ್ಲುಗಳಲ್ಲಿ ಹಲವು ಪ್ರಥಮಗಳನ್ನು ತನ್ನ ತೆಕ್ಕೆಯಲ್ಲಿ ಹುಗಿದಿರಿಸಿಕೊಂಡಿದೆ. ಜನಮಾನಸದಲ್ಲಿ ಭಾಷೆ ತುಳುವಾದರೂ , ಬಹು ಭಾಷೆಗಳ ಪ್ರದೇಶವಾದ ಈ ಪರಿಸರ ಅಕ್ಷರ ಜಗತ್ತಿಗೆ ತೆರೆದುಕೊಂಡು ತನ್ನ ಸಂವೇದನೆಗಳನ್ನು ಪ್ರಕಟಪಡಿಸಿದುದು ಕನ್ನಡದಲ್ಲಿ. ಕೇವಲ ಚರಿತ್ರೆಯಲ್ಲಷ್ಟೇ ಅಲ್ಲದೆ ಹೊಸಗನ್ನಡದ ಹಲವು ಸಾಹಿತ್ಯ ಪಂಥಗಳಿಗೂ ಪ್ರಮುಖ ಕೊಡುಗೆಗಳನ್ನು ನೀಡಿದೆ, ಚಳುವಳಿ ಪಂಥಗಳಲ್ಲಿ ಗುರುತಿಸಿಕೊಂಡ ಸೃಜನಶೀಲ ಸಮಾಜಮುಖಿ ಮನಸ್ಸುಗಳು ಹೇಗೆ ತಮ್ಮ ಸಂವೇದನೆ ಮತ್ತು ವಿಚಾರಗಳ ಮುನ್ನೋಟವನ್ನು ನೀಡಿದೆ ಎನ್ನುವುದನ್ನು ಗ್ರಹಿಸುವುದು ಪ್ರಮುಖ ಉದ್ದೇಶ.

ಕರಾವಳಿ ಕರ್ನಾಟಕದ ಗ್ರಂಥಸ್ಥ ಸಾಹಿತ್ಯದ ಲೇಖಕಕರೆಲ್ಲರನ್ನು ಇಲ್ಲಿ ಚರ್ಚಿಸಲಾಗುವುದಿಲ್ಲ. ತಮ್ಮ ಸಾಹಿತ್ಯ ರಚನೆಯ ಮೂಲಕ ಕೊಡುಗೆಗಳನ್ನು ನೀಡಿದ ಬರಹಗಾರರ ಬರವಣಿಗೆಯನ್ನು ಮುಕ್ತತೆಯಿಂದ ಸ್ವೀಕರಿಸುತ್ತಲೇ ತಮ್ಮ ಕಾಲದ ಚಲನಶೀಲ ಮೌಲ್ಯಗಳಿಗೆ ಅನುಗುಣವಾಗಿ ಕೃತಿ ರಚಿಸಿದ ಇರಾದೆಯನ್ನು ಗಮನಿಸಬೇಕಾಗುತ್ತದೆ. ಅದನ್ನು ಮಿತಿಯಾಗಿರಿಸಿಕೊಳ್ಳದೆ ಕೃಷಿ ಸಂಸ್ಕೃತಿಯನ್ನು ತಮ್ಮ ಕಾದಂಬರಿಗಳಲ್ಲಿ ಸಾಂದರ್ಭಿಕವಾಗಿ ಬಳಸಿಕೊಂಡ ಪ್ರಮುಖ ಕೃತಿಗಳನ್ನು ಅಧ್ಯಯನಕ್ಕೆ ಆಯ್ಕೆ ಮಾಡಿಕೊಳ್ಳಲಾಗಿದೆ. ಕೃಷಿಯ ಬಗ್ಗೆ ಬರೆದವರು ಯಾರು? ಬರವಣಿಗೆಯ ಹಿಂದಿರುವ ಆಶಯವನ್ನು ಗ್ರಹಿಸುತ್ತಲೇ ಈ ಸಾಹಿತ್ಯಿಕ ರಚನೆಗಳಿಂದ ಸಂಸ್ಕೃತಿಯನ್ನು ಮರು ರೂಪಿಸಿಕೊಳ್ಳಲು ಸಾಧ್ಯವೇ ಎಂದು ಚರ್ಚಿಸಲಾಗಿದೆ. ಸಮಾಜ, ಮಾನವ, ಸಂಸ್ಕೃತಿ ಮತ್ತು ಪ್ರಕೃತಿಯ ಕುರಿತಾದ ವಿಷಯ ವಸ್ತುಗಳೊಂದಿಗೆ ತಾವು ಆಯ್ದುಕೊಂಡ ವಿಷಯವನ್ನು ಇಲ್ಲಿ ಹಿಂಜಿ ತೆಗೆಯಲಾಗುವುದಿಲ್ಲ. ವಿಷಯ ವಸ್ತುಗಳನ್ನು ಅರ್ಥೈಸಿಕೊಂಡು ಕೃತಿಯ ಮೂಲ ಆಶಯವನ್ನು ಗಮನದಲ್ಲಿರಿಸಿಕೊಂಡು ಸಾಂಸ್ಕೃತಿಕ ದಾಖಲೀಕರಣದ ಕೆಲಸವನ್ನು ನಡೆಸಲಾಗುವುದು.

ಕರಾವಳಿಯ ಮಹತ್ವದ ಲೇಖಕರೆಂದು ಗುರುತಿಸಿಕೊಂಡವರೆಲ್ಲರೂ ಕೃಷಿ ಜಗತ್ತಿನ ಬಗ್ಗೆ ಬರೆದಿಲ್ಲ. ಯಾಕೆ ಬರೆದಿಲ್ಲ ಎನ್ನುವ ಪ್ರಶ್ನೆಗಿಂತ ಅವರು ಕೃಷಿಕ ಕುಟುಂಬದವರೇ, ಶ್ರಮಜೀವಿಗಳೇ ಎನ್ನುವ ಪ್ರಶ್ನೆಯೂ ಆಗುತ್ತದೆ. ಆರಂಭದಲ್ಲಿ ಬರೆದವರೆಲ್ಲ ಹೆಚ್ಚಿನವರು ಮೇಲ್ಜಾತಿಯ ಮೇಲ್ವರ್ಗದ ಬರಹಗಾರರಾಗಿದ್ದು, ದುಡಿಸಿಕೊಂಡು ತಿನ್ನುವ ಜಮೀನ್ದಾರಿ ಕುಟುಂಬದವರಲ್ಲದೆ ಶ್ರಮಿಕ ವರ್ಗದವರಲ್ಲ. ಕರಾವಳಿಯ ಬದುಕು ರೈತಾಪಿ ಸಮುದಾಯವಾದರೂ ಅದರೊಂದಿಗೆ ಇನ್ನುಳಿದ ವಿಚಾರಗಳು ಹಾಸು ಹೊಕ್ಕಾಗಿದ್ದವು. ಹಾಗಾಗಿ ಈ ಹಿನ್ನೆಲೆಯಲ್ಲಿ ವಿಷಯವನ್ನು ಗ್ರಹಿಸಿ ಶಿಷ್ಟ ಸಾಹಿತ್ಯವನ್ನು ವಿಶ್ಲೇಷಿಸಲಾಗಿದೆ. ಕನ್ನಡ ಮತ್ತು ತುಳು ಭಾಷೆಯಲ್ಲಿ ಅಕ್ಷರ ಪ್ರಪಂಚದಲ್ಲಿ ರಚಿತವಾದ ಸೃಜನಶೀಲ ಸಾಹಿತ್ಯ ಕೃತಿಗಳನ್ನು ಅಧ್ಯಯನಕ್ಕೆ ಮುಖ್ಯ ಆಕರವಾಗಿ

ಇರಿಸಿಕೊಳ್ಳಲಾಗಿದೆ. ಈಗಾಗಲೇ ಪ್ರಸ್ತಾಪಿಸಿದಂತೆ ಚಾರಿತ್ರಿಕ ದಾಖಲಾತಿಗಳಲ್ಲಿ ಶಾಸನಗಳು, ಬಾಸೆಲ್ ಮಿಷನರಿಯ ಪತ್ರಗಾರದಲ್ಲಿ ಸಿಗುವ ಮಾಹಿತಿಗಳು, ಸಮಾಜಶಾಸ್ತ್ರ, ಮಾನವ ಶಾಸ್ತ್ರೀಯ ಕೃತಿಗಳು ಪ್ರವಾಸ ಕಥನಗಳು, ದಾಖಲಾತಿಗಳ ಅಂಕಿ ಅಂಶಗಳು, ಸ್ಮರಣ ಸಂಚಿಕೆಗಳು, ಪತ್ರಿಕಾ ವರದಿಗಳು ಅಭಿನಂದನಾ ಗ್ರಂಥಗಳು ಇವುಗಳನ್ನು ಪೂರಕ ಆಕರವಾಗಿ ವಿಷಯಕ್ಕೆ ಆಧಾರಿತವಾಗಿ ಇರಿಸಿಕೊಳ್ಳಲಾಗುವುದೇ ಹೊರತು ಅದರ ಮೂಲಕ ತಾತ್ವಿಕ ಚರ್ಚೆಯನ್ನು ಶಿಷ್ಟ ಸಾಹಿತ್ಯದ ಬಗ್ಗೆ ಮುನ್ನಡೆಸುವುದಿಲ್ಲ.

ಕರಾವಳಿ ಕರ್ನಾಟಕದ ಕೃಷಿ ಸಂಸ್ಕೃತಿ ಪಲ್ಲಟದ ತಾತ್ವಿಕ ಚರ್ಚೆಗೆ ಜನಪದ ಸಾಹಿತ್ಯ ಮತ್ತು ಶಿಷ್ಟ ಸಾಹಿತ್ಯವನ್ನು ಪ್ರಮುಖ ಧಾರೆಗಳಾಗಿ ಇರಿಸಿಕೊಂಡು ಇದರ ಮೂಲಕ ಕೃಷಿ ಸಂಸ್ಕ್ರತಿ ಪಲ್ಲಟದ ಬಗೆಗೆ ಒಂದು ತಾತ್ವಿಕತೆ ಕಟ್ಟಿಕೊಡಲು ಸಾಧ್ಯವೇ ಎಂದು ಪ್ರಯತ್ನಿಸಲಾಗಿದೆ.

ಅಧ್ಯಯನದ ತಾತ್ವಿಕ ಸ್ವರೂಪವೇ ಕೃಷಿ ಮತ್ತು ಸಂಸ್ಕೃತಿ. ಕೃಷಿ ಬಿತ್ತಿದ್ದನ್ನು ಬೆಳೆಯುವುದೇ ಆದರೆ ಸಂಸ್ಕೃತಿ ಅದರಿಂದ ವಿಸ್ತೃತತೆಗೊಂಡುದು ಸಂಸ್ಕೃತಿಯ ವಿಕಾಸದಿಂದ ಕೃಷಿ ಅನ್ವೇಷಣೆಯಾಯಿತೇ ? ಕೃಷಿಯ ಅನ್ವೇಷಣೆಯಿಂದ ಸಂಸ್ಕೃತಿ ವಿಕಾಸವಾಯಿತೇ? ಎಂದು ಪ್ರಶ್ನಿಸಿಕೊಳ್ಳುವುದು ಬೀಜ ವೃಕ್ಷ ನ್ಯಾಯದಂತೆ ಭಾಸವಾಗುತ್ತದೆ. ಮಾನವ ಶಾಸ್ತ್ರಜ್ಞರ ಅಧ್ಯಯನದಂತೆ ಸಂಸ್ಕೃತಿಯ ವಿಕಾಸದಲ್ಲಿ ಕೃಷಿಯ ಅನ್ವೇಷಣೆ ವಿಸ್ತರಣೆ, ನಿರ್ವಹಣೆಗಳು ಬಹಳ ಮುಖ್ಯ. ಹೀಗೆ ಬದಲಾಗುತ್ತ ಹೋಗುವುದರಿಂದಲೇ ವ್ಯಕ್ತಿ ಕುಟುಂಬ, ಸಮುದಾಯ , ಸಮಾಜಗಳು ಬದಲಾಗಿರುವುದು ವಾಸ್ತವ ಸತ್ಯ. ಬದುಕಿನ ಗ್ರಹಿಕೆ ಮತ್ತು ಭೂಮಿಯ ಪರಿಕಲ್ಪನೆ ಪರಸ್ಪರ ಸಂಬಂಧ ಪಟ್ಟುದರಿಂದ ಅದು ಫಲವಂತಿಕೆಯ ಪೂಜ್ಯ ಭಾವವನ್ನು ಹೊಂದಲೂ ಸಾಧ್ಯವಾಯಿತು. ಜನರ ಜೀವನ ಕ್ರಮ, ಆರಾಧನೆ, ಆಚರಣೆ, ನಂಬಿಕೆ, ಉಲ್ಲಾಸ, ಸಡಗರ, ವಿನೋದ, ಸಂಭ್ರಮ, ಹಬ್ಬ ಇಡೀ ಬದುಕಿನ ವರ್ತುಲವೇ ಕೃಷಿಗೆ ಬೆಸೆದುಕೊಂಡಿದೆ. ವಾರ್ಷಿಕವಾಗಿ ಕರಾವಳಿಯ ಎಲ್ಲ ಆಚರಣೆಗಳು ವಾರ್ಷಿಕ ಆವರ್ತನದಲ್ಲಿ ಜೀವನ ಆವರ್ತನದಲ್ಲಿ ಕಾಣಿಸುವ ಎಲ್ಲ ಆಚರಣೆಗಳು ಪರಸ್ಪರ ಪೂರಕವಾಗಿದೆ.

ಅಧ್ಯಾಯ ೫

# ಕೃಷಿ ಸಂಸ್ಕೃತಿಯ ಪಲ್ಲಟದ ಸಾಹಿತ್ಯಿಕ ಅಭಿವ್ಯಕ್ತಿ- ಚಾರಿತ್ರಿಕ ನೆಲೆಗಳು

ಸಾಹಿತ್ಯದ ಸ್ವರೂಪವನ್ನು ಅರಿಯಲು ನಾವು ಹಲವಾರು ದೃಷ್ಟಿಕೋನಗಳಿಂದ ಪ್ರಯತ್ನಿಸಬಹುದು. ಬಾಹ್ಯವಾಗಿ ಸಾಹಿತ್ಯವನ್ನು ನಿರ್ದಿಷ್ಟ ಸಾಮಾಜಿಕ ಸಂಸ್ಥೆ ಎಂದು ಗುರುತಿಸಲು ಪ್ರಯತ್ನಿಸುತ್ತೇವೆ. ಒಂದು ಸಮಾಜವು ತನ್ನ ಸಾಹಿತ್ಯಕ್ಕೆ ನೀಡುವ ಮೌಲ್ಯವನ್ನು ಗಮನಿಸುತ್ತದೆ. ಸಾಹಿತ್ಯದ ಮೌಲ್ಯ ಸಮಾಜದಿಂದ ಸಮಾಜಕ್ಕೆ ಕಾಲದಿಂದ ಕಾಲಕ್ಕೆ ಬೇರೆಯಾಗುತ್ತದೆ. ವಿಮರ್ಶೆಯ ಪರಿಭಾಷೆ ಸಾಹಿತ್ಯವನ್ನು ಕಾಲಾತೀತವಾದದ್ದು ಎಂದು ವಿಶ್ಲೇಷಿಸುತ್ತದೆ. ಸಾಹಿತ್ಯ ಮತ್ತು ವ್ಯಕ್ತಿಗಳಿಗೆ ಇರುವ ಸಂಬಂಧವು ವಿಶಿಷ್ಟ ಬದುಕು ಮತ್ತು ಜಗತ್ತಿನ ಬಗೆಗೆ ನಿರ್ದಿಷ್ಟವಾದ ದೃಷ್ಟಿಕೋನವನ್ನು ಸಾಹಿತ್ಯ ನೀಡುತ್ತದೆ. ಸಾಹಿತ್ಯವು ಅನುಸರಿಸುವ, ಚಿತ್ರಿಸುವ, ಪ್ರತಿನಿಧಿಸುವ, ಒಳಗೊಳ್ಳುವ, ಪ್ರತಿಬಿಂಬಿಸುವ ಆಯಾಮವಾಗಿ ರೂಪುಗೊಳ್ಳುತ್ತದೆ. ಎಲ್ಲವೂ ಕಾಲ್ಪನಿಕವಾಗಿದೆ, ವಾಸ್ತವಿಕತೆಯನ್ನು ನಿರೂಪಿಸುತ್ತದೆ.

ಸಾಹಿತ್ಯದ ಜೀವನದ ಪ್ರತಿಬಿಂಬ, ಗತಿಬಿಂಬವಾಗಿದೆ ಎಂದು ಪ್ರಸಿದ್ದ ಹೇಳಿಕೆಯನ್ನು ಸರಳೀಕರಿಸುವುದೂ ಅಸಾಧ್ಯ ಕಲಾತ್ಮಕ ಗುಣವನ್ನು ಹೊಂದಿರುವ ಸಾಹಿತ್ಯ ಕೃತಿಯೊಂದು ಸಮತೋಲನ, ಸಂಯೋಜನೆ, ರಚನೆ, ಶಿಲ್ಪ, ಪಾತ್ರ, ವಸ್ತು ವಿಶಿಷ್ಟವಾಗುತ್ತ ತನ್ನ ಅನನ್ಯತೆಯನ್ನು ಕಾಯ್ದುಕೊಳ್ಳುತ್ತದೆ. ಬರಹಗಾರನ ಪ್ರತಿಭೆ ಮತ್ತು ರಸಾನುಭೂತಿಗಳಿಂದ ಗ್ರಹಿಸುವ ಅತಿ ವಿಶಿಷ್ಟ ಆಯಾಮವೆನಿಸುತ್ತದೆ. ಸೃಜನಶೀಲತೆಯ ನೋಟ ಹೊಸ ಕಾಣ್ಕೆಯ ಅವಿಷ್ಕಾರಕ್ಕೂ ಕಾರಣವಾಗುತ್ತದೆ.

“ಬರಹಗಾರನೊಬ್ಬ ತನ್ನ ಅನುಭವಗಳು, ಅಮೂರ್ತವಾದ ಭಾವನೆಗೆ, ಆಲೋಚನೆ, ಬಯಕೆ ಚಿಂತನೆಗಳಿಗೆ ಸಾಮಾಜಿಕವಾಗಿ ಅಂಗೀಕೃತವಾದ ಯಾವುದೆ ಒಂದು ಮಾಧ್ಯಮದಲ್ಲಿ ತಕ್ಕ ಮಟ್ಟಿಗೆ ಖಚಿತವಾದ ಮೂರ್ತವಾದ ರೂಪವನ್ನು ಕೊಡುವ ಕ್ರಿಯೆಯೇ ಅಭಿವ್ಯಕ್ತಿ. ತನ್ನ ಅನುಭವ ಇತ್ಯಾದಿಗಳನ್ನು ಸಮಾಜದ ಇತರರೊಂದಿಗೆ ಹಂಚಿಕೊಳ್ಳುವುದು ಮತ್ತು ಆಲೋಚನೆ ಚಿಂತನೆಗಳತ್ತ ಅವರನ್ನು ಒಲಿಸಿಕೊಳ್ಳುವುದು, ಅಭಿವ್ಯಕ್ತಿಯ ಹಿಂದಿರುವ ಉದ್ದೇಶಗಳು ಸಾಹಿತ್ಯಿಕ ಅಭಿವ್ಯಕ್ತಿಯಲ್ಲಿ ಭಾಷೆ ಪ್ರಮುಖ ಪಾತ್ರವನ್ನು ವಹಿಸುತ್ತದೆ. ಸಾಹಿತ್ಯ ವಿಮರ್ಶೆಯಲ್ಲಿ ಅಭಿವ್ಯಕ್ತಿ ಎಂಬ ಪದ ಅನುಭವಗಳನ್ನು ಓದುಗರಿಗೆ ತಲುಪಿಸಬಲ್ಲ ಮತ್ತು ಅದಕ್ಕೆ ಸಹಾಯಕವಾಗಿರುವ ಲೇಖಕರ ಭಾಷೆ, ಸಾಮರ್ಥ್ಯ, ಶೈಲಿ, ಕೃತಿಯ ಪ್ರಕಾರ ಇವೆಲ್ಲವನ್ನು ಒಳಗೊಳ್ಳುವಂತೆ ಅಥವಾ ಅವುಗಳಲ್ಲಿ ಯಾವುದಾದರೊಂದು ಅಂಶಕ್ಕೆ ಅನ್ವಯವಾಗುವಂತೆ ಬಳಕೆಯಾಗುತ್ತದೆ. (ನಾಗಭೂಷಣ ಸ್ವಾಮಿ ಓ.ಎಲ್. ೧೯೮೧; ಪು ೧೯) ಅಭಿವ್ಯಕ್ತಿಯ ಅರ್ಥವನ್ನು ತುಂಬ ಹಿಗ್ಗಿಸುವುದು ವಿಮರ್ಶೆಯಲ್ಲಿ ಗೊಂದಲಗಳನ್ನಷ್ಟೇ ಹುಟ್ಟಿಸಬಹುದು ಎಂಬ ತರ್ಕವೂ ಇದೆ.

ಸಾಹಿತ್ಯಿಕ ಅಭಿವ್ಯಕ್ತಿಯನ್ನು ಈ ಹಿನ್ನೆಲೆಯಲ್ಲಿ ಗ್ರಹಿಸುವಾಗಲೂ ಸೃಜನಶೀಲ ಮಾಧ್ಯಮವಾದ ಸಾಹಿತ್ಯವು ಸಮಾಜ ಮುಖಿಯಾಗಿರುವುದೂ ಅವಶ್ಯವಾಗಿದೆ. ಸಾಹಿತ್ಯದ ಪ್ರಕಾರಗಳೂ ಅಭಿವ್ಯಕ್ತಿಯ ಆಯಾಮಗಳಲ್ಲಿ ಮುಖ್ಯವೆನಿಸುವುದರಿಂದ ಕಾವ್ಯ, ಕವನ, ಕತೆ, ಕಾದಂಬರಿ, ಪ್ರಬಂಧ, ಅಂಕಣ ಬರಹ, ವೈಚಾರಿಕ ಲೇಖನ, ನಾಟಕ, ಗೀತ ನಾಟಕ, ಏಕಾಂತ, ಇವೆಲ್ಲವೂ ಸಾಹಿತ್ಯಿಕ ಅಭಿವ್ಯಕ್ತಿಗಳೇ ಆದರೂ ಈ ಪ್ರಬಂಧದಲ್ಲಿ ಎಲ್ಲವನ್ನು ಒಳಗೊಂಡಿಲ್ಲ. ಯಾವುದು ಸಾಹಿತ್ಯ ಮತ್ತು ಯಾವುದು ಸಾಹಿತ್ಯ ಅಲ್ಲ ಎನ್ನುವ ಚರ್ಚೆ ಗಡಿರೇಖೆಗಳ ಮಿತಿಯನ್ನು ದಾಟಿ ಹೋಗುತ್ತದೆ. ಈ ಅಂಶವನ್ನು ಗಮನಿಸಿದಾಗ ಪ್ರಬಂಧದ

ಅನ್ವೇಷಣೆಯ ಬರಹವು ತನ್ನ ಚೌಕ್ಕಟ್ಟನ್ನು ಮೀರಿ ಬೆಳೆಯುವ ಸಾಧ್ಯತೆಗಳು ವಿಸ್ತೃತಗಳು ಹೆಚ್ಚುತ್ತ ಹೋಗುತ್ತದೆ. ಅಧ್ಯಯನದ ಉದ್ದೇಶಕ್ಕೆ ನಿರ್ದಿಷ್ಟತೆಯನ್ನು ನಿಖರತೆಯನ್ನು ಕಂಡುಕೊಳ್ಳುವ ಉದ್ದೇಶದಿಂದ ಸಾಹಿತ್ಯಿಕ ಅಭಿವ್ಯಕ್ತಿ ಎನ್ನುವ ಈ ಪರಿಭಾಷೆಗೆ ಎಲ್ಲ ವಿಸ್ತೃತ ನೆಲೆಯ ಚರ್ಚೆಗಳನ್ನು ಗಮನಿಸಿಯೂ ಒಂದು ಸೀಮಾರೇಖೆಯನ್ನು ಅಳವಡಿಸಿಕೊಳ್ಳಲಾಗಿದೆ. ಬಹಳ ಮುಖ್ಯವಾಗಿ ದೀರ್ಘ ವಿವರಣಾತ್ಮಕ ಬರಹಗಳಾದ ಕಾದಂಬರಿಗಳನ್ನು ಮಾತ್ರ ಅಧ್ಯಯನಕ್ಕೆ ಅಯ್ಕೆ ಮಾಡಿಕೊಳ್ಳಲಾಗಿದೆ.

ಅಧ್ಯಯನದ ಅವಶ್ಯಕತೆಗಾಗಿ ಕರಾವಳಿಯ ಭೌಗೋಳಿಕತೆಯನ್ನು ಹಾಕಿಕೊಂಡಿರುವುದರಿಂದ ಸಾಹಿತ್ಯಿಕ ಅಭಿವ್ಯಕ್ತಿಯ ಅನನ್ಯತೆಯನ್ನು ಇಲ್ಲಿ ನಿರ್ದಿಷ್ಟಗೊಳಿಸಲಾಗಿದೆ. ಚಾರಿತ್ರಿಕ ಮತ್ತು ಸಾಂಸ್ಕೃತಿಕ ಆಯಾಮಗಳನ್ನು ಗುರುತಿಸುವುದರಿಂದ ಸಮಾಜ ಮುಖಿಯಾದ ನಿರ್ವಚನವನ್ನು ವಿಶ್ಲೇಷಿಸುವ ಪ್ರಯತ್ನ ಮಾಡಲಾಗಿದೆ. ಕರಾವಳಿಯ ಸಂವೇದನಾಶೀಲ ಮನಸ್ಸುಗಳು ಇಲ್ಲಿ ನಡೆಯುತ್ತಿರುವ ಬದಲಾವಣೆ ಸ್ಥಿತ್ಯಂತರಗಳನ್ನು ಸೂಕ್ಷ್ಮವಾಗಿ ಗ್ರಹಿಸುವ ಪ್ರಯತ್ನವನ್ನು ಮಾಡಿದೆ. ಆದರೆ ಹಾಗೆ ಗ್ರಹಿಸಿದವರಾದರೂ ಯಾರು? ಮತ್ತು ಯಾಕೆ ಗ್ರಹಿಸಿದ್ದಾರೆ? ಎನ್ನುವ ಪ್ರಶ್ನೆಯನ್ನು ಪ್ರಾಥಮಿಕವಾಗಿ ಇರಿಸಿಕೊಳ್ಳಲಾಗಿದೆ. ಕರಾವಳಿಯ ಲೇಖಕರು ರಾಷ್ಟ್ರೀಯ ಅಂತರಾಷ್ಟ್ರೀಯ ಮಟ್ಟದಲ್ಲಿ ಮಾನ್ಯರಾದರೂ ಪ್ರಾದೇಶಿಕವಾಗಿ ಕೃಷಿ ಸಂಸ್ಕೃತಿಯನ್ನು ಬರಹದ ಮೂಲಕ ಉಲ್ಲೇಖಿಸಿದ್ದಾರೆಯೇ ಎನ್ನುವುದು ಬಹಳ ಮುಖ್ಯವಾದ ಅಂಶವಾಗುತ್ತದೆ.

ಸಾಹಿತ್ಯ ಪಠ್ಯವನ್ನು ಮತ್ತು ಕೃತಿಕಾರರ ನಡುವೆ ಒಂದು ವಿಶಿಷ್ಟ ಸಂಬಂಧವನ್ನು ರೂಪಿಸುವುದು. ಇದು ಓದುಗನ ಕೃತಿ ಮತ್ತು ಕೃತಿಕಾರರ ಸಂಬಂಧವನ್ನು ಹೊರಗಿನಿಂದ ನೋಡಿ ಗ್ರಹಿಸಿದ ಸ್ಥಿತಿ, ಆದರೆ ಕಳೆದ ಐವತ್ತು ವರ್ಷಗಳಲ್ಲಿ ಸಾಹಿತ್ಯ ಕೃತಿಗಳು ಕೇವಲ ಭಾಷಿಕ ನಿರೂಪಣೆಗಳಿಂದ ಪರಿಗಣಿತವಾದ ಚಿಂತನೆಯ ಸ್ವರೂಪ ವ್ಯಾಪಕತೆಗೆ ಬಂದು ಅವುಗಳನ್ನು ಇತರ ಸಂಕಥನಗಳ ರೀತಿಯಲ್ಲಿಯೇ ಪರಿಗಣಿಸಲಾಗುತ್ತದೆ. ಇದು ನಿರ್ದಿಷ್ಟವಾದ ಕೆಲವು ನಿರ್ಧಾರಗಳನ್ನು ಮುಂದಿರಿಸುತ್ತದೆ. ಅವೆಂದರೆ ಸಾಹಿತ್ಯ ಕೃತಿಗಳನ್ನು ಭಾಷಿಕ ನಿರೂಪಣೆಗಳೆಂದು ಪರಿಗಣಿಸುವ ರೀತಿಯಲ್ಲಿಯೇ ಮಾನ್ಯ ಮಾಡುವ ಓದುವಿಕೆಯು ಯಾವೊಂದು ವಿಧದ ಮಾರ್ಗ ಪಂಥದ ವಿಮರ್ಶೆಯೂ ಕೃತಿಯೊಡನೆ ತನ್ನನ್ನು ನೇರವಾಗಿ ತೊಡಗಿಸಿಕೊಳ್ಳಲು ಸಾಧ್ಯವಿಲ್ಲ. ಸಾಹಿತ್ಯ ಹಾಗೂ ವಿಮರ್ಶೆ ಇವೆರಡೂ ಭಾಷಿಕ ಸಂಜ್ಞೆಗಳ ಅನಿಯಂತ್ರಿತ ವಿನ್ಯಾಸಗಳೇ ಆದ್ದರಿಂದ ಪಠ್ಯ ವಿಮರ್ಶೆ ಎಂದರೆ ಒಂದು ಸಂಜ್ಞಾ ವಿನ್ಯಾಸಕ್ಕೆ ಪ್ರತಿಯಾಗಿ ಬರುವ ಸಂಜ್ಞಾ ವಿನ್ಯಾಸ ಇಂತಹ ಓದುವಿಕೆಯ ಪಠ್ಯವೊಂದನ್ನು ಕಾಲದೇಶಾತೀತವಾದ ಆಯಾಮಗಳು ಆಯಾ ಜಗತ್ತಿನ ಸಾಂಸ್ಕೃತಿಕ ಸಂದರ್ಭಗಳ ಆರೋಪಣೆಯೇ ಹೊರತು ಪಠ್ಯಗಳ ಗುಣ ಲಕ್ಷಣಗಳಲ್ಲ. ಇಂತಹ ತಾತ್ವಿಕತೆಯೊಂದು ಸಾಹಿತ್ಯ ಕೃತಿಗಳಿಗೆ ಒದಗಿದ ಪರಿಣಾಮವಾಗಿ ಈವರೆಗಿನ ಎಷ್ಟೋ ಚರ್ಚೆಗಳನ್ನು ಅದು ನಿರರ್ಥಕಗೊಳಿಸಿದೆ. ಈ ವೈರುಧ್ಯಗಳ ಮಧ್ಯೆಯೇ ಸಾಹಿತ್ಯಿಕ ಕೃತಿಯೊಂದರ ಅನನ್ಯತೆಯನ್ನು ಗಮನದಲ್ಲಿರಿಸಿ ಸಾಂಸ್ಕೃತಿಕ ಮುಖಾಮುಖಿ ನಡೆಸಲಾಗಿದೆ. ಸಾಹಿತ್ಯಿಕ ಕೃತಿಗಳಲ್ಲಿ ವಿಚಾರಗಳೆಲ್ಲ ಹೇಳಿಕೆಯಾಗಿರದೆ ಗಟ್ಟಿಮುಟ್ಟಾದ ವಿವರಗಳಲ್ಲಿ ಸಾಹಿತ್ಯಿಕ ಚಳುವಳಿಯ ಮೈಲುಗಲ್ಲುಗಳಾಗಿ ಗುರುತಿಸಲ್ಪಟ್ಟವರೂ ಈ ಅಭಿವ್ಯಕ್ತಿಯನ್ನು ಎಷ್ಟರ ಮಟ್ಟಿಗೆ ಮಾಡಿದ್ದಾರೆ

ಎನ್ನುವುದು ಮುಖ್ಯ ದಾಖಲಾಗದೆ ಹೋದ ಕೃಷಿ ಪರಂಪರೆಯ ಆಯಾಮ ಯಾವುದು ಎಂಬ ಪ್ರಶ್ನೆ ಹುಟ್ಟಿಕೊಳ್ಳುತ್ತದೆ.

ವಿಚಾರಶೀಲ, ಚಿಂತನಶೀಲ ಮನಸ್ಸುಗಳು ಪ್ರಾದೇಶಿಕತೆಯ ಆಸ್ಮಿತೆಯನ್ನು ಉಳಿಸಿಕೊಂಡೇ ಈ ಅಭಿವ್ಯಕ್ತಿಯ ಪರಂಪರೆಯನ್ನು ಮುಂದುವರಿಸಿದೆ ಎಂದು ಸರಳೀಕರಿಸಲಾಗುವುದಿಲ್ಲ. ಕೃಷಿಯನ್ನು ಇದುವರೆಗೆ ನಾವು ಅಭ್ಯಸಿಸಿರುವುದು ಸಮಾಜಶಾಸ್ತ್ರ, ಚರಿತ್ರೆಯ ಕಾಲಘಟ್ಟದ ಹಿನ್ನೆಲೆಯಲ್ಲಿ, ಹೀಗೆ ಅಭ್ಯಸಿಸುವಾಗಲೂ ಮನಸ್ಸು ಜಗತ್ತಿನ ವಿಕಾಸವನ್ನು ಮಾನವ ಶಾಸ್ತ್ರದ ಹಿನ್ನೆಲೆಯಲ್ಲಿ ವಿಶ್ಲೇಷಿಸುತ್ತೇವೆ. ಸಮಾಜದ ಸಾಮಾಜಿಕ ಸಂರಚನೆಗೆ ವಿಶ್ಲೇಷಣೆಗಳ ಮೂಲಕ ಕೃಷಿಯ ವಿಶ್ಲೇಷಣೆ ನಡೆದಿದೆ. ಚರಿತ್ರೆಯ ಕಾಲನಿರ್ಣಯದ ಚಾರಿತ್ರಿಕ ವಿಶ್ಲೇಷಣೆಗಳನ್ನು ನಡೆಸಲಾಗಿದೆ. ಒಂದು ನೆಲೆಯಲ್ಲಿ ಚಾರಿತ್ರಿಕ ಪ್ರಜ್ಞೆಯನ್ನು ಜಾಗೃತಗೊಳಿಸುತ್ತಲೇ ಮಾನವ ಜಗತ್ತಿನ ವಿಕಾಸದೊಂದಿಗೆ, ಸಂಸ್ಕೃತಿ ಚಿಂತನೆಯ ಹೊರಳುದಾರಿಗೂ ಹೊರಳಿಕೊಂಡಿದ್ದೇವೆ. ಕೃಷಿ ಜಗತ್ತು ತೀರಾ ಸಂಕೀರ್ಣವಾದುದು. ಸಂಸ್ಕೃತಿ ವಿಶ್ಲೇಷಣೆಯ ಆಯಾಮಗಳನ್ನು ಗೆರೆ ಕೊರೆದಂತೆ ವಿಭಾಗಗೊಳಿಸಲು ಸಾಧ್ಯವಿಲ್ಲ. ಸಾಹಿತ್ಯಿಕ ಅಭಿವ್ಯಕ್ತಿಯ ತಾತ್ವಿಕತೆಯನ್ನು ಗ್ರಹಿಸುವಾಗಲೂ ಈ ಅಂಶ ನಮಗೆ ಮುಖ್ಯವಾಗುತ್ತದೆ.

ಮಾನವ ಜಗತ್ತಿನ ವಿಕಾಸದ ಕಮಾನುಗಳಲ್ಲಿ ಅರಿವಿನ ನೆಲೆಯ ವಿಸ್ತಾರವನ್ನು ಕಂಡುಕೊಂಡ ಮನುಷ್ಯನಿಗೆ ತನ್ನ ಬದುಕಿನ ವಿಸ್ತೃತತೆ ಮತ್ತು ಗ್ರಹಿಕೆಯ ವಿಸ್ತೃತತೆಯ ಮಿತಿಗಳು ಗೋಚರಿಸುತ್ತವೆ. ಸಾಹಿತಿಯೊಬ್ಬ ಕಲಾತ್ಮಕವಾದ ಸಾಹಿತ್ಯವನ್ನು ಕಲ್ಪನೆಯ ಕಣ್ಣಿನಿಂದ ನೋಡುವುದಕ್ಕೂ ವಾಸ್ತವಿಕ ನೆಲೆಗಟ್ಟಿನಲ್ಲಿ ಅರ್ಥೈಸುವುದಕ್ಕೂ ವ್ಯತ್ಯಾಸವಿದೆ. ಕೃಷಿ ಜಗತ್ತಿನ ವಿಕಾಸ, ಕೃಷಿ ಸಂಸ್ಕೃತಿಯಲ್ಲಿ ವಿಸ್ತಾರವಾಗಿ ಎಷ್ಟು ಸಂಕೀರ್ಣತೆಯನ್ನು ಉಳಿಸಿಕೊಂಡಿದೆ. ತೀರಾ ಬಾಲಿಶ, ಸರಳವಾಗದೆ ಸಾಹಿತ್ಯ ಕೃತಿಯೊಂದರ ಅನನ್ಯತೆಯನ್ನು ಕಾಯ್ದಿರಿಸಿಕೊಂಡಿದೆ.

ಕೃಷಿ ಸಂಸ್ಕೃತಿಯಲ್ಲಿ ಒಂದು ವ್ಯವಸ್ಥೆಯ ಒಳಗೆ ಒಗ್ಗಿದವರು ಸ್ಥಿತ್ಯಂತರಗೊಳ್ಳುತ್ತ ಹೋಗುವುದು ಕೃಷಿ ಸಂಸ್ಕೃತಿ ಪಲ್ಲಟವಾಗಿದೆ. ಇಂತಹ ಬದಲಾವಣೆಗಳೇ ಮಹಾಕಾವ್ಯಗಳು ಹುಟ್ಟಿಕೊಳ್ಳಲು ಕಾರಣವಾಗಿದೆ ಎನ್ನುತ್ತಾರೆ ಚಾರಿತ್ರಿಕ ಚಿಂತಕಿ ಪ್ರಮೀಳಾ ಥಾಪರ್. ಈ ರೂಪಕಗಳ ಸಾಮ್ರಾಜ್ಯವೇ ಸಾಹಿತ್ಯ ಕೃತಿಯಾಗುತ್ತ ನಿರೂಪಣೆಗೊಂಡಿದೆ. ಕೃಷಿ ಬದಲಾದಂತೆ ಬದುಕು ಬದಲಾಗಿದೆ ಮಾತ್ರವಲ್ಲ ಮನುಷ್ಯನ ಮನೋಧರ್ಮವೂ ಬದಲಾಗಿದೆ. ಕೃಷಿಯ ಮೂಲದಲ್ಲಿ ವ್ಯವಹಾರ ಜಾಣ್ಮೆಯ ಅನ್ವೇಷಣೆ ಬಹಳ ಸೊಗಸಾಗಿಯೂ ನಡೆದಿತ್ತು. ಸಾಹಿತ್ಯವೆಂದರೆ ಬರಿಯ ಅಸ್ವಾದನೆ ತಾನು ಕಂಡದ್ದು, ಕೇಳಿದ್ದು, ಪ್ರತಿಭಾತ್ಮಕವಾದದ್ದು ಮಾತ್ರವಲ್ಲ ಸಂಸ್ಕೃತಿ ಚಿಂತನೆಯ ದಾಖಲೀಕರಣವೂ ಹೌದು.

ಸಾಹಿತ್ಯ ಪಠ್ಯವನ್ನು ಒಂದು ಸ್ವಯಂ ಪೂರ್ಣ ಕೃತಿ ಎಂಬಂತೆ ಚರ್ಚಿಸುವ ಪ್ರವೃತ್ತಿ ಇಪ್ಪತ್ತನೆಯ ಶತಮಾನ ಆರಂಭದ ವಿಮರ್ಶೆಗೆ ಇತ್ತು. ಅಂದಿನ ರಾಜಕೀಯ ಮತ್ತು ಯುರೋಪಿಯನ್ ಸಾಹಿತ್ಯ ಪ್ರಭಾವಗಳಿಂದ ದತ್ತಕವಾದ ಈ ಸ್ವರೂಪವು ಆನಂತರದಲ್ಲಿ ಮೂರ್ತವಾಗಿ ಪ್ರಕಟವಾಗಿರುವುದರಿಂದ ಪರಿಣಾಮಕಾರಿಯಾಗಿದೆ. ಸಂಸ್ಕೃತಿ ಚಿಂತನೆಯ ಅನ್ವೇಷಣೆಗಾಗಿ ಕೃತಿಯ ಮೂಲಕ ಹುಡುಕಾಟ ನಡೆಸದೆ.

ಕೃತಿಯ ವಸ್ತುವಿನ ಒಳಗೆ ಪ್ರಕಟಗೊಳ್ಳುವ ವಿಷಯದ ವಸ್ತುವಿನಿಂದ ಕೃಷಿ ಸಂಸ್ಕೃತಿ ಪಲ್ಲಟದ ನಿರ್ವಚನವನ್ನು ನಡೆಸಲಾಗುವುದು.

ಮನುಷ್ಯ ಬದುಕು ವ್ಯವಸಾಯೀಕರಣದಿಂದಲೇ ಪಲ್ಲಟಗೊಳ್ಳುತ್ತಾ ಸಾಗಿದ್ದರೆ, ಮತ್ತು ಕೃಷಿ ಜಗತ್ತಿನಲ್ಲೇ ಪಲ್ಲಟದ ಸ್ವರೂಪಗಳಿವೆಯೇ ಎನ್ನುವ ಅನ್ವೇಷಣೆಯೂ ಮುಖ್ಯವಾಗುತ್ತದೆ. ಭೂಮಿಯ ಪರಿಕಲ್ಪನೆಯಲ್ಲಿಯೇ ಎಲ್ಲಿಂದ ಪಲ್ಲಟಗೊಳಗಾದವು ಎಂಬ ಚಿಂತನೆಯೂ ಮುಖ್ಯವಾಗುತ್ತದೆ.

ಹೀಗೆ ಅಧ್ಯಯನವನ್ನು ಮುಂದುವರೆಸುವಾಗ ಎರಡು ಅಯಾಮಗಳ ಗೋಚರಿಸುತ್ತದೆ. ಕರಾವಳಿ ತೀರಕ್ಕೆ ವಸಾಹತು ಶಾಹಿ ಅಡಳಿತದ ಆಗಮನವಾಗಿ ಆ ಸಂದರ್ಭದಲ್ಲಿ ರಚನೆಗೊಂಡ ಸಾಹಿತ್ಯಿಕ ಕೃತಿಗಳೂ ಮುಖ್ಯ. ಅದನ್ನು ದಾಟಿ ಜಾಗತೀಕರಣ ನಂತರದಲ್ಲಿ ನವ ವಸಾಹತ್ತೋತ್ತರ ಕಾಲದ ಸಾಹಿತ್ಯಿಕ ಅಭಿವ್ಯಕ್ತಿ ಇವೆರಡೂ ಏಕರೂಪವಾಗಿಲ್ಲ. ಭಿನ್ನವಾಗಿರುವುದೇ ಅದರ ಪ್ರಮುಖ ವೈಶಿಷ್ಟ್ಯವಾಗಿದೆ. ರಾಷ್ಟ್ರೀಯ ಭೂಮಿಯ ಒಡೆತನದ ಹಕ್ಕಿಗೆ ಸಂಬಂಧ ಪಟ್ಟದ್ದು ಆಗಿತ್ತು. ಜಮೀನನ್ನು ವ್ಯವಹಾರವಾಗಿ ಕಾಣದಿದ್ದ ಕಾಲದಲ್ಲಿ ಜಮೀನ್ದಾರಿಕೆ ಮತ್ತು ಊಳಿಗ ಮಾನ್ಯ ಪದ್ಧತಿಗಳನ್ನು ಒಳಗೊಂಡ ನೆಲೆಯಲ್ಲಿ ಭೂಮಿಯ ಒಡೆತನದ ಪ್ರಜ್ಞೆಗಿಂತ ಕೃಷಿಯನ್ನು ಅನುಸರಿಸುವ ಅಶಯವೇ ಮುಖ್ಯವಾಗಿತ್ತು. ತುಳುವರೆಂದರೆ ಭತ್ತದ ಬೇಸಾಯ, ಬೇಸಾಯವೆಂದರೆ ತುಳು ಎನ್ನುವ ಅವಿಚ್ಚಿನ್ನತೆಯನ್ನು ಹೊಂದಿದ ಕೃಷಿ ಜಗತ್ತಿನಲ್ಲಿ ಅವೆರಡೂ ದಾಖಲಾದ ಪರಿ ಮಾತ್ರ ಅನನ್ಯವಾದುದು.

**೫.೧ ಜಾಗತೀಕರಣ ಪೂರ್ವದ ಸಾಹಿತ್ಯಿಕ ಅಭಿವ್ಯಕ್ತಿ**

ಕಥನಕಲೆ ಎನ್ನುವ ಪರಿಕಲ್ಪನೆಗೆ ಭಾರತೀಯ ಸಾಹಿತ್ಯ ಅದರಲ್ಲೂ ಕನ್ನಡಕ್ಕೆ, ಹೊಸತೇನೂ ಅಲ್ಲ. ನಮ್ಮ ಪ್ರಾಚೀನ ಕಾಲದಿಂದಲೂ ಕೇಳುತ್ತ ಮತ್ತು ಹೇಳುತ್ತ ಬಂದ ರಾಮಾಯಣ ಮಹಾಭಾರತದಂತಹ ಮಹಾ ಕಾವ್ಯಗಳಲ್ಲದೆ ಜನಪದರ ಜನಪದ ಕಥೆಗಳನ್ನು ನಾವು ಆಲಿಸುತ್ತ ಬಂದಿದ್ದೇವೆ. ಸಾಹಿತ್ಯದಲ್ಲಿ ಮಾನವನ ಊಹೆ ಆಶಯ, ಧ್ಯೇಯವನ್ನು ರಚನೆಗೊಳಿಸಿದ ಕೃತಿಗಳಿವು. ಆರಂಭ ಕಾಲದ ಬರಹಗಾರರು ತಮ್ಮ ಚಿಂತನೆಯ ವಿಚಾರಗಳನ್ನು ವಿವರಣಾತ್ಮಕ ನೆಲೆಯಲ್ಲಿ ನಿರೂಪಿಸುವ ಪ್ರಯತ್ನ ಮಾಡಿದರು. ಯಾವುದೇ ಕೃತಿಕಾರನಿಗೂ ತಮ್ಮ ಕಾಲದ ಸಾಮಾಜದ ಮೌಲ್ಯಗಳನ್ನು ಚಿತ್ರಿಸುತ್ತ ಪ್ರತಿಪಾದಿಸುವುದರೊಂದಿಗೆ ಆ ಕೃತಿ ಸಾಮಾಜಿಕವಾಗಿಯೂ ಮುಖ್ಯವಾಗುತ್ತದೆ. ಆ ಕಾರಣದಿಂದಲೇ ಸಾಹಿತ್ಯ ಮತ್ತು ಸಂಸ್ಕೃತಿ ಜೋಡುನುಡಿಗಳಾಗಿ ಬಳಕೆಯಾಗಿವೆ.

ಭಾಷೆಯಿಂದ ಸಾಹಿತ್ಯಕ್ಕೆ ಒಂದೇ ಹೆಜ್ಜೆಯ ಅಂತರ. ಸಾಹಿತ್ಯವೂ ಬದುಕನ್ನು ಪ್ರತಿಬಿಂಬಿಸುತ್ತದೆ. ಸಮಾಜದಲ್ಲಿ ಇರುವ ಮನುಷ್ಯ ಸಾಹಿತ್ಯದ ಕೇಂದ್ರ ಶಕ್ತಿ. ಮನುಷ್ಯನ ಆಲೋಚನೆ, ಕಲ್ಪನೆ, ಅನುಭವ, ತಿಳುವಳಿಕೆ ಇವು ಸಾಹಿತ್ಯದ ಮೂಲಕ ಅಭಿವ್ಯಕ್ತಿಯನ್ನು ಪಡೆಯುತ್ತದೆ. ಮನುಷ್ಯನನ್ನು ಲವಲವಿಕೆಯಿಂದ ಮುಟ್ಟುವ, ತಟ್ಟುವ, ಚಲನಶೀಲವನ್ನಾಗಿ ಮಾಡುವ ಮತ್ತು ಆ ಮೂಲಕ ಕಲಿಸುವ ಕೆಲಸವನ್ನು ಸಾಹಿತ್ಯ ಮಾಡುತ್ತದೆ. ಶಾಂತಿ, ಪ್ರಗತಿ ಒಳ್ಳೆಯತನ ಮಹತ್ವ ಇವುಗಳ ದಾರಿಯಲ್ಲಿ ಚಲಿಸುವುದು ಮತ್ತು ಕ್ರೌರ್ಯ, ಸ್ವಾರ್ಥ,

ವಂಚನೆಯಂತಹ ದುರಂತಗಳನ್ನು ದೂರ ಮಾಡುವುದು ಸಾಹಿತ್ಯದ ಉದ್ದೇಶ. ಮನುಷ್ಯನನ್ನು ತನ್ನ ಸಹಜ ಬಣ್ಣಗಳಲ್ಲಿ ಕಾಣಿಸುವ ಕನ್ನಡಿಯ ಕೆಲಸವನ್ನು ಸಾಹಿತ್ಯ ನಿರ್ವಹಿಸುತ್ತದೆ. ವರ್ತಮಾನದ ಸಂಗತಿಗಳನ್ನು ಸುಧಾರಿಸುವುದು, ಭವಿಷ್ಯದ ವಿಚಾರಗಳನ್ನು ಕಾಣುವುದು, ಉತ್ತಮವಾದದನ್ನು ಮೆಚ್ಚುವುದು, ಕೆಡುಕನ್ನು ದೂರೀಕರಿಸುವುದು ಒಳಿತನ್ನು ಹಿಂಬಾಲಿಸುವುದು ಇದನ್ನು ಮಾಡಲು ಸಾಹಿತ್ಯ ಸಹಕಾರಿ. ಬಾಲ್ಯದಿಂದ ಬದುಕಿನ ಕೊನೆಯವರೆಗೆ ಮನುಷ್ಯನ ಬದುಕಿನ ವಿಭಿನ್ನ ಆಯಾಮಗಳನ್ನು ಸಾಹಸಗಾತೆಯನ್ನು ಕೇಳುವುದು ಮತ್ತು ಓದುವುದು ಎಲ್ಲ ಕಾಲಕ್ಕೂ ಆತನನ್ನು ರೋಮಾಂಚನಗೊಳಿಸುತ್ತದೆ.

ಸಾಹಿತ್ಯದಲ್ಲಿನ ಆಸಕ್ತಿ ಬದುಕಿನುದ್ದಕ್ಕೂ ಮನುಷ್ಯ ಎಲ್ಲಾ ಅಡೆತಡೆಗಳ ವಿರೋಧ ಸಂಕಟಗಳ ಬದುಕಿನ ಪ್ರಯಾಣದಲ್ಲಿ ಜೀವಂತವಾಗಿರಿಸುತ್ತದೆ. ಬದುಕಿನ ವಾಸ್ತವತೆಯಿಂದ ಬದುಕಿನ ಛಾಯೆಯ ಕಡೆಗೆ ಅವನು ಪಡೆಯುವ ತೃಪ್ತಿ ಸಾಹಿತ್ಯದ ಮೂಲಕ ಆಕರ್ಷಣೀಯವಾಗಿರುವಂತೆ ಬಹಳ ಬಾರಿ ನಿಜವಾದ ವಸ್ತುವಿಗಿಂತ ವಸ್ತುವಿನ ಛಾಯೆಯೇ ಹೆಚ್ಚು ಆಕರ್ಷಕವಾಗಿರುತ್ತದೆ. ಮನುಕುಲದ ಕಲ್ಪನಾ ಶಕ್ತಿಯನ್ನು ಸಾಹಿತ್ಯದಷ್ಟು ಗಾಢವಾಗಿ ಇನ್ನಾವುದೂ ಕಲಕಿಲ್ಲ. ಸಾಹಿತ್ಯ ಮನುಷ್ಯರ ಬುದ್ಧಿ, ಜ್ಞಾನ ಅನುಭಾವ, ತಾತ್ವಿಕತೆ ,ಸ್ವಂತಿಕೆ ಇವುಗಳ ಅತ್ಯಂತ ಶುದ್ಧ ಮತ್ತು ಸ್ಪಷ್ಟ ಅಭಿವ್ಯಕ್ತಿಯಾಗಿರುವುದೇ ಇದಕ್ಕೆ ಕಾರಣ. ಒಂದು ಬಗೆಯಲ್ಲಿ ಅತ್ಯುತ್ತಮ ಮತ್ತು ಉಚ್ಚತಮವಾಗಿರುವುದರ ಸೃಷ್ಟಿಶೀಲ ಅಭಿವ್ಯಕ್ತಿ ಇದು.

ಸಾಹಿತ್ಯದ ಕುರಿತ ಈ ವಿಚಾರಗಳನ್ನು ಇರಿಸಿಕೊಂಡು ಕನ್ನಡ ಸಾಹಿತ್ಯದ ಆರಂಭದ ಬರವಣಿಗೆಗಳನ್ನು ಅರ್ಥೈಸಿಕೊಳ್ಳುವುದು ಬಹಳ ಮುಖ್ಯ. ಹೊಸಗನ್ನಡ ಸಾಹಿತ್ಯದಲ್ಲಿ ಪಂಥ ಮತ್ತು ಪ್ರಕಾರಗಳು ಹುಟ್ಟಿಕೊಂಡು ಅತ್ಯಂತ ಶ್ರೀಮಂತವಾಗಿ ಬೆಳೆದ ಸಾಹಿತ್ಯದ ಸೂಕ್ಷ್ಮ ಎಳೆಗಳನ್ನು ಅರ್ಥೈಸುವುದೂ ಬಹಳ ಮುಖ್ಯ. ಕನ್ನಡದಲ್ಲಿ ದೀರ್ಘ ಗದ್ಯ ಕಾದಂಬರಿಯಂತಹ ಪ್ರಕಾರದ ಮೂಲ ಸಂಸ್ಕೃತ ಮತ್ತು ಇಂಗ್ಲಿಷ್ ಎಂಬ ಚರ್ಚೆಗಳು ಬಹಳ ದೀರ್ಘವಾಗಿ ನಡೆದಿವೆ. ಈ ಬಗ್ಗೆ ಡಿ ಆರ್ ನಾಗರಾಜ ಹೀಗೆ ನುಡಿಯುತ್ತಾರೆ. "ಕಾದಂಬರಿಯ ಉಗಮ ಇರುವುದು ವಸಾಹತೀಕರಣದ ಜೊತೆಗೆ ಅಥವಾ ಇನ್ನೂ ನಿರ್ದಿಷ್ಟವಾಗಿ ಹೇಳುವುದಾದರೆ ಪರಕೀಯ ಯಜಮಾನ ಸಂಸ್ಕೃತಿ ಮತ್ತು ದೇಸೀ ಸಂಸ್ಕೃತಿಗಳ ನಡುವಿನ ಮುಖಾಮುಖಿಯಲ್ಲಿ ಕಾದಂಬರಿ ಹುಟ್ಟುತ್ತದೆ. ದೇಸಿ ಮಧ್ಯಮ ವರ್ಗ ರೂಪುಗೊಂಡು ತನಗೊಂದು ಆಧುನಿಕ ಸಾಂಸ್ಕೃತಿಕ ವ್ಯಕ್ತಿತ್ವ ನಿರ್ಮಾಣ ಮಾಡಿಕೊಳ್ಳುವಾಗ ಉಂಟಾಗುವ ದ್ವಂದ್ವದಲ್ಲಿ ಕಾದಂಬರಿ ಹುಟ್ಟುತ್ತದೆ. ಪರಕೀಯ ಯಜಮಾನ ಸಂಸ್ಕೃತಿ ದೇಸೀ ಮಧ್ಯಮ ವರ್ಗದ ಒಳಗೇ ಹೊಕ್ಕು ಭದ್ರವಾಗಿ ಕೂತಿದೆ. ಅದು ಹಳೆಯ ದೇಸೀ ಜೊತೆಗೆ ಮುಖಾಮುಖಿಯಾಗಿ ದೇಸಿಯನ್ನು ಟೀಕಿಸುವ, ವಿಮರ್ಶಿಸುವ ಅದನ್ನು ತನ್ನ ಜೊತೆಗೆ ಸೆಳೆದುಕೊಳ್ಳುವ ಪ್ರಯತ್ನ ಮಾಡುತ್ತದೆ. ದೇಸೀ ಕೂಡಾ ತನಗೆ ಸಾಧ್ಯವಾದಷ್ಟು ಪ್ರತಿಭಟನೆಯನ್ನು ಪರಕೀಯ ಯಜಮಾನನನ್ನು ಟೀಕಿಸುವ ಕೆಲಸ ಮಾಡುತ್ತದೆ. ಭಾರತದ ಅನೇಕ ಭಾಷೆಗಳ ಮೊದಲ ಕಾದಂಬರಿಗಳ ಮೂಲ ಅನುಭವ ಇದು. ಹೀಗಾಗಿ ಇಲ್ಲಿ ಒಂದು ಇಡೀ ಜನಾಂಗದ ಅನುಭವದ ಆತ್ಮವಿಮರ್ಶೆ ಪ್ರಧಾನವಾಗಿ ಕಾಣುತ್ತದೆ. ಹೀಗಾಗಿ ಇದರ ತಾರ್ಕಿಕ ಪರಿಣಾಮ ಎಂಬಂತೆ ಕಾದಂಬರಿ

ಘಟನಾ ಪ್ರಧಾನವಾಗಿ ಬಿಡುತ್ತದೆ. ಸಾಮಾಜಿಕ ಗುಂಪುಗಳ ಅನುಭವ ಮುಖ್ಯ ನೆಲೆಗೆ ಬಂದು ನಿಂತು ಕಾದಂಬರಿಯನ್ನು ನಿಯಂತ್ರಿಸುತ್ತದೆ." (ವಿವೇಕ್ ರೈ ಬಿ.ಎ ೧೯೮೫, ಪುಟ –೧೪)

ಕಾದಂಬರಿಯ ಚರಿತ್ರೆಯಲ್ಲಿ ಗುಲ್ವಾಡಿಯವರು 'ಇಂದಿರಾಬಾಯಿ' ಗೊಂದಲವಿಲ್ಲದೆ ಬರೆಯುತ್ತಾರೆ. ಸಮಸ್ಯೆಯೊಂದನ್ನು ಹೇಳುವಾಗ ಆದರ್ಶದ ಮತ್ತು ವಾಸ್ತವದ ಮುಖಾಮುಖಿಯಲ್ಲಿ ತನ್ನ ದೇಸಿಯತೆಯ ಬಗೆಗಿನ ಸ್ಪಷ್ಟತೆ ಮತ್ತು ನಿಖರತೆಯೊಂದಿಗೆ ಸಾಂಸ್ಕೃತಿಕ ಮುಖಾಮುಖಿಯೂ ಇದೆ. ಹೊಸಗನ್ನಡದ ಆರಂಭದ ಕಾಲದ ಬರಹ ನವೋದಯ ಕಾಲ ಘಟ್ಟದಲ್ಲಿಯೇ ವಿಚಾರಕ್ಕಾಗಿ ಬರೆದ ಸಾಹಿತ್ಯಿಕ ಬರವಣಿಗೆಗಳಾದ ಗದ್ಯ–ಪದ್ಯಗಳು ತನ್ನದೇ ಆದ ಅವಶ್ಯಕತೆಯನ್ನು ಹೊಂದಿದೆ. ಒಂದೆಡೆ ದೇಸೀಯ ಏಕತೆಗೆ ಪ್ರಶ್ನೆಯಲ್ಲಿ ಪರಂಪರೆಯ ಕುರಿತಾದ ಒಲವಿನೊಂದಿಗೆ ಆದರ್ಶ ಸಾಮ್ರಾಜ್ಯದ ಪರಿಕಲ್ಪನೆಯನ್ನು ಆದರ್ಶವಾದಿ ನೆಲೆಯಲ್ಲಿ ನೋಡದೆ ವಾಸ್ತವಿಕತೆಯ ಅರ್ಥವನ್ನು ಅರ್ಥೈಸಿಕೊಳ್ಳಬೇಕು. ಆದರ್ಶ ವಾಸ್ತವಗಳ ತಾಕಲಾಟದಲ್ಲಿ ಪರಂಪರೆಗೆ, ಜೊತೆಗೆ ಮುಖಾಮುಖಿಯಾಗುವ ಪರಂಪರೆ ಕುರಿತಾದ ಕಾಳಜಿ ಮತ್ತು ಒಲವು ಪರಂಪರೆಯನ್ನು ವೈಭವೀಕರಿಸದೆ ವಸ್ತುನಿಷ್ಟವಾಗಿ ಬರೆಯಲು ಸಾಧ್ಯವಾಗಿದೆ. ಪರಂಪರೆಯ ಮುಖಾಮುಖಿಯಲ್ಲಿ ಎದುರಾದ ಬಿಕ್ಕಟ್ಟುಗಳು ಕ್ಲೀಷೆಗಳಾಗದೆ ವಿಸ್ತರಿಸಲು ಸಾಧ್ಯವಾಗಿದೆ.

ಸಾಹಿತ್ಯ ಸಮಕಾಲೀನವಾಗಿರಬೇಕು ವಾಸ್ತವಿಕ ಪ್ರಪಂಚದ ಸತ್ಯಗಳನ್ನು ಪ್ರತಿಬಿಂಬಿಸಬೇಕು. ಸುತ್ತಲ ಜನ ಜೀವನದೊಂದಿಗೆ ನೇರವಾದ ಸಂಬಂಧವನ್ನಿಟ್ಟುಕೊಂಡಿರಬೇಕು ಎಂಬುದು ಈ ಯುಗದ ಅಪೇಕ್ಷೆಗಳಾಗಿತ್ತು. ಯುರೋಪಿನ ಕೈಗಾರಿಕಾ ಕ್ರಾಂತಿಯಿಂದ ಹುಟ್ಟಿಕೊಂಡ ಎಲ್ಲ ಬದಲಾವಣೆಗಳಲ್ಲಿ ಸಂಕ್ರಮಣ ಕಾಲದ ದ್ವಂದ್ವಗಳನ್ನು ಹಿಡಿಯಲು ಚಲನಶೀಲ ಜಗತ್ತಿನ ದಿಕ್ಕು ದೆಸೆಗಳನ್ನು ದಾಖಲಿಸಲು ಹೊಸ ಪ್ರಕಾರವೊಂದನ್ನು ಲೇಖಕ ಅನ್ವೇಷಿಸಿಕೊಳ್ಳಬೇಕಾಯಿತು. ಕಾದಂಬರಿ ಪ್ರಕಾರದ ಉಗಮ ಮತ್ತು ಬೆಳವಣಿಗೆಯ ಹಿಂದಿನ ಪ್ರಧಾನ ಪ್ರೇರಣೆ ಕಾದಂಬರಿಯ ಪ್ರಕಾರದ ಉಗಮಕ್ಕೂ ಒಂದು ಸಮಾಜದ ಆಧುನೀಕರಣದ ಪ್ರಕ್ರಿಯೆಗೂ ನಿಕಟ ಸಂಬಂಧವಿದೆ ಎನ್ನಲಾಗುತ್ತದೆ. ಬದಲಾವಣೆ ಸಮಾಜದ ಒಳಗಿನ ಸತ್ವ ಒತ್ತಡಗಳಿಂದಲೇ ಬೆಳೆದು ಬಂದಿತು. ಕಾದಂಬರಿಯ ಉಗಮ ಮತ್ತು ಬೆಳವಣಿಗೆಯನ್ನು ಕೈಗಾರಿಕೀಕರಣದ ಪರಿಣಾಮವಾಗಿ ಹುಟ್ಟಿಕೊಂಡ ಹೊಸ ಸಾಮಾಜಿಕ, ರಾಜಕೀಯ, ಆರ್ಥಿಕ, ಮತ್ತು ಸಾಂಸ್ಕೃತಿಕ ಪ್ರಕ್ರಿಯೆ ಸಂದರ್ಭದಲ್ಲಿ ಚರ್ಚಿಸಲಾಗುತ್ತದೆ.

ಹತ್ತೊಂಬತ್ತನೇ ಶತಮಾನದ ಉತ್ತರಾರ್ಧದಲ್ಲಿ ನಮ್ಮ ಗದ್ಯ ಬರವಣಿಗೆ ಹಲವು ಪ್ರಯೋಗಗಳಿಗೆ ತೆರೆದುಕೊಂಡಿದೆ. ಇಂದು ನಾವು ಕಾದಂಬರಿ ಎಂದು ಯಾವುದನ್ನು ಗುರುತಿಸುತ್ತೇವೋ ಅದು ಖಚಿತ ರೂಪವನ್ನು ಪಡೆಯಲು ನಮ್ಮ ಲೇಖಕರು ಹಲವು ಬಗೆಯ ಸೃಜನಾತ್ಮಕ ಬಿಕ್ಕಟ್ಟುಗಳಿಗೆ ಮುಖಾಮುಖಿಯಾಗ 'ಬೇಕಾಯಿತು. ತೃತೀಯ ಜಗತ್ತಿಗೆ ಆಧುನಿಕತೆಯ ಪ್ರವೇಶ ವಸಾಹತೀಕರಣದ ಸಂದರ್ಭದಲ್ಲಿ ಆಯಿತು. ಆಧುನಿಕತೆ ಹೊರಗಿನಿಂದ ಬಂದದ್ದರಿಂದ ಉಂಟಾದ ಪರಿಣಾಮಗಳು ತುಂಬ ಸಂಕೀರ್ಣವಾದವು. ಆಧುನಿಕತೆ ನಮಗೆ ವರವೋ ಶಾಪವೊ ಅಥವಾ ಎರಡೂ ಹೌದೋ ಎಂಬ ದ್ವಂದ್ವದಿಂದ ನಾವಿನ್ನು ತಪ್ಪಿಸಿಕೊಂಡಿಲ್ಲ ಇಂತಹ ಸಾಂಸ್ಕೃತಿಕ ದ್ವಂದ್ವ ಹಲವು ವಿನ್ಯಾಸಗಳಲ್ಲಿ ಗೋಚರಿಸಿಕೊಂಡಿದೆ. ಒಂದು ಸಮಾಜ

ತನಗೆ ತಾನು ಮುಖಾಮುಖಿಯಾಗುವ ತನ್ನನ್ನು ತೀವ್ರ ಸ್ವವಿಮರ್ಶೆಗೆ ಒಡ್ಡಿಕೊಳ್ಳುವ ವಿನ್ಯಾಸದ ಜತೆ ಜತೆಯಲ್ಲಿ ತನ್ನನ್ನು ವಸಾಹತುವಾಗಿ ಮಾಡಿಕೊಂಡ ಪರಕೀಯ ಆಡಳಿತಕ್ಕೆ ತನ್ನೆಲ್ಲ ವೈರುಧ್ಯಗಳೊಂದಿಗೆ ಮುಖಾಮುಖಿಯಾಗುವ ವಿನ್ಯಾಸದ ಸಾವಯವ ಸಾಹಿತ್ಯ ಕೃತಿಗಳು ವಿಶಿಷ್ಟವಾಗುತ್ತದೆ.

ನವೋದಯ ಕಾಲಘಟ್ಟದಲ್ಲಿ ಭಾವುಕತೆಗೆ ಹೆಚ್ಚು ಒತ್ತುಕೊಟ್ಟು ವಿಚಾರ ಕ್ರಾಂತಿಗೆ ಆಹ್ವಾನ ನೀಡುತ್ತಾ ಬರವಣಿಗೆ ಆರಂಭವಾಯಿತು. ತಾವು ಬದುಕುತ್ತಿರುವ ಲೋಕವನ್ನು ಹೊಸ ರೂಪ, ಆಕಾರಗಳಲ್ಲಿ ಕಾಣಬಯಸುವ ಅದಮ್ಯ ಬಯಕೆಗಳು ಬರಹಗಳ ರೂಪವನ್ನು ಪಡೆದು ಎಲ್ಲ ಮೀರಿಸುವ ವಿಚಾರಗಳಲ್ಲಿ ಹಳತನ್ನು ಮರೆತು ಹೊಸತನ್ನು ನಿರೀಕ್ಷಿಸುವ ಸಂಭ್ರಮಿಸುವ ಅಭಿವೃದ್ಧಿ ವಿಕಸನಗಳ ನಿರೀಕ್ಷೆಗಳೊಂದಿಗೆ ಪ್ರಕೃತಿಯಾರಾಧನೆಯ ದ್ಯೋತಕಗಳು ಕಾಣಸಿಗುತ್ತದೆ.

ಜಾಗತೀಕರಣ ಪೂರ್ವದ ಬರವಣಿಗೆಯು ಸಡಗರ ಸಂಭ್ರಮಗಳೊಂದಿಗೆ ಬದಲಾದರೆ ಪಲ್ಲಟಗೊಂಡ ಮೌಲ್ಯಗಳ ಚಿಂತನೆ, ಚಾರಿತ್ರಿಕ ದಾಖಲೀಕರಣ, ವರ್ತಮಾನದ ಸಾಮಾಜೀಕರಣಗಳು ವಿಷಯ ವಸ್ತುಗಳಾಗಿ ಸಂವೇದನೆಯ ಹೊಸ ಮಗ್ಗುಲುಗಳು ಲಭ್ಯವಾದವು. ಗದ್ಯ ಸಾಹಿತ್ಯದಲ್ಲಿ ಕಾದಂಬರಿಗಳ ಮರು ಓದು ಸಂಸ್ಕೃತಿ ಚಿಂತನೆಯ ವಿಚಾರಗಳನ್ನು ಅರುಹಲು ವಿಸ್ತರಿಸಲು ಕಾರಣವಾಗಿದೆ. ಕನ್ನಡದ ಮೊದಲ ಕಾದಂಬರಿಯಾದ ಗುಲ್ವಾಡಿ ವೆಂಕಟರಾಯರ ಇಂದಿರಾಬಾಯಿ (೧೮೯೯), ಭಾಗೀರಥಿ(೧೯೦೦), ಅಲ್ಲದೆ ಬೋಳಾರ ಬಾಬುರಾಯರ ವಾಗ್ದೇವಿ (೧೯೦೫), ಕೆರೂರು ವಾಸುದೇವಾಚಾರ್ಯರ ಇಂದಿರಾ(೧೯೦೮), ಎಂ.ಎಸ್ ಪುಟ್ಟಣ್ಣನವರ ಮಾಡಿದುಣ್ಣೋ ಮಹಾರಾಯ (೧೯೧೫) ಹೀಗೆ ಸುಮಾರು ಇನ್ನೂರಕ್ಕೂ ಹೆಚ್ಚು ಕಾದಂಬರಿಗಳನ್ನು ೧೯೩೦ ಕ್ಕಿಂತ ಪೂರ್ವದಲ್ಲಿಯೇ ಗುರುತಿಸಬಹುದು.

ಕನ್ನಡದ ಪ್ರಮುಖ ಬರಹಗಾರರು ನವೋದಯದ ಕಾಲದಲ್ಲಿಯೇ ತಮ್ಮ ಚಿಂತನೆಯ ಹೊಳಹುಗಳನ್ನು ಆ ಕಾಲದಲ್ಲಿ ಬೇರೆ ಸ್ವರೂಪದಲ್ಲಿ ನಿರೂಪಿಸಿದ್ದು ಸಾಹಿತ್ಯದ ಒಂದು ಗಂಭೀರ ಚಿಂತನೆಯಾಗಿ ರೂಪು ಪಡೆಯಲು ಸಾಧ್ಯವಾಯಿತು. ಪರಂಪರೆಯನ್ನು ವೈಭವೀಕರಿಸುತ್ತ ಅಚ್ಚರಿ, ಬೆರಗು, ಸಂಭ್ರಮಗಳೊಂದಿಗೆ ಭಾವನಾತ್ಮಕವಾದ ದಿನ ನಿತ್ಯದ ವಸ್ತುಗಳು ಸಾಹಿತ್ಯಕ್ಕೆ ಆಕಾರಗಳಾದವು. ಅದನ್ನು ದಾಟಿ ಚಾರಿತ್ರಿಕವಾದ ಐತಿಹಾಸಿಕ ಕಾದಂಬರಿಗಳ ನಿರೂಪಣೆಯೂ ಸಾಧ್ಯವಾಯಿತು. ಚರಿತ್ರೆಯ ಬಗ್ಗೆ ಬರೆಯುವಾಗಲೂ ಇತಿಹಾಸದ ಸತ್ಯಗಳನ್ನು ಐತಿಹ್ಯಗಳಾಗಿಸದೆ ಅತಿರಂಜಕತೆ, ವೈಭವೋಪೇತ ವಿಚಾರಗಳು ರಂಜಿಸತೊಡಗಿದವು. ಎಂ.ಎಸ್ ಪುಟ್ಟಣ್ಣ, ತ.ರಾ.ಸು, ಮಾಸ್ತಿಯವರ ಬರಹಗಳು ಚಾರಿತ್ರಿಕ ಸತ್ಯಗಳಾದಗಲೂ ಹೇಳುವಲ್ಲಿನ ನಿಬಂಧತೆ ಮತ್ತು ವೈರುಧ್ಯಗಳನ್ನು ಗುರುತಿಸಬಹುದು. ಅತ್ಯಂತ ವಿಸ್ತಾರವಾದ ಓದು ಮತ್ತು ಸಾಮಾಜಿಕ ವ್ಯತ್ಯಯಗಳನ್ನು ದಾಖಲಿಸುವ ಸಂರಚನೆಗಳಾಗಿ ಈ ಬರಹಗಳನ್ನು ನಿರ್ವಚಿಸಿಕೊಳ್ಳುತ್ತಲೇ ಕೃತಿ ರಚನೆ ಮಾಡಿದರು.

ನವೋದಯ ಪರಂಪರೆಯ ಸಾಮಾಜಿಕ ವಿಷಯ ವಸ್ತುಗಳನ್ನು ದಾಟಿ ಪ್ರಗತಿಶೀಲ ಪಂಥದ ಸಾಹಿತ್ಯ ಚಳುವಳಿಯಲ್ಲಿ ಸಮಾಜ ವಿಮರ್ಶೆಯನ್ನು ಮಾಡುತ್ತಾ ಸಾಮಾಜಿಕ ಅಸಮಾನತೆಯ ಬಗೆಗೆ ಬಹಳ ಗಂಭೀರ ಚರ್ಚೆಗಳಾದವು. ಸಮಾಜದ ಲೋಪದೋಷಗಳನ್ನು ಹೇಳುತ್ತಲೇ ಸಂಘರ್ಷವನ್ನು ಹುಟ್ಟು ಹಾಕಿದ ಪಂಥದ

ಮೂಲಕ ಬರೆದ ಸಾಂಸ್ಕೃತಿಕ ಚಿಂತನೆಯ ಬರಹಗಾರರೂ ಕರಾವಳಿಯಲ್ಲಿದ್ದರು. ಎಪ್ಪತ್ತರ ದಶಕದಲ್ಲಿ ಆರಂಭವಾದ ನವ್ಯ ಚಳುವಳಿ ವ್ಯಕ್ತಿ ಕೇಂದ್ರಿತ ಸಮುದಾಯದ ಪ್ರಶ್ನೆ ಯನ್ನು ಅಸ್ತಿತ್ವವಾದದ ಹಿನ್ನೆಲೆಯಲ್ಲಿ ಎತ್ತಿತ್ತು.

ಆಯಾಯ ಪಂಥಗಳಿಗೆ ಅನುಗುಣವಾಗಿ ಹುಟ್ಟಿಕೊಂಡ ತಾತ್ವಿಕತೆಯಲ್ಲಿ ಸಂಸ್ಕೃತಿ ಚಿಂತನೆಯ ಬದಲಾದ ಸ್ವರೂಪಗಳನ್ನು ಅರ್ಥೈಸಿಕೊಳ್ಳಲು ಸಾಧ್ಯವಾಗುತ್ತದೆ. ಸಾಹಿತ್ಯವು ಸಂಸ್ಕೃತಿಯ ಒಂದು ಭಾಗ ಎಂದು ನಿರ್ವಚಿಸಿಕೊಳ್ಳುವಲ್ಲಿ ಕೃತಿಯೊಂದು ಹೊಸ ದೃಷ್ಟಿಯ ಓದು ಸಾಧ್ಯವಾಗಿದೆ.

ನವೋದಯ, ಪ್ರಗತಿಶೀಲ, ನವ್ಯ, ದಲಿತ ಬಂಡಾಯ ಮತ್ತು ಸ್ತ್ರೀವಾದಿ ಸಾಹಿತ್ಯ ಪಂಥಗಳು ತಮ್ಮ ಸುತ್ತಣ ಸಮಾಜವನ್ನು ಕಂಡ ರೀತಿಗಳು ಭಿನ್ನ ದೃಷ್ಟಿಕೋನದವುಗಳು ಆಗಿರುವುದರಿಂದಲೇ ಅವುಗಳ ಅಭಿವ್ಯಕ್ತಿಯು ಭಿನ್ನವಾಗುತ್ತ ಸಾಗಿತು. ಸಾಹಿತ್ಯ ವಿಮರ್ಶೆ ವಿಭಿನ್ನ ಸಿದ್ಧಾಂತಗಳಿಂದ ಕೃತಿಗಳನ್ನು ಹೊಸ ನೆಲೆಯಲ್ಲಿ ನಿರ್ವಚಿಸಿಕೊಳ್ಳುವುದು ಸಾಧ್ಯವಾದರೆ ಅಂತಹ ಓದಿನ ಹಿನ್ನೆಲೆಯೊಂದಿಗೆ ಪಡೆದುಕೊಳ್ಳುವ ಅರ್ಥಗಳು ಹೊಸ ವಿಸ್ತಾರವನ್ನು ಪಡೆಯಲು ಸಾಧ್ಯವಾಗುತ್ತದೆ.

ಕಾದಂಬರಿ ಒಂದು ಸಾಮಾಜಿಕ ಅಗತ್ಯವಾಗಿ ಮತ್ತು ತನ್ನ ಮೂಲಭೂತ ಗುಣವಾದ ವಾಚಕೀಯ ಮನರಂಜನೆಯ ಪೂರೈಕೆಗಾಗಿ ಕಾದಂಬರಿ ರಚಿತವಾಗಿದ್ದರೂ ಅದರ ಆಯಾಮ ಕಾಲಕಾಲಕ್ಕೆ ಬದಲಾಗುತ್ತಾ ಹೋಗುವುದು ಸ್ವಾಭಾವಿಕ. ಕಾದಂಬರಿಯ ಬರವಣಿಗೆಯಲ್ಲಿ ಕೇವಲ ವಾಚನಾಭಿರುಚಿಯ ವಿವರವಾದ ನಿರೂಪಣೆಗಳ ಜತೆಗೆ ವಿಸ್ತೃತ ವಿವರಣೆಗಳ ಸಮಾಜಶಾಸ್ತ್ರೀಯ ನೆಲೆಯ ಚಿಕಿತ್ಸಕ ದೃಷ್ಟಿಯೂ ಬಹಳ ಮುಖ್ಯ. ಸಾಹಿತ್ಯವನ್ನು ಕಲೆಯ ಭಾಗವಾಗಿ ಗಮನಿಸುತ್ತಲೇ ಮಾನವ ಶಾಸ್ತ್ರದ ಹಿನ್ನೆಲೆಯಲ್ಲಿಯೂ ಅರಿಯುವುದು ಕಾದಂಬರಿಯ ಓದಿಗೆ ಹೊಸ ವಿಸ್ತಾರವನ್ನು ಕೊಡುತ್ತದೆ. ವಾಚಕನ ಓದು ಯಾವ ಪ್ರಜ್ಞೆಯದು ಎಂಬ ಪ್ರಶ್ನೆಯನ್ನು ವಿಶ್ಲೇಷಿಸಿಕೊಳ್ಳಬೇಕಾಗುತ್ತದೆ.

ಆರಂಭದ ಬರಹಗಾರರೆಲ್ಲ ಭಾವುಕತೆಗೆ ಹೆಚ್ಚು ಒತ್ತು ಕೊಟ್ಟು ಬರೆದರೂ ವಾಸ್ತವತಾವಾದಿ ನಿರೂಪಣೆಗಳ ಅಶಯವೂ ಮುಖ್ಯವಾಗಿತ್ತು. ಯಾವುದೇ ಲೇಖಕನಿಗೂ ತಾನು ಬರೆಯುವ ಕಾಲಕ್ಕೆ ನಿರ್ದಿಷ್ಟ ಉದ್ದೇಶ ಕಾರಣಗಳಿದ್ದರೂ ಕೃತಿಯ ಆಶಯಗಳಿಗೆ ಕಾಲಾಂತರದಲ್ಲಿ ವಿಸ್ತರಿಸಿ ಬೆಳೆದ ಅಂಶವನ್ನು ಗುರುತಿಸಬಹುದು. ವಿಷಯವೊಂದನ್ನು ಪ್ರಸ್ತುತ ಪಡಿಸುವ ವಿಚಾರದೊಂದಿಗೆ ತಾನು ಅದನ್ನು ನಿರೂಪಿಸಿದ ವಿವರಗಳು ವಿಭಿನ್ನವಾಗುತ್ತದೆ.

ಶಿವರಾಮ ಕಾರಂತರು, ನಿರಂಜನ, ವಿಶುಕುಮಾರ್ ಇವರೆಲ್ಲ ಆ ಕಾಲದಲ್ಲಿ ಬರೆಯಲಾರಂಭಿಸಿದರು. ಜಾಗತೀಕರಣ ಪೂರ್ವದ ಬರವಣಿಗೆಗಳಲ್ಲಿರುವ ಭವ್ಯತೆ, ರಮ್ಯತೆಗಳನ್ನು ನಿರೂಪಿಸುತ್ತ ಬರವಣಿಗೆ ಅನುಭವ ಜನ್ಯವಾದ ನೆಲೆಯಲ್ಲಿ ಬರಹಗಳನ್ನು ಬರೆದರು. ಕಾರಂತರು ಬರೆದ ಕಾದಂಬರಿಗಳನ್ನು ಬೇರೆ ಬೇರೆ ಆಯಾಮಗಳಲ್ಲಿ ಇಂದಿಗೂ ವಿಶ್ಲೇಷಿಸಲು ಸಾಧ್ಯವಾಗಿದೆ. ಆ ಮೂಲಕ ಕಾರಂತರ ಸಾಹಿತ್ಯಿಕ ರಚನೆ ಚಾರಿತ್ರಿಕವಾಗಿಯೂ ಮುಖ್ಯವೆನಿಸುತ್ತದೆ. ಹೊಸ ಓದಿನ ವಿಸ್ತಾರಗಳನ್ನು ಪಡೆಯುತ್ತದೆ.

### ೫.೨ ಅಭಿವ್ಯಕ್ತಿಯ ಚಾರಿತ್ರಿಕ ನೆಲೆ : ಕಾರಂತರ ಕಾದಂಬರಿಗಳು

ಕರಾವಳಿ ಕರ್ನಾಟಕದ ಬರಹಗಾರರಾದ ಶಿವರಾಮ ಕಾರಂತರು ಕಲೆ ಮತ್ತು ಸಾಹಿತ್ಯದ ಕುರಿತಾದ ಸಂವೇದನೆಗಳನ್ನು ತಮ್ಮದೇ ವಿಶಿಷ್ಟ ಚಿಂತನಾ ಕ್ರಮದಲ್ಲಿ ಅನ್ವಯಿಸಿಕೊಂಡವರು. ಯಾವ ಅನುಭವಗಳನ್ನು ತಾನು ಗಳಿಸಿಕೊಂಡಿದ್ದೇನೋ ಅದನ್ನು ಬರಹಗಳ ಮೂಲಕ ಮೂರ್ತ ರೂಪಕ್ಕಿಳಿಸಿ ಅಮೂರ್ತತೆಯ ಬಗೆಗೆ ಬೆರಗಾಗದೆ ಜೀವನ ಧರ್ಮವನ್ನು ಪ್ರತಿಪಾದಿಸಿದವರು. ಇದ್ದುದನ್ನು ಇದ್ದ ಹಾಗೆ ಹೇಳ ಬೇಕಾದರೂ ಇರುವ ಸತ್ಯಗಳ ಜೀವನ ದರ್ಶನದ ಅನುಭೂತಿಯನ್ನು ದಕ್ಕಿಸಿಕೊಂಡರು. ಹಾಗಾಗಿ ಅಂತಹ ಅಗಾಧ ನೆಲೆಯಲ್ಲೂ ತನ್ನ ಚಿಂತನಾ ಧಾರೆಯನ್ನು ಅರಿತುಕೊಳ್ಳಲು ಸಾಧ್ಯವಾಯಿತು.

೧೯೨೯ರಲ್ಲಿ ಕಾರಂತರು ತಾವು ನಡೆಸುತ್ತಿದ್ದ ವಸಂತ ಪತ್ರಿಕೆಯಲ್ಲಿ 'ಸೂಳೆಯ ಸಂಸಾರ' ಅಥವಾ 'ಕನ್ಯಾ ಬಲಿ' ಎಂಬ ಕಾದಂಬರಿಯನ್ನು ಧಾರಾವಾಹಿಯಾಗಿ ಪ್ರಥಮವಾಗಿ ಪ್ರಕಟಿಸಿದರು. ಆಗ ಅವರು ಕಾದಂಬರಿಗೆ ಬರೆದ ಮುನ್ನುಡಿ ಹೀಗಿದೆ. "ಈ ಲೇಖನಿಗೆ ದಯೆಯ ಅರಿವಿಲ್ಲ. ದಾಕ್ಷಿಣ್ಯದ ಗುರುತಿಲ್ಲ. ಸತ್ಯವೆಂದು ಕಂಡುದನ್ನು ಬಣ್ಣವಿಲ್ಲದೆ ಬಿಡಿಸಿ ಹೇಳುವ ಬಾಯಿ ಮಾತ್ರ ಉಂಟು. ಕಾದಂಬರಿಕಾರರ ಸಾಹಿತ್ಯ ಜಾಲದ ಅರಿವು ಇದಕ್ಕಿಲ್ಲ. ಜೇಡನ ಬಲೆಯಲ್ಲಿ ಹೊಗಿಸುವುದಿಲ್ಲ. ಕಣ್ಮರೆಯಾಗಿ ನಿಂತು ಕತ್ತಲಲ್ಲಿ ಕೊಲ್ಲುವ ಘಾತುಕತನವಿಲ್ಲ. ಕೊಲ್ಲುವ ಮನವಾದರೆ ಮುಚ್ಚು ಮರೆ ಇಲ್ಲದೆ ಕೊಲ್ಲುವೆನೆಂದು ನಿಚ್ಚ ಹೇಳಿ ಸಾಯಗೊಡುವ ದುರ್ದೈವಿ. ನಗುನಗುತ್ತಾ ಕತ್ತಿಯನ್ನೆತ್ತಿ ತರಕಾರಿಯನ್ನೆಷ್ಟು ನಿಶ್ಚಿಂತೆಯಿಂದ ಕೊಚ್ಚುವರೋ ಆ ರೀತಿ ಕತ್ತರಿಸುವ ಸಾಧನ ಮಾತ್ರ ನನಗೆ ಇದೆ." (ವಿವೇಕ ರೈ.ಬಿ.ಎ; ೧೯೮೭; ಪು ೨)

ಈ ಕೃತಿಯಲ್ಲಿ ಅಸಹಜತೆ ಎದ್ದು ಕಾಣುವಂತಿದೆ. ಅತಿ ಭಾವುಕತೆ ಮತ್ತು ನಾಟಕೀಯತೆಯಿಂದ ಕೃತಿಯ ಪಾತ್ರಗಳು ಕಾರಂತರ ಕೈಗೊಂಬೆಗಳಾಗುತ್ತದೆ ಎನ್ನುತ್ತಾರೆ. ಪ್ರೊ.ಎಸ್ ಅನಂತ ನಾರಾಯಣ 'ದೇವದೂತರು' ಕಾದಂಬರಿ ವಿಡಂಬನೆ,ಕಟಕಿಗಳಿಂದ ಸಮಾಜವನ್ನು ವಿಮರ್ಶಿಸುತ್ತದೆ. ನೀತಿ ಬೋಧೆ ಕಾದಂಬರಿಯ ಮುಖ್ಯ ಉದ್ದೇಶವಲ್ಲವಾದರೂ ಆರಂಭದ ಬರಹಗಳು ಹಾಗಿದ್ದರೂ, ನಂತರದಲ್ಲಿ ಸಾಮಾಜಿಕ ಸಂರಚನೆಗಳ ಬಗ್ಗೆ ವಿಶ್ಲೇಷಿಸುತ್ತಾರೆ. ತನ್ನ ಕಾಲಕ್ಕೆ ರಚನೆಯಾಗುತ್ತಿದ್ದ ಸಮಾಜ ಸುಧಾರಕ ಕಾದಂಬರಿಗಳಿಗಿಂತ ಭಿನ್ನವಾಗಿ ಕೃತಿಯು ಉಪದೇಶ ಉದ್ದುದ್ದನೆಯ ಭಾಷಣಗಳನ್ನು ಒಳಗೊಂಡಿರದೆ ಬರೆಯುತ್ತಿದ್ದರು. ನೀತಿ ಬೋಧೆಯನ್ನೇ ಮುಖ್ಯ ಉದ್ದೇಶವಾಗಿ ಇರಿಸಿಕೊಳ್ಳಲಿಲ್ಲ. ತಾನು ಹೇಳಬೇಕಾದ ವಿಚಾರಗಳನ್ನು ಕಾರಂತರು ಗ್ರಹಿಸಿದ ರೀತಿ ಅತ್ಯಂತ ವಿಭಿನ್ನ ಮಾದರಿಯದಾಗಿತ್ತು ಎನ್ನುವುದನ್ನು ಅರ್ಥೈಸಿಕೊಳ್ಳಬೇಕು.

ಬರವಣಿಗೆಯನ್ನು ಮುಂದುವರಿಸುತ್ತಾ ಸಾಗಿದ ಸೃಜನಶೀಲ ಮನಸ್ಸುಗಳಿಗೆ ಸಂಸ್ಕೃತಿ ಚಿಂತನೆಯ ವ್ಯಾಖ್ಯಾನಗಳಲ್ಲಿ ನಾವು ಗ್ರಹಿಸುವ ಪರಿ ಯಾವುದು ಎಂಬುದೂ ಪ್ರಶ್ನೆಯಾಗಿ ಕಾಡುತ್ತದೆ. ಕಾರಂತರು ತಮ್ಮ ಕಾಲದಲ್ಲಿದ್ದ ನೈತಿಕ ಮೌಲ್ಯವಾದಿ ಹಾಗೂ ಗತಕಾಲದ ರಾಜಕೀಯ ಚರಿತ್ರೆಯನ್ನು ವೈಭವೀಕರಿಸುವ ಎರಡು ಸಂಸ್ಕೃತಿ ಕಲ್ಪನೆಗಳನ್ನು ನಿರಾಕರಿಸುತ್ತಾರೆ. ಹಾಗೆಯೆ ಎಡಪಂಥೀಯರಂತೆ ಸಂಸ್ಕೃತಿಯನ್ನು ದುಡಿಮೆಯ ಜಗತ್ತಿಗೂ ಲಗತ್ತಿಸುವುದಿಲ್ಲ. ಬದಲಾಗಿ ನಿತ್ಯ ಬದುಕಿನ ಸಮಸ್ತ ಆಚರಣೆಗಳ ಭಾಗವೆಂದು ಭಾವಿಸುತ್ತಾರೆ. ಒಂದು ಸಮಾಜದ ನಂಬಿಕೆ ಆದರ್ಶ ಯೋಚನೆ ಮೊದಲಾದವು ಪರಂಪರೆಯಿಂದ ಒಂದು ಸ್ಥಿಮಿತಕ್ಕೆ ಬಂದು

ಆ ಬಳಗಕ್ಕೆ ಸೇರುವ ವ್ಯಕ್ತಿಗಳ ದಿನಚರಿಯಲ್ಲಿ ಮಾತು, ಮಂತ್ರ , ತಂತ್ರ, ಶಿಷ್ಟಾಚಾರಗಳಲ್ಲಿ ವ್ಯಕ್ತವಾಗುವ ಬಗೆಯನ್ನು ನಾವು 'ಸಂಸ್ಕೃತಿ' ಎಂದು ತಿಳಿಯಬೇಕಾಗಿದೆ. (ಮಲ್ಯ ಸಂ ೨, ೧೯೯೪: ಪುಟ, ೨೮೪) ಇಲ್ಲಿರುವುದು ಮಾನವ ಶಾಸ್ತ್ರದ ಸಾಂಪ್ರದಾಯಿಕ ಗ್ರಹಿಕೆಯಾದರೂ ಕಾರಂತರು ಸಂಸ್ಕೃತಿಯಲ್ಲಿ ಕಲೆಗಳ ಪಾತ್ರವನ್ನು ಪ್ರಮುಖವೆಂದು ಭಾವಿಸುತ್ತಾರೆ.

ಮಾನವನ ಜೀವನ ಸ್ವಭಾವತಃ ಭಾವ ಜೀವಿಯಾದುದರಿಂದ ತನ್ನ ಮನಸ್ಸಿನ ಸಂಸ್ಕಾರಕ್ಕೆ ತಕ್ಕಂತೆ ಆಯಾಯ ಕಾಲದ ಮನಸ್ಸಿನ ಭಾವ ಬಿಂಬಗಳಿಗೆ ರೂಪವನ್ನು ಕೊಡುತ್ತಲೇ ಬಂದಿದೆ. ಮನುಷ್ಯ ಸಂಸ್ಕೃತಿ ಬೆಳೆದು ಬಂದುದು ಇಂಥ ಚಟುವಟಿಕೆಗಳಿಂದಲೇ. ನಾಗರಿಕತೆಗಳು ಶ್ರೇಷ್ಠವೆನಿಸಿಕೊಂಡದ್ದು ಅವುಗಳಿಂದಲೇ ಆದುದರಿಂದಲೇ ಕಲೆಗಳಿಗೂ ಸಂಸ್ಕೃತಿಗೂ ಅತಿ ನಿಕಟವಾದ ಸಂಬಂಧವನ್ನು ಕಾಣುತ್ತೇವೆ. ಹೀಗೆ ಕಾರಂತರು ಮಾನವಶಾಸ್ತ್ರ ಹಾಗೂ ಸೌಂದರ್ಯ ಮೀಮಾಂಸೆಗಳು ಸೇರಿದ ವಿಶಿಷ್ಟ ಸಂಸ್ಕೃತಿ ಗ್ರಹಿಕೆ. "ಅವರೊಬ್ಬ ವಾಸ್ತವವಾದಿಯೂ ಆಗಿದ್ದುದರಿಂದ ಅವರ ಸಂಸ್ಕೃತಿ ಚಿಂತನೆ ಮತೀಯ ಮೌಲ್ಯಗಳಿಗೆ ಸಿಲುಕಲಿಲ್ಲ. ಯಾವ ಆದರ್ಶವೇ ಇರಲಿ ಅದು ನಿತ್ಯ ಜೀವನದಲ್ಲಿ ವ್ಯಕ್ತವಾಗುವ ಬಗೆಯ ಸಂಸ್ಕೃತಿ ಎಂದು ಅವರು ದೃಢವಾಗಿ ಭಾವಿಸಿದ್ದರು." (ರಹಮತ್ ತರೀಕೆರೆ, ೨೦೦೪, ಪುಟ ೨೦)

ಸದ್ಯಕ್ಕೆ ಕನ್ನಡದಲ್ಲಿ ಸಂಸ್ಕೃತಿ ಎನ್ನುವುದು ಹಲವು ಚಾರಿತ್ರಿಕ ಘಟ್ಟಗಳನ್ನು ದಾಟಿಕೊಂಡು ಸಮುದಾಯಗಳ ಸಮಗ್ರ ಜೀವನ ವಿಧಾನ ಎಂಬ ಮಾನವ ಶಾಸ್ತ್ರೀಯ ಅರ್ಥದಲ್ಲಿ ನಿಂತಂತಿದೆ. ಕರಾವಳಿಯ ಕೃಷಿ ಸಂಸ್ಕೃತಿ ಎನ್ನುವುದು ಕಾರಂತರ ಕೃತಿಗಳನ್ನು ಈ ಎರಡೂ ನೆಲೆಗಳಲ್ಲಿ ಅರ್ಥೈಸಿಕೊಳ್ಳುವ ಹೊಸ ರೀತಿಯ ಓದಿಗೆ ಕಾದಂಬರಿಯ ವಿಸ್ತಾರ ಹೆಚ್ಚಿಸಿಕೊಳ್ಳುವುದೇ ಆಗಿದೆ.

ಕಾರಂತರ ಕಾದಂಬರಿಗಳನ್ನು ಚಾರಿತ್ರಿಕ ಆಯಾಮದಿಂದ ನೋಡುವ ಉದ್ದೇಶವೂ ಇದೇ ಆಗಿದೆ. ಲೇಖಕರ ಪ್ರಮುಖ ಕಾದಂಬರಿಗಳಲ್ಲಿ ಕೃಷಿ ಜಗತ್ತಿನ ವಿಚಾರಗಳು ಕೃತಿಯ ಶಿಲ್ಪದ ಒಂದು ಆಯಾಮವಾಗಿ ಮೂಡಿ ಬಂದಿದೆ. ಈ ಹಿನ್ನೆಲೆಯಲ್ಲಿ ಕಾದಂಬರಿಗಳ ಮರು ಓದಿನೊಂದಿಗೆ ಕೃಷಿ ಸಂಸ್ಕೃತಿಯನ್ನು ಮರಳಿ ಅರ್ಥೈಸಿಕೊಂಡು ವಿಶ್ಲೇಷಿಸುವಲ್ಲಿ ಸಂಸ್ಕೃತಿ ನಿರ್ವಚನವೂ ಮುಖ್ಯ. ಈ ಪ್ರಬಂಧದಲ್ಲಿ ಮುಖ್ಯವಾಗಿ ಕೃಷಿಯ ಚಾರಿತ್ರಿಕ ನೆಲೆಯ ಆಯಾಮಗಳು ದಾಖಲಾದ ಕಾದಂಬರಿ 'ಕುಡಿಯರ ಕೂಸು'ವನ್ನು ಮೊದಲಿಗೆ ವಿಶ್ಲೇಷಿಸಲಾಗಿದೆ. ಇದಲ್ಲದೆ 'ಬೆಟ್ಟದ ಜೀವ', 'ಮರಳಿ ಮಣ್ಣಿಗೆ', ಚೋಮನ ದುಡಿ ಕಾರಂತರ ಕಾದಂಬರಿಗಳ ವಿಶ್ಲೇಷಣೆಯನ್ನೇ ಒಂದು ಅಧ್ಯಾಯವನ್ನಾಗಿ ಮಾಡಿ ವಿಶ್ಲೇಷಿಷಿದ ಉದ್ದೇಶವೂ ಸಾಪೇಕ್ಷವಾದುದು. ಕಾರಂತರು ಸಾರ್ವಕಾಲಿಕ ಮೌಲ್ಯಗಳೊಂದಿಗೆ ಮುಖಾಮುಖಿಯಾಗುತ್ತಲೇ ಬಾಳುವ ರೀತಿ ಅನನ್ಯವಾದುದಾಗಿದೆ. ಹಾಗಾಗಿ ಕಾರಂತರ ಕಾದಂಬರಿಗಳು ಇಲ್ಲಿ ಮುಖ್ಯ. ಕೃಷಿ ಚಟುವಟಿಕೆ ಆರಂಭದ ವಿವರಣೆಗಳು ಇಲ್ಲಿ ಲಭ್ಯವಾಗುತ್ತದೆ. ಕೃಷಿ ಪಲ್ಲಟದ ವಿವಿಧ ಹಂತಗಳ ಮೂಲಕ ಸಂಸ್ಕೃತಿಯ ವಿಕಾಸದೊಂದಿಗೆ ಸಮಾಜದಲ್ಲಿ ಆಗಿರುವ ಪಲ್ಲಟಗಳೂ ಪ್ರಮುಖ ಆಯಾಮವಾಗಿ ನಿರೂಪಣೆಗೊಳ್ಳುತ್ತದೆ. ಸಮಾಜದ ಪ್ರತಿಬಿಂಬವಾಗುವ ಸಾಹಿತ್ಯ ಕೃತಿ, ಆ ಮೂಲಕ ಅವು ತೆರೆದು ತೋರುವ ಜಗತ್ತು ಸಂಸ್ಕೃತಿ ವಿಕಾಸದ ಆಯಾಮವೂ ಆಗಿದೆ.

### ೫.೨.೧ ಕುಡಿಯರ ಕೂಸು

ಬುಡಕಟ್ಟು ಸಮುದಾಯದ ಜನರಾದ ಮಲೆಕುಡಿಯರ ಜೀವನಾನುಭವಗಳನ್ನು ಅವರೊಂದಿಗೆ ನೆಲೆಸಿ ಗಳಿಸಿಕೊಂಡು ಕಾದಂಬರಿಯಾಗಿಸುವಲ್ಲಿ ಕಾರಂತರು ಪ್ರಯತ್ನಿಸಿದ್ದಾರೆ. ಕಾಡುಗಳಲ್ಲಿ ತಮ್ಮದೇ ಆದ ರೀತಿ ನೀತಿಗಳೊಂದಿಗೆ ಗುಂಪಾಗಿ ವಾಸಿಸುವ ಈ ಜನಸಮುದಾಯದ ಬದುಕಿನ ನಿರೂಪಣೆಯ ಭಾಗವಾಗುವ ಜೀವನ ಮೌಲ್ಯಗಳೊಂದಿಗೆ ಕೃಷಿಯೂ ಬಂದಿದೆ. ಕಾದಂಬರಿ ಆರಂಭಗೊಳ್ಳುವುದೇ ಹೀಗೆ "ಎಷ್ಟೇ ವರ್ಷಗಳ ಹಳೆಯ ಕತೆಯಿದು ಇಂದಿನ ದಿನಕ್ಕೂ ಆ ದಿನಕ್ಕೂ ಆವರಣದಲ್ಲಿ ಕುಡಿಯರು ಬಾಳಿ ಬದುಕುವ ರೀತಿಯಲ್ಲಿ ಬಹು ಮಟ್ಟಿನ ವ್ಯತ್ಯಾಸವನ್ನು ನಾವು ಕಾಣಲಾರೆವಾದರೂ ಕುಡಿಯರ ಕೆಂಚ ಅವನ್ನಲ್ಲಿ ಕಾಣಬಲ್ಲ ಅವನಿಗೀಗ ಅರುವತ್ತು ವಯಸ್ಸಿರಬಹುದು. ಆ ಅರವತ್ತು ವಯಸ್ಸಿನ ಬಾಳ್ವೆಯಲ್ಲೇ ಅವನ ಮತ್ತು ಅವನ ಬಳಗದ ಅರಣ್ಯ ಜೀವನದಲ್ಲಿ ಎಷ್ಟೋ ಪರಿವರ್ತನೆಗಳಾಗಿವೆ ಎಂದು ತಿಳಿದುಕೊಂಡಿದ್ದಾನೆ ಆತ. ಗೊತ್ತುಗಳ ನಿಶ್ಚಿತ ಲೆಕ್ಕ ಕೆಂಚನಿಗಿಲ್ಲ. ಅವನ ಜನಕ್ಕೂ ಆ ಲೆಕ್ಕ ಇರುವುದು ಅಷ್ಟಕ್ಕಷ್ಟೆ. ಆದರೂ ವರ್ಷಗಳು ಸರಿದಾದರು ಅನುಭವವಾಗುವುದಿಲ್ಲವೇ ? ತಾವು ನೆಲೆಸಿದ ಮನೆ ಮಾರುಗಳಲ್ಲಾದ ಬದಲಾವಣೆ ಇತರರ ಜೀವನ ಪ್ರವಾಹಗಳಿಂದ ಉಂಟಾದ ವರ್ಚಸ್ಸು ಇವೆಲ್ಲ ಗೊತ್ತಾಗಲೇ ಬೇಕಷ್ಟೆ. (ಶಿವರಾಮ ಕಾರಂತ .ಕೆ ೧೯೭೫ ಪು ೧)

ಕೆಂಚನ ಪೂರ್ವಿಕರು ಕಾಡಿನ ಗುಹೆ ಮನೆಗಳಲ್ಲಿ ವಾಸಿಸುತ್ತಿದ್ದು, ಈಗ ಅವೆಲ್ಲ ನೆನಪಷ್ಟೆ. "ಅವನ ಹಿರಿಯರು ಅನಾದಿ ಕಾಲದ ಗವಿ ಮನೆಗಳನ್ನು ಬಿಟ್ಟು ಹೊರಟು ಬಂದರೇಕೆಂದು ಪ್ರಾಯಶಃ ಯಾವುದೇ ಸಾವು ನೋವುಗಳು ಸಂಭವಿಸಿ ಅವರನ್ನು ಭೀತಿಗೊಳಿಸಿರಬೇಕು. ಅದರಿಂದ ಆ ಸ್ಥಳವನ್ನು ಬಿಟ್ಟಿದ್ದರು. ಆ ಮೇಲೆಯೂ ಅವನ ಹಿರಿಯರು ಕೆಲವು ಕಾಲದ ತನಕ ವರ್ಷಕ್ಕೊಮ್ಮೆಯಾದರೂ ಅಲ್ಲಿಗೆ ಹೋಗಿ ಬರುತ್ತಿದ್ದ ನೆನಪು ಅವನಿಗಿದೆ."(ಅದೇ ೧೪) ಅಲ್ಲೊಂದು ದೈವವಿದೆ. ಅದು ಮಲೆರಾಯ ಎಂಬ ನಂಬಿಕೆಯಿಂದ ಅದನ್ನು ಆರಾಧಿಸುತ್ತ ಬರುತ್ತಿದ್ದಾರೆ. ಹೀಗೆ ಕಾಡಿನಲ್ಲಿ ಸಹಜವಾಗಿ ಬದುಕುತ್ತ ಬೇಟೆಯಾಡುತ್ತಿದ್ದವರು ಅದಲ್ಲದೆ ಕಾಡಲ್ಲಿ ಸಹಜವಾಗಿ ಬೆಳೆಯುವ ಕೆಲವು ಬೆಳೆಗಳನ್ನು ತಾನಾಗಿ ಬೆಳೆಯುತ್ತಿದ್ದುದನ್ನು ಗಮನಿಸಿದವರು. ದಕ್ಷಿಣ ಕನ್ನಡ ಜಿಲ್ಲೆಯ ಜೈನ ಕುಟುಂಬದ ಆಡಳಿತಕ್ಕೆ ಸೇರಿದ್ದು, ಬೀಡಿನ ಮುಂದಿನ ಬೈಲನ್ನು ಸೇರಿದರೆ ಸಿಗುವುದೇ ಕಿರಿಮಲೆ. ಅಲ್ಲಿ ತಮ್ಮ ಜೀವನಾವಶ್ಯಕತೆಗೆ ಬೇಕಾದುದನ್ನು ದುಡಿಮೆ, ಬೇಟೆ, ಬೇಸಾಯದಿಂದ ಹಣ್ಣು ಆಹಾರಗಳನ್ನು ಅವರೇ ದೊರಕಿಸಿಕೊಳ್ಳುತ್ತಾರೆ. ಕಾಡಿನಲ್ಲಿ ಬೆಳೆಯುತ್ತಿದ್ದ ಏಲಕ್ಕಿಯನ್ನು ಸಂಗ್ರಹಿಸಿ ಒಡೆಯನಿಗೆ ಕೊಟ್ಟರೆ ವರ್ಷಕ್ಕೊಂದು ಬಟ್ಟೆ ಮತ್ತು ನಾಲ್ಕು ಚೀಲ ಉಪ್ಪನ್ನು ಕೊಡುತ್ತಿದ್ದರು. ಹಣದ ಲೆಕ್ಕಾಚಾರ ಮತ್ತು ವ್ಯವಹಾರವನ್ನು ತಿಳಿಯದ ಅವರಿಗೆ ಕೂಡಿಡುವ ಯೋಚನೆಯೇ ಇರಲಿಲ್ಲ. ವರ್ಷಕ್ಕೊಮ್ಮೆ ಬರುವ ಜಾತ್ರೆಯಲ್ಲಿ ಭಾಗವಹಿಸಿ ಬೆಂಕಿಪೆಟ್ಟಿಗೆ ಬಟ್ಟೆ ತೊಳೆಯುವ ಸಬಕಾರವನ್ನು ಖರೀದಿಸುತ್ತಿದ್ದರು.

"ಹಣದ ವ್ಯವಹಾರ ಬಂದಾಗ ಬೀಡಿಗೆ ಸಾಲವಾಗಿ, ವರ್ಷದಿಂದ ವರ್ಷಕ್ಕೆ ಸಾಲ ಹೆಚ್ಚಿ ಆಸ್ತಿ ಅಡವಾಯಿತು. ಸಾಲದ ಬಡ್ಡಿಯ ಹಣಕ್ಕೆ ಮಲೆಯ ಏಲಕ್ಕಿ ಹುಟ್ಟುವಳಿಯೂ ಗಂಟು ಬಿತ್ತು. ದೇಶದಲ್ಲಿ ಏಲಕ್ಕಿ

ಹಿರಿಮೆ ಹೆಚ್ಚಿತೋ ಅದರ ಬೆಲೆ ಏರುತ್ತಾ ಹೋಗಿ ಅನೇಕ ಕಡೆಗಳಲ್ಲಿ ಏಲಕ್ಕಿಯನ್ನು ವ್ಯವಸಾಯವಾಗಿ ಏನೋ ಬೆಳೆಯಿಸುವ ಕ್ರಮವೂ ರೂಢಿಗೆ ಬಂತು"( ಅದೇ ಪುಟ ೨೦ )ಕೃಷಿ ಬದುಕು ಮತ್ತು ಸ್ವರೂಪ ಬದಲಾಗುತ್ತ ಸಾಗಿದ ರೀತಿಯನ್ನು ಇಲ್ಲಿ ಗ್ರಹಿಸಬಹುದು. ಕಾಡಿನಲ್ಲಿ ಪ್ರಾಕೃತಿಕವಾಗಿ ಬೆಳೆಯುತ್ತಿದ್ದನ್ನು ವ್ಯವಸಾಯ ಬೆಳೆಯಾಗಿ ಪರಿವರ್ತಿಸಿ ಲಾಭ ಮಾಡಿಕೊಳ್ಳುವ ಪ್ರಯತ್ನ ಮಾಡುವುದು ಮುಂದಿನ ಹಂತ.

ಭೂಮಿಯ ಒಡೆತನದ ಪರಿಕಲ್ಪನೆ ಹುಟ್ಟಿಕೊಂಡು, ಭೂಮಿ ಎನ್ನುವುದು ಖಾಸಗಿ ಆಸ್ತಿಯಾದಾಗ ಅದರ ನಿರ್ವಹಣೆ ಮತ್ತು ದೃಷ್ಟಿಕೋನಗಳೂ ಮುಖ್ಯವಾದವು. ಒಡೆಯರಾದ ಬೀಡಿನ ಬಲ್ಲಾಳರಿಂದ ಭೂಮಿಯನ್ನು ಖರೀದಿಸಿದ ತಿರುಮಲ ಭಟ್ಟರಿಗೆ ಅದನ್ನು ನಿರ್ವಹಣೆ ಮಾಡುವ ಕೃಷಿ ಮಾಡುವುದು ತಿಳಿದಿರಲಿಲ್ಲ. ದುಡ್ಡು ಕಾಸಿನ ವ್ಯವಹಾರ ತಿಳಿದ ಭಟ್ಟರು ಮತ್ತು ಅದ್ಯಾವುದೂ ತಿಳಿಯದ ಕುಡಿಯರು ಪ್ರಾಕೃತಿಕವಾಗಿ ಬೆಳೆ ಬೆಳೆಯಿತ್ತಿದ್ದ ರೀತಿ ಭಟ್ಟರಿಗೂ ಅಚ್ಚರಿದಾಯಕವಾದುದು. ಆಹಾರದ ಅವಶ್ಯಕತೆಗಾಗಿ ಭೂಮಿಯನ್ನು ಬಳಸಿಕೊಳ್ಳುತ್ತಿದ್ದ ರೀತಿಯನ್ನು ಬೆರಗಿನಿಂದ ನೋಡುತ್ತಾರೆ. ಕಾಡಿನ ಕುಡಿಯರೊಂದಿಗೆ ಅವರು ಕೃಷಿ ಮಾಡಲು ಸಜ್ಜುಗೊಳಿಸಿದ ಭೂಮಿಯನ್ನು ನೋಡಲು ತೆರಳುತ್ತಾರೆ. "ಈ ವರ್ಷದ ನಮ್ಮ ಕುಮರಿಯ ಜಾಗ ನೋಡುವ' ಎಂದು ತುಕ್ರನನ್ನು ಜತೆಯಲ್ಲಿ ಕರೆದುಕೊಂಡು ಕುಮರಿ ಬೆಳೆಯುವ ಬೆಟ್ಟಕ್ಕೆ ಹೋದರು. ವಿಶಾಲವಾದ ಬೆಟ್ಟದ ಮೈ ಸವರಿ ಬೋಳಾಗಿತ್ತು. ನೆಲ ಮರಗಳನ್ನು ಸುಟ್ಟು ಬೂದಿಯಿಂದ ಮುಚ್ಚಿತ್ತು. ಅಲ್ಲಲ್ಲಿ ಅಗತೆಯಿಂದ ಮಣ್ಣು ಅಡಿಮೇಲಾಗಿತ್ತು. ಇನ್ನೇನು ನಾಲ್ಕು ಹನಿ ಮಳೆ ಬಿದ್ದರೆ ಬೀಜ ಬಿತ್ತುವ ದಿನವೇ ಬರುತ್ತದೆ. ಬೇಲಿ ಆಗಿದೆ ಕುಡಿಯರೆಲ್ಲ ಬಿರುಸಿನಿಂದ ತಂತಮ್ಮ ಮಳೆಗಾಲದ ಗೂಡುಗಳನ್ನು ಕಟ್ಟುತ್ತಿದ್ದಾರೆ. ಎತ್ತರದ ಅಟ್ಟಳಿಗೆಯುಳ್ಳ ಕಾವಲಿನ ಮನೆ ನಿರ್ಮಿಸುತ್ತಿದ್ದಾರೆ. ಅದನ್ನೆಲ್ಲ ಕಂಡು ಆ ಚಳಿಮಳೆಗಳಲ್ಲಿ ಕೇರಿ ಬಿಟ್ಟು ಕುಮರಿಯ ಬೆಳೆ ಕಾಯುವ ಕುಡಿಯರ ಸಾಹಸಕ್ಕೆ 'ಭಲೆ' ಎಂದರು ಅವರು." (ಅದೇ ಪುಟ ೭೧)

ಬೆಳೆಯನ್ನು ಬಿತ್ತಿ ಅನ್ವೇಷಣೆ ಮಾಡಿದ, ನಂತರ ಬೆಳೆದು ಬಂದ ಫಸಲನ್ನು ಒಕ್ಕಣೆ ಮಾಡಿ ಧಾನ್ಯ ಸಂಗ್ರಹ ಮಾಡುತ್ತಿದ್ದ ರೀತಿಯೂ ಭಿನ್ನವಾಗಿತ್ತು. ಆ ಜಾಣ್ಮೆ ಕೆಲಸದ ಹಿರಿಮೆಯನ್ನು ಅರ್ಥೈಸಿಕೊಳ್ಳಬಹುದು. "ಆ ಮಳೆಗಾಲದ ಕುಮರಿಯ ಸಾಗುವಳಿ ಅತ್ಯುತ್ಕೃಷ್ಟವಾಗಿತ್ತು. ಭತ್ತದ ಪೈರು, ಘಟ್ಟದ ಹುಲ್ಲಿಗಿಂತ ಎತ್ತರವಾಗಿ ಬೆಳೆದು ತೆನೆಗೊಂಡಿತ್ತು. ತಂಗಾಳಿ ಬರುವಾಗ ಪೈರಿಗೆ ಪೈರೇ ಗಾಳಿಯ ಬಲಕ್ಕೆ ಸಮವಾಗಿ ತೆರೆ ತೆರೆಗಳಾಗಿ ಗುಡ್ಡದ ಬುಡದಿಂದ ತುದಿಗೆ ತಲೆದೂಗುವ ಹಸುರಿನ ಸೊಬಗು ನಯನ ಮನೋಹರವಾಗಿತ್ತು. ಅಲ್ಲೊಂದು ಇಲ್ಲೊಂದು ಮುಸುಕಿನ ಜೋಳದ ಗಿಡಗಳು ಸುತ್ತಲಿನ ಗೆಲ್ಲಿಗಿಂತ ನಾಲ್ಕು ಪಾಲು ಎತ್ತರವಾಗಿ ಬೆಳೆದಿದ್ದವು. ಒಂದೊಂದು ನಾಲ್ಕಾರು ತೆನೆಗಳನ್ನು ಹೊತ್ತು ತಲೆದೂಗುತ್ತಿದ್ದವು. ಮಳೆ ತೊಡಗಿ ಎರಡು ಮೂರು ತಿಂಗಳಾದರೂ ಅವರ ಸುದೈವದಿಂದ ಕಾಟಿ, ಆನೆಗಳ ಹಿಂಡು ಕುಮರಿಯ ಬಳಿಯಲ್ಲಿ ಹಾಯಲಿಲ್ಲ. (ಅದೇ ಪುಟ ೭೯).

ಕೃಷಿಯ ಅನ್ವೇಷಣೆಯ ಹಂತದಲ್ಲಿ ಈ ರೀತಿಯ ಕುಮರಿ ಬೇಸಾಯ ಚಾಲ್ತಿಯಲ್ಲಿತ್ತು. ಕಾಡಿನಲ್ಲಿ ಸಹಜವಾಗಿ ಬೆಳೆಯುವ ಫಸಲನ್ನು ನೋಡಿ ಆರಂಭವಾದ ಕೃಷಿ ಅಲ್ಲಿಗೆ ನಿಂತು ಬಿಡದೆ ವಿಸ್ತರಣೆ ಹೊಂದಿದ ರೀತಿ ಒಂದೇ ಪ್ರದೇಶದಲ್ಲಿ ವಿಭಿನ್ನ ದೃಷ್ಟಿಕೋನವಾಗಿತ್ತು. ಕಾಡಿನಲ್ಲಿರುವ ಮರಗಳು ಕುಡಿಯರ ಪಾಲಿಗೆ

ಭೂತ, ದೈವಸ್ಥಾನಗಳ ಆಗರವಾದರೆ, ತಿರುಮಲ ಭಟ್ಟರಿಗೆ ಮಲೆಯಲ್ಲಿ ನೂರಾರು ಎಕರೆ ವಿಸ್ತೀರ್ಣದಲ್ಲಿರುವ ಕಾಡನ್ನು ಕಡಿದು ಯಾಕೆ ಫಸಲು ಪಡೆಯಬಾರದು ಎನಿಸುತ್ತಿತ್ತು. ಮೋಪಿಗಾಗುವ ಮರಗಳಾದ ಮತ್ತಿ ಜಂಬೆ, ನಂದಿಯನ್ನು ಕಡಿಯಬಹುದೇನೋ ಎನ್ನಿಸಿತು, ಪ್ರಕೃತಿಯನ್ನು ಪ್ರಾಯೋಜನಿಕ ದೃಷ್ಟಿಯಿಂದ ನೋಡಿ ಅದನ್ನು ಅನುಭವಿಸಬೇಕು. ಲಾಭ ಪಡೆಯಬೇಕು ಎನ್ನುವ ಈ ಮನೋಧರ್ಮ ಆಧುನಿಕತೆಯಿಂದ ನಾಗರಿಕತೆಯಿಂದ ಉದ್ಭವಿಸುವುದು. ಮಳೆ ಬಂದಾಗ ಬಿತ್ತನೆ, ನೇಜಿ, ನಾಟಿ, ಕೊಯಿಲು ಎನ್ನುವ ಈ ಋತುಚಕ್ರ ಅವರಿಗೆ ಏಕತಾನತೆಯನ್ನು ಹುಟ್ಟಿಸಿರಲಿಲ್ಲ. ಬದಲಾಗಿ ಪ್ರಕೃತಿಯ ಸೃಜನಶೀಲ ಗುಣವನ್ನು ಅರ್ಥೈಸಿ ಬಾಳುವುದು ಮುಖ್ಯವಾಗಿತ್ತು

ವರ್ಷ ವರ್ಷವೂ ನಡೆಯುತ್ತಿದ್ದ ಕುಮರಿ ಕೃಷಿ ಅವರಲ್ಲಿ ಜೀವಂತಿಕೆಯನ್ನು ತುಂಬುತ್ತಿತ್ತೇ ಎಂಬ ಪ್ರಶ್ನೆಯನ್ನು ಇರಿಸಿಕೊಂಡು ವಿಶ್ಲೇಷಿಸಿದರೆ ಕುಮರಿ ಕೃಷಿ ಅವರ ಕಣ್ಣಲ್ಲಿ ಗೋಚರಿಸುತ್ತಿದ್ದ ರೀತಿಯನ್ನು ಗ್ರಹಿಸಬಹುದು. "ಬೇಸಿಗೆಯು ಕಾಲಿರಿಸಿತು ಕೇರಿಯ ಜನರ ಕೆಲಸ ಕುಮರಿಯ ಬೇಸಾಯಕ್ಕೆ ತಿರುಗಿತು. ವರ್ಷ ವರ್ಷ ಕಾಡುಗಳನ್ನು ಸುಟ್ಟು ಕುಮರಿ ಬೆಳೆಯುವ ಭೂಮಿ, ಕೇರಿಯಿಂದ ದೂರ ದೂರ ಹೋಗುತ್ತಿತ್ತು. ಈ ವರ್ಷ ಅದಿನ್ನು ದೂರವಾಗಿದೆ. ಗಂಡು ಹೆಣ್ಣುಗಳೆನ್ನದೆ ದುಡಿದರು. ಕಾಡು ಕಡಿದರು. ಬಿದ್ದ ಮರಗಳನ್ನು ಸುಟ್ಟರು–ಮಳೆಗಾಲದ ಮನೆ ಹೂಡಿದರು." (ಅದೇ ಪುಟ ೧೯೬)

ಕೃಷಿಯನ್ನು ಮಾಡುವ ರೀತಿಯಲ್ಲಿ ಇರುವ ವ್ಯತ್ಯಾಸ ಮತ್ತು ಬೆಳೆ ರಕ್ಷಣೆ ಮಾಡಲು ಹೆಣಗುವ ರೀತಿಯಿಂದ ಕೃಷಿಯ ಪರಂಪರೆಯಲ್ಲಿ ಭಿನ್ನತೆಗಳಾಗುತ್ತಿದ್ದವು. ತಾವು ಮಾಡುತ್ತಿದ್ದ ಆಹಾರದ ಬೆಳೆಯಾದ ಭತ್ತ, ರಾಗಿ, ಜೋಳವನ್ನು ಕಾಯಲು ಅವರು ಗದ್ದೆಗಳ ಸಮೀಪ ಗುಡ್ಲು ಹಾಕಿ ಕಾಯುತ್ತಿದ್ದರು. ಕಾಡಿನ ಮಧ್ಯದಲ್ಲೇ ಬದುಕುವ ಕುಡಿಯರಿಗೆ ಅದನ್ನು ಬಿಟ್ಟು ಬೇರೆ ಮಲೆ ಪ್ರವೇಶ ಮಾಡುವುದು ಸಾಹಸದ ಕಾರ್ಯವಾಗಿತ್ತು. ಗುಂಪು ಗುಂಪಾಗಿ ಬುಡಕಟ್ಟುಗಳಾಗಿ ಬದುಕುತ್ತಿದ್ದವರಿಗೆ ಗುಂಪಿನಲ್ಲಿ ಗುರುತಿಸಿಕೊಳ್ಳುವುದು ಮತ್ತು ಆ ಅಸ್ತಿತ್ವವನ್ನು ಉಳಿಸಿಕೊಳ್ಳುವುದೂ ಮುಖ್ಯವಾಗಿತ್ತು. ಹೊರಗಿನ ಸಂಪರ್ಕವೆಂದರೆ ತಮ್ಮ ಒಡೆಯರ ಧಣಿಗಳ ಒಡನಾಟದಿಂದಾಗುವ ಪಲ್ಲಟಗಳು, ಸಮುದಾಯದಲ್ಲಾಗುವ ಸ್ಥಿತ್ಯಂತರಗಳಿಗೆ ಕಾರಣವಾಗುತ್ತಿತ್ತು.

ಬಲ್ಲಾಳರಿಂದ ತಿರುಮಲ ಭಟ್ಟರಿಗೆ, ಭಟ್ಟರಿಂದ ವಲ್ಲಿಬ್ರಂಗಾಜನಿಗೆ ಕಿರಿಮಲೆ, ಹಿರಿಮಲೆಗಳು ಹಸ್ತಾಂತರವಾದಾಗ ಆದ ಬದಲಾವಣೆಗಳನ್ನು ಗುರುತಿಸಬಹುದು. ಬರಿಯ ಭೂಮಿಯ ಒಡೆತನವನ್ನಷ್ಟೇ ಹೆಣ್ಣಿನ ಒಡೆತನಗಳನ್ನು ಬಯಸುವ ಧಣಿಗಳ ವರ್ತನೆ, ಚಪಲತೆಯಿಂದ ಕುಟುಂಬದ ಒಳಗೆ ಮತ್ತು ಸಮುದಾಯದಲ್ಲಿ ಬದಲಾವಣೆಗಳಾಗುತ್ತಿದೆ. ತಾವು ನಂಬಿದ ಮಲೆರಾಯ, ಕಲ್ಕುಡರೂ ಮುಗ್ಧ ಕುಡಿಯರನ್ನು ಪ್ರಾಕೃತಿಕವಾಗಿ ರಕ್ಷಿಸಿದಂತೆಯೇ ದಂಡಿಸಲೂ ಸಿದ್ಧರಾಗಿರುತ್ತಾರೆ. ವೈಯಕ್ತಿಕ ಬದುಕು ಮತ್ತು ಸಾಮಾಜಿಕ ಬದುಕಿನಿಂದ ವ್ಯತ್ಯಾಸಗಳು ತಿಳಿಯಲು ಸಾಧ್ಯವಾಗಿದೆ.

"ಈ ಮಲೆಕುಡಿಯರು ತಮ್ಮ ಧನಿಗಳಿಗಾಗಿ ಏಲಕ್ಕಿ ತೋಟದಲ್ಲಿ ಕೆಲಸ ಮಾಡಿಕೊಂಡು, ತಮ್ಮ ಹೊಟ್ಟೆಗಾಗಿ ಕುಮರಿಯ ಬೇಸಾಯ ಮಾಡುತ್ತಾರೆ. ತಮ್ಮ ಹಸಿವೆಗಾಗಿ, ಬಾಯ ಚಪಲಕ್ಕಾಗಿ ಮಿಗ, ಕೆಮ್ಮ, ಬರ್ಕ ಬೇಟೆಯಾಡುತ್ತಾರೆ. ಅವರು ಮಲೆಯನ್ನು ಬಿಟ್ಟು ತಿರುಗುವುದು ತೀರ ಕಡಿಮೆ. ಅದಕ್ಕೆ ಬೇರೊಂದು

ಕಾರಣವೂ ಉಂಟು. ನೇರವಾಗಿ –ಗ್ರಾಮಗಳ ಜನ ವಸತಿ ಇರುವಲ್ಲಿಗೆ ಹೋಗಿ ಬರುವ ಸೌಕರ್ಯ ಆ ಬೆಟ್ಟಕ್ಕಿಲ್ಲ. ಏಲಕ್ಕಿಯ ಮಲೆ ಸಾಗುವಳಿಯಾಗುತ್ತದೆ. ಫಸಲು ಸಂತೆಗೆ ಬರುತ್ತದೆ. ತೋಟ ನೋಡಿಕೊಳ್ಳುವ ತೊಡಕು ಹೆಚ್ಚೆನ್ನುವುದರಿಂದ, ಸಾಗುವಾಡದ ಖರ್ಚು ಹೆಚ್ಚೆನ್ನುವುದರಿಂದ ಧನಿಯಾದವನಿಗೆ ಉಳಿತಾಯ ಕಡಿಮೆ. ಈ ತಲೆಮಾರಿನಲ್ಲೇ ಹಿರಿ ಮಲೆಯ ಒಡೆತನ ಮೂರು ಭಾರಿ ಕೈ ಬದಲಿಸಿತ್ತು . (ಅದೇ ಪುಟ ೨೦೦)

ಭೂಮಿಯನ್ನು ಸಂಪತ್ತಾಗಿ ಪರಿಭಾವಿಸಿದ ಪರಿಣಾಮವಿದು. ಈ ಒಡೆತನವನ್ನು ನಿರಾಕರಿಸುವಂತೆ ಬಾಳುವ ಕುಡಿಯರೂ ಇದ್ದರು. ಒಂದು ಮಲೆಯಿಂದ ಇನ್ನೊಂದು ಮಲೆಗೆ ವಲಸೆ ಹೋಗಿ ಧೈರ್ಯದಿಂದ ವಾಸ ಸ್ಥಾನವನ್ನು ಅರಸಿ ಬೆಳೆ ಬೆಳೆಯಲು ಯತ್ನಿಸಿದ್ದಲ್ಲದೆ, ಗೆಡ್ಡೆ ಗೆಣಸು ಬೇಟೆಯಲ್ಲಿ ಹೊಟ್ಟೆ ತುಂಬಿಸಿಕೊಳ್ಳುತ್ತಿದ್ದುದರಿಂದ ಕೃಷಿಯ ಅನ್ವೇಷಣೆಯಿಂದ ವಿಸ್ತರಣೆಯ ಹಂತಕ್ಕೆ ತಲುಪುವುದಕ್ಕೆ ಸಾಧ್ಯವಾಗಿತ್ತು.

ತಿಮ್ಮ ಮತ್ತು ಗಿಡ್ಡಿ ಮಲೆ ಬಿಟ್ಟು ಬೇರೆ ಸ್ಥಳಕ್ಕೆ ವಲಸೆ ಹೋಗಿ ಬದುಕಲು ಪ್ರಯತ್ನಿಸಿದಾಗ ಸ್ನೇಹಿತನನ್ನು ಅರಸಿ ಹೊರಟ ಕರಿಯ ವಾಸಿಸಲು ಯೋಗ್ಯವಾದ ಮಲೆಯ ಪ್ರದೇಶವೊಂದನ್ನು ಹುಡುಕಿ ಅನ್ವೇಷಿಸಿದ ರೀತಿ ಬಹಳ ಮುಖ್ಯವಾದುದು. ಪ್ರಾಕೃತಿಕವಾಗಿ ಕಾಡು ಪ್ರಾಣಿಗಳಿಂದ ರಕ್ಷಣೆ ದೊರೆಯುವ ಸ್ಥಳವನ್ನು ಹೇಗೆ ಹುಡುಕುತ್ತಿದ್ದರು ಮತ್ತು ಅದರ ಆಯ್ಕೆಯ ನಿರ್ಧಾರಕ್ಕೆ ಕಾರಣವಾಗುವ ಅಂಶಗಳು ಯಾವುದು ಎನ್ನುವುದೂ ಪ್ರಮುಖವಾಗಿತ್ತು. "ಬಂಡೆಯ ಸೆರಗಿನಿಂದ ಸದಾ ಜಿನುಗುತ್ತಿರುವ ನೀರಿನ ಪ್ರವಾಹವೂ ಇತ್ತು ಆ ಗವಿಗಳ ಎದುರಿಗೇನೆ ಗಾಳಿಯ ಪ್ರವಾಹವನ್ನು ತಡೆಯಲು ನಿಂತ ಮರಗಳಿವೆ. ಮೇಲಿಂದ ನೋಡಿದಾಗಲೇ ಈ ಪುಟ್ಟ ಅರಣ್ಯ ಭಾಗ ತಮ್ಮ ನಿವಾಸವಾಗಲು ಯೋಗ್ಯವೆಂಬುದಾಗಿ ಅವನಿಗೆ ಕಂಡಿತು. ಅಲ್ಲಿಂದ ಆಚೀಚೆ ಎಲ್ಲ ಕಡೆಗಳಿಗೂ ಬೆಟ್ಟ ಇಳಿಯುತ್ತದೆ. ಸಮತಟ್ಟಾದ ಭೂಮಿ ಅಷ್ಟೇನೆ ಆನೆ, ಕಾಟಿ, ಕಡವೆಗಳ ಸಂಚಾರಕ್ಕೆ ಅದು ಅನುಕೂಲವಾದ ತಾಣವಲ್ಲ. ಮೇಲಿಂದ ಅಲ್ಲಿಗೆ ಇಳಿಯುವುದೂ ಕಷ್ಟ ಹೀಗಾಗಿ ಎಲ್ಲ ವಿಧಗಳಿಂದಲೂ ಅಲ್ಲಿ ರಕ್ಷಣೆಯುಂಟು. ಅಲ್ಲಿ ಕುಮರಿ ಬೆಳೆ ಬೆಳೆಯಬಹುದು. ತಮ್ಮ ಪಾಡಿಗೆ ತಾವು ಜೀವನ ಮಾಡಿಕೊಂಡಿರಬಹುದು ಎಂದು ತೋರಿತು." (ಅದೇ ಪುಟ ; ೨೭೪)

ಹೀಗೆ ಒಂದೆಡೆ ಮಲೆಯಲ್ಲಿ ಏಲಕ್ಕಿ ಬೆಳೆಯುತ್ತ ಮತ್ತೊಂದೆಡೆ ಆಹಾರಕ್ಕಾಗಿ ಕುಮರಿಯಲ್ಲಿ ಭತ್ತ, ಜೋಳ, ರಾಗಿ ಬೆಳೆಯುತ್ತ ಗಡ್ಡೆ ಗೆಣಸುಗಳನ್ನು ಬೆಳೆಸುತ್ತ ಬಳಸುತ್ತ ಬಾಳಿದರು. ಇನ್ನೊಂದು ಪ್ರದೇಶಕ್ಕೆ ವಲಸೆ ಹೋಗುವಾಗ ಕೃಷಿ ಭೂಮಿಯನ್ನು ಅನ್ವೇಷಿಸುವ ಮತ್ತು ಅಲ್ಲಿಗೂ ಕೃಷಿಯನ್ನು ವಿಸ್ತರಿಸುವ ಕೆಲಸ ಪರ್ಯಾಯವಾಗಿ ನಡೆಯಿತು. ಈ ಕಾರ್ಯ ಒಂದರ ನಂತರ ನಡೆಯಿತು ಎನ್ನಲಾಗುವುದಿಲ್ಲ. ಜತೆ ಜತೆಯಾಗಿ ಸಮಾಂತರವಾಗಿ ಅನ್ವೇಷಣೆ ಮತ್ತು ವಿಸ್ತರಣೆಗಳು ಕೃಷಿಯಲ್ಲಿ ನಡೆಯುತ್ತಾ ಹೋದವು. ಪ್ರಾಕೃತಿಕವಾಗಿ ಬೆಳೆದ ಏಲಕ್ಕಿ ಬಳ್ಳಿ ಹಸನಾಗಿ ಬೆಳೆದಿರುವುದನ್ನು ಗಮನಿಸಿಯೇ ಬೆಳೆ ಬೆಳೆಯಲು ಇದು ಯೋಗ್ಯವಾದುದೆಂದು ಪರಿಭಾವಿಸಿದ್ದು ವಸತಿ ಯೋಗ್ಯವಾಗಿ ಪರಿಭಾವಿಸಿದ್ದು ಪ್ರಮುಖ ಅಂಶವಾಗಿದೆ. ತಿಮ್ಮ ಈ ಜಾಗವನ್ನು ಅನ್ವೇಷಿಸಿದವನು  ಮಲೆ ಕಿರಿಯದಿರಲಿ ಹಿರಿಯದಿರಲಿ ಹಾಗಾಗಿ ಇದು 'ಕರಿಯ ಮಲೆ' ಎಂದು ನಾಮಕರಣ ಮಾಡುತ್ತಾನೆ. ಈ ಭೂಮಿಗೆ ಯಾರೂ ಒಡೆಯರಿಲ್ಲ, ನಾವೇ ಒಡೆಯರು ಎಂದು

ಬೀಗಿದ ಗುರಿಕಾರ ಕರಿಯನಿಗೆ ಅರಿವಾಗದ ವಾಸ್ತವತೆಯೆಂದರೆ ಈ ಭೂಮಿಯೂ ದಾಖಲಾತಿಯಲ್ಲಿ ತಿರುಮಲ ಭಟ್ಟರಿಗೆ ಸೇರಿದ್ದು ಎಂದು ತಿಳಿದಿರಲಿಲ್ಲ. ಕೃಷಿ ಜಗತ್ತು ಕಾಲಿಟ್ಟಲ್ಲೆಲ್ಲಾ ಒಂದೆಡೆ ಜೀತ ಮತ್ತು ಊಳಿಗಮಾನ್ಯತೆಗಳು ಹೇಗೆ ಬೆಳೆದು ಬಂದವು ಎನ್ನುವುದನ್ನು ಗುರುತಿಸಬಹುದು. ಭೂಮಿಯ ಒಡೆಯರಿಗೆ ಬಿಟ್ಟಿ ಕೂಲಿ ಮಾಡಲೇ ಬೇಕೆಂದು ನಿಯಮವಿದ್ದುದರಿಂದ ಪಾಳೇಗಾರಿಕೆಯೂ ಬೆಳೆಯಲು ಕಾರಣವಾಯಿತು. "ತಲ ತಲಾಂತರದಿಂದ ಬಂದ ಅವರ ಬಾಳು ಸ್ವತಂತ್ರವೆಂದರೂ ಒಂದು ತೆರನ ಹಂಗಿನ ಬಾಳಾಗಿತ್ತು. ಮಲೆಯಲ್ಲಿ ಅವರು ಎಲ್ಲಿಯೇ ವಾಸಿಸಿರಲಿ ಎಲ್ಲಿಯೇ ಗುಡಿ ಕಟ್ಟಿರಲಿ ಯಾವ ಭಾಗದ ಕಾಡನ್ನೇ ಸವರಿ ಕುಮರಿ ಮಾಡಲಿ, ಕೇಳುವವರಿಲ್ಲ ಎಂಬುದು ನಿಜ ಆದರೆ ಮಲೆಯ ಸೆರಗೆಲ್ಲ ಅನಾದಿಯಿಂದ ಒಬ್ಬನಲ್ಲ ಒಬ್ಬ ಧನಿಗೆ ಸೇರಿದ್ದಾಗಿತ್ತು. ಅವರೆಲ್ಲರೂ ಪೀಳಿಗೆಯಿಂದ ಬಂದ ಜೀತದಾಳುಗಳಾಗಿ ವರ್ಷದ ನಾಲ್ಕು ತಿಂಗಳ ಕಾಲ ಧನಿಗಾಗಿ ಹೆಚ್ಚು ಕಡಿಮೆ ಫಲಾಪೇಕ್ಷೆ ಇಲ್ಲದೆ ದುಡಿಯಬೇಕು. ಅದಕ್ಕೆ ಪ್ರತಿಫಲ ಬಟ್ಟೆ, ಉಪ್ಪು, ಹೆಂಡ ತೆಗೆಯುತ್ತಿದುದ್ದಕ್ಕಾಗಿ ದನಿ ಕೊಡುತ್ತಿದ್ದ ಸುಂಕ ಈ ಎಲ್ಲವುಗಳ ಮೊತ್ತ ಅವರ ದುಡಿತಕ್ಕೆ ಸಮನಾದ ಪ್ರತಿಫಲ ಎನ್ನುವಂತಿಲ್ಲ. ಅವರಾದರೂ ಹೆಚ್ಚಿನ ಹಣಕಾಸಿನ ಬಯಕೆ ಮಾಡಿದವರಲ್ಲ. ಮಾಡುವ ಅವಶ್ಯಕತೆಯೂ ಇರಲಿಲ್ಲ. ಅವರಿಗೆ ಬೇಕಾದುದನ್ನೆಲ್ಲಾ ಮಲೆಯೇ ಕೊಡುತ್ತಿರುವಷ್ಟು ಕಾಲ, ದುಡಿಮೆಗೆ ರಟ್ಟೆಯಲ್ಲಿ ಬಲವಿರುವಷ್ಟು ಕಾಲ, ಆ ಚಿಂತೆ ಅವರಿಗಿಲ್ಲ (ಅದೇ ಪುಟ ; ೨೮೮)

ತಮ್ಮ ಸಮುದಾಯದ ಮಂದಿಯಿಂದ ದೂರವಿದ್ದು, ಸ್ವತಂತ್ರವಾಗಿ ಬದುಕು ಕಟ್ಟಿಕೊಳ್ಳಲು ಯತ್ನಿಸಿದಾಗ ತಿಮ್ಮ & ಗುಡ್ಡಿಯರ ದಾಂಪತ್ಯಕ್ಕೆ ಬೆಂಗಾವಲಾಗಿ ನಿಂತ ಕರಿಯ ಬರಿಯ ಗೆಡ್ಡೆ, ಗೆಣಸುಗಳನ್ನು ತಿನ್ನದೆ ಆಹಾರದ ಅನ್ವೇಷಣೆಗಾಗಿ ಭೂಮಿಯನ್ನು ಅರಸಿ ಭತ್ತದ ಬೀಜ ಸಂರಕ್ಷಣೆ ಮಾಡಿ ಕೃಷಿ ಮಾಡಿದರು. ಗರ್ಭಿಣಿ ಗಿಡ್ಡಿ ಆಷಾಢದ ಸೋನೆ ಮಳೆಗೆ ತನ್ನವರಿಲ್ಲದೆ ಪ್ರಸವದ ಯಾತನೆಯ ಮುನ್ನೆಚ್ಚರಿಕೆಯ ಕ್ರಮವಾಗಿ ಕೆಳಗಿನ ಹಳ್ಳಿಗೆ ಊರ ಜನರ ಆಸರೆ ಬೇಡಿ ಹೊರಡುತ್ತಾರೆ. ಮಲೆಯಲ್ಲಿ ಕುಡಿಯರು ಕುಮರಿ ಕೃಷಿ ಮಾಡುತ್ತಿದ್ದ, ಬೆಟ್ಟು, ಬೈಲು ಗದ್ದೆಗಳು, ಕಟ್ಟಹುಣಿಯಲ್ಲಿ ತೇಯ್ದಾಡುವ ತೆಂಗಿನ ಮರಗಳೂ ಇದ್ದಾವು. ತಾವು ಮಾಡುವ ಕೃಷಿಯಾದ-ಕುಮೆರಿ ಕೃಷಿಯಿಂದ ನೇಗಿಲು ಕಟ್ಟಿ ಕೋಣಗಳಿಂದ ಉಳುಮೆ ನಡೆಸುವ ಹಳ್ಳಿಗರ ಕೃಷಿ ತಮ್ಮಿಂದ ಸುಲಭ ಸರಳವೆಂದು ತೋರಿತು. ಒಂದೇ ಕಾಲಘಟ್ಟದಲ್ಲಿ ಎರಡೂ ಸ್ವರೂಪದ ಕೃಷಿ ಜಗತ್ತಿದ್ದುದುಕರಾವಳಿಯ ವೈಶಿಷ್ಟ್ಯವೂ ಹೌದು. ಇದು ಕಳೆದ ಕಾಲದ ಸತ್ಯವಲ್ಲ, ವರ್ತಮಾನದ ಸತ್ಯವೂ ಆಗಿದೆ.

ಕೃಷಿಯೊಂದಿಗೆ ಬೇಟೆಯನ್ನು ಜತೆಯಾಗಿ ನಡೆಸಿದ ಕುಡಿಯರ ಬದುಕಿನ ಸಾಂಸ್ಕೃತಿಕ ಸ್ಥಿತ್ಯಂತರ ಏಕ ಸೂತ್ರವಾದದ್ದಲ್ಲ. ಈ ಬದಲಾವಣೆ ಸಮುದಾಯವೊಂದರ ಸ್ಥಿತ್ಯಂತರವಲ್ಲ. ಬದಲಾಗಿ ಸಾಂಸ್ಕೃತಿಕ ವಿಶ್ಲೇಷಣೆ, ಅನ್ವೇಷಣೆಗೂ ಕಾರಣವಾಗುತ್ತದೆ. ತುಕ್ರನು ನಡೆಸುವ ಕರಡಿ ಬೇಟೆ, ಕರಿಯನ ಹುಲಿ ಬೇಟೆ, ಚಿರತೆ ಬೇಟೆ, ಆನೆಯನ್ನು ಪಳಗಿಸುವುದು ಪ್ರಾಣಿ ಜಗತ್ತಿನೊಂದಿಗೆ ಸೆಣಸಾಡುತ್ತಲೇ ಕೃಷಿ ಜಗತ್ತನ್ನು ವಿಸ್ತರಿಸಿದ ಸಾಹಸವೂ ಪ್ರಮುಖವಾದುದು. ಕಾಡಿನ ಕುಮರಿ ಕೃಷಿಗೆ ಪೂರಕವಾಗಿ ನಡೆಸುತ್ತಿದ್ದ ಬೇಟೆ ಕೃಷಿಯ ರಕ್ಷಣೆಯೊಂದಿಗೆ ಆಹಾರದ ಲಭ್ಯತೆಯೂ ಆಗಿತ್ತು. ತುಂಡು ಭೂಮಿಯಲ್ಲಿ ಕಾಡು ಸವರಿದಾಗ ಪ್ರಾಣಿಗಳ

ಆಕ್ರಮಣಶೀಲತೆಯನ್ನು ತಡೆಯಲು ನಡೆಸುವ ಯತ್ನವೂ ಮುಖ್ಯವಾಗುತ್ತದೆ. ಅದಕ್ಕಾಗಿಯೇ ನಡೆಸುವ ಬೇಟೆ ಸಾಹಸದ ಮೈಲುಗಲ್ಲುಗಳೇ ಆಗಿವೆ.

ಒಂದು ಬುಡಕಟ್ಟು ಸಮಾಜದ ಕಾಡಿನ ಒಕ್ಕಲುಗಳಾದ ಕುಡಿಯರಿಗೆ ಕಿರಿಮಲೆ,ಹಿರಿಮಲೆ, ಹತ್ತಿಯಡ್ಕ, ಬಿಸಿಲೆಗಳೆಂಬ ನಾಲ್ಕು ಮಲೆಗಳು ದಿನ ನಿತ್ಯವೂ ಆಹಾರ ನೀಡುತ್ತಿವೆ. ಕುಡಿಯರು ತಮ್ಮ ಬುಡಕಟ್ಟಿನ ಸಾಮಾಜಿಕ ವ್ಯವಸ್ಥೆಯಲ್ಲಿ ತಮ್ಮದೇ ಆದ ರಾಜಕೀಯ,ಸಾಮಾಜಿಕ, ಧಾರ್ಮಿಕ ಕಟ್ಟುಪಾಡುಗಳನ್ನು ನಿರ್ಮಿಸಿಕೊಂಡಿದ್ದಾರೆ. ಆ ರೀತಿ ರಿವಾಜುಗಳನ್ನು ಚಾಚೂ ತಪ್ಪದೆ ಪಾಲಿಸುತ್ತಾರೆ. ಪ್ರಕೃತಿಯೇ ಅವರಿಗೆ ಅನ್ನ ನೀಡುವ ,ಬದುಕು ನೀಡುವ ಬುಡಕಟ್ಟನ್ನು ಕಾಯುವ ಅಸಾಧರಣ ಅಚಲವಾದ ನಂಬಿಕೆಯಿರಿಸಿರುವ ಕಲ್ಲುಡ ದೈವವಿದೆ. ಜನತೆಯನ್ನು ಕಾಯುವ ದೈವ ಮತ್ತು ಜನರ ಮಧ್ಯೆ 'ಗುರಿಕಾರ' ನೆಂಬ ಜನ ಪ್ರತಿನಿಧಿಯಿದ್ದಾನೆ.

ಬುಡಕಟ್ಟುಗಳ ಬದುಕು ಅರಳುವುದು ಪ್ರಕೃತಿಯ ಶ್ರಮ ಸಂಸ್ಕೃತಿಯಲ್ಲಿ ಇಂತಹ ಪ್ರಕೃತಿಯ ಮಧ್ಯದ ದುಡಿಮೆ ಸಾಮೂಹಿಕವೂ ಆಗಿತ್ತು. ಅಂತಹವರ ಬದುಕು ಸ್ವಾರ್ಥದ್ದಾಗಿರದೆ ಸಾಮೂಹಿಕವಾಗಿತ್ತು. ಸಮಷ್ಠಿ ಪ್ರಜ್ಞೆಯನ್ನೊಳಗೊಂಡಿತ್ತು. ಕೆಂಚ ನೀರಿನ ಒಳಗೆ ಹೋದ, ಮುಖ, ಕಾಲುಗಳನ್ನು ತೊಳೆದುಕೊಂಡ, ಗುಡಿಯ ಮುಂದಕ್ಕೆ ಬಂದ, ಮೊಣಕಾಲೂರಿ ದೈವವೇ ಕುಲವನ್ನು ಕಾಯು, ಕೇರಿಯನ್ನು ಕಾಯು, ಮಳೆ ಬೆಳೆ ಕೊಡು ಬದುಕನ್ನು ಹಸನು ಮಾಡು (ಅದೇ ಪುಟ-೫೬,) ಕೇರಿಯ ಯಜಮಾನನಾದ ಕೆಂಚ ತನಗಾಗಿ ಏನನ್ನು ಬೇಡದೆ, ಇಡೀ ಕೇರಿಗಾಗಿ ಸಮಷ್ಟಿ, ಪ್ರಜ್ಞೆಯಲ್ಲಿ ತನ್ನ ಕುಲದೈವವನ್ನು ಒಳಿತು ಮಾಡಲು ಕೇಳಿಕೊಳ್ಳುತ್ತಾನೆ. ಬುಡಕಟ್ಟಿನ ಸಾಂಸ್ಕೃತಿಕ ಜವಾಬ್ದಾರಿಯನ್ನು ಹೊತ್ತ ಕೆಂಚನಂಥವನಿಗೆ ತನ್ನ ಬದುಕಿನಿಂದಲೇ ತನ್ನ ಕೇರಿ ಕುಲವೂ ಮುಖ್ಯವಾಗುತ್ತದೆ.

ಹೊರಗಿನ ಬಂಡವಾಳ ಶಕ್ತಿಗಳು ಆಕ್ರಮಣಶಾಹಿ ಪ್ರವೃತ್ತಿಯೊಂದಿಗೆ ಪ್ರವೇಶಿಸುತ್ತದೆ. ಕುಡಿಯರ ಶ್ರಮದ ಮೂಲಕ ಬೆಟ್ಟ-ಗುಡ್ಡ ಕಡಿಸಿ ವ್ಯವಸಾಯಕ್ಕೆ ಯೋಗ್ಯ ಭೂಮಿ ಮಾಡಿಸಿ ಆಹಾರದ ಬೆಳೆಯ ಬದಲಿಗೆ 'ಯಾಲಕ್ಕಿ' ಯಂತಹ ಹೆಚ್ಚು ಲಾಭ ತಂದು ಕೊಡುವ ಹಣದ ಬೆಳೆಗಳನ್ನು ಆಧುನಿಕ ವ್ಯಾಪಾರ ಮನೋಧರ್ಮದ ತಿರುಮಲ ಭಟ್ಟ, ವಲ್ಲಿ ಬ್ರಗಾಂಜ ನಂತಹವರು ಬೆಳೆಸುವಂತೆ ಮಾಡುತ್ತಾರೆ. ಕುಡಿಯರ ಬೆಟ್ಟಗಳಿಗೆ ಬಂಡವಾಳ ಪಾದಾರ್ಪಣೆ ಪರಿಣಾಮವಾಗಿ ಸ್ವಾರ್ಥ ಸ್ಥಾನಮಾನದ ಸ್ಪರ್ಧೆಗಳು ಉಂಟಾಗುತ್ತದೆ. ನಿಸರ್ಗವನ್ನು ಒಂದು 'ಆತ್ಮ' ಎಂದು ನಂಬಿದವರಿಗೆ ಅದರಲ್ಲಿ ದೊರೆಯುವ ಉಪಯೋಗಿ ವಸ್ತುಗಳನ್ನು ಮಾತ್ರ ತಮ್ಮ ಅನುಕೂಲಕ್ಕೆಂದು ನಂಬುತ್ತಾರೆ. 'ಆಸ್ತಿ' ಎಂದು ತಿಳಿದವರು,ಇಡೀ ನಿಸರ್ಗವೇ ನಮ್ಮ ಅನುಕೂಲಕ್ಕೆ ನಿರ್ಮಿತವಾದದ್ದೆಂದು ಭಾವಿಸುತ್ತಾರೆ.ಇದೇ ಕುಡಿಯರಿಗೂ ಮತ್ತು ತಿರುಮಲ ಭಟ್ಟ, ವಲ್ಲಿ ಬ್ರಗಾಂಜರಿಗೆಇರುವ ವ್ಯತ್ಯಾಸ. ಸಾಮೂಹಿಕ ಶ್ರಮ, ಸಾಮೂಹಿಕ ದುಡಿಮೆ, ಸಾಮೂಹಿಕ ವಸತಿಗಳೆಲ್ಲವೂ ವೈಯಕ್ತಿಕತೆಯೆಡೆಗೆ ಲಾಭ ನಷ್ಟದ ಆಲೋಚನೆಯ ಕಡೆಗೆ ಸಾಗುತ್ತದೆ. ಮುಂದಿನ ಕಾದಂಬರಿಯಲ್ಲಿ ಕೃಷಿಯ ಮುಂದಿನ ಹಂತ ಕಾಣಬಹುದು.

### ೫.೨.೨ ಬೆಟ್ಟದ ಜೀವ:

ಕಾರಂತರ ಕಾದಂಬರಿಗಳ ನಿರಂತರ ಓದು ಮತ್ತು ಮರು ಓದು ಸಾಹಿತ್ಯಿಕ ಅಭಿವ್ಯಕ್ತಿಯ ಹೊಸ ಆಯಾಮಗಳ ಪುನರಾವಲೋಕನಕ್ಕೆ ಹೊಸ ಸಾಧ್ಯತೆಗಳನ್ನು ಸೃಷ್ಟಿಸುತ್ತದೆ. ಲೇಖಕರೇ ನಿರೂಪಿಸಿರುವಂತೆ ತಾನು ಕಂಡ ಓರ್ವ ಧೀಮಂತ ವ್ಯಕ್ತಿಯ ಬದುಕಿನಿಂದ ಪ್ರೇರಣೆ ಪಡೆದು ಕೃತಿ ರಚಿಸಿದೆ ಎಂದಾದರೂ, ಕಾಡು-ಗುಡ್ಡ-ಕಾನು-ಬಯಲು-ನದಿ- ಜೌಗು-ಬೇಟೆ ಈ ಎಲ್ಲದರ ಬಗ್ಗೆ ಕೇಳಿ ಬರೆದುದಲ್ಲ. ಸ್ವತಃ ತಾನು ಅಲ್ಲಿಗೆ ತೆರಳಿ ಕೆಲಕಾಲ ನಿಂತು ಅನುಭವವನ್ನು ಹೊಂದಿಯೇ ಕೃತಿ ರಚಿಸಿದ್ದಾರೆ. ಕಟ್ಟದ ಗೋವಿಂದಯ್ಯ ತನ್ನ ಅನುಭವಕ್ಕೆ  ದಕ್ಕಿದ ವ್ಯಕ್ತಿಯಾದರೆ ಕಾಡು- ಗುಡ್ಡಗಳೊಂದಿಗೆ ಸೆಣಸಾಡುತ್ತಾ ಬೆಟ್ಟದಂತೆ ಅತಿ ಎತ್ತರ ಬೆಳೆದ ವ್ಯಕ್ತಿತ್ವ ಅವರದು ಎಂದು ಲೇಖಕರೇ ಆರಂಭದಲ್ಲಿ ಹೇಳಿಕೊಂಡಿದ್ದಾರೆ. ಕಾದಂಬರಿಯ ವಸ್ತುವೇ ಪ್ರಕೃತಿಗೆ ಮನುಷ್ಯನ ಪ್ರತಿಕ್ರಿಯೆ ಎಂದು ವಿಶ್ಲೇಷಿಸಿದರೂ ಈ ರೀತಿಯ ಪ್ರತಿಸ್ಪಂದನದ ಅನುರಣನ ಏನು ಎಂದು ಅರ್ಥೈಸುವುದೂ ಮುಖ್ಯ.

ಮನುಷ್ಯ ಪ್ರಕೃತಿಯೊಂದಿಗೆ ಸೆಣಸಾಡುತ್ತಲೇ ಬದುಕು ಕಟ್ಟಿದವನು. ಆ ಸೆಣಸಾಟವಾದರೂ ಯಾವುದು? ತನ್ನ ಹಿರಿಮೆ ಹೆಗ್ಗಳಿಕೆಯನ್ನು ಮೆರೆದುಕೊಳ್ಳುವುದಕ್ಕಲ್ಲ. ತನ್ನ ಅನುಭವವನ್ನು ಮೂರ್ತೀಕರಿಸುವ ರೀತಿ ಸಾಂಕೇತಿಕವಾಗಿದೆ. ಪ್ರಕೃತಿಯೊಂದಿಗೆ ಮನುಷ್ಯನ ಒಡನಾಟ ಮತ್ತು ಹುಡುಕಾಟ ನಿರಂತರವಾದುದು. ಹಾಗಾಗಿ ಇದು ಯಾವುದೇ ಕಾಲಘಟ್ಟಕ್ಕೆ ನಿರ್ದಿಷ್ಟಗೊಳಿಸುವುದಕ್ಕಿಂತ ಭಿನ್ನವಾಗಿ ಕಾಲಾತೀತವಾಗಿ ಉಳಿದು ಬಿಡುತ್ತದೆ. ಸುಬ್ರಹ್ಮಣ್ಯದ ಸಮೀಪದ ಈ ಕಾಡು-ಗುಡ್ಡ-ಬೆಟ್ಟಗಳ ಅಗಾಧತೆಯ ಮಧ್ಯೆ ಮನುಷ್ಯ ಕಾಲಾತೀತವಾಗುವುದಕ್ಕೆ ಸಾಧ್ಯವಾಗುತ್ತದೆ. 'ನನ್ನೆದುರಿನ ಬೆಟ್ಟ ತನ್ನ ದಿಟ್ಟತನದಿಂದ ಔನ್ನತ್ಯದಿಂದ ನನ್ನಂತಹ ಎಷ್ಟೆಲ್ಲ ವ್ಯಕ್ತಿಗಳ ಎದೆಯನ್ನು ಭೀತಿಗೊಳಿಸಿ ತಲ್ಲಣಿಸಿರಬೇಕೋ ತಿಳಿಯೆ' ಎಂದು ಗೋಪಾಲಯ್ಯನೇ ಸ್ವಗತವಾಗಿ ನುಡಿಯುತ್ತಾರೆ. (ಶಿವರಾಮ ಕಾರಂತ ಕೆ;(ಹಅ); ೧೯೮೪;ಪು;೪)

ಬೆಟ್ಟವನ್ನು ಕಾಣುತ್ತಲೇ ಅದರ ಜೀವ ಚೈತನ್ಯದ ಬಗೆಗೆ ಬೆರಗು ಮತ್ತು ಮೆಚ್ಚುಗೆಯನ್ನು ವ್ಯಕ್ತಪಡಿಸುತ್ತಾರೆ ಬೆಟ್ಟಗಳ ಮಧ್ಯೆ ಮನುಷ್ಯ ಬದುಕು ಅರಸಿದ ಪರಿಯ ಅನ್ವೇಷಕ ದೃಷಿಕೋನವೂ ಹೊಸತನ್ನು ಕಾಣುವ ನೆಲೆಯದ್ದು. ಮನುಷ್ಯ ಇಂತಹ ಅನ್ವೇಷಣೆ ನಡೆಸದೆ ಇದ್ದಿದ್ದರೆ ಕುತೂಹಲಿಯಾಗಿ ಮುಂದುವರಿಯದೆ ಇದ್ದಿದ್ದರೆ ಯಾವ ಸಾಹಸಗಳೂ ಸಾಧ್ಯವಾಗುತ್ತಿರಲಿಲ್ಲ. ಅದು ಪ್ರಕೃತಿಯೊಂದಿಗೆ ಹೋರಾಟವೂ ಹೌದು, ಹುಡುಕಾಟವೂ  ಹೌದು. ಸೂಕ್ಷ್ಮಗ್ರಾಹಿಯಾದ ಮನುಜ ಹೇಗೆ ಪ್ರಾಕೃತಿಕವಾಗಿರುವ ಫಲವತ್ತಾದ ನೆಲ, ನೀರು ಹರಿಯುವ ಭೂಮಿಯನ್ನು ಕಂಡೇ ಆಹಾರದ ಅನ್ವೇಷಣೆಯೊಂದಿಗೆ ಬೆಳೆಯ ಅನ್ವೇಷಣೆಯನ್ನು ನಡೆಸಿದ ಎನ್ನುವುದಕ್ಕೆ ಕಾದಂಬರಿ ರೂಪಕವಾಗಿದೆ. ಬೆಟ್ಟ ಬೆಟ್ಟವಾಗಿಯೇ ಜೀವ ತಳೆದು ಜೀವ ಚೈತನ್ಯದ  ಆಯಾಮವಾಗಿ ಬೆಳೆದ ರೀತಿ ವಿಶಿಷ್ಟವಾದುದು.

ಕೃಷಿ ಮತ್ತು ವಲಸೆ ಒಂದಕ್ಕೊಂದು ಸಂಬಂಧವಿದ್ದು ಕೃಷಿ ಮಾಡಬೇಕೆಂಬ ಕಾರ್ಯಕ್ಕಾಗಿ ಗೋಪಾಲಯ್ಯನವರ  ಪೂರ್ವಿಕರು ಸುಬ್ರಹ್ಮಣ್ಯದ ಕಾಡು ಮೂಲೆಯ ಜ್ವರದ ಗಡ್ಡೆ ಇರುವ ಪ್ರದೇಶಕ್ಕೆ ಬಂದು

ಆ ಜ್ವರದೊಂದಿಗೆ ಸೆಣಸಾಡುತ್ತಲೇ ಬದುಕಿದರು. ಕುಮಾರ ಪರ್ವತದ ಬೆಟ್ಟದ ತಪ್ಪಲು ಮತ್ತು ಆ ಬೆಟ್ಟಗಳಲ್ಲಿ ವಾಸಿಸುತ್ತ ಇರುವ ಮಲೆಕುಡಿಯರಿಗಿಂತ ಭಿನ್ನವಾಗಿ ಬೆಟ್ಟದ ಬುಡದಲ್ಲಿ ಕಾಡು ಪ್ರಾಣಿಗಳೊಂದಿಗೆ ಹೋರಾಡುತ್ತಾ, ತಾವು ಮಾಡಿದ ಬೆಳೆಗಳು ಅವುಗಳ ಬಾಯಿಗೆ ಬೀಳದ ಹಾಗೆ ರಕ್ಷಿಸುವುದು ಸಾಹಸದ ಕೆಲಸವೇ ಆಗಿತ್ತು. ಫಲವತ್ತಾದ ಭೂಮಿಯಲ್ಲಿ ಬಿತ್ತಿದರಷ್ಟೇ ಸಾಲದು ಅದನ್ನು ಪೋಷಿಸುವ ಗಮನಿಸುವ ಅವಶ್ಯಕತೆಯೂ ಇದೆ. ತಮ್ಮ ಪೂರ್ವಿಕರು ಸಂಗ್ರಹಿಸಿ ಇಟ್ಟ ಈ ಭೂಮಿಯನ್ನು ವಿಸ್ತರಿಸುವ ಸಾಹಸವೂ ಅಸಾಧರಣವಾದುದು. ಕೃಷಿ ಭೂಮಿಯ ಅನ್ವೇಷಕರೂ ಗೋಪಾಲಯ್ಯನೇ ಅದನ್ನು ನಿರ್ವಹಣೆ ಮಾಡುತ್ತಾ ವಿಸ್ತರಣೆ ಮಾಡಿದವರೂ ಬೆಟ್ಟದಂತೆ ಬಾಳಿದ ಗೋಪಾಲಯ್ಯ. 'ಕಾಟು ಮೂಲೆ' ಯಂತಹ ಫಲವತ್ತಾದ ಭೂಮಿಯನ್ನು ಅವರು ಅನ್ವೇಷಣೆ ಮಾಡಿದ್ದೇ ತಮ್ಮ ಕಾಡು ಗುಡ್ಡಗಳ ನಿರಂತರ ಅಲೆದಾಟ ಮತ್ತು ಹುಡುಕಾಟದಲ್ಲಿ. ಅನ್ವೇಷಣೆಯ ಹಂತಕ್ಕೆ ಅದು ನಿಲ್ಲದೆ ನಾರಾಯಣನಂತಹ ಒಬ್ಬ ಸ್ವಜಾತಿ ಬಾಂಧವನನ್ನು ಯಾವ ಫಲಾಪೇಕ್ಷೆಯೂ ಇಲ್ಲದೆ ಒಕ್ಕಲು ಹಾಕಿಸಿ ಕೃಷಿ ಮಾಡುತ್ತಾರೆ. ಶ್ರಮಪೂರ್ವಕ ದುಡಿಮೆಯಿಂದ ಕೃಷಿ ಭೂಮಿ ಫಲವತ್ತಾಗುತ್ತದೆ. ಗೋಪಾಲಯ್ಯನು ಆರಂಭದಲ್ಲಿ ಸಾಹಸದ ದಾರಿಯ ಮೂಲಕ ಇಳಿಯುತ್ತಾ 'ಕಾಟು ಮೂಲೆ' ಯನ್ನು ಪ್ರವೇಶಿಸುವುದೇ ದೊಡ್ಡ ಸಾಧನೆಯ ಮೈಲಿಗಲ್ಲು. ಗೋಪಾಲಯ್ಯನವರು ತಮ್ಮ ಮನೆಯಿಂದ ಕಾಟು ಮೂಲೆಗೆ ಮಾಡುವ ಪ್ರಯಾಣದ ವಿವರಣೆಯಲ್ಲಿ ಅಲ್ಲಿರುವ ಭೌಗೋಳಿಕತೆಯನ್ನು ವಿವರಿಸುತ್ತಾರೆ. ಇದರಿಂದ ಕೃಷಿ ಸಂಸ್ಕೃತಿಯ ಅನ್ವೇಷಣೆ ಮತ್ತು ವಿಸ್ತರಣೆಯ ಸ್ವರೂಪವೂ ತಿಳಿಯುತ್ತದೆ. "ನಾವು ಮೂವರು ಹೊಳೆ ಸಂದಿಗೆ ಬಂದೆವು. ಹಳ್ಳವನ್ನು ದಾಟಿ ಎದುರಿನ ಹುಲ್ಲುಗಾವಲನ್ನು ಸೇರಿದೆವು. ಅಲ್ಲಿ ನೆಲ ಬಹಳ ಜವುಗಾಗಿತ್ತು. ನಮ್ಮ ದಾರಿಯೂ ಹುಲ್ಲುಗಾವಲಿನಿಂದ ಹಾದು ಮೂಡಣದ ಗುಡ್ಡವನ್ನೇರಿತ್ತು. ಅಲ್ಲೂ ತುಂಬ ಒರತೆಯ ನೀರಿದ್ದುದರಿಂದ ನೆಲದ ಜೇಡಿಮಣ್ಣು, ಹಿಮ್ಮಡಿಯ ಹಿಡಿತಕ್ಕೆ ಸಿಗುತ್ತಿರಲಿಲ್ಲ. ಕಾಲಿಟ್ಟರೆ ಜಾರುತ್ತಿತ್ತು. ಈ ನಡಿಗೆಯಲ್ಲಿ ದೇರಣ್ಣ ಗೋಪಾಲಯ್ಯನವರು ನನ್ನನ್ನು ಸೋಲಿಸಿಟ್ಟರು. ಆ ಬಯಲನ್ನು ದಾಟಿ ಇನ್ನೊಂದು ಚೂರು ಕಾಡು ಕಳೆದು ಗುಡ್ಡದ ತುದಿಗೆ ಬಂದೆವು... ನನಗೆ ಕೆಳಗಡೆ ಪಾತಾಳ ಲೋಕವೆ ಕಾಣಿಸಿತು. ಅವರಿಬ್ಬರು ಆಚೀಚಿನ ದರ್ಬೆ ಹುಲ್ಲನ್ನು ಮರ ಇಳಿಯುವಂತೆ ಇಳಿದರು. ನಾನು ನೆಲಕ್ಕೆ ಮುಖಮಾಡಿ ಮಂಗನಂತೆ ಇಳಿಯಬೇಕೇ, ಅವರಂತೆ ಪಾತಾಳ ಕಾಣುತ್ತ ಇಳಿಯಬೇಕೇ ಎಂಬುದು ಹೊಳೆಯದೆ ಕೇವಲ ಪೇಟೆಯ ಗೌರವ ಕಾಯುವ ಸಲುವಾಗಿ ಅವರಂತೆ ಕೆಳಕ್ಕಿಳಿದೆ. ಇಳಿಯುತ್ತ ಹೋದರೆ ಪಾತಾಳದ ಬದಲಿಗೆ ಅದರ ಸ್ಥಾನದಲ್ಲಿ ಹಚ್ಚಗಿನ ಹೊಲ, ಪುಟ್ಟ ಅಡಿಕೆ ತೋಟ ಬಿಸಿಲನ್ನು ಮಿಂಚುವ ಎರಡು ಕೊಳಗಳು ಕಾಣಿಸಿದವು. ಭಟ್ಟರು ಹಿಗ್ಗಿ ಅವನ್ನೇ ಕೈ ಮಾಡಿ ತೋರಿಸುತ್ತ ಅದೇ 'ಕಾಟು ಮೂಲೆ' ಎಂದರು. (ಶಿವರಾಮ ಕಾರಂತ .ಕೆ (ಹ.ಆ) ೧೯೮೪ ಪುಟ ೪೭).

ಕೃಷಿಯ ರಕ್ಷಣೆಗಾಗಿ ನಡೆಸುವ ಹಂದಿ, ಕಾಟಿ, ಆನೆಗಳ ಬೇಟೆಯೊಂದಿಗೆ ಕೃಷಿಗೆ ಪೂರಕವಾಗಿರುವ ಪಶುಪಾಲನೆಯ ದನಗಳನ್ನು ಹುಲಿಯ ಬಾಯಿಗೆ ಆಹಾರವಾದಾಗ ನಡೆಸುವ ಹುಲಿಬೇಟೆಯೂ ಮುಖ್ಯವಾದುದು. ಕಳೆದು ಹೋದ ದನ 'ಕಾಳಿ' ಯನ್ನು ಹುಡುಕುತ್ತಾ ಕಾಡು-ಗುಡ್ಡ ಸುತ್ತುತ್ತಾ ಅಬ್ಬಿಗಳನ್ನು ದಾಟುತ್ತಾ ಕುಮಾರ ಪರ್ವತದ ನೆರೆಮನೆಯಂತಹ ಎತ್ತರವಾದ ಸ್ಥಳಕ್ಕೆ ಬಂದು ನಿಂತಾಗ ನೀರು ಹರಿವ

ಸದ್ದಿಗೆ ಕಿವಿಗೊಟ್ಟು ಮುಂದೆ ಸಾಗಿದರು. ಅಲ್ಲಿನ ನೀರು, ಇಕ್ಕೆಲದ ನೆಲದ ಒರತೆ ನನಗೆ ಹುಚ್ಚು ಹಿಡಿಸಿದ್ದವು ಅಲ್ಲಿ ಮಂಗಗಳು ತಿಂದು ಎಸೆದ ಅಡಿಕೆ ಮರವಾಗಿ ಪರ್ವತಕ್ಕೆ ಸ್ಪರ್ಧೆಗೆ ನಿಂತಂತ್ತಿತ್ತು. ಪ್ರಾಕೃತಿಕವಾಗಿ ಬೆಳೆದ ಅಡಿಕೆ ಸಸಿಗಳನ್ನು ಹನುಮಂತ ದೇವರ ಕೃಪೆ ಎಂದೇ ಬಗೆದರು. ಅಲ್ಲಿ ತೋಟ ಮಾಡಿದರೆ ಹೇಗಾದೀತು ಎಂಬ ಕುತೂಹಲದಿಂದ ವಿಟ್ಲ ಸೀಮೆಯಿಂದ ಅಳುಗಳನ್ನು ತರಿಸಿ ವರ್ಷಕ್ಕೆ ಒಂದು ಎಕರೆ ಗದ್ದೆ ತೋಟ ನಿರ್ಮಿಸಿ ವಿಸ್ತರಿಸುತ್ತಾ, ತೆರಳಿದರು. ಐದು ಎಕರೆ ಹೊಲ, ಐದು ಎಕರೆ ಗದ್ದೆಗಳನ್ನು ವಿಸ್ತರಿಸಿ, ಜ್ವರದ ಗಡ್ಡೆಯಿಂದ ಬದುಕು ಅಸಾಧ್ಯ ಅನ್ನುವಾಗಲೂ ಅಲ್ಲಿ ನೆಲೆನಿಂತು ಹಠತೊಟ್ಟು ಬದುಕಿನ ರೀತಿ ವಿಶಿಷ್ಟವಾದುದು.

ಕೃಷಿ ಮಾಡುವ ನೀರಿನ ಆಸರೆಯಿರುವ ಭೂಮಿಯನ್ನು ಆಕಸ್ಮಿಕವಾಗಿಯಾದರೂ ಅನ್ವೇಷಣೆ ಮಾಡಿದ್ದಲ್ಲದೆ ಹಠ ತೊಟ್ಟು ಕಾಡಿನ ಮಧ್ಯದ ಹೊಳೆ ದಂಡೆಯ ಭೂಮಿಯನ್ನು ಫಲವತ್ತಾದ ಗದ್ದೆಯನ್ನಾಗಿ ಪರಿವರ್ತಿಸಿ ಕೃಷಿ ನಿಷ್ಠೆಯನ್ನು ಕುತೂಹಲ ಬೆರಗಿನೊಂದಿಗೆ ಆಗು ಮಾಡಿಕೊಂಡವರು. ಗೋಪಾಲಯ್ಯನವರು. ಅದರಿಂದ ದುಡ್ಡು, ಸಮಯ, ಶ್ರಮ ಹಾಳು ಎಂದು ತರ್ಕಿಸದೆ ಹಟ ತೊಟ್ಟು ಬದುಕಿದರು. ಬರಿಯ ಗದ್ದೆ ಸಾಗುವಳಿ ಮಾತ್ರವಲ್ಲ ಹಣಕಾಸಿನ ಅವಶ್ಯಕತೆಗಾಗಿ ಅಡಿಕೆ ತೋಟ ಮಾಡಿಕೊಂಡು ಕೃಷಿಯನ್ನು ಬದಲಾವಣೆ ಮಾಡಿಕೊಂಡರು. ಇದೆಲ್ಲವೂ ಏಕ ಕಾಲಕ್ಕೆ ಜತೆ ಜತೆಯಾಗಿಯೇ ನಡೆಯಿತು. ಅನ್ವೇಷಣೆ, ವಿಸ್ತರಣೆ, ಬದಲಾವಣೆ, ನಿರ್ವಹಣೆಯ ಸ್ವರೂಪವೂ ಮುಖ್ಯವಾಗಿದೆ. ಕಾಟು ಮೂಲೆಯನ್ನು ಅನ್ವೇಷಿಸಿ ಗದ್ದೆಯೊಂದಿಗೆ ತೋಟವನ್ನು ಬೆಳೆಸಿ ಆಹಾರ ಮತ್ತು ದುಡ್ಡಿನ ವ್ಯವಹಾರವನ್ನು ನಿರ್ವಹಿಸಿದ ಜಾಣ್ಮೆ ಅವರದು, ಕೃಷಿಯ ನಿರ್ವಹಣೆಗೆ ಲಾಭ– ನಷ್ಟಗಳ ಲೆಕ್ಕವಿಲ್ಲದೆ ಅದನ್ನು ನಾರಾಯಣಯ್ಯನ ಸಾಗುವಳಿಗೆ ಬಿಟ್ಟುಕೊಟ್ಟರು. ಕಾಟು ಮೂಲೆಯನ್ನು ನಾರಾಯಣಯ್ಯ ನೋಡಿಕೊಳ್ಳುವವನಾದರೂ ಏನು ಬಿತ್ತಬೇಕು ? ಯಾವಾಗ ಬಿತ್ತಬೇಕು ಎನ್ನುವುದು ಒಡೆಯನ ಆಡಳಿತಕ್ಕೆ ಒಳಪಟ್ಟಿತ್ತು. ನಿರ್ವಹಣೆಯ ವಿಸ್ತೃತತೆಯೂ ಇದಾಗಿದೆ.

ತಮ್ಮ ಒಕ್ಕಲುಗಳಾಗಿರುವ ಬಟ್ಯ, ದೇರಣ್ಣರ ಶ್ರಮದ ಮುಂದೆ ಕೆಂಚನ ಔದಾಸೀನ್ಯ ಕೃಷಿ ನಾಶಕ್ಕೆ ಕಾರಣವಾಗುತ್ತದೆ. ನಿರ್ವಹಣೆ ಮಾಡುವಲ್ಲಿ ಆತನೂ ಪತ್ನಿಯೂ ಸೋತು ಹೋದದ್ದರಿಂದ ಸಹಜವಾಗಿಯೇ ನಷ್ಟ ಸಂಭವಿಸುತ್ತದೆ. ಉಳಲು ಕೋಣ, ಬಿತ್ತಲು ಬೀಜ ಇಲ್ಲದೆ ಕೃಷಿ ಹೇಗೆ ಸಾಧ್ಯ.? ಬಿತ್ತನೆ ತಡವಾದರೆ ಫಸಲು ಒಳಿತಾಗಿ ಬಂದೀತೇ? ಅದಕ್ಕೆ ತದ್ವಿರುದ್ಧವಾಗಿ ಬಟ್ಯನಂತಹ ದಲಿತ ಬೇಟೆ, ಪಶುಪಾಲನೆಯಲ್ಲಿ ಬದುಕುವವನಾದರೂ ತನ್ನ ಗುಡಿಸಲಿನ ಸುತ್ತ ತೆಂಗು, ಬಾಳೆ, ತರಕಾರಿ, ಗೆಡ್ಡೆ ಗೆಣಸು ಬೆಳೆಸುತ್ತಾನೆ. ಕೃಷಿ ಒಂದು ಸಮುದಾಯದ ಕಸುಬಲ್ಲ. ನಿಷ್ಠೆಯಿಂದ ದುಡಿದವನಿಗೆ ಭೂಮಿ ಎಂದೂ ಮೋಸ ಮಾಡಿದ್ದಿಲ್ಲ. ತೃಪ್ತ ಸರಳ ಜೀವನಕ್ಕೆ ಕೃಷಿಯೇ ಮಾದರಿ. ಅದಕ್ಕೆ ಸಾಕ್ಷಿಯಾಗಿರುವವರು ಗೋಪಾಲಯ್ಯ. ಕೃಷಿಯ ಕೆಲಸವನ್ನು ಉತ್ಸಾಹದಿಂದ ನಿರ್ವಹಿಸುವಾಗ ದೇರಣ್ಣ ಹೇಳುವ ಮಾತು ಪ್ರಮುಖ "ಕೆಲಸವೇನು ಮಣ್ಣು? ಬಿತ್ತಾಯಿತು, ಬೇಲಿಯಾಯಿತು ಇನ್ನು ಕೊಯ್ಲಿನ ತನಕ ನುಸಿ ಹೊಡೆದರಾಯಿತು" (ಅದೇ ಪುಟ ೩೩)

ಜನಾಂಗಿಕವಾಗಿ ಅವರು ಹೇಳುವ ಮಾತು ಪ್ರಮುಖ. "ಕಂಗಿನ ತೋಟಕ್ಕು ನಮ್ಮಂಥ ಹವ್ಯಕ ಬ್ರಾಹ್ಮಣರಿಗೂ ಜೋಡಿ ಸಮ. ನಮ್ಮ ಕೈಯ್ಯಲ್ಲಿ ತೋಟ ಊರ್ಜಿತಕ್ಕೆ ಬಂದ ಹಾಗೆ ಇನ್ನೂ ಯಾವ್ಯಾವ ಜನರಿಂದಲೂ ಅದು ಮೇಲಕ್ಕೆ ಬರಲಾರದು. ಈ ನಮ್ಮ ನಾರಾಯಣ ಬರುವ ಮೊದಲು ಒಬ್ಬಿಬ್ಬರು ಬ್ಯಾರಿಗಳಿಗೆ ಕೊಟ್ಟು ನೋಡಿದೆ. ಅವರು ಅಡಿಕೆ ಮರದ ಕುಡಿಯನ್ನು ಕಂಡರೇ ಹೊರತು ಅದರ ಬುಡವನ್ನು ಅವರು ಕಾಣಲಿಲ್ಲ. ಅದಕ್ಕೆ ಈಟು ಬಿದ್ದರೆ ಕುಡಿಯಲ್ಲಿ 'ಫಲ ಉಂಟೆಂದು ಅವರು ತಿಳಿಯಲಾರರು." (ಅದೇ, ಪುಟ.೧೮) ಕೃಷಿಯಲ್ಲಿ ವ್ಯಾಪಾರಿ ಮನೋಧರ್ಮ ಬದುಕಿನ ಧರ್ಮವೂ ಆಗಬಾರದು ಎಂಬ ಆಶಯ ನಿರೂಪಕ ಗೋಪಾಲಯ್ಯನವರದು ಆಗಿದೆ.

ತಮ್ಮ ಪೂರ್ವಿಕರು ಯಾರೋ ಅನ್ವೇಷಿಸಿದ ಈ ಭೂಮಿಯನ್ನು ಇಂದಿಗೂ ಕೃಷಿ ಕಾರ್ಯದಲ್ಲಿ ಕಾಪಿಟ್ಟುಕೊಂಡು ಬಂದಿದ್ದಾರೆ. ಕಾದಂಬರಿಯಲ್ಲಿ ನಿರೂಪಕರು ಪಂಜಕ್ಕೆ ತೆರಳಬೇಕಾದವರು ದಾರಿ ತಪ್ಪಿ ಬಂದಂತೆ ನಮ್ಮ ಪೂರ್ವಿಕರು ಹಾದಿ ತಪ್ಪಿ ಬಂದಿರಬೇಕೆನ್ನುತ್ತಾರೆ. "ನೀವು ಇವತ್ತಿನ ದಿನ ಹಾದಿ ತಪ್ಪಿ ನಮ್ಮ ಕೆಳ ಬೈಲಿಗೆ ಬಂದಂತೆ ನನ್ನ ಅಜ್ಜನೋ ಪಿಜ್ಜನೋ ಹಾದಿ ತಪ್ಪಿಯೇ ಬಂದಿರಬೇಕು. ನಮ್ಮ ಮನೆಯ ಅಡಿಕೆ ತೋಟಕ್ಕೆ ಏನಾದರೂ ಇನ್ನೂರು ವರ್ಷಗಳಾದರೂ ಆಗಿರಬೇಕು. ಅವರು ಬಂದುದು ಅದಕ್ಕೂ ಹಿಂದೆ ಎಂದು ಹಾಗಾಯಿತು. ಅಜ್ಜ ಪಿಜ್ಜ ಬಂದರು ಎನ್ನುವುದಕ್ಕಿಂತ ಪಿಜ್ಜನ ಪಿಜ್ಜ ಎಂದರೂ ಸಮನೇ. ನಮ್ಮ ಮೂಲದ ಮನೆಯ ತಳ ಇಲ್ಲೇ ಹಿಂದೆ" (ಅದೇ ಪುಟ ೨೨) ಇಂತಹ ಗೋಪಾಲಯ್ಯ ಹಿರಿಯರು ಇಲ್ಲಿಗೆ ಬಂದು ಕೃಷಿಕಾರ್ಯ ಮಾಡುತ್ತಿದ್ದರೆ ,ಅದನ್ನು ದಾಟಿ ಸಾಹಸದ ಕೃಷಿ ಭೂಮಿಯನ್ನು ಅನ್ವೇಷಿಸಿದ ಮತ್ತು ದುಡಿಮೆಯನ್ನು ಅಂಜದೆ ಮಾಡಿದ ಎದೆಗಾರಿಕೆಗೆ ಸಾಕ್ಷಿಯಾಗಿದೆ. ಹರಿಯುವ ನದಿ ತನ್ನ ಗಾತ್ರ ಪಾತ್ರಗಳನ್ನು ಹೆಚ್ಚಿಸಿಕೊಂಡಂತೆ ಅದನ್ನು ಅವಶ್ಯಕತೆಗೆ ಅನುಗುಣವಾಗಿ ಬಳಸಿಕೊಳ್ಳುವ ಅಗತ್ಯತೆಗಳು ಮತ್ತು ಅಳವಡಿಸಿಕೊಳ್ಳುವ ತಂತ್ರಗಾರಿಕೆಗಳೇ ಬಹು ಮುಖ್ಯವೆನಿಸುತ್ತದೆ. ಅದಕ್ಕೆ ಸಾಕ್ಷಿಯಾಗಿರುವ ಭೌತಿಕ ಆಯಾಮಗಳನ್ನು ಗುರುತಿಸುತ್ತಾರೆ." "ಅದೇ ಮಾವಯ್ಯನ ಕಾರು ಭಾರಕ್ಕೆ ಸಾಕ್ಷಿ ಕಂಬಗಳು. ನೋಡಿ ಅವು ಬೀಳಲಿಂದ ಮಾಡಿದವು. ಒಳಗೆ ನೀವು ಈಗ ಕೈಯ್ಯಲ್ಲಿ ಹಿಡಿದಿರುವಂತಹ ಕಲ್ಲುಗಳನ್ನು ತುಂಬಿಸಿ ಕಂಬ ಮಾಡಿದ್ದಾರೆ. ಅವು ಆಧಾರಕ್ಕೆ ಕಂಬದಿಂದ ಕಂಬದ ನಡುವೆ ತುಂಬ ಸೊಪ್ಪು, ಸಲಿಕೆಗಳ ಬೇಲಿಯನ್ನು ಕಟ್ಟಿ, ಹೊರ ಮೈಯ್ಯಲ್ಲಿ ಮಣ್ಣಿನ ದಂಡೆ ಹಾಕಿ ಬಿಟ್ಟು ಒಳಗಡೆ ನೀರು ನಿಲ್ಲಿಸಿದರೆ, ನೂರು ಎಕ್ರೆ ಸಾಗುವಳಿಯಾದೀತು. ಮೇಲಿರುವುದು ಸಮತಟ್ಟಾದ ಬಯಲು. ಹೀಗೆಂದು ಆಚೀಚೆ ನದಿ ದಂಡೆಯಲ್ಲಿ ಕಟ್ಟಿದ ಶಿಲೆಯ ದಂಡೆಗಳನ್ನು ಅವರು ಕಡಿಸಿದ ನೀರನ್ನು ಬಯಲಿಗೆ ತಿರುಗಿಸಲು ಮಾಡಿದ ಕಾಲುವೆಯನ್ನು ಅಲ್ಲಿನ ದಂಡೆಯ ಅಂಚುಗಳಲ್ಲಿ ನೆಟ್ಟ ನೂರಾರು ತೆಂಗಿನ ಮರಗಳನ್ನು ತೋರಿಸಿದರು ನೂರು ಎಕ್ರೆ ಜಮೀನು ಬತ್ತ ತುಂಬ ಬೆಳೆಯಲು ಅನುಕೂಲವಾಗಿತ್ತು. ಆದರೆ ಮನುಷ್ಯನಿಗೆ ಅದನ್ನು ಉಣ್ಣುವಂಥ ಯೋಗವಿರಲಿಲ್ಲ.(ಅದೇ ಪುಟ ೧೨೭). ಬಹಳ ವಿಸ್ತಾರವಾದ ಭೂಮಿಯಲ್ಲಿ ಒಂದೊಂದೇ ಒಕ್ಕಲು ನಿಲ್ಲಲು ಕೇಳುವುದಿಲ್ಲ. ಕಾಡು ಮೃಗಗಳ ಹಾವಳಿ ಅತಿಯಾಗಿ ಅದನ್ನು ತಡೆಯಲಾರದ್ದಕ್ಕೆ ಆ ಪ್ರಯತ್ನವನ್ನು ಬಿಟ್ಟು ಬಿಟ್ಟರೂ ಬೆಳೆ ಬೆಳೆಯಿಸಲು ನಡೆಸಬೇಕಾದ ಹೋರಾಟ ಮತ್ತು ನಿಷ್ಠೆಯನ್ನು ಗಮನಿಸಬೇಕು.

ಒಂದು ಪೀಳಿಗೆಯ ಮಂದಿ ಇಷ್ಟೆಲ್ಲ ಹೋರಾಟಗಳನ್ನು ನಡೆಸಿ ದುಡಿಯುವುದನ್ನೇ ಬದುಕಿನ ಧ್ಯೇಯವನ್ನಾಗಿಸಿ ಬಾಳಿದರು. ಬೆರಳೆಣಿಕೆಯಷ್ಟು ಜನ ವಸತಿಯ ಮನೆಗಳಿರುವ ಪ್ರದೇಶದಲ್ಲಿ ಹೊರಗಿನ ಸಂಪರ್ಕವನ್ನು ಇರಿಸಿಕೊಳ್ಳದೆ ಬದುಕಿದರೂ ಬಾಳನ್ನು ಸಹ್ಯವಾಗಿಸಿ ಉದಾತ್ತ ಮೌಲ್ಯಗಳನ್ನು ಇರಿಸಿಕೊಂಡು ಬಾಳಿದರು. ಎರಡನೇ ತಲೆಮಾರಿಗಾಗುವಾಗ ಕೃಷಿ ಮತ್ತು ಹಳ್ಳಿಯ ಬದುಕನ್ನು ನಿರಾಕರಿಸುವ ಮನೋಧರ್ಮಗಳು ಬೆಳೆದವು. ಮಗ ಶಂಭು ತಾನು ಕಲಿತ ವಿದ್ಯೆಯಿಂದ ತಮ್ಮಿಂದ ದೂರವಾದ ಎಂಬ ತರ್ಕ ಅವರದು. "ಕಳೆದ ಯುದ್ದವಾದ ಮೇಲೆ ಅಡಿಕೆಗೆ ಒಳ್ಳೆಯ ಧಾರಣೆ ಬಂದಿತಲ್ಲ. ಆಗ ನಮ್ಮ ಹವ್ಯಕರ ಕುಲಕ್ಕೇನೆ ಇಂಗ್ಲಿಷಿನ ಹುಚ್ಚು ಹಿಡಿಯಿತು. ಈ ಹುಡುಗ ಹುಟ್ಟಿದ್ದು ಆನಂತರ. ಊರ ಮನೆಯವರ ಮಕ್ಕಳು ಆಗಾಗಲೇ ಇಂಗ್ಲೀಷ್ ಓದಲು ಪುತ್ತೂರು, ಮಂಗಳೂರು ಕಡೆ ನೋಡುತ್ತಿದ್ದ ದಿನ. ಅಂಥವರ ಮೇಲ್ಪಂಕ್ತಿ ನನಗೂ ಅಂಟಿಕೊಂಡಿತು. ನಾನೂ ವಿಚಾರಗೆಟ್ಟು ನನ್ನ ಶಂಭುವನ್ನು ಇಂಗ್ಲಿಷ್ ಶಾಲೆಯೊಂದಕ್ಕೆ ಹಾಕಿದೆ" (ಅದೇ ಪುಟ ೩೮). ಒಂದು ಕಾಲಕ್ಕೆ ಹೊಟ್ಟೆ ಪಾಡಿನ ಹಸಿವಿಗಾಗಿ ಕೃಷಿ ಭೂಮಿಯನ್ನು ಅರಸುತ್ತಾ ವಲಸೆ ಆರಂಭವಾಗಿದ್ದರೆ ಮುಂದಿನ ಪೀಳಿಗೆಗೆ ಉದ್ಯೋಗ ಮತ್ತು ದುಡಿಮೆಯ ಪರಿಕಲ್ಪನೆ ಬದಲಾಗಿ ಮರು ವಲಸೆ ಆರಂಭವಾಯಿತು. ಹಳ್ಳಿಯಿಂದ ನಗರಗಳಿಗೆ ಓದು ಬರಹಕ್ಕಾಗಿ ತೆರಳಿದವರು ಮರಳಿ ಹಳ್ಳಿಗೆ ಬಾರದೆ ಉಳಿದದ್ದರಿಂದ ಮಾಡಿರುವ ಗದ್ದೆ ಜಮೀನುಗಳನ್ನು ನಿರ್ವಹಣೆ ಮಾಡುವುದು ತ್ರಾಸದಾಯಕವಾಗಿ ಕೃಷಿ ಕಾರ್ಯಗಳು ಕಣ್ಮರೆಯಾಗುವ ಹಂತಕ್ಕೆ ಬಂದವು. ಸಾಮುದಾಯಿಕ ಬದುಕಿನ ಸರ್ವರ ಹಿತದ ಕಲ್ಪನೆಗೆ ಭಿನ್ನವಾಗಿ ವ್ಯಕ್ತಿಗತವಾದ ಆಸೆ ಆಕಾಂಕ್ಷೆಗಳೇ ಮಹತ್ವ ಪಡೆದುಕೊಂಡವು. "ಓದುತ್ತಾ ಹೋದಂತೆ ಅವನು ಮನೆಗೆ ಬರುವುದು ಕಡಿಮೆಯಾಯಿತು. ರಜೆಗಾದರೂ ಒಮ್ಮೆ ಊರಿಗೆ ಬಂದು ತಾಯಿಯನ್ನು ನೋಡಿಕೊಂಡು ಹೋದರೆ ಸಾಕೆನಿಸಿತು ನನಗೆ. ಕೊನೆಗೆ ದೂರವಾದ ವಸ್ತು ದೂರನೇ ಆಯಿತು. ಬಿ.ಎ ಆಗಿ ಎಲ್.ಎಲ್.ಬಿ ಮುಗಿಸಲು ಮುಂಬಯಿಗೆ ಹೋದ. ಅದರೊಳಗಾಗಿ ಅವನಿಗೆ ಲಗ್ನ ಮಾಡಿಸಬೇಕು ಎಂಬ ನಮ್ಮ ಹಂಬಲವನ್ನು ನಿರಾಕರಿಸಿ ಬಿಟ್ಟ. ಹಾಗೆ ಲಗ್ನವಾಗಿದ್ದರೆ ಹೆಂಡತಿಯ ಮೇಲಿನ ವ್ಯಾಮೋಹಕ್ಕಾದರೂ ಊರಿಗೆ ಬರುತ್ತಿದ್ದನೋ ಏನೋ" (ಅದೇ, ಪುಟ.೩೯). ಒಂದು ತಲೆಮಾರಿನ ದುಡಿಮೆಯ ಮೌಲ್ಯ ಮುಂದಿನ ತಲೆಮಾರಿಗೆ ಬದಲಾಗುತ್ತ ಹೋದುದು ಜತೆಗೆ ಸಂಪತ್ತಿನ, ಸುಖದ ಪರಿಭಾಷೆಗಳು ಪಲ್ಲಟಗೊಂಡವು. ಈಗಲೂ ಒಕ್ಕಲು ಮಕ್ಕಳನ್ನು, ನಾರಾಯಣಯ್ಯನ ಹೆಂಡತಿ ಮಕ್ಕಳನ್ನು ತನ್ನ ಬಂಧುಗಳಂತಹ ಆಪ್ತತೆಯಲ್ಲಿ ಪರಿಭಾವಿಸುವ ಶಂಕರಮ್ಮ–ಗೋಪಾಲಯ್ಯರಿಗೆ ತಮ್ಮ ಕರುಳ ಕುಡಿಯ ಚಿಂತೆ ಇಲ್ಲದೆ ಇಲ್ಲ. ನಿರೂಪಕರಲ್ಲೂ ಆಗಂತುಕರಾಗಿದ್ದರೂ ತಮ್ಮ ಮಗನನ್ನೇ ಕಾಣುವ ಅವರ ವಾತ್ಸಲ್ಯದ ಭಾವ ಹಿರಿದಾದುದು. ಕೆಳ ಬೈಲುವಿನಿಂದ ಕಾಟು ಮೂಲೆಯ ಮೈಲು ದಾರಿಯೂ ಮಕ್ಕಳ ಅನಾರೋಗ್ಯದ ಮುಂದೆ ಹರದಾರಿಯಾಗಿ ಬಿಡುತ್ತದೆ. ನಾರಾಯಣಯ್ಯನ ಮಕ್ಕಳು ಸಾವಿತ್ರಿ – ಸುಬ್ರಾಯರ ಬಾಲಲೀಲೆಗಳಲ್ಲಿ ತಮ್ಮ ಮಕ್ಕಳ ಬಾಲ್ಯವನ್ನು ಮರುಕಳಿಸುವ ಈ ದಂಪತಿಗಳಿಗೆ ಸುಖದ ಸುಪ್ಪತ್ತಿಗೆಯಂತಹ ಅನುಭವ ನೀಡುತ್ತದೆ. ಹೊಟ್ಟೆ ತುಂಬಿಸಿಕೊಳ್ಳುವುದಕ್ಕಾಗಿಯೇ ದುಡಿಯುವ ಕಾಯಕಕ್ಕಿಂತ ಭಿನ್ನವಾಗಿ ಮಣ್ಣಿನೊಂದಿಗೆ ಸೆಣಸಾಡಿ ಸಾಹಸವನ್ನು ವ್ಯಕ್ತಪಡಿಸಲು ಕೃಷಿ ಕಾರ್ಯಗಳು ಪ್ರೇರಕವಾಗಿದೆ. ಕಾಡು ಮೂಲೆಯನ್ನು ಕೊಂಪೆ

ಎಂದು ಪರಿಭಾವಿಸದೆ ಜ್ವರದ ಗಡ್ಡೆಯ ಪ್ರದೇಶ ಎಂದು ತಿಳಿದರೂ ಸಹಜವಾಗಿ ಬದುಕು ನಡೆಸಲು ಪ್ರಯತ್ನಿಸಿದ ಅವರ ದುಡಿಮೆಯ ಮನೋಧರ್ಮ ಸ್ಥಿರವಾದುದು.

ಮನುಷ್ಯ ನಾಗರಿಕನಾಗುತ್ತ ಹೋದಂತೆ ಕೃಷಿಯಿಂದ ದೂರವಾಗುವ ದ್ವಂದ್ವ ಪ್ರಮುಖವಾದುದು. ಕೃಷಿ ಸಂಸ್ಕೃತಿಯನ್ನು ನಾಗರಿಕತೆಯ ಸೋಪಾನ ಎನ್ನುವಾಗಲೂ ಬೆಳೆಯುವ ಬೆಳೆ ಬರಿಯ ಆಹಾರ ಮಾತ್ರ ಆಗದೆ ವ್ಯವಹಾರಕ್ಕಾಗಿ ಗುಡ್ಡ ಅಗೆದು ತೋಟ ಮಾಡುತ್ತಾರೆ. ಆಹಾರದ ಸ್ವಾವಲಂಬನೆಯಿಂದ ದುಡಿಮೆಯಲ್ಲಿ ಸ್ವಾವಲಂಬನೆ ಸಾಧ್ಯವಿಲ್ಲ. ಅದಕ್ಕಾಗಿ ಒಕ್ಕಲುಗಳನ್ನು ದೂರದಿಂದ ತಂದು ಹಾಕಿದ್ದಾರೆ. ಒಕ್ಕಲಾಗಿರುವವರೂ ದುಡಿಯುವ ಶೂದ್ರರು ಮತ್ತು ದಲಿತರು ಮಾತ್ರ. ತಮ್ಮ ಮೂಲ ಕಸುಬುಗಳನ್ನು ಸ್ಥಿತ್ಯಂತರಗೊಳಿಸಿಕೊಂಡು ಕೃಷಿಯ ಕೂಲಿಯಾಳುಗಳಾಗಿ ದುಡಿಯುವ ಇವರು ಕಾಡಿನ ಬೇಟೆಗೆ ಬೆಳೆಯ ರಕ್ಷಣೆಗೆ ಅತ್ಯಗತ್ಯವಾಗಿ ಬೇಕಾಗಿದ್ದವರು. ದುಡಿಮೆ ಬರಿಯ ಜೀತವಾಗದೆ ಒಡೆಯನ ಒಕ್ಕಲಾಗಿ ದುಡಿಯುವ ಊಳಿಗಮಾನ್ಯತೆಯೂ ಪ್ರಮುಖ. ಆದರೆ ಹಾಗೆ ಊಳಿಗಮಾನ್ಯತೆಯಿಂದ ಪಾಳೇಗಾರಿಕೆಯನ್ನು ಗೋಪಾಲಯ್ಯ ನಡೆಸಿಲ್ಲ. ನೂರಾರು ಎಕರೆ ಭೂಮಿಯನ್ನು ಸಾಗುವಳಿ ಮಾಡುವ ಇರಾದೆ ಇದ್ದರೂ ಅಲ್ಲಿ ತಾನು ಕೂಲಿಯಾಳುಗಳೊಂದಿಗೆ ದುಡಿಯುವ ಮನೋಧರ್ಮವಿದೆ. ಅದು ಅಡಿಕೆ ಸುಲಿಯುವ ಕಾಯಕ, ನದಿಗೆ ಪಾಪು ಹಾಕುವ ಕಾಯಕ, ನದಿ ದಡಗಳನ್ನು ಸಜ್ಜುಗೊಳಿಸುವ ಹುಲಿ ಬೇಟೆಯ ಕಾಯಕ, ಹೀಗೆ ಪ್ರತಿಯೊಂದು ಕೆಲಸದಲ್ಲೂ ಅವರ ಪಾಲುದಾರಿಕೆ ಇದೆ. ನಾರಾಯಣಯ್ಯನಲ್ಲಿ ನಿರೂಪಕರು ನೀವು ಕೃಷಿ ಮಾಡುತ್ತಿರುವುದು ಗೇಣಿಗೋ ಎಂಬ ಪ್ರಶ್ನೆ ಕೇಳಿದಾಗ ಅವರು ಕೊಡುವ ಉತ್ತರ ಮಹತ್ವವಾದುದು. ಅವರಿಗೆ ನಾನೆಂದೂ ಮೋಸ ಮಾಡಿಲ್ಲ ಎನ್ನುತ್ತಾರೆ. "ಗೇಣಿಯೇ! ಗೇಣಿಯಾದರೆ ಎಷ್ಟು ಗೇಣಿ ಕೊಡಬೇಕಾದೀತು ಹೇಳಿ! ಬದಲು ಮಾವಯ್ಯ ಬೆಳೆದುದರಲ್ಲಿ ನನಗೆ ಅರೆವಾಸಿ ನಿನಗೆ ಅರೆವಾಸಿ ಎಂದು ಹೇಳಿದ್ದಾರೆ. ಇಲ್ಲಿಯ ತನಕವೂ ಹಾಗೆಯೇ ನಡೆದು ಬಂದಿದೆ. ಒಂದು ವರ್ಷವಾದರೂ ಈ ವರ್ಷ ಇಷ್ಟು ಕಡಿಮೆಯೇಕೇ ಆದದ್ದು ಇಷ್ಟು ಸರಿಯೇ ಎಂದು ಅವರು ಕೇಳಿದವರಲ್ಲ. ಒಂದೇ ಒಂದು ಅಡಿಕೆಯನ್ನು ನಾನು ಅವರಿಂದ ಅಡಗಿಸಿ ಇಟ್ಟವನೂ ಅಲ್ಲ." (ಅದೇ ಪುಟ ೬೦)

ಮನುಷ್ಯ ಮನುಷ್ಯರ ಸಂಬಂಧಗಳ ಮಧ್ಯೆ ಗೇಣಿ- ಒಕ್ಕಲು ಲೆಕ್ಕಚಾರ, ಲಾಭ- ನಷ್ಟಗಳ ಪ್ರಶ್ನೆ ಏಳಿದ್ದಿಲ್ಲ. ಇಂತಹ ಸೌಹಾರ್ದ ಸಂಬಂಧಗಳನ್ನು ಮನುಷ್ಯ ಮತ್ತು ಪ್ರಕೃತಿಯೊಂದಿಗೆ ಬೆಸೆದು ಬದುಕಿನ ಕೃಷಿ ಮಾಡಿದ ಗೋಪಾಲಯ್ಯ ತನ್ನ ಮುಂದಿನ ಪೀಳಿಗೆಯವನಾದ ಶಂಭುವನ್ನು ಕೃಷಿಗೆ ಒಲಿಸಿಕೊಳ್ಳುವಲ್ಲಿ ಸಮರ್ಥರಾಗಲಿಲ್ಲ. ಆತ ದುಡಿಮೆ ಮಾಡಬೇಕಾಗಿಲ್ಲ ದುಡಿಸಿಕೊಂಡರೆ ಸಾಕು. ಅದಕ್ಕೂ ಸಿದ್ಧನಿಲ್ಲದ ಆತ ಸಾಗುವಳಿಯ ಕಾರ್ಯಕ್ಕೆ ಬೆನ್ನು ತಿರುಗಿಸಿ ನಿಲ್ಲುತ್ತಾನೆ. ಅಧುನಿಕತೆ ಎನ್ನುವುದು ಸವಲತ್ತಾಗಿ ನಮಗೆ ಬೇಕು. ಸೌಕರ್ಯಗಳನ್ನು ಒಪ್ಪಿಕೊಳ್ಳುವ ನಾವು ಅದರ ಇನ್ನೊಂದು ನೆಲೆಯ ಆಯಾಮವನ್ನು ನಿರಾಕರಿಸುತ್ತೇವೆ. ಇದು ಬಹು ಸಂಕೀರ್ಣವಾದ ನೆಲೆಯಾಗಿ ಪರಿಭಾವಿಸಲ್ಪಡುತ್ತದೆ. ಕಾರಂತರು "ಬೆಟ್ಟದ ಜೀವ" ದಂತಹ ಕಾದಂಬರಿಯಲ್ಲಿ ಕೃಷಿ ನಿಷ್ಠೆಯನ್ನು ವ್ಯಕ್ತಪಡಿಸುತ್ತಲೇ ಕೃಷಿಯಿಂದ ವಿಮುಖರಾಗಿರುವ ಯುವ ಪೀಳಿಗೆಯ ಮೌಲ್ಯಗಳ ವರ್ತಮಾನವನ್ನು ಕಣ್ಣ ಮುಂದೆ ತರುತ್ತಾರೆ. ವಾಸ್ತವದಲ್ಲಿ ಇದೆಲ್ಲವೂ ಅವಸ್ಥಾಂತರಗಳಾಗಿ

ಗೋಚರವಾಗದೆ ನಿಧಾನಗತಿಯ ಸ್ಥಿತ್ಯಂತರಗಳಿಗಿಂತ ಭಿನ್ನವಾಗಿ ಏಕಕಾಲದಲ್ಲಿ ಹೇಗೆ ಎಲ್ಲವೂ ಜತೆ ಜತೆಯಾಗಿ ನಡೆಯುತ್ತಿತ್ತು ಎನ್ನುವುದು ಪ್ರಮುಖ ಅಂಶ. ಚಾರಿತ್ರಿಕ ಹಿನ್ನೆಲೆಯಲ್ಲಿಯೂ ನಾವು ಈ ತರ್ಕವನ್ನು ವಿವರಿಸಿಕೊಳ್ಳಬೇಕಿದೆ.

ಕೃಷಿಯ ಅನ್ವೇಷಣೆ, ಮಾಡುತ್ತಲೇ ಅದನ್ನು ವಿಸ್ತರಣೆ ಮಾಡಿದ ಸ್ವರೂಪ, ವಿಸ್ತರಣೆಯೊಂದಿಗೆ ನಿರ್ವಹಣೆ ಮಾಡುತ್ತ ಬದಲಾವಣೆಯನ್ನು ಮಾಡಿಕೊಂಡು ಹೀಗೆ ಬದಲಾವಣೆಯಾಗುತ್ತಿದ್ದಂತೆ ಕೃಷಿ ಜಗತ್ತು ನಿರ್ವಹಣೆ ಮಾಡುವ ಜನ ಬಲವಿಲ್ಲದೆ ಯಂತ್ರಗಳ ಆಗಮನವಾಗದೆ ನಿರಾಕರಣೆಗೂ ಒಳಪಟ್ಟಿತು. ಒಂದು ತಲೆಮಾರಿನ ದುಡಿಮೆಯ ಮೌಲ್ಯ ಮತ್ತು ಸ್ವರೂಪ ಎರಡನೆ ತಲೆಮಾರು, ಅದರಲ್ಲೂ ವಸಾಹತುಶಾಹಿ ಜಗತ್ತಿನ ಪ್ರಭಾವದಿಂದ ಸ್ಥಿತ್ಯಂತರಗೊಳ್ಳುತ್ತ ಹೋಗುತ್ತಿದೆ ಎನ್ನುವುದನ್ನು ಕೃಷಿ ಜಗತ್ತಿನ ಚರಿತ್ರೆಯಾಗಿ ವಿಶ್ಲೇಷಿಸಿದ್ದಾರೆ. ಪಟ್ಟಣ ಮತ್ತು ಹಳ್ಳಿಯ ಬದುಕಿನ ಮಧ್ಯದ ಸಂಘರ್ಷ ಮೌಲ್ಯಗಳ ಸ್ಥಿತ್ಯಂತರದಿಂದ ಸಮಾಜದಲ್ಲೂ ಪಲ್ಲಟಗಳು ಗೋಚರವಾದವು. ಬೆಟ್ಟದ ಜೀವದ ನಾರಾಯಣಯ್ಯನಂಥವರ ಮುಂದೆ ಮಗ ಶಂಭು ಪ್ರಕೃತಿಯ ಒಡನಾಟಕ್ಕೆ ಪುಟ್ಟ ಒಡನಾಡಿಯೂ ಆಗಲಿಲ್ಲ.

**೫.೨.೩ಮರಳಿ ಮಣ್ಣಿಗೆ:** ಮೂರು ತಲೆಮಾರುಗಳ ಕತೆಯನ್ನು ನಿರೂಪಿಸುವ ಮರಳಿ ಮಣ್ಣಿಗೆ ಕಾದಂಬರಿ ಕರಾವಳಿಯ ಜನರ ಬದುಕಿನ ಸ್ಥಿತ್ಯಂತರಗಳನ್ನು ಹೇಳುತ್ತ ಹೋಗುತ್ತದೆ. ಶ್ರಮ ಸಂಸ್ಕೃತಿಗೆ ಬೆಸೆದುಕೊಂಡಿರುವ ಕೃಷಿ ಸಂಸ್ಕೃತಿಯನ್ನು ವಿಶ್ಲೇಷಿಸುವುದರ ಜತೆಗೆ ಆಧುನಿಕತೆ ಎನ್ನುವುದು ಒಳ ಹೊಕ್ಕು ಆದ ಸ್ಥಿತ್ಯಂತರಗಳ ಪಲ್ಲಟವೂ ಮುಖ್ಯವೆನಿಸುತ್ತದೆ. ಕೋದಂಡರಾಮ ಐತಾಳ ಪುತ್ರ ರಾಮ ಐತಾಳರ ಪತ್ನಿ ಪಾರೋತಿ, ತಂಗಿ ಸರೋತಿ ಎರಡನೆಯ ಪತ್ನಿ ಸತ್ಯಭಾಮೆ, ಸತ್ಯ ರಾಮ ಐತಾಳರ ಮಗ ಲಕ್ಷ್ಮೀ ನಾರಾಯಣ (ಲಚ್ಚ) ಅವನ ಪತ್ನಿ ನಾಗವೇಣಿ,ಸಹೋದರಿ ಸುಬ್ಬಿ, ಲಚ್ಚನಾಗವೇಣಿಯರ ಮಗ ರಾಮ ಅವನ ನಾಗವೇಣಿಯ ತಂದೆ ವಕೀಲ ವಾಸುದೇವಯ್ಯನವರ ಉಳಿದ ಮಕ್ಕಳು ಹಿರಿಯವ ವೈದ್ಯ, ಕಿರಿಯವ, ಸದಾಶಿವ ಆತನ ಪತ್ನಿ ಲಲಿತ, ತಂಗಿ ಕೃಷ್ಣವೇಣಿ ಗಂಡ ಮಾಧವ ಅವರ ಮಕ್ಕಳು ಆನಂದ, ಜಯ. ಇವರೆಲ್ಲರೂ ಹಳ್ಳಿ ಪಟ್ಟಣಗಳ ಒಡನಾಡಿಗಳು.

ಲಚ್ಚ ಮಾರಿದ ಜಮೀನನ್ನು ಮರಳಿ ಖರೀದಿಸಿದ ಮಗ ರಾಮ ಮೂರು ಮುಡಿ ಗದ್ದೆಯ ಮೂಲ ಗೇಣಿಯನ್ನು ಖರೀದಿಸಿ ವರ್ಗದ ಜಮೀನಾಗಿ ಕಂಡುಕೊಂಡು ಇನ್ನೂರು ಮುಡಿ ಉಪ್ಪೋಳಿಯನ್ನಾಗಿ ಮಾಡುವ ಹಂತ ಅದ್ಭುತದ್ದು. ಇಂಗ್ಲೀಷ್ ಶಿಕ್ಷಣ ಪಡೆದು ಉದ್ಯೋಗಾರ್ಥಿಯಾಗಿ ತೆರಳಿಯೂ ರಾಷ್ಟ್ರೀಯ ಚಳುವಳಿಯಲ್ಲಿ ಭಾಗವಹಿಸಿ ಸಮಾಜವಾದ ಚಿಂತಕನಾಗಿ, ಸಂಗೀತ ಚಿತ್ರಕಲೆಯಲ್ಲಿ ಆಸಕ್ತಿ ಹೊಂದಿ ಬದುಕನ್ನು ಅನುಭವಿಸುವ ಹಂತಕ್ಕೆ ತಲುಪುತ್ತಾನೆ. ಮರಳಿ ಕೃಷಿಕನಾಗುತ್ತಾನೆ.

ಒಂದು ಕಾಲದ ಜನರ ಮೌಲ್ಯ ದುಡಿಯುವುದು ಮತ್ತು ಉಣ್ಣುವುದು. ದುಡಿಮೆ ಅವರ ಬದುಕಿನ ಭಾಗವಾಗಿ ದುಡಿಯುತ್ತಲೇ ಬಾಳಿದ ಸರಸೋತಿ ಪಾರೋತಿಯರಲ್ಲಿ ಕಾಣಿಸಿಕೊಳ್ಳುವ ಶ್ರಮದ ಮೌಲ್ಯವನ್ನು ಅರ್ಥೈಸಿಕೊಳ್ಳವುದು ವಿಶಿಷ್ಟವಾದುದು. ಸರಳವಾದ ಬದುಕಿನ ಆಶಯ ಮತ್ತು ಧೋರಣೆ ಜೀವನ ಧೋರಣೆಗಳ ಮೂಲಕ ಬಾಳಿದ ಈ ಇಬ್ಬರೂ ಒಬ್ಬರ ನೋವಿಗೆ ಇನ್ನೊಬ್ಬರ ಪ್ರತಿಬಿಂಬವಾಗಿ ಬಾಳಿದರು.

ಮನುಷ್ಯರು ಬೆಳೆಯನ್ನು ಬೆಳೆದದ್ದು ತಮ್ಮ ಹಸಿವನ್ನು ನೀಗಿಸುವ ಆಹಾರದ ಉತ್ಪಾದನೆಗಾಗಿ. ಆಹಾರದ ಅನ್ವೇಷಣೆಯ ಹಂತ ವಿಸ್ತರಿಸಿ ತಮ್ಮ ಹಸಿವನ್ನು ತಾವೇ ನೀಗಿಸಿಕೊಳ್ಳಬೇಕೆಂಬ ತಿಳುವಳಿಕೆ ಇದ್ದಾಗಲೂ ಉಣ್ಣುವ ಊಟ, ಮಾಡುವ ಅಡಿಗೆಯ ಸರಳತೆಗಳ ಮಧ್ಯೆ ದುಡಿಮೆಯೇ ಮಹತ್ವದ್ದಾಗಿತ್ತು.

ಸರಸೋತಿ ಮತ್ತು ಪಾರೋತಿಯರಿಬ್ಬರು ಸೇರಿ ಮಾಡಿದ ಕೃಷಿ ಕೆಲಸದ ವಿವರಣೆ ಸೂಕ್ಷ್ಮಗಳೇ ಕಾದಂಬರಿಯ ಪ್ರಥಮ ಭಾಗದಲ್ಲಿದೆ. ರಾಮ ಐತಾಳ ಮನೆ ಇರುವುದು ಅಳಿವೆ ಬಾಗಿಲಿಂದ ಬಡಗು ದಿಕ್ಕಿಗೆ, ಕಡಲಿನ ಬಾಯಿಗೆ ಸಿಕ್ಕಿರುವ ಒಂದೆರಡು ಮುಡಿ ಗದ್ದೆಗಳು ಅದರ ಕೃಷಿ ಕಾಯಕದ ಪೂರ್ತಿ ಹೊಣೆ ಈ ಹೆಣ್ಣು ಮಕ್ಕಳ ಮೇಲೆ. ಪುರೋಹಿತ ಐತಾಳರು ಭವಿಷ್ಯದ ನಾಲ್ಕು ಮಾತುಗಳನ್ನು ಹೇಳುವವಳು, ಸಾಂಧರ್ಭಿಕವಾಗಿ ಕೃಷಿಯಲ್ಲಿ ತೊಡಗಿಸಿಕೊಂಡವರು.

"ಬಿಸಿಲು ಇಳಿದುದನ್ನು ಕಂಡು ದನಕರು ಮೇಯಿಸಬಹುದು, ನದಿಯ ಕೆಸರು ಸೆಟ್ಟೆಗಳನ್ನು ಹೊತ್ತು ತಂದು ಅವರ ಸ್ವಂತ ಸಾಗುವಳಿಯ ಮೂರು ಮುಡಿ ಗದ್ದೆಗಳಿಗೆ ಹಾಕಬಹುದು. ಅದೂ ಮುಗಿದಿದ್ದರೆ ಸ್ವಂತ ಅಗೇಡಿ ಇಲ್ಲವೆ! ಆ ಭತ್ತದ ಸಸಿಗಳಿಗೆ ಸಂಬಳಿಗೆಯಿಂದ ನೀರು ಹಾಕಬಹುದು"(ಶಿವರಾಮ ಕಾರಂತ ಕೆ. ೨೦೧೩ ಪುಟ ೮)

ಕೃಷಿ ಕಾರ್ಯ ಚಟುವಟಿಕೆಯ ವಿವರಣೆಗಳನ್ನು ನಿರೂಪಿಸುತ್ತ ಕೃಷಿಯ ಕೆಲಸಗಳನ್ನು ಮಾಡುವ ಸೂಕ್ಷ್ಮ ಎಳೆಯ ನಿರೂಪಣೆಗಳನ್ನು ವಿವರಿಸುತ್ತಾರೆ. ಗದ್ದೆ ಸಾಗುವಳಿಯ ಕಾರ್ಯ ಬಹು ಮುಖ್ಯವಾಗಿ ಶ್ರಮ ತಾಳ್ಮೆಯನ್ನು ಬಯಸುವಂತಹುದು. ದುಡಿಮೆಯೇ ಬದುಕಿನ ಧರ್ಮವಾಗಿ ಬಾಳಿದ ಸರಸೋತಿ ಪಾರೋತಿಯರಿಗೆ ತಾವು ಮಾಡುವ ಕೆಲಸಗಳು ರೇಜಿಗೆಯವುಗಳು ಆಗಿರಲಿಲ್ಲ. "ಮನುಷ್ಯರಾಗಿ ಹುಟ್ಟಿ ಫಲವೇನು ಅನಿಸುವುದು, ಈಗಲೂ ಅವಳಿಗೆ ಕಣ್ಮುಂದೆ ಕಾಣಿಸದ ಪ್ರಶ್ನೆ ಅದೇ. ಹಗಲು ರಾತ್ರಿಗಳು ದುಡಿಯುವುದಾಯಿತು.! ಬಿತ್ತುವುದಾಯಿತು, ಬೆಳೆಯುವುದಾಯಿತು. ಯೋಚಿಸಿ ದಣಿಯುವುದಾಯಿತು. ಈ ಕೆಲಸ ಈ ಎಣಿಗೆ ಇವುಗಳಲ್ಲಿ 'ರಾಮ ರಾಮ' ಅನ್ನುವುದಕ್ಕೆ ಸಮಯ ಸಾಲದು" (ಅದೇ, ಪುಟ. ೧೧)

ದಿನ ನಿತ್ಯದ ಕಾಯಕಗಳಿಗೆ ಅನುಗುಣವಾಗಿ ಕೃಷಿ ಕಾರ್ಯವನ್ನು ನಿರ್ವಹಿಸುತ್ತಾ ಮುನ್ನಡೆಸುತ್ತ ಬಂದವರು ಅವರು. ಬಿತ್ತುವ ಬೆಳೆಯುವ ಕಾಯಕ ಅವರ ಸೃಜನಶೀಲ ಮನೋಧರ್ಮವನ್ನು ಮುನ್ನಡೆಸುವುದಕ್ಕೆ ಕಾರಣವಿದೆ. ಮನಸ್ಸಿನ ಆಯಾಸ ಪರಿಹಾರಕ್ಕೆ ದುಡಿಮೆ ಎನ್ನುವುದಕ್ಕಿಂತ ದುಡಿಯುವುದು ಆಹಾರದ ಉತ್ಪಾದನೆಗಾಗಿಯೂ ಆಗಿತ್ತು. ತಮ್ಮ ಕುಟುಂಬಕ್ಕಾಗುವ ಅಕ್ಕಿ ತರಕಾರಿ ಎಲ್ಲವನ್ನು ತಮ್ಮ ಮನೆಯಲ್ಲೇ ಬೆಳೆಯುವ ನೆಂಜಿಕೊಳ್ಳಬೇಕಾದ ಉಪ್ಪಿನಕಾಯಿ, ಸೌತೆ, ಮಾವಿನಕಾಯಿಗಳನ್ನು ಭರಣಿಗಳಲ್ಲಿ ತುಂಬಿಸುವ ಕಾಯಕ ಮಾಡುತ್ತ ಹಪ್ಪಳ, ಸಂಡಿಗೆಗಳಿಂದ ತೀರಾ ಸರಳವಾಗಿ ಬದುಕಿದ ಭೋಗ ಜೀವನದ ಎಲ್ಲೆಯನ್ನು ನಿಲುಕಿಸದೆ ಅತಿ ಸಹಜವಾಗಿ ಬಾಳಿದವರು.

ಕೃಷಿ ಕಾರ್ಯ ಯಾವತ್ತು ಬೇಸರವನ್ನು ಉಂಟು ಮಾಡಿರಲಿಲ್ಲ. ದುಡಿಮೆಯ ಉತ್ಸಾಹ ಮತ್ತು ಕಾಯಕದ ಸಾರ್ಥಕ್ಯವನ್ನು ಹೊಂದಿದ್ದು ಅದು ತಲೆಹೊರೆಯಾಗದೆ ಬದುಕಿನ ಅನಿವಾರ್ಯವಾಗಿತ್ತು.

ಅಪೇಕ್ಷಣೀಯವಾದ ಬದುಕಿನ ಎಲ್ಲ ಶ್ರಮಗಳನ್ನು ನಿವಾರಿಸುವ ನೆಲೆಯಲ್ಲಿ ದುಡಿಮೆಯನ್ನು ನಿರ್ವಹಿಸುವ ಅವರ ತಾಳ್ಮೆ ಮತ್ತು ಶ್ರದ್ಧೆ ಶ್ಲಾಘನೀಯವಾಗಿದೆ. ಸರಸೋತಿ, ಪಾರೋತಿಯರೊಂದಿಗೆ ರಾಮ ಐತಾಳರು ಕೃಷಿ ಕಾರ್ಯವನ್ನು ಕೂಲಿಯಾಳುಗಳ ನೆರವು ಲಭಿಸದೆ ಇದ್ದಾಗಲೂ, ನೆರೆಹೊರೆಯ ಸೂರನ ನೆರವನ್ನು ಪಡೆದು ಗದ್ದೆ ಸಾಗುವಳಿ ಮಾಡುತ್ತಾರೆ. ಬ್ರಾಹ್ಮಣರ ಮನೆಗೆ ಒಕ್ಕಲಾಗಿರುವ ಶೂದ್ರ ಸೂರ ದುಡಿಮೆಯ ಆಳಾಗಿ ದುಡಿಯುವ ಊಳಿಗಮಾನ್ಯತೆಯನ್ನು ವಿವರಿಸುತ್ತಾರೆ. ಹಾಗೆ ದುಡಿದೂ ಕೃಷಿ ಕಾರ್ಯ ಚಟುವಟಿಕೆಗಳನ್ನು ನಿರ್ವಹಿಸಿದ ಹೆಗ್ಗಳಿಕೆ ಅವರದು. ರಾಮ ಐತಾಳರು ಮತ್ತು ಕುಟುಂಬ ಅದರಲ್ಲೂ ಸರಸೋತಿ ನಡೆಸುವ ಕೃಷಿಯ ಒಂದು ಭಾಗವಾಗಿ ಶೂದ್ರರ ಕೃಷಿ ಕಾರ್ಯಗಳು ವಿಶ್ಲೇಷಣೆಗೊಳಗಾಗುತ್ತದೆ.

ಗೇಣಿ ಕೊಟ್ಟು ಕೃಷಿ ಮಾಡುವ ಪರಂಪರೆಯಲ್ಲಿ ಸೂರನ ಗೇಣಿ ಲೆಕ್ಕಾಚಾರವೂ ಮುಖ್ಯ. ಸರಸೋತಿ ಸೂರನಲ್ಲಿ "ನೀನು ಎರಡು ಮುಡಿ ಗದ್ದೆಯನ್ನು ಸಾಗುವಳಿ ಮಾಡುತ್ತಿ. ಈ ವರ್ಷ ಹಿಂದಿಗಿಂತ ಮೂರು ಮುಡಿ ಅಕ್ಕಿಯಾದರೂ ಜಾಸ್ತಿ ಸಿಗಲಿಕ್ಕಿಲ್ಲವೇ? ಎಂದಳು. ಸೂರನು ಹುಟ್ಟುವಳಿಯ ಲೆಕ್ಕವನ್ನು ಹೇಳಿ 'ಗೇಣಿ ಹೋದ ಮೇಲೆ, ಬಡವರ ಮಕ್ಕಳಿಗೆ ಉಳಿಯುವುದು ಹುಲ್ಲೇ' ಎಂದು ರುಜುಪಡಿಸಿದನು. ಅಂತು ಸರಸೋತಿಯ 'ಈ ಪಡು ಕರಾವಳಿಯಲ್ಲಿ, ಗೇಣಿ ಬಹಳ ಹೆಚ್ಚು' ಎಂಬುದನ್ನು ಒಪ್ಪಿಕೊಂಡಳು."(ಅದೇ, ಪುಟ. ೪೨)

ಕೃಷಿಗೆ ಪೂರಕವಾದ ಕಾಯಕವನ್ನು ಮೂವರು ಸೇರಿ ಮಾಡುತ್ತಾರೆ."ನದಿಯ ನಡುವೆ ಒಂದು ದೋಣಿಯನ್ನು ನಿಲ್ಲಿಸಿ ನೀರಲ್ಲಿ ನಟ್ಟ ಒಂದು ಜಲ್ಲೆಗೆ ಅದನ್ನು ಬಿಗಿದು, ತಾವು ಮೂವರು ಕೆಸರನ್ನು ಗೋಚುವ ಕೆಲಸಕ್ಕೆ ತೊಡಗಿದರು. ಕೈಯಲ್ಲಿ ಒಂದೊಂದು ಬಟ್ಟಲು, ಅದನ್ನು ಹಿಡಿದುಕೊಂಡು ನೀರಲ್ಲಿ ಮುಳುಗಿ, ಕೆಸರನ್ನು ಬಟ್ಟಲಲ್ಲಿ ಗೋಚಿಕೊಂಡು ಮೇಲಕ್ಕೆ ಬರಬೇಕು. ತಂದ ಕೆಸರನ್ನು ದೋಣಿಯಲ್ಲಿ ತುಂಬಿಸಿ, ತಿರುಗಿ ಮುಳುಗಬೇಕು. ಕೆಲಸವೇನು ಅಷ್ಟು ಸುಲಭವೂ ಅಲ್ಲ, ಸಂತೋಷದ್ದು ಅಲ್ಲ, ಮೈ ಮುಖವೆಲ್ಲ ಕೆಸರಾಗುವಂಥದು. ನೀರಲ್ಲಿ ಮುಳುಗಿದಂತೆ ಕೆಸರು ತೊಳೆದು ಹೋಗುವುದು". (ಅದೇ,ಪು.೭೯)

ಬ್ರಾಹ್ಮಣರೇ ಆದರೂ ಒಂದು ಕುಟುಂಬ ತಾವೇ ಶ್ರಮಿಕರಾದರೆ ಇನ್ನೊಂದು ಕುಟುಂಬದ ಕೃಷಿ ಚಟುವಟಿಕೆ ಬೇರೆ ಇತ್ತು. "ಆದರೆ ಅವರ ಕೃಷಿ ಈ ತೆರನಾಗಿರಲಿಲ್ಲ. ಇದ್ದ ಗದ್ದೆಗಳನ್ನು ಗೇಣಿಗೆ ಕೊಟ್ಟು, ಬಂದ ಗೇಣಿಯಿಂದ, ಸುಖವಾಗಿ ಬೆಳೆದವರು ಅವರು. ಹೀಗಾಗಿ ತಮ್ಮ ಭಾವ ಮೈದುನನ ವಿಚಾರ ಅವನಿಗೆ ತುಸು ವಿಸ್ಮಯ ಹುಟ್ಟಿತು. 'ಐತಾಳರು ಗಟ್ಟಿ ಕುಳುವಾರು' ಎಂದು ಕೇಳಿದ್ದ ಅವನಿಗೆ,ಅವರು ಈ ರೀತಿ ಕೆಸರಲ್ಲಿ ಮುಳುಗುವುದು ಸರಿತೋರಲಿಲ್ಲ. ಸಾಲದುದಕ್ಕೆ ಮನೆಯ ಹೆಂಗಸರೂ ಅವರಂತೆ, ನೀರಿನ ಮೊಣಕಗಳಾಗಿ ಮುಳುಗುವುದನ್ನು ಕಂಡು ಆಶ್ಚರ್ಯವೆನಿಸಿತು." (ಅದೇ, ಪು. ೮೦)

ಪೇಟೆಯಲ್ಲಿ ವಕೀಲ ವೃತ್ತಿಯನ್ನು ಮಾಡುವ ವಾಸುದೇವಯ್ಯನ ಕೃಷಿ ಲೋಕ ಭಿನ್ನ ನೆಲೆಯದು. "ನಮ್ಮ ಹೊಸ ಆಗಮೆ ನೋಡಲು ಹೋಗಿದ್ದಾರೆ. ಅಲ್ಲಿ ಈ ವರ್ಷ ಒಂದು ನೂರು ತೆಂಗಿನ ಸಸಿ ಹಾಕಿದೆ. ನೋಡುವ, ಎಂದು ಹೋದರು' ಎಂದರು. 'ಹಾಗೋ ಆಗಲಿ, ನನಗೇನು ಇವತ್ತು ಶ್ರಾದ್ಧ, ಶಾಂತಿ ಯಾವುದೂ ಇಲ್ಲ. ಇಲ್ಲೇ ಕೂತಿರುತ್ತೇನೆ' ಎಂದರು. (ಅದೇ, ಪು. ೮೪)

ರಾಮ ಐತಾಳರ ಮಗ ಲಚ್ಚ ವಿದ್ಯೆ ಕಲಿತು, ಇಂಗ್ಲಿಷ್ ಶಿಕ್ಷಣ ಪಡೆದು ಆಧುನಿಕ ಜಗತ್ತಿನ ಸವಲತ್ತುಗಳು ಮತ್ತು ಲಾಲಸೆಗಳಿಗೆ ಮಾರು ಹೋಗಿ ಓದು ಬರಹವನ್ನು ಕಲಿಯದೆ ಓದಿನಿಂದ ದೂರ ಇರುತ್ತಾನೆ. ಅವನು ಅಂಟಿಸಿಕೊಳ್ಳುವ ಚಟಗಳು ವ್ಯವಹಾರಿಕ ದೃಷ್ಟಿಕೋನವೂ ಕೃಷಿಯಿಂದ ದೂರವಾದಂತೆಲ್ಲ ಮನಸ್ಸು ವಿಕೃತವಾಗುತ್ತ ಹೋಗುತ್ತದೆ.

ಮಣ್ಣನ್ನು ಆಸ್ತಿಯನ್ನಾಗಿ ಪರಿಭಾವಿಸಿದ ಲಚ್ಚನಿಗೆ ಅದು ದುಡ್ಡು ಮಾಡುವ ಸಾಧನವಾಗಿ ಮಾತ್ರ ಗೋಚರವಾಗುತ್ತದೆ. ಕೃಷಿ ಭೂಮಿಯನ್ನು ವಿಸ್ತರಿಸುವುದು ಎಂದರೆ ಆಸ್ತಿಯನ್ನು ಮತ್ತಷ್ಟು ಪಡೆಯುವುದು ಎಂದರ್ಥ. ಲಚ್ಚನು ತನ್ನ ಆಸ್ತಿಯನ್ನು ಅಡವಿರಿಸಿ ತನಗೆ ಬೇಕಾದ ಸಂಪತ್ತನ್ನು ಆ ರೀತಿಯಲ್ಲಿ ಗಳಿಸಿಕೊಳ್ಳಲು ಯತ್ನಿಸುತ್ತಾನೆ. ಕೃಷಿಯನ್ನು ಸಣ್ಣ ವಯಸ್ಸಿನಿಂದಲೂ ಕಣ್ಣಾರೆ ಕಂಡ ತನ್ನ ತಂದೆ, ತಾಯಿ, ಅತ್ತೆ ದುಡಿಯುವ ರೀತಿಯನ್ನು ನೋಡಿಯೂ ಸಾಗುವಳಿಯ ಕೆಲಸದ ಒಲವು ತೊರದ ಲಚ್ಚ ಆಧುನಿಕತೆಯ ಎಲ್ಲ ಕೆಡುಕುಗಳ ಪ್ರಯೋಗ ಪಶುವಾಗುತ್ತಾನೆ. ಸಾಲ ಮಾಡಿಯಾದರೂ ಹೋಟೇಲಲ್ಲಿ ಉಂಡು, ತಿಂದು, ತೇಗಿ, ಹೆಣ್ಣಿನ ಚಟವನ್ನು ಅಂಟಿಸಿಕೊಂಡು ನೈತಿಕತೆಯನ್ನು ಕಳೆದುಕೊಂಡು ಬದುಕುತ್ತಾನೆ. ಹಾಗೆ ಜೀವನ ನಿರ್ವಹಿಸುವ ಅವನಲ್ಲಿ ಮಣ್ಣಿನ ಮೇಲಿನ ಪ್ರೇಮವಾಗಲೀ ವಾಸನೆಯಾಗಲೀ ಇಲ್ಲ. ಎಲ್ಲವೂ ದುಡ್ಡನ್ನು ಸಂಪಾದಿಸುವ ಒಂದು ದಾರಿಯಾಗಿ ಮಾತ್ರ ಗೋಚರವಾಗುತ್ತದೆ. ತನ್ನ ಕುಟುಂಬ ಮತ್ತು ಬದುಕಿನ ಘನತೆ–ಗೌರವಗಳನ್ನು ಅದು ಕಾಪಾಡುತ್ತದೆ ಎಂಬ ಚಿಂತನೆಯನ್ನೇ ಅವನು ಇರಿಸಿಕೊಳ್ಳಲಿಲ್ಲ.

ಕೃಷಿ ಕುಟುಂಬದಲ್ಲಿ ಹುಟ್ಟಿ ಬಾಳಿದ ಆ ಬದುಕಿನ ಬವಣೆಯ ನೋವುಗಳನ್ನುಂಡ ಲಚ್ಚನ ಪ್ರತಿಕ್ರಿಯೆ ಮಣ್ಣು ದುಡ್ಡಿನ ಮೂಲವಾಗುತ್ತದೆಯೇ ಹೊರತು ಅನ್ನದ ಬಟ್ಟಲು ಖಂಡಿತವಾಗಿಯೂ ಆಗಲಿಲ್ಲ. ಇದಕ್ಕಿಂತ ತೀರಾ ವಿರುದ್ಧವಾಗಿ ಆತನ ಪತ್ನಿ ನಾಗವೇಣಿ ಗೋಚರಿಸುತ್ತಾಳೆ. ಅತ್ಯಂತ ಶ್ರೀಮಂತ ಕುಟುಂಬದಲ್ಲಿ ಮಂಗಳೂರಿನ ನಗರದಲ್ಲಿ ಹುಟ್ಟಿ ಬೆಳೆದು ಸಾಗುವಳಿಯ ಯಾವ ಆಲೋಚನೆಯನ್ನು ಯೋಚಿಸದೆಯೂ ಇದ್ದ ನಾಗವೇಣಿ ಕೃಷಿ ಕಾರ್ಯಕ್ಕೆ ಒಲವು ತೋರುತ್ತಾಳೆ. ಪತಿ– ಪತ್ನಿಯರಲ್ಲಿ ಈ ರೀತಿಯ ವೈರುಧ್ಯವನ್ನು ಗುರುತಿಸಬಹುದು. ಕೃಷಿ ಜಗತ್ತಿನಿಂದ ದೂರವಾಗುವ ಲಚ್ಚ ಮನುಷ್ಯ ಸಂಬಂಧಗಳಿಂದಲೂ ದೂರವಾಗಿ ನೈತಿಕತೆಯನ್ನು ಕಳೆದುಕೊಂಡ ಬದುಕಿನ ವಿಭಿನ್ನ ವಿಸ್ಮೃತಿಗೆ ತೆರಳುತ್ತಾನೆ. ತಕ್ಷಣದ ಪ್ರತಿಸ್ಪಂದನವೇ ಅವನಿಗೆ ಮುಖ್ಯವಾಗುತ್ತದೆ.

ನಾಗವೇಣಿ ವಿಸ್ಮೃತಿಯ ಸಾಲಿಗೆ ಕೃಷಿ ಬದುಕು ಸೇರಿಕೊಳ್ಳಲು ಬಿಡದೆ ತನ್ನ ಎಲ್ಲ ಜಾಣ್ಮೆ ಪರಿಕರಗಳನ್ನು ಬಳಸಿಕೊಂಡು ಸಾಗುವಳಿ ಮಾಡುವುದು ಪ್ರಮುಖ ಪಲ್ಲಟವೇ ಆಗಿದೆ. ಲಚ್ಚ ನಡೆಸಿದ ವೃತ್ತಿಯ ಪಲ್ಲಟ ನಾಗವೇಣಿಗೆ ಸಿಗದ ಆಧುನಿಕ ಸವಲತ್ತಿನ ಸೌಕರ್ಯಗಳು ಸಿಕ್ಕರೂ ಅದರಿಂದ ಬಿಡಿಸಿಕೊಂಡು ಕುಟುಂಬ ಪ್ರೇಮದೊಂದಿಗೆ, ಜೀವನ ಪ್ರೇಮವನ್ನು, ಉಳಿಸಿಕೊಂಡ ಹೆಚ್ಚುಗಾರಿಕೆ ಅವಳದು. ತನಗೆ ಕೃಷಿ ಕಾರ್ಯಗಳು ತಿಳಿಯದೆ ಇದ್ದಾಗಲೂ, ಬಾಣಂತಿಯಾಗಿದ್ದರೂ ತಾನು ಸಾಗುವಳಿ ಮಾಡಬೇಕೆಂಬ ಹಂಬಲ ಆಕೆಯದು. "ಕೋಡಿಯ ಮನೆಯಲ್ಲಿ ಮೂವರು ಅನಾಥೆಯರು ಕುಳಿತು ಮಳೆಯ ಹನಿಗಳನ್ನು ಲೆಕ್ಕ ಮಾಡಬೇಕು ಏನಾದರೂ ಸ್ವಲ್ಪವಾದರೂ ಸಾಗುವಳಿ ಮಾಡಬಾರದೇ ಎಂಬ ಯೋಚನೆ ಮಾಡುತ್ತಿದ್ದಾರೆ.

(ಅದೇ, ಪುಟ.೨೧೭) ಬದುಕಿಡೀ ಕೃಷಿ ಕಾರ್ಯ ಚಟುವಟಿಕೆಯಲ್ಲೇ ಕಳೆದ ಸರಸೋತಿ "ನನ್ನಿಂದಾದ ಒದ್ದಾಟ ಮಾಡುತ್ತೇನೆ" ಎನ್ನುತ್ತಾಳೆ.

"ಸತ್ಯಭಾಮೆಯೂ ಪತಿ ಇರುವಷ್ಟು ದಿನ ಬೇಸಾಯಕ್ಕೆ ಇಳಿದವಳಲ್ಲ. ಈಗ ಬೇಸರವಾದರೂ ಆದೀತಲ್ಲ ಎಂದು ಒಂದೇ ಮುಡಿ ಬೀಜ ಬಿತ್ತಿಸುವ" ಎಂದಳು. ಆ ಮಳೆಗಾಲ, ಮನೆ ಸಾಗುವಳಿ, ಎಂಬ ಹೊಸ ಹೆಸರಿಗಷ್ಟೇ ಕೃಷಿ ಮಾಡಿದರು. ಹೀಗಾಗಿ ನವರಾತ್ರಿಯ ಹೊಸತು ಊಟಕ್ಕೆ ಪರರ ಮನೆಯ ಬತ್ತವನ್ನು ತಂದು ಸುಲಿದು ಹಾಲುಪಾಯಸ ಮಾಡುವ ಗತಿ ಬರಲಿಲ್ಲ. ನಾಗವೇಣಿಯು ಮುಂದಾದರೆ ಕನಿಷ್ಠ ಮೂರು ಮುಡಿ ಸಾಗುವಳಿ ಮಾಡಬೇಕು. ಈ ವರ್ಷ ಹುರುಳಿ ಬಿತ್ತಬೇಕು. ಅವಡೆ ಬಿತ್ತಿಸುವ, ಎನೋ ಸುಗ್ಗಿ ಸೌತೆಗಳಿಗೆ ನೀರು ಬಿಡಲು ಸಾಧ್ಯವಾಗದು. ಅದು ಬೇಡ ಎಂದು ಯೋಚಿಸಿದಳು . ಬೇಸಾಯದ ಹಿಂದು ಮುಂದು ಅವಳಿಗೆ ತಿಳಿಯದು, ಆದರೆ 'ಮನೆಯಲ್ಲಿ ಕುಳಿತು ತಿನ್ನುವುದೇನು ಚಂದ ಎಂಬ ಸರಸೋತಿಯ ನುಡಿಗೆ ಅವಳಿಗೆ ಒಪ್ಪಿಗೆ ಇದೆ. " (ಅದೇ, ಪುಟ. ೨೧೭)

ಬ್ರಾಹ್ಮಣ ಕುಟುಂಬವೊಂದು ಹೊಟ್ಟೆಪಾಡಿಗಾಗಿ ಕೃಷಿ ಮಾಡುತ್ತಾ ಮೇಲು ಸಂಪಾದನೆಗಾಗಿ ಪೌರೋಹಿತ್ಯದ ಕೆಲಸವನ್ನು ನಿರ್ವಹಿಸುತ್ತಾ ಶ್ರಮಿಕರಾಗಿ ಕಷ್ಟಪಟ್ಟು ದುಡಿದು ಭೂಮಿಯನ್ನು ವಿಸ್ತರಿಸಿಕೊಳ್ಳುತ್ತ ಸ್ವಲ್ಪ ಮಟ್ಟಿನ ಸ್ಥಿತಿವಂತರಾಗುತ್ತಾರೆ. ಎರಡನೆ ತಲೆಮಾರಾದ ಲಚ್ಚ ವಿದ್ಯಾವಂತನಾದರೂ ತಂದೆ ದುಡಿದುದನ್ನು ಉಡಾಯಿಸುತ್ತ ಬದುಕಿನ ನೆಲೆ ಕಾಣದೆ ದಿವಾಳಿಯಾಗುತ್ತಾನೆ, ಶಿಕ್ಷಣವನ್ನು ಪೂರೈಸದೆ ಇರುವ ಭೂಮಿಯನ್ನು ತನಗಂಟಿಕೊಂಡ ಚಟಗಳಿಂದ ಕಳಕೊಳ್ಳುತ್ತಾನೆ. ಪತ್ನಿ ನಾಗವೇಣಿಯನ್ನು ವಂಚಿಸಿ ಎಲ್ಲವನ್ನು ಮಾರಾಟ ಮಾಡುತ್ತಾನೆ. ಅವನ ಸಮಾನ ವಯಸ್ಕರಾದ ಶೀನಮಯ್ಯನ ಮಕ್ಕಳು ಬೆಂಗಳೂರಿನಲ್ಲಿ ಹೋಟೇಲಿನಲ್ಲಿ ದುಡಿದು ಅಂತಹುದೇ ಹೋಟೇಲಿನ ಧಣಿಗಳಾಗಿ ಊರಿನಲ್ಲಿ ತಮ್ಮ ಅಸ್ತಿಯನ್ನು ವಿಸ್ತರಿಸಿಕೊಳ್ಳುತ್ತಾರೆ. ಅನ್ನದಾನ ಮಾಡಬೇಕೆಂದವರೆ ಅನ್ನ ಮಾರಾಟಕ್ಕಿಟ್ಟು ಎಂಜಲು ತಟ್ಟೆ ತೊಳೆದು ದುಡ್ಡು ಮಾಡುವುದು ಕೀಳೆಂದಿದ್ದರೂ, ದುಡ್ಡು ಮಾತ್ರ ಮುಖ್ಯವಾಗುತ್ತದೆ. ಮೌಲ್ಯಗಳು ಪಲ್ಲಟಗೊಳ್ಳುತ್ತದೆ, ಲಚ್ಚನ ಮಗ ರಾಮ ವಿದ್ಯಾವಂತನಾಗಿ ಲೋಕ ಸುತ್ತಿ, ಚಳುವಳಿಯಲ್ಲಿ ಭಾಗವಹಿಸಿಯೂ ತನ್ನ ಓದು, ವಿದ್ಯೆ, ಪ್ರತಿಭೆಗಳಿಂದಲೂ, ತೃಪ್ತಿಯ ಬದುಕು ನಡೆಸಲಾಗದೆ ಮರಳಿ ಹಳ್ಳಿಗೆ ಮರಳುತ್ತಾರೆ. ವೃತ್ತಿ ಮೂರು ತಲೆಮಾರಿನಲ್ಲೂ ಬದಲಾಗುವುದರೊಂದಿಗೆ ಸಾಮಾಜಿಕ ಸಂದರ್ಭಗಳೂ ವ್ಯತ್ಯಯವಾಗುತ್ತದೆ. ಕೃಷಿಕನಾದಾಗಲೂ ಬರೀ ಭತ್ತವಲ್ಲದೆ, ಅದಾಯ ಮೂಲವಾಗಿ ವಾಣಿಜ್ಯ ಬೆಳೆಗಳಾದ ಹೊಗೆ ಸೊಪ್ಪು, ಗೇರು ಬೀಜ ಬೆಳೆದು ತಾವು ಕಳೆದುಕೊಂಡ ಭೂಮಿಯನ್ನು ಮರಳಿ ಪಡೆಯುತ್ತಾನೆ, ತಾನು ನಡೆಸುವ ಮಾಸ್ತರಿಕೆಯೂ ಅವನಿಗೆ ಆರ್ಥಿಕ ಭದ್ರತೆಯನ್ನೊದಗಿಸುವುದಿಲ್ಲ. ಮೂರು ತಲೆಮಾರಿನ ಜನರು ಕೃಷಿಗೆ ಮುಖಾ ಮುಖಿಯಾಗುವುದು ಮತ್ತು ಪ್ರತಿಕ್ರಿಯಿಸುವುದೂ ಏಕರೂಪವಾಗಿ ಉಳಿದಿಲ್ಲ. ಅಲ್ಲದೆ ಕುಟುಂಬದ ಹೆಣ್ಣು ಮಕ್ಕಳು ದುಡಿದು ದಣಿಯುವುದು ತಪ್ಪಲಿಲ್ಲ. ತಮ್ಮ ಮನೆ, ಮಾರು ಆಸ್ತಿಯನ್ನು ಉಳಿಸಿಕೊಳ್ಳಲು ಸರಸೋತಿ–ಪಾರೋತಿಯರ ದುಡಿಮೆಯೇ ಕೃಷಿಯ ಆವಿಷ್ಕಾರದ ಮನುಷ್ಯರ ಸಾಹಸಕ್ಕೆ ರೂಪಕದಂತಿದೆ. ಕೃಷಿ ಸಾಮಾಜಿಕ ಸ್ಥಾನಮಾನಗಳನ್ನು ನೀಡುವುದರೊಂದಿಗೆ ಅಂತಸ್ತಿನ ಹೆಗ್ಗಳಿಕೆಗೆ ಕಾರಣವಾಗಿದ್ದರೂ ತುಂಡು

ಭೂಮಿಯ ಒಡೆಯನಾದ ಶೀನಮಯ್ಯನ ಮಕ್ಕಳ ಹೋಟೇಲು ಉದ್ದಿಮೆಯಿಂದ ಶೀನ ಸಾಹುಕಾರನಾಗುತ್ತಾನೆ. ಇದನ್ನು ರಾಮ ಐತಾಳರಿಗೆ ಜೀರ್ಣಿಸಿಕೊಳ್ಳುವುದು ಕಷ್ಟವಾಗುತ್ತದೆ. ಸಾಮಾಜಿಕವಾಗಿ ನಡೆಯುವ ಸೂಕ್ಷ್ಮ ಚಲನೆಗಳನ್ನು ಕಾರಂತರು ಕಾದಂಬರಿಯುದ್ದಕ್ಕೂ ದಾಖಲಿಸುತ್ತಾರೆ. ಆಧುನಿಕತೆ ,ಇಂಗ್ಲಿಷ್ ಶಿಕ್ಷಣಕ್ಕೆ ತೆರೆದುಕೊಂಡ ಸಮುದಾಯಗಳ ತೊಳಲಾಟಗಳನ್ನು ಇದು ನಿರೂಪಿಸುತ್ತದೆ.

**೫.೨.೪ ಚೋಮನ ದುಡಿ:** ಹೊಲ ಉಳುವವ ಹೊಲೆಯ' ಎಂಬ ರೂಢಿಯ ಮಾತಿದ್ದರೂ ಇಂದಿಗೂ ಕರಾವಳಿ ಕರ್ನಾಟಕದಲ್ಲಿ ಶ್ರೀಮಂತ ಜಮೀನ್ದಾರರಾಗಿ ಕೃಷಿಕರಾಗಿರುವ ದಲಿತರು ಇಲ್ಲವೇ ಇಲ್ಲ ಎನ್ನಬಹುದು. ಕೃಷಿಯನ್ನು ಅನ್ವೇಷಿಸಿ ವಿಸ್ತರಣೆಗೊಳಿಸುವ ಹಂತದಲ್ಲಿ ಬುಡಕಟ್ಟು ಸಮಾಜಗಳಾಗಿ ಕಾಡಿನಲ್ಲಿ ವಾಸಿಸುತ್ತಿದ್ದ ಸಮುದಾಯಗಳನ್ನು ಕೃಷಿ ಕೂಲಿ ಕಾರ್ಮಿಕರನ್ನಾಗಿಸಿದ್ದು ವಾಸ್ತವ ಚರಿತ್ರೆ. ಆರಂಭದ ಕೃಷಿಯಲ್ಲಿ ತಮ್ಮ ಜೀವನಾವಶ್ಯಕತೆಗೆ ಅಗತ್ಯವಿರುವಷ್ಟು ಕುಮೆರಿ ಕೃಷಿ ಮಾಡುತ್ತಿದ್ದ ಸಮುದಾಯಗಳೂ ಇದ್ದವು. ಎಲ್ಲ ಬುಡಕಟ್ಟು ಸಮುದಾಯಗಳು ದಲಿತರೂ ಏಕಪ್ರಕಾರವಾಗಿ ಕೃಷಿಕರು ಆಗಿರಲಿಲ್ಲ. ಅವಶ್ಯಕತೆಗೆ ಅನುಗುಣವಾಗಿ ಬೆಳೆದ ಬೆಳೆಗಳು ಸಂಪತ್ತಿನ ಭಾಗವಾಗದೆ ಆಹಾರ ಸಂಗ್ರಹಣೆಯ ಹಂತಕ್ಕೆ ಬಂದಾಗ ಅಧಿಕಾರ ಮತ್ತು ಉತ್ಪಾದಕ ಶಕ್ತಿಯನ್ನು ಕೃಷಿಯು ಹೊಂದಿತ್ತು. ಕೃಷಿಯ ವಿಸ್ತರಣೆ ,ನಿರ್ವಹಣೆ ಹಂತದಲ್ಲಿ ಬೆಳೆದ ಪಾಳೇಗಾರಿಕೆ ಮತ್ತು ಊಳಿಗಮಾನ್ಯ ಪದ್ಧತಿಯ ಕಾರಣದಿಂದ ದಲಿತರು ಶೂದ್ರರು ಜೀತದ ಆಳುಗಳಾಗಿ ದುಡಿಯುವುದು ಅನಿವಾರ್ಯವಾಗಿತ್ತು. ಮನುಷ್ಯನ ಬೆವರಿಗಿಂತಲೂ ಅಧಿಕಾರಕ್ಕೆ ಸಂಪತ್ತಿಗೆ ಹೆಚ್ಚು ಒತ್ತು ಲಭಿಸಿ ಪಾಳೇಗಾರಿಕೆಯು ಬೆಳೆಯಲು ಕಾರಣವಾಗಿದೆ. ಜಮೀನ್ದಾರರ ಕಪಿಮುಷ್ಟಿಯಲ್ಲಿ ಬದುಕುತ್ತಿರುವ ಅಸಂಖ್ಯ ಭೂರಹಿತ ಸಮುದಾಯಗಳು ಒಡೆಯ–ಆಳು ಬದುಕಿನ ಸಂಬಂಧಗಳಲ್ಲಿ ಇಂದಿಗೂ ಬದುಕುತ್ತಿವೆ. ಪರಿಣಾಮ ಸಾಮಾಜಿಕ ಏಣಿ–ಶ್ರೇಣಿ ವ್ಯವಸ್ಥೆ ಈ ಸಂಬಂಧಗಳಲ್ಲಿ ವಿಚಿತ್ರ ರೀತಿಯಾಗಿದೆ. ಗ್ರಾಮಾಂತರ ಪ್ರದೇಶಗಳಲ್ಲಿ ಜಾತಿಭೇದ, ಅಸಮಾನತೆ, ದಬ್ಬಾಳಿಕೆ, ನಿರಂತರವಾಗಿ ನಡೆದುಕೊಂಡು ಬರಲು ಕಾರಣವಾಗಿದೆ. ಸ್ಪರ್ಶ–ಅಸ್ಪಶ್ಯ ತಾರತಮ್ಯವನ್ನು ಸೃಷ್ಟಿಸಿದ ಜಾತಿ ವ್ಯವಸ್ಥೆ ಆರ್ಥಿಕವಾಗಿಯೂ ವಿಸ್ತರಿಸಿ ಭೂರಹಿತ ಸಮಾಜಗಳನ್ನು ಸೃಷ್ಟಿಸಿತು.

ಮೂಲದ ಜೀತದ ಆಳು ಚೋಮ ಒಡೆಯ ಸಂಕಪ್ಪಯ್ಯನವರ ಮನೆಯಲ್ಲಿ ಮಾಡುತ್ತಿದ್ದ ಬುಟ್ಟಿಗಳು ನಿಗದಿತ ಕೆಲಸಗಳೇ ಆಗಿದ್ದವು. ಹಟ್ಟಿಯ ಕೆಲಸ ಹುಲ್ಲು, ಸೊಪ್ಪು, ತರುವ ಕಾಡಿನ ಕೆಲಸ ಪ್ರಾಮಾಣಿಕವಾಗಿ ಮಾಡಿದರೂ ಅವನಿಗೆ ಮಾನ್ಯತೆ ಇರಲಿಲ್ಲ. ಅವನ ಆಸೆ ಕೇವಲ ತುಂಡು ಭೂಮಿಯದು. ತಾನು ಬೇಸಾಯಗಾರನಾಗಬೇಕು ನೇಗಿಲ ಮೊನೆಯಿಂದ ನನ್ನದೇ ನೆಲವನ್ನು ಉಳಬೇಕೆಂಬ ಹಂಬಲ, ಅದು ದಕ್ಕದೇ ಹೋದಾಗ ಅವನಿಗುಂಟಾದ ಕಸಿವಿಸಿ ದುಃಖ ವಿಷಾದಗಳಾಗಿಯೇ ಕೊನೆಗೊಂಡವು. ಅವನು ವ್ಯಗ್ರನಾಗಿ ದ್ವೇಷ ಸಾಧನೆ ಮಾಡಲಿಲ್ಲ. ಅವನ ಕೊನೆಯ ಆಸೆಯೂ ಆಸೆಯಾಗಿಯೇ ಉಳಿದಾಗ ಬಡಿಯುವ ದುಡಿಯಿಂದಲೇ ಎಲ್ಲವನ್ನು ಮರೆಯಿಸುತ್ತಾನೆ.

ಕೃಷಿಕನಾಗಬೇಕೆಂಬ ಆಸೆಯೇ ಅವನಲ್ಲಿ ತನ್ನ ಧರ್ಮವನ್ನು ತ್ಯಜಿಸಿ ಮತಾಂತರಗೊಳ್ಳುವ ಇಚ್ಛೆಯನ್ನು ಹುಟ್ಟಿಸುತ್ತದೆ. ಮಗ ಗುರುವ ಕ್ರೈಸ್ತನಾಗಿ ಬೇಸಯಗಾರನಾದಾನೆಂಬ ಸುದ್ದಿ ತಿಳಿದಾಗ ಚೋಮನ

ಪ್ರತಿಕ್ರಿಯೆ "ಗದ್ದೆ ಸಾಗುವಳಿಯೇ? ಯಾರು ನನ್ನಗುರುವನೇ ಜಾತಿಗೆಟ್ಟರೂ ಸ್ವರ್ಗ ಸಿಕ್ಕಿತಲ್ಲ!" (ಶಿವರಾಮಕಾರಂತ.ಕೆ. ೧೯೯೩; ಪು. ೭೭) ಎಂಬ ಧನ್ಯತೆ ಮೂಡುತ್ತದೆ.

ತಾನು ಕ್ರೈಸ್ತನಾಗದೆ ಪಾದ್ರಿಗಳಿಂದ ಭೂಮಿಯನ್ನು ಗೇಣಿಗೆ ಪಡೆಯುವ ಸಲುವಾಗಿ ಅವರ ಬಳಿಗೆ ಹೋದಾಗಲೂ ಅವರು ಕ್ರೈಸ್ತರಿಗೆ ಮಾತ್ರ ಕೃಷಿ ಭೂಮಿ ಎಂದಾಗ ನಿರಾಶೆಯಾಗುತ್ತದೆ. ಆತ ಗುರುವನಂತೆ, ಮತಾಂತರಗೊಳ್ಳಲು ಹೊರಟಾಗಲೂ ಆತನ ಭಯ ಪಂಜುರ್ಲಿ ದೈವದ ಮುಂದೆ ಅನುಮತಿಗಾಗಿ ಬೇಡುತ್ತದೆ. ತಾನು ಸಾಗುವಳಿ ಮಾಡಬೇಕೆಂಬ ಒಂದೇ ಇರಾದೆಯಿಂದ ಎಲ್ಲವನ್ನು ಸಹಿಸುವ ಆತ ಕೊನೆಯ ಕ್ಷಣದ ತನಕವೂ ಅದಕ್ಕಾಗಿ ಹೋರಾಟ ಮಾಡುತ್ತಾನೆ.

ಭೂಮಿಯ ಒಡೆತನ ತನಗೆ ಬೇಕೆಂಬ ಇರಾದೆಗಿಂತಲೂ ತಾನು ಸಾಗುವಳಿ ಮಾಡಬೇಕೇ ಎಂಬ ಕನಸು ಮತ್ತು ಆಸೆ, ತನ್ನ ಮನೆಗೆ ಅಕ್ಕಿ ತಾನೇ ಬೆಳೆಯುವವನಾಗಿ ಸ್ವತಂತ್ರನಾಗಬೇಕು ಎಂಬ ಇಚ್ಚೆ ಚೋಮನ ಮನದಾಳದ್ದು. ದಣಿಗಳ ಮನೆಯ ಬುಟ್ಟಿಗೆ ಸಿಗುವ ಸೇರು ಭತ್ತಕ್ಕಿಂತ ತನ್ನ ಹೊಲ ತನ್ನ ಎತ್ತಿನ ಕರುಗಳು ತನ್ನ ಧಾನ್ಯ ಎಂಬ ಸ್ವಂತಿಕೆಯ ಭಾವವೂ ಮುಖ್ಯ. ಸ್ವಾತಂತ್ರ್ಯ ಪಡೆಯಬೇಕೆಂಬ ಇರಾದೆಗಿಂತಲೂ ಭೂಮಿಯ ಒಡೆತನ ತನ್ನ ಜೀತವನ್ನು ಕೊನೆಗೊಳಿಸಿತೇ? ಆಸೆಯೂ ಅವನಲ್ಲಿ ಹುಟ್ಟಲು ಕಾರಣವಾಗುತ್ತದೆ.

ಅಧಿಕಾರ, ಸಂಪತ್ತು, ಸಾಮಾಜಿಕ ಶ್ರೇಣೀಕರಣ ಎನ್ನುವ ಯಾವ ವಿಶ್ಲೇಷಣೆಗಿಂತಲೂ ದಲಿತನೊಬ್ಬ ಭೂಮಿಯ ಒಡೆಯನಾಗುವುದು ನಿಷಿದ್ಧವೇ? ಎಂಬ ಪ್ರಶ್ನೆಯನ್ನು ಒಂದು ಕಾಲದ ಸಾಮಾಜಿಕ ಸಂಘರ್ಷವಾಗಿ ನಮ್ಮ ಮುಂದೆ ಮರು ನಿರೂಪಿಸಲು ಸಾಧ್ಯವಾಗಿದೆ. ಪಾಳೇಗಾರಿಕೆ ಮತ್ತು ಊಳಿಗಮಾನ್ಯತೆಗಳು ಕೃಷಿ ಜಗತ್ತಿನ ಒಳಗಿಂದಲೇ ಕೃಷಿ ವಿಸ್ತರಣೆಗೊಂಡಂತೆಲ್ಲ ಹುಟ್ಟಿತೇ ಎಂಬ ವಿಚಾರವೂ ಮುಖ್ಯವಾದುದು. ಚೋಮ ದಲಿತರ ಮುಖವಾಣಿಯಾಗಿ ಸ್ವಾವಲಂಬನೆಯನ್ನು ಬಯಸಿದ್ದು ಮತ್ತು ಆ ಮೂಲಕ ಆತ ಬದುಕಿನ ಕನಸುಗಾರಿಕೆಯನ್ನು ವಿಸ್ತರಿಸಿಕೊಂಡದ್ದು ಅವನಿಗೆ ಅಪರಾಧವಲ್ಲದಿದ್ದರೂ ಲೋಕದ ಕಣ್ಣಿಗೆ ಅಪಹಾಸ್ಯವಾಗಿ ಮತ್ತೆ ಮತ್ತೆ ತುಳಿತಕ್ಕೆ ನೋವಿಗೆ ಬಲಿಪಶುವಾಗುತ್ತಾನೆ. ಅವನ ಕುಟುಂಬದಲ್ಲಿ ಮಕ್ಕಳು ಅವನ ಕಣ್ಣ ಮುಂದೆ ಜೀವ ಕಳಕೊಂಡಾಗ ದಲಿತರ ಪಾಡೇ ಇದು ಎಂಬ ಹುಂಬತನಕ್ಕಿಂತಲೂ ಅವರೆಲ್ಲರಿಗೂ ಆತ ದಾಳವಾಗುತ್ತಾನೆ. ಆತನ ಶ್ರಮ ಮತ್ತು ಕುಟುಂಬ ಸದಸ್ಯರ ದೇಹದ ಬೆಂಬಲವೂ ಸಾಲದಾಗುತ್ತದೆ.

ಶ್ರಮವೇ ಬದುಕಿನ ಧರ್ಮವಾಗಿದ್ದ ಕಾಲದಲ್ಲಿ ದುಡಿಯುವುದು, ಉಣ್ಣುವುದು ಮಾತ್ರ ಮುಖ್ಯವಾಗುತ್ತದೆ. ಯಾರ ಕೈಯ್ಯಲ್ಲಿ ಭೂಮಿಯ ಒಡೆತನ ಇತ್ತೋ ಅವರಿಗೆ ಅಧಿಕಾರ, ಸಂಪತ್ತುಗಳು ಲಭಿಸಲು ಸಾಧ್ಯವಾಗುತ್ತದೆ. ಅದನ್ನು ಬಳಸಿಕೊಂಡು ಅವರು ಸಮಾಜದಲ್ಲಿ ಪಡೆದ ಸ್ಥಾನ ಮಾನಗಳೊಂದಿಗೆ ದಲಿತರು ಕೃಷಿಕರಾದರೆ ತಮ್ಮ ಭೂಮಿಯಲ್ಲಿ ದುಡಿಯಲು ಕೂಲಿಯಾಳುಗಳು ಸಿಗುವುದಿಲ್ಲ ಎಂಬ ಎಚ್ಚರವೂ ಅಲ್ಲಿತ್ತು. ಭೂಮಿಯ ಒಡೆತನ, ಅಧಿಕಾರ ಅಂತಸ್ತು ಸಾಮಾಜಿಕ ಸ್ಥಾನಮಾನಗಳೊಂದಿಗೆ ಪಾಳೇಗಾರಿಕೆ ಮತ್ತು ಊಳಿಗಮಾನ್ಯತೆಗಳನ್ನು ಮುನ್ನಡೆಸಲೂ ಇದು ಸಹಕಾರಿಯಾಗಿದೆ. ವ್ಯವಸ್ಥೆಯ ಈ ದೃಷ್ಟಿಯನ್ನು

ಬದಲಾಯಿಸಬೇಕೆಂಬ ತುಡಿತಕ್ಕಿಂತಲೂ ತಾನು ಸಾಗುವಳಿ ಮಾಡುವವನಾಗನೇಕೆಂಬ ಚೋಮನ ತುಡಿತ ಆ ಹಿನ್ನೆಲೆಯಲ್ಲಿ ಬಹಳ ಮುಖ್ಯವಾದುದು.

"ಚೋಮನ ದುಡಿ" ಕಾದಂಬರಿಯಲ್ಲಿ ಜಾತಿ– ಜೀತವನ್ನು ಸ್ಪಷ್ಟವಾಗಿ ಗಮನಿಸಬಹುದು 'ಚೋಮನು ಸಂಕಪ್ಪಯ್ಯನವರ ಮೂಲದ ಹೊಲೆಯ ಮೂಲದವನೆಂದರೆ ಅವರ ಅನುಮತಿಯಿಲ್ಲದೆ ಇನ್ನೊಬ್ಬ ಧನಿಯ ಆಶ್ರಯವನ್ನು ಲಾಭಕ್ಕಾಗಲೀ, ನಷ್ಟಕ್ಕಾಗಲೀ ಇವನಾಗಲಿ ಇವನ ಪರಂಪರೆಯವರಾಗಲೀ ಬಿಡುವಂತಿಲ್ಲ. ಅವರ ಧನಿಯಾದರೂ ಸರಿಯೆ–ಸಾಲವಿರಲಿ, ಮೂಲವಿರಲಿ, ಚೋಮನ ಸಂತತಿಯವರನ್ನು ನಡೆಯಿಸಿಕೊಂಡು ಹೋಗಬೇಕು. (ಅದೇ, ಪು.೭)

"ಚೋಮ ಧನಿಯರ ಮನೆಯ ಮೂಲದವನಾಗಿ ಕೆಲಸಕ್ಕೆ ಸದಾ ಇದ್ದೇ ಇರುತ್ತಾನೆ. "ಆ ಬಿಟ್ಟಿ ಈ ಬಿಟ್ಟಿಯೆಂದು ತಿರುಗಾಡಿದರೆ ಎರಡು ಪಾವುನಕ್ಕಿ ದೊರೆಯುತ್ತದೆ. ಬೆಳಗಿನಿಂದ ಸಂಜೆಯ ತನಕವೂ ಕಡಿದು ಕೊಚ್ಚುವ ಕೆಲಸವಿರಲೂ ಬಹುದು ಅವನ ಕೂಲಿಯಲ್ಲಿ ವ್ಯತ್ಯಾಸ ಬರುವುದಿಲ್ಲ" (ಅದೇ;ಪು.೧೦)ಬದುಕಿನ ಅನಿವಾರ್ಯತೆಗಾಗಿ ಮಕ್ಕಳನ್ನು ಘಟ್ಟಕ್ಕೆ ಕಳುಹಿಸಲು ಯೋಚಿಸುತ್ತಾರೆ. ಒಬ್ಬನನ್ನೇ ಕಳುಹಿಸಲು ಧೈರ್ಯ ಸಾಲದು, ಅಲ್ಲಿ ಏನಾದರೂ ಜಡ, ಜಾಪತ್ತು ಬಂದದ್ದಾದರೆ ?ಇಬ್ಬರನ್ನು ಕಳುಹಿಸುವುದಕ್ಕೂ ಭೀತಿ ಮತ್ತೊಂದಿದೆ. ಇಬ್ಬರೂ ಅಲ್ಲಿನ ಸಹವಾಸದಿಂದ ಕುಡಿಯುದಕ್ಕೆ ಕಲಿತು, ಸಾಲ ತೀರಿಸುವ ಬದಲು ಹೆಚ್ಚಿಸಿಕೊಂಡು ಬಂದರೆ? (ಅದೇ, ಪು.೧೫) ಎಂಬ ಪ್ರಶ್ನೆಯೂ ಮೂಡುತ್ತದೆ."

"ಕಳೆದ ವರ್ಷ ಮಳೆಗಾಲದಲ್ಲಿ ಹಳ್ಳವೊಂದು ಹಾದಿ ತಪ್ಪಿ ಗುಡ್ಡದ ಮಣ್ಣನ್ನೆಲ್ಲಾ ಒಂದು ಸುಗ್ಗಿಯ ಗದ್ದೆಯ ಮೇಲೆ ತಂದು ಸುರಿದಿತ್ತು. ಈ ವರ್ಷ ಮಳೆ ಬೀಳುವುದರೊಳಗಾಗಿ ಅದನ್ನು ತೆಗೆದು ,ಹಳ್ಳದ ತಿರುವನ್ನು ಮೊದಲಿದ್ದಂತೆ ಮಾಡದಿದ್ದರೆ ಇಡಿಯ ಬಯಲಿನಲ್ಲಿ ಸಾಗುವಳಿಯೇ ಸೊನ್ನೆಯಾಗಬಹುದು. ಅದಕ್ಕೆಎರಡು ಮೂರು ದಿವಸಗಳ ಕೆಲಸ ಉಳಿದಿದೆ. ಅಕಾಲವೃಷ್ಟಿ ಬಂದೀತೆಂಬ ಭೀತಿಯಿದೆ. (ಅದೇ, ಪುಟ ೧೯)

'ತಾನು ಬೇಸಾಯಗಾರನಾಗುವ ಸುದಿನ ಬಂತೆಂದು ಎದೆಯು ಉಲ್ಲಾಸದಿಂದ ಬಡಿಯಿತೇ ಕಾಫಿ ತೋಟದ ಮರವೆಯಾಯಿತು. ಧನಿಗಳು ತಿರುಗಿ ಬಂದು 'ಚೋಮ ಇದುವರೆಗೆ ನಮ್ಮ ಹಿರಿಯರು ನಿಮ್ಮವರಿಗೆ ಗೇಣಿಗೆ ಗದ್ದೆ ಕೊಟ್ಟದಿಲ್ಲ' ಈಗ ಹಾಗೆ ಕೊಡಲಿಕ್ಕೆ ಬರುವ ಹಾಗೂ ಇಲ್ಲ. (ಅದೇ, ಪುಟ. ೨೨) ಧಣಿಗಳ ಧೋರಣೆ ಅವನನ್ನು ಯೋಚನೆಗೆ ಹಚ್ಚುತ್ತದೆ.

'ಅವನ ಚಿಂತೆ ಒಂದೇನೆ– ತಾನು ಇನ್ನೆಂದಾದರೂ ಬೇಸಾಯಗಾರನಾಗುವುದುಂಟೇ? ಎಂದು ಎಷ್ಟೋ ವರ್ಷಗಳಿಂದ ಸಾಗಿ ಬಂದ ಕನಸದು. ಅದಕ್ಕೆ ಇಂಬುಗೊಡುವಂತೆ ಕಾಡಿನಲ್ಲಿ ಎರಡು ಕರುಗಳು ಸಿಕ್ಕಿದುದು, ಅವು ಈ ಮೂರು ವರ್ಷದ ಅವಧಿಯಲ್ಲಿ ಕಾಡಿನ ಹುಲಿಯ ಬಾಯಿಗೆ ತುತ್ತಾಗದೆ ಚೆನ್ನಾಗಿ ಬೆಳೆದು ಅವನ ಆ ಆಸೆಯನ್ನು ಕೆರಳಿಸಿ ಬಂದುದು ಇಂದೋ ನಾಳೆಯೋ ತಾನೊಬ್ಬ ಬೇಸಾಯಗಾರ ನಾದೇನೆಂಬ ಆನಂದ ಸ್ವರ್ಗಕ್ಕೆ ಕಾಲೂರಿಸಿದುದು–ಇವೆಲ್ಲವುಗಳ ಭವಿಷ್ಯವೇನು?

ಪ್ರತಿಕ್ಷಣವೂ ಅವನ ಮುಂದೆ ಮುನಿದು ನಿಂತಿರುವ ನೇಗಿಲಿನ ಚಿತ್ರ ಕಾಣಿಸುತ್ತದೆ. ಒಮ್ಮೊಮ್ಮೆ "ನಾನು ನನಗಾಗಿ ಹಿಡಿಯಬಾರದಾದರೆ ಇನ್ನೊಬ್ಬರಿಗಾಗಿ ಏತಕ್ಕೆ ಹಿಡಿಯಬೇಕೆಂದು ಯೋಚಿಸುತ್ತಾನೆ" (ಅದೇ, ಪುಟ. ೩೭)

"ಚೋಮನಿಗೆ ಧನಿಗಳ ಮುಖವನ್ನು ಕಂಡು ತಿರುಗಿ ಆಸೆ ತುಂಬಿದೆ. 'ಹೆಚ್ಚು ಬೇಡ ಒಂದು ಹತ್ತು ಸೇರು ಬೀಜ ಬಿತ್ತುವಷ್ಟು ಜಾಗವನ್ನು ಕೇಳೋಣ ಎಂಬ ಆಸೆ ತಿರುಗಿ ಮೂಡಿದೆ, ನೆಪದಲ್ಲಿ ನೆಪ ಮಾಡಿಕೊಂಡು ಅಂಗಳದಲ್ಲಿ ಕಾದಿದ್ದು, ತನ್ನ ಆಸೆಯನ್ನು ಎರಡನೆಯ ಆವೃತ್ತಿಗೆ ಬಾಯಿ ಬಿಟ್ಟು ಹೇಳಿದ ಸಂಕಪ್ಪಯ್ಯನವರಿಗೆ ಅವನ ಮುಖವನ್ನು ಕಂಡು ಕನಿಕರವಾಯಿತು. ಹೆಮ್ಮೆ ಮೆರೆಯಿಸಲು ಚೋಮ ಆ ರೀತಿ ಕೇಳುತ್ತಲಿಲ್ಲವೆಂದು ಅವರಿಗೆ ಗೊತ್ತು." (ಅದೇ, ಪು. ೪೦)

ಸ್ವತಃ ಸಂಕಪ್ಪಯ್ಯನವರಿಗೆ ತಮ್ಮ ಚೋಮನಿಗೆ ಹಾಳು ಬಿದ್ದ ಒಂದು ಹೊಲದ ಚೂರನ್ನು ಕೊಡುವುದಕ್ಕೆ ಆಕ್ಷೇಪವಿರಲಿಲ್ಲ. "ಪ್ರತಿವರ್ಷವೂ ಗೇಣಿಯನ್ನು ತಿಂದು ಹಾಕುವ ಯಾವ್ಯಾವ ಒಕ್ಕಲುಗಳಿಗಿಂತ ಚೋಮನಿಗೆ ಕೊಡಬಾರದೇಕೇ ಎಂದೇ ಇತ್ತು. ತಾಯಿಯ ಮುದ್ರೆಯನ್ನು ದೊರಕಿಸುವುದು ಕಠಿಣವೇ ಸರಿ. ಹಳೆಯ ಸಂಪ್ರದಾಯದ ಮುದುಕಿಯವಳು ಹೊಲೆಯರು ಸ್ವಂತ ಬೇಸಾಯ ಮಾಡುವುದೆಂಬ ಹೊಸ ಯೋಚನೆಗೆ ಅವಳ ಮನಸ್ಸಿನಲ್ಲಿ ಎಡೆಯೇ ದೊರೆಯದು. ಸುತ್ತ ಮುತ್ತಲಲ್ಲಿ ಮೇಲು ಜಾತಿಯವರು ಏಕೆ ಸಾಮಾನ್ಯ ಹಳ್ಳಿಯ ಯಾರೊಬ್ಬರ ಮನಸ್ಸಿಗೂ ಒಪ್ಪುಗೆ ಕಾಣದ ಸಂಗತಿಯದು', ಅವರು ಬೇಸಾಯಗಾರರಾಗಿ ಸ್ವತಂತ್ರರಾದರೆ , ನಾಳೆ ನಾವು ನೇಗಿಲು ಹಿಡಿದರೆ ಸರಿ'ಎಂದು ತಿಳಿಯಬಹುದು ಜನರು. (ಅದೇ, ಪು. ೪೦-೪೧) ಜನಸಾಮಾನ್ಯರ ಧೋರಣೆ ಚೋಮನನ್ನು ಇನ್ನಷ್ಟು ನೋಯಿಸುತ್ತದೆ.

"ಇಡೀ ಹಳ್ಳಿಯ ರೈತರ ಮೇಲೆಯೇ ಅವನಿಗೆ ಮತ್ಸರ ಬಂದಿದೆ. ಅವು ಒಂದೇ ಕಾರಣದಿಂದ – ತನ್ನನ್ನು ಜೀವಿತದ ಕೂಲಿಯಾಗಿರಿಸಿ ತಾವೆಲ್ಲ ಬೇಸಾಯಗಾರರಾದುದಕ್ಕೆ ಬೇಸಾಯದಿಂದ ಉಳಿದವರಿಗೆ ಸಿಗುವ ಸ್ವರ್ಗಯಾವುದೆಂಬ ಯೋಚನೆ ಅವನಿಗಿಲ್ಲ. ಅದು ಸ್ವರ್ಗವೇ ಇರಲಿ, ನರಕವೇ ಇರಲಿ, ತನಗೂ ಅದು ಸಿಗಬಾರದೇಕೆ ಎಂಬುದು ಅವನ ವಾದ." (ಅದೇ, ಪು.೪೧) ಈ ಪ್ರಶ್ನೆ ಅವನನ್ನು ನಿತ್ಯವೂ ಕಾಡುತ್ತದೆ. ಭೂಮಿ ಪಡೆಯುವ ದಾರಿಗಳಿಗಾಗಿ ಹುಡುಕಾಡುತ್ತಾರೆ. ಅದಕ್ಕಾಗಿ ಚರ್ಚ್‌ಗೆ ತೆರಳಿ ಮಾಡುವ ಮನವಿಯೂ ಸೂಕ್ಷ್ಮವಾದುದು.

"ಪಾದ್ರಿಗಳ ಇಗರ್ಜಿಗೆ ಇಬ್ಬರೂ ಹೋದರು. ಅಲ್ಲಿ ಅವರನ್ನು ಕಾದು ಕುಳಿತರು ಪಾದ್ರಿ ಸಾಹೇಬರ ಭೇಟಿಯಾಗಲು ಬಹಳ ಸಮಯ ಹೋಯಿತು. ಅವರಿಗೆ ಯಾವತ್ತು ಸಂಗತಿ ತಿಳಿದು ಬರಲು ತೀರಾ ಉತ್ಸಾಹದಿಂದ ಹೊರಕ್ಕೆ ಬಂದು 'ಏನು ಚೋಮನೆಂದು ನಿನ್ನ ಹೆಸರೋ? ಚೋಮ ಗೇಣಿಗೆ ಕೊಡಬಹುದಾದ ಗದ್ದೆಗಳಿಗೆ ಬರೇ ಗದ್ದೆಗಳಲ್ಲ,ಬಹಳ ಒಳ್ಳೆಯ ಗದ್ದೆಗಳೇ ಇವೆ.ನಿಮ್ಮ ಹಳ್ಳಿಗೆ ತೀರ ಸಮೀಪದಲ್ಲಿಯೇ ಇದೆ. ಆದರೆ ಅವೆಲ್ಲ ಇಗರ್ಜಿಯ ಆಸ್ತಿ, ನಮ್ಮ ಜಾತಿಯವರಿಗೆ ಅಲ್ಲದೆ ಇತರರಿಗೆ ಗೇಣಿಗೆ

ಕೊಡಲು ಬರುವುದಿಲ್ಲ."(ಅದೇ, ಪು.೪೨) ಭೂಮಿಯ ಒಡೆಯನಾಗಬೇಕಾದರೆ ಕ್ರೈಸ್ತರಾಗಬೇಕೆಂಬ ಸುಚನೆ ದಿಗಿಲು ಹುಟ್ಟಿಸುತ್ತದೆ.

"ಅಪ್ಪಾ ನಾವು ನಮ್ಮ ಯೋಗ್ಯತೆಗೂ ಮೀರಿ ಆಸೆ ಮಾಡಿದರೆ ನಡೆದಿತೇ? ಬೇಸಾಯ ಮಾಡಬೇಕಾದರೆ ಬ್ರಾಹ್ಮಣನಾಗಿಯೋ, ಬಂಟರಾಗಿಯೋ, ಗೌಡರಾಗಿಯೋ ಹುಟ್ಟ ಬೇಡವೇ? ಹಾಳಾದ ಹೊಲೆಯರಾಗಿ ಹುಟ್ಟಿ ಬೇಸಾಯ ಮಾಡಬೇಕು ಅಂದರೆ ಆಗುತ್ತದೆಯೋ? ಧನಿಗಳಾದರೂ ಏನು ಮಾಡುತ್ತಾರೆ? ಊರಿನ ಕಟ್ಟು ಕಟ್ಟಳೆಯಿಲ್ಲವೆ? ಅದನ್ನವರು ಮುರಿದರೆ ಅವರಿಗೆ ಯಾರೇನೆಂದಾರು? ಅವರ ಸುದ್ದಿ ಬಿಡು– ನಾಳೆ ನೀನೇ ಬೇಸಾಯಗಾರನಾದೆಯೆಂದು ತಿಳಿ. ಆಗ ಜಾತಿಯವರೇ ಎಷ್ಟು ಸಿಟ್ಟಾಗಲಿಕ್ಕಿಲ್ಲ ಅಲ್ಲದೆ ನಮಗೀಗ ಏನು ಕಡಿಮೆಯಾಗಿದೆ! ಎರಡು ಎತ್ತುಗಳಿವೆ. ಇನ್ನಾರಿಗೆ ಎತ್ತಿನ ಜೋಡಿಯಿದೆ? ಉಳುವುದು, ಕೊಯ್ಯುವುದು ನಮಗೆ ತಪ್ಪಿದ್ದಲ್ಲ. (ಅದೇ, ಪು.೪೬)

ಮಗ ಗುರುವ ಮತಾಂತರಗೊಂಡು ಸಾಗುವಳಿದಾರನಾದಾಗ ಚೋಮನಿಗೆ ಬೆರಗು. 'ಗದ್ದೆ ಸಾಗುವಳಿಯೇ? ಯಾರು ನನ್ನ ಗುರುವನೇ? ಜಾತಿಗೆಟ್ಟರೂ ಸ್ವರ್ಗ ಸಿಕ್ಕಿತ್ತಲ್ಲ.! (ಅದೇ. ಪು.೭೭)ಹೇಗಾದರೂ ಗದ್ದೆ ಸಾಗುವಳಿ ಮಾಡಬೇಕೆಂದು ನಿರ್ಧರಿಸುತ್ತಾನೆ.

"ಸರಕಾರದ ಜಾಗವನ್ನು ದರಕಾಸ್ತಿಗೆ ಪಡೆದು ಅದರಲ್ಲಿ ಸಾಗುವಳಿ ಮಾಡುವುದು! ಗುಡ್ಡವಾದರೂ ಗುಡ್ಡ, ಅಂತು ನನ್ನದೇ ನಾಲ್ಕು ಗೇಣು ನೆಲವನ್ನು ಉಳಲೇಬೇಕು."

ಉಳುವುದೆಂದರೆ ಬರಿದೆ ಚಂದಕ್ಕೇನು? ಹಾಗಾದರೆ ಮನೆ ಮುಂದಿನ ಅಂಗಳವನ್ನೇ ಉಳಬಹುದು. ಒಂದುನಾಲ್ಕು ಸೇರು ಬತ್ತವಾದರೂ ಸಿಕ್ಕಿ ಬೇಡುವುದು ನಿಂತೀತಲ್ಲ– ಎಂದು ಯೋಚಿಸುವ ಬದಲು ಗುಡ್ಡ ಮಗುಚುತ್ತೇನೆ, ಕಾಡನ್ನು ಕಡಿಯುತ್ತೇನೆ, ತೋಡನ್ನು ಅಗೆಯುತ್ತೇನೆ ಎಂದರೆ ಉಪಯೋಗವಿದೆಯೇ! ಬಿಡು, ಅದೆಲ್ಲ ಯೋಚನೆ ಹಿರಿಯರು ಸಂಕಪ್ಪಯ್ಯ ಧನಿಯರ ಉಪ್ಪನ್ನು ತಿಂದೇ ಬೆಳೆದರು, ನಾವು ಆ ಉಪ್ಪಿನ ಋಣವನ್ನು ಹರಿಯಲು ಬರುವುದಿಲ್ಲ. (ಅದೇ,ಪು.೭೭)ಎಲ್ಲಕ್ಕೂ ಧಣಿಯ ಮನೆಯನ್ನು ಅವಲಂಭಿಸಿದವರಿಗೆ ಧಣಿಗಳ ಮಾತು ಚಾಟಿ ಏಟಿನಂತಿದೆ.

"ಹೊಲೆಯರು ಮಾಡಿದ ಸಾಲ ತೀರುವುದುಂಟೇ? ಬಾನು ಹರಿದು ನೆಲಕ್ಕೆ ಬೀಳಬೇಕು. ನಿಮ್ಮ ಜನರ ಸಾಲ ತೀರಬೇಕಾದರೆ' ಎಂದರು." (ಅದೇ, ಪು.೭೯) ನಾವು ಹೊಲೆಯರಾಗಿ ಹುಟ್ಟಿ, ನಮ್ಮ ಅಂತಸ್ತಿಗೂ ಮೀರಿದ ಆಸೆ ಹಿಡಿದರೆ ಹೇಗೆ ? ಅದೃಷ್ಟ ಬೇಡವೇ? ಮುಖ್ಯ ಬೇಕು ಅದೃಷ್ಟ, ದೇವರು ಹಣೆಯಲ್ಲಿ ಬರೆದಿರಬೇಕು, ಗುರುವನೊಬ್ಬನ ಹಣೆಯಲ್ಲಿ ಬರೆದಿರಬೇಕೆಂದು ಕಾಣುತ್ತದೆ. ಅವನು ತನ್ನ ಜಾತಿಯನ್ನು ಬಿಟ್ಟರೂ ಬೇಸಾಯಗಾರನಾದ ಅವನೊಬ್ಬ ನಮ್ಮ ಕುಲದಲ್ಲಿ ಹುಟ್ಟಿದರೂ ಕೂಡ ಬೇಸಾಯದ ಋಣ ಪಡೆದ' (ಅದೇ, ಪು. ೧೦೦) 'ತಾನು ಹೊಲೆಯನಾಗಿರುವಷ್ಟು ದಿನ ಬೇಸಾಯಗಾರನಾಗಲಾರೆ ಎಂಬುದು ಖಂಡಿತ ಅದೇ ಸಮಯ ಗುರುವನ ಯೋಚನೆಯೂ ಬಂದಿತು. ಅವನ ಮೇಲೆ ತಿರುಗಿ ಕೋಪವು ಜ್ವಲಿಸುವ ಬದಲು, ಅಸೂಯೆ ಕೆರಳುವ ಬದಲು, ಅವನಂತೆ ತಾನೂ ಆಗಬಾರದೆ' ಎಂಬ ಮನಸ್ಸಾಯಿತು.ಕುಲದ

ದೇವರನ್ನು ನಂಬಿ ತನ್ನ ಆಸೆ ಕೈ ಗೂಡದ ಮೇಲೆ ಪಾದ್ರಿಯ ದೇವರನ್ನು ನಂಬಿದರೇನು ಹಾನಿ? (ಅದೇ, ಪು. ೧೦೫) ಈ ಪ್ರಶ್ನೆಗಳ ನಡುವೆಯೇ ಭೂಮಿಯ ಒಡೆಯನಾದಾಗ ಚೋಮ ಹತಾಶನಾಗುತ್ತಾನೆ.

'ಧನಿಯರ ಋಣವನ್ನು ತೀರಿಸಲು ಉತ್ತು ಬಂದ, ಎತ್ತುಗಳ ಋಣವನ್ನು ತೀರಿಸಲು ಅವುಗಳನ್ನು ಮೀಯಿಸಿಯಾಯಿತು. ಅವುಗಳ ನೆನಪನ್ನು ಹರಿಯಲು ಅವುಗಳು ಕರುಗಳಾಗಿರುವಾಗ ಯಾವ ಕಾಡಿನಲ್ಲಿ ದೊರಕಿದ್ದುವೋ ಅಲ್ಲಿಗೆ ಹೋಗಿ ಬಿಟ್ಟು ಬಂದಾಯಿತು. ಇನ್ನು ಅವನ ಆಸೆಯೆಂದರೆ ನೇಗಿಲ ಯೋಗ ತಿರುಗಿ ಹೊರಕ್ಕೆ ಬಂದ ನೇಗಿಲು, ನೊಗವನ್ನು ನೆಲಕ್ಕೆ ಕುಟ್ಟಿ ಮುರಿದು ಅಂಗಣದಲ್ಲಿ ರಾಶಿ ಒಟ್ಟಿದ ತಿರುಗಿ ಹೊರಕ್ಕೆ ಹೋದ. ಈ ಬಾರಿ ಒಂದು ಸೂಟೆಯನ್ನು ಉರಿಸಿ ತಂದ ಅದನ್ನು ನೋಡಿದರು ಬೆಳ್ಳಿಗೆ ದಳಗಳನೆ ಕಣ್ಣೀರು ಸುರಿಯಿತು. ಆದರೆ ಚೋಮ ಯಾಗದ ಅಧ್ವರಿಯಂತೆ ಗಂಭೀರವಾಗಿದ್ದಾನೆ. ಕಣ್ಣೆವೆಗಳು ಸಹ ಅಲುಗುವುದಿಲ್ಲ. ಅಷ್ಟು ಮಾಡಿ ತಿರುಗಿ ಗುಡಿಸಲಿನ ಒಳಕ್ಕೆ ಹೋಗಿ ವಿಚಾರಮಗ್ನನಾದ. (ಅದೇ, ಪು. ೧೧೧)

"ಆ ದಿನದಂತೆ ದುಡಿಯನ್ನು ಅವನು ಜೀವಮಾನದಲ್ಲೇ ಬಾರಿಸಿರಲಿಲ್ಲ. ಇನ್ನು ಬಾರಿಸುವಂತಿಲ್ಲ. ತೀರ ಸ್ವಲ್ಪ ಹೊತ್ತು ಬಾರಿಸಿದ ಆದರೆ ನಿಜಕ್ಕೂ ಅದು ಪ್ರಳಯ ತಾಂಡವದ ಢಮರು ನಿನಾದ! ದುಡಿಯ ಢಮ ಢಮ್ಮ ನಿಂತಿತು.ಒಮ್ಮೆಗೇ ನಿಂತಿತು. ಚೋಮನ ಹೃದಯದ ಢಮರೂ ನಿಂತಿತು. ಅದೂ ಒಮ್ಮೆಗೇ ನಿಂತಿತು. (ಅದೇ, ಪು. ೧೧೨).

ಜಮೀನ್ದಾರಿ ಪದ್ಧತಿಯೂ ತನ್ನ ಅಮಾನುಷ ಪದ್ಧತಿಗಳಾದ ಜಾತಿ ವ್ಯವಸ್ಥೆ ಜೀತ ಪದ್ಧತಿಗಳಂತಹವುಗಳನ್ನು ನಿರಂತರವಾಗಿ ಚಲನೆಯಲ್ಲಿರುವಂತೆ ಕಾಪಾಡಿಕೊಳ್ಳುತ್ತದೆ. ವೈದಿಕ ಸಂಪ್ರದಾಯದ ಕ್ರೂರ ವ್ಯವಸ್ಥೆಯಲ್ಲಿ ಅಸ್ಪೃಶ್ಯ ಸಮಾಜ ತನ್ನೆಲ್ಲಾ ಆಸೆ ಆಕಾಂಕ್ಷೆಗಳನ್ನು ಬದಿಗಿಟ್ಟು ಮೇಲ್ಜಾತಿಯ ತನ್ನ ಒಡೆಯರ ಕುಟುಂಬಗಳಿಗೆ ಸುಖ-ಸಂತೋಷಗಳಿಗೆ, ದರ್ಪ ದೌರ್ಜನ್ಯಕ್ಕೆ ದೇಹ-ಮನಸ್ಸುಗಳನ್ನು ಮಾರಿಕೊಳ್ಳುವುದನ್ನು ಚೋಮನ ದುಡಿ ಕಾದಂಬರಿಯಲ್ಲಿ ಕಾಣಬಹುದು. ಮೇಲ್ಜಾತಿಗಳ ಜನರಿಗೆ ಭೂಮಿ ಸಾಮಾಜಿಕ ಸ್ಥಾನಮಾನ ಜೊತೆಗೆ ಪ್ರತಿಷ್ಠೆಯನ್ನು ಸಂಪತ್ತನ್ನು ಶಕ್ತ ರಾಜಕಾರಣವನ್ನು ಅನಾಯಾಸವಾಗಿ ದೊರಕುವಂತೆ ಮಾಡುತ್ತದೆ. ಚೋಮನಿಗೆ 'ಬೇಸಾಯಗಾರನಾಗಬೇಕೆಂಬ ಬಯಕೆ ಕುತ್ತಿಗೆಯವರೆಗಿದೆ. ಆದರೆ ಅವನ ಊರಲ್ಲಿ ಹೊಲೆಯ ಬೇಸಾಯಗಾರನೆಂಬ ಜಾತಿಯೇ ಇಲ್ಲ. ಹಾಗಾಗುವ ಆಸೆ ಹಿಡಿದು ಯಾರನ್ನಾದರೂ ಯಾರನ್ನೆಂದರೇನು ಸಂಕಪ್ಪಯ್ಯನವರನ್ನು ನಾಲ್ಕು ಗೇಣು ಜಾಗ ನನಗೆ ಗೇಣಿಗೆ ಕೊಡಿ ಎಂದು ಕೇಳುವ ಸಾಹಸವಿಲ್ಲ. ಆದರೆ ಒಂದಲ್ಲ ಒಂದು ದಿವಸ ನೇಗಿಲನ್ನು ಹಿಡಿದು ಮೆರೆದೇನು ಎಂಬ ಆಸೆಯಿದೆ. ಆದ್ದರಿಂದಲೇ ಮೂರು ವರ್ಷಗಳಿಂದ ಎರಡು ಹಸುವಿನ ಕರುಗಳನ್ನು ಸಾಕುತ್ತಾ ಬಂದಿದ್ದಾನೆ. (ಅದೇ, ಪುಟ. ೧೩). ಚೋಮನ 'ಭೂಮಿ'ಯ ಪ್ರಶ್ನೆಯ ಆಸೆಗೆ ಚೋಮನ ಸುತ್ತ ಮುತ್ತ ಇರುವ ಸಮಾಜದ ಪರಿಸರವನ್ನು ಮುಖಾಮುಖಿಯಾಗಿಸುತ್ತಾರೆ ಲೇಖಕರು.

"ಈವರೆಗೆ ತಾನು ಮರೆಯಾಗಿರಿಸಿದ್ದ ಆಲೋಚನೆಯನ್ನು ತನ್ನ ಮಕ್ಕಳಿಗೆ ತಿಳಿಸಿದ. ಅವನ ಮಾತಿಗೆ ಪ್ರತಿಯಾಡುವ ಮಕ್ಕಳೆಲ್ಲ ಆಡಿದರೆ ಬೆಳ್ಳಿಯೊಬ್ಬಳೇ ಆಡಬೇಕು. ಬೆಳ್ಳಿ ಬಾಯಿಯನ್ನು ತೆರೆದೇ ಬಿಟ್ಟಳು. ನೀನು ಧಣಿಯರೊಂದಿಗೆ ಬಾಯಿ ತೆರೆದು ಮರ್ಯಾದೆಯನ್ನು ಕಳೆದುಕೊಳ್ಳಬೇಡ ಎಂದಳು. ಇದುವರೆಗೆ ಚೋಮನ

ಹಿರಿಯರಲ್ಲಿ ಬೇಸಾಯ ಮಾಡಿದವರಿಲ್ಲ. ಅವನ ದಣಿಯವರಿಗೆ ಯಾವನೊಬ್ಬ ಹೊಲೆಯ ಒಕ್ಕಲೂ ಇಲ್ಲ. ಹೊಲೆಯರು ನೇಗಿಲನ್ನು ಹಿಡಿದರೆ ಪ್ರಳಯವೇ ಬಂದಿತು ಎಂದು ತಿಳಿಯುವವರು ಊರವರು. ಎಲ್ಲೋ ಯಾವುದೋ ಊರಿನಲ್ಲಿ ಯಾವನೋ ಒಬ್ಬ ಹೊಲೆಯ ಗಿಡವನ್ನು ಬೆಳೆಸುತ್ತಾನೆಂದು ಕೇಳಿ ಚೋಮನ ಕಿವಿ ನೆಟ್ಟಗಾಗಿ ನಾಲಿಗೆ ಮುಂದೆ ಚಾಚಿದ್ದರೆ ಅವನ ಬಾಳ್ವೆ ಒಳಿತಾಗುವುದುಂಟೇ? ಎನಿಸಿತು. ಆದರೆ ಅವರಲ್ಲಿ ಬಂಜರು ಬಿದ್ದ ಎಷ್ಟೋ ಜಮೀನುಗಳಿದ್ದವು. ಅದನ್ನೇಕೆ ಅವನು ಸಾಗುವಳಿ ಮಾಡಬಾರದೆಂದು ತೋರಿದುದರಿಂದ  ಅದೇ ವಿಷಯವನ್ನು ಪ್ರಸ್ತಾಪಿಸಲು ಒಳಕ್ಕೆ ತಾಯಿಯ ಬಳಿಗೆ ಹೋದರು ಚೋಮ ಇದುವರೆಗೆ ನಮ್ಮ ಹಿರಿಯರು ನಿಮ್ಮವರಿಗೆ ಗೇಣಿಗೆ ಗದ್ದೆ ಕೊಟ್ಟಿದಿಲ್ಲ ಹೀಗೆ ಕೊಡಲಿಕ್ಕೆ ಬರುವ ಹಾಗೆ ಇಲ್ಲ ಎಂದರು. ಈ ಮಾತಿಗೆ ಪ್ರತಿ ಮಾತಿಲ್ಲ. ವಿಷಯ ಅಲ್ಲಿಗೆ ಮುಗಿಯಿತು. ಮನೆಯೊಳಗಿಂದ ಸಂಕಪ್ಪಯ್ಯನವರ ತಾಯಿ ಅಬ್ಬಾ! ಈ ಹೊಲೆಯರಿಗೆ ಬಂದ ಸೊಕ್ಕೇ ಎಂದು ಗದರಿಸುತ್ತಿದ್ದಳು (ಅದೇ, ಪು. ೨೧)

ಸ್ವತಃ ಸಂಕಪ್ಪಯ್ಯನವರಿಗೆ ತಮ್ಮ ಚೋಮನಿಗೆ ಹಾಳು ಬಿದ್ದ ಒಂದು ಹೊಲದ ಚೂರನ್ನು ಕೊಡುವುದಕ್ಕೆ ಅಕ್ಷೇಪವಿರಲಿಲ್ಲ. ಪ್ರತಿ ವರ್ಷವೂ ಗೇಣಿಯನ್ನು ತಿಂದು ಹಾಕುವ ಯಾವ್ಯಾವ ಒಕ್ಕಲುಗಳಿಗಿಂತ ಚೋಮನಿಗೆ ಕೊಡಬಾರದೇಕೆ ಎಂದೇ ಇತ್ತು ಆದರೆ ತಾಯಿಯ ಮುದ್ರೆಯನ್ನು ದೊರಕಿಸುವುದು ಕಠಿಣವೇ ಸರಿ. ಹಳೇ ಸಂಪ್ರದಾಯದ ಮುದುಕಿಯವಳು. ಹೊಲೆಯರು ಸ್ವತಃ ಬೇಸಾಯ ಮಾಡುವುದೆಂಬ ಹೊಸ ಯೋಜನೆಗೆ ಅವಳ ಮನಸ್ಸಿನಲ್ಲಿ ಎಡೆಯೇ ದೊರೆಯದು. ಸುತ್ತ ಮುತ್ತಲಿನಲ್ಲಿ ಮೇಲುಜಾತಿಯವರ ಏಕೆ, ಸಾಮಾನ್ಯ ಹಳ್ಳಿಯ ಯಾರೊಬ್ಬರ ಮನಸಿಗೂ ಒಪ್ಪಿಗೆ ಕಾಣದಂಥ ಸಂಗತಿಯಿದು. ಅವರು ಬೇಸಾಯಗಾರರಾಗಿ ಸ್ವತಂತ್ರರಾದರೆ ನಾಳೆ ನಾವು ನೇಗಿಲು ಹಿಡಿದರೆ ಸರಿ ಎಂದು ತಿಳಿಯಬಹುದು. ಜನರು ಇಷ್ಟಿದ್ದರೂ ವೆಂಕಪ್ಪಯ್ಯನವರು ಬಡ ಚೋಮನಿಗಾಗಿ ತಾಯಿಯನ್ನು ಮೃದುವಾಗಿ ಮಾತನಾಡಿದರು ಬಲುವಾಗಿ ಬೇಡಿದರು" (ಅದೇ, ಪು.೨೨)

ಇಪ್ಪತ್ತನೆಯ ಶತಮಾನದ ಮೊದಲ ದಿನಗಳಲ್ಲಿ ಶತ ಶತಮಾನಗಳಿಂದ ಜಮಿನ್ದಾರರ ಹೊಲ ಮನೆಗಳಲ್ಲಿ ದುಡಿಯುವ ಕೈಗಳು 'ಅಕ್ಷರ ಜಗತ್ತಿ'ನ ಕಡೆಗೆ ಉತ್ಪಾದನಾ ಕ್ಷೇತ್ರವಾದ ಭೂಮಿಯ ಕಡೆಗೆ ಕೈ ಚಾಚಿವೆ. ಇದರ ಜೊತೆ ಜೊತೆಯಲ್ಲಿಯೇ ಜಮೀನ್ದಾರನ ಕಪಿಮುಷ್ಟಿಯಿಂದ ಬಿಡುಗಡೆಗೊಳ್ಳುವ ಆಶಯಗಳು ಕೆಳ ಜಾತಿಗೆ ಎಚ್ಚರವನ್ನು ಇಪ್ಪತ್ತನೆಯ ಶತಮಾನ ತಂದುಕೊಟ್ಟಿದೆ. ಚೋಮ ತಾನು ಭೂಮಿಯ ಒಡೆಯನಾಗಬೇಕೆಂದು ತಹತಹಿಸುವ ಪರಿ, ಆತನ ತಳಮಳ ಅಂತಹದರ ಪೂರ್ವಿಕ ರೂಪ.

ದಲಿತನಾದ ಚೋಮನ ಕುಟುಂಬ ಊಳಿಗಮಾನ್ಯ ವ್ಯವಸ್ಥೆ ಹಾಗೂ ವಸಾಹತುಶಾಹಿ ವ್ಯವಸ್ಥೆಯ ಮಧ್ಯೆ ಸಿಕ್ಕು ದುರಂತದಲ್ಲಿ ಅವಸಾನ ಹೊಂದುವ ಹೃದಯ ವಿದ್ರಾವಕ ಕಥಾನಕ ಇಲ್ಲಿದೆ. ಚೋಮನಿಗೆ ಭೂಮಿಯ ಒಡೆತನದ ಆಸೆ ಹುಟ್ಟಿದ್ದು ಅನಪೇಕ್ಷವೇನಲ್ಲ. ಆದರೆ ಚೋಮ ಬದುಕಿರುವ ಸಮಾಜ ಚೋಮನ ಆಸೆ ಈಡೇರಿಸುವಷ್ಟು ಚಲನಶೀಲತೆ ಕಡೆಗೆ ಮುಖ ಮಾಡಿಲ್ಲ. ವೈದಿಕ ಮೌಲ್ಯಗಳ ಸಾಂಪ್ರದಾಯಿಕತೆಯನ್ನು ನೆಚ್ಚಿಕೊಂಡಿದ್ದ ಸಮಾಜ ಆ ಮೌಲ್ಯಗಳಲ್ಲಿಯೇ ಗಿರಕಿ ಹೊಡೆಯುತ್ತಿದ್ದು, ಚೋಮನ ತುಂಡು ನೆಲದ ಒಡೆತನದ ಆಸೆಯನ್ನು ಪೂರೈಸುವಷ್ಟು ಸೆಕ್ಯುಲರ್ ಆಗಿಲ್ಲ. ವೈದಿಕ ಮೌಲ್ಯಗಳಲ್ಲಿ ಬದುಕುತ್ತಿದ್ದ ಸಂಕಪ್ಪಯ್ಯ,

ಅವನ ತಾಯಿ ಚೋಮನಂತಹವನ ಬದುಕಿನ ಅವಕಾಶವನ್ನು ಕಲ್ಪಿಸುವುದಿಲ್ಲ. ಚೋಮ ಆತನ ಮಕ್ಕಳು ಒಂದು ದಿನವೂ ಬಿಡುವು ಇಲ್ಲದಂತೆ ತನ್ನ ಒಡೆಯ ಸಂಕಪ್ಪಯ್ಯನ ಮನೆಯಲ್ಲಿ, ಮನ್ವೇಲ-ಮಿಂಗೇಲರ ಹೊಲಗದ್ದೆಗಳಲ್ಲಿ ದುಡಿಯುತ್ತಾರೆ. ಚೋಮನ ಬಹುದೊಡ್ಡ 'ಆಸೆ' ಭೂಮಿಯ ಒಡೆಯನಾಗುವುದು ಇದನ್ನು ನೆರವೇರಿಸಿಕೊಳ್ಳಲಾಗದ ಚೋಮ ಬದುಕಿನುದ್ದಕ್ಕೂ ದುರಂತಗಳ ಸರಮಾಲೆಯನ್ನೇ ಅನುಭವಿಸುವಂತಾಗುತ್ತದೆ. ತಂದೆ ಮಾಡಿದ ಸಾಲ ತೀರಿಸಲು ಕಳಸದ ಕಾಫಿ ತೋಟಕ್ಕೆ ಹೋದ ಗುರುವ, ಚನಿಯರಿಬ್ಬರು ಚೋಮನ ಬದುಕಿಗೆ ನೆರವಾಗದೆ ಚನಿಯ ಕಾಯಿಲೆಯಿಂದ ಸತ್ತರೆ, ಗುರುವ ಕ್ರೈಸ್ತ ಹುಡುಗಿಯನ್ನು ಮದುವೆಯಾಗಿ ತನ್ನ ಕುಟುಂಬದಿಂದ ದೂರವೇ ಉಳಿಯುತ್ತಾನೆ. ಚೋಮನ ಗಂಡು ಮಕ್ಕಳು ತೀರಿಸದೇ ಹೋದ ಸಾಲವನ್ನು ತೀರಿಸಲು ಹೋದ ಬೆಳ್ಳಿ ಮನ್ವೇಲ, ಮಿಂಗೇಲರ ಕಾಮದ ಕ್ರೋಧದ ಅಗ್ನಿಗೆ ಬಲಿಯಾಗಿ ಲೈಂಗಿಕ ಶೋಷಣೆಗೆ ಒಳಗಾಗುತ್ತಾಳೆ. ಚೋಮನ ಕಿರಿಯ ಮಗ ಸ್ನಾನ ಮಾಡಲು ಹೋಗಿ ನೀರಿನಲ್ಲಿ ಕೊಚ್ಚಿಕೊಂಡು ಸಾವನ್ನಪ್ಪುತ್ತಾನೆ. ಈ ಎಲ್ಲಾ ಘಟನೆಗಳ ಹಿಂದೆ ಜಾತಿ ಸಮಾಜದ ಒಪ್ಪಿತ ಮೌಲ್ಯಗಳೇ ನಿರ್ಣಾಯಕ ಪಾತ್ರವಹಿಸುತ್ತದೆ. ಈ ದುರಂತಗಳ ಹಿಂದೆ ಜಾತಿ-ಜೀತ-ಭೂಮಿಯ ಸಂಬಂಧಗಳ ಅರಿವಾಗದೆ ಚೋಮನ ಭೂಮಿ ಅಪೇಕ್ಷೆಯ ಮಾರ್ಗವನ್ನು ಗಮನಿಸಿದರೆ ಸಾಕು ಜಾತಿ-ಜೀತ-ಭೂಮಿಯ ಒಳ ಸಂಬಂಧಗಳು ಕೆಳ ಜಾತಿಗಳ ಬದುಕಿಗೆ ನಕಾರಾತ್ಮಕವಾಗಿ ಕಾರ್ಯ ನಿರ್ವಹಿಸುತ್ತವೆ ಎಂಬುದನ್ನು ಗಮನಿಸಬೇಕು.

ಸಮುದಾಯಗಳಿಗೆ ಒಂದು ಕಾಲಕ್ಕೆ ಆಹಾರದ ಮೂಲವಾಗಿದ್ದ ಕೃಷಿ ಜಗತ್ತು ಭೂಮಿಯಾಗಿ ರೂಪಾಂತರ ಹೊಂದಿ ಅಧಿಕಾರ, ಪ್ರಭುತ್ವ ಮತ್ತು ಸಂಪತ್ತಿನ ಪ್ರತೀಕವಾಗುತ್ತದೆ. ಆಹಾರದ ಅನ್ವೇಷಣೆಯಿಂದ ಆಹಾರದ ಸಂಗ್ರಹಣೆಯ ಕಡೆಗೆ ಸಾಗಿರುವ ಸಮುದಾಯಗಳು ಸ್ಥಿರ ನಿವಾಸಗಳಾಗುವಾಗಿನ ಸ್ಥಿತ್ಯಂತರಗಳೂ ಆಗಿದೆ. ಒಂದೆಡೆ ಆಹಾರಕ್ಕಾಗಿ ವಲಸೆಯಾದರೆ ಇನ್ನೊಂದೆಡೆ ಆಹಾರ ಭದ್ರತೆ ಇಲ್ಲದಿದ್ದಾಗಲೂ ಊಳಿಗಮಾನ್ಯತೆ ಮತ್ತು ಜೀತದ ಭಾಗವಾಗಿ ವಲಸೆ ಆರಂಭವಾಗುತ್ತದೆ. ಕೃಷಿ ಕೂಲಿ ಕಾರ್ಮಿಕರ ಅವಶ್ಯಕತೆಯಿದ್ದು, ಅವರೂ ಕೃಷಿಕರಾದರೆ ತಮಗೆ ಜೀತಕ್ಕೆ ಆಳುಗಳು ಸಿಗುವುದಿಲ್ಲ ಎಂಬ ಅಂಶವೂ ಮುಖ್ಯ. ಕೃಷಿಯನ್ನು ಯಾರು ಮಾಡಬೇಕು, ಮಾಡಬಾರದು ಎಂಬ ಲೆಕ್ಕಚಾರಗಳಿಂದ ಭೂಮಿಯ ಒಡೆತನದ ನಿಷೇಧವೂ ಹೇರಲ್ಪಡುತ್ತದೆ. 'ಭೂಮಿ'ಯ ಬಗೆಗಿನ ವಿಧಿ ನಿಷೇಧಗಳಿಂದ ಸಾಮಾಜಿಕ ಸಂರಚನೆಗಳ ಅನ್ವಯಿಕತೆಗಳು ಕ್ಷೇಪೆಗಳಾಗುತ್ತದೆ. ಬೇಟೆ ಪಶುಪಾಲನೆಗಳಿಗಿಂತ ಭಿನ್ನವಾಗಿ ಕೃಷಿಯಿಂದಲೂ ಆಹಾರದ ಮೂಲ ಬದುಕುವ ದಾರಿ ಸಾಧ್ಯ ಎಂದಾದರೂ ತುಂಡು ಭೂಮಿಯ ಒಡೆತನವೂ ಸಾಧ್ಯವಾಗುವುದಿಲ್ಲ. ತಳ ಸಮುದಾಯದ ದಲಿತರು ಕುಮೆರಿ ಕೃಷಿಯನ್ನು ಆಹಾರದ ಮೂಲವಾಗಿ ಬೆಳೆದರೇ ಹೊರತುಸಂಪತ್ತಿನ ಮೂಲವಾಗಿ ಅಲ್ಲ. ಇನ್ನೊಂದು ನೆಲೆಯಲ್ಲಿ ಕೃಷಿ ವಿಸ್ತರಣೆಗೊಂಡಂತೆ ಬದಲಾದ ಭೂಮಿಯ ಪರಿಕಲ್ಪನೆಯಷ್ಟೇ ಅಲ್ಲ ಹುಟ್ಟಿಕೊಂಡ ಪಾಳೆಗಾರಿಕೆ ಮತ್ತು ಊಳಿಗಮಾನ್ಯ ವ್ಯವಸ್ಥೆ ಸಾಮಾಜಿಕ ವ್ಯಂಗ್ಯವಾಗಿದೆ. ಜೀತಕ್ಕೆ ದುಡಿಯುತ್ತಿದ್ದ ಸಮುದಾಯಗಳು ತಳ ಸಮುದಾಯಗಳೇ ಆದುದರಿಂದ ಜಾತಿ- ಜೀತ - ಭೂಮಿ ಪರಸ್ಪರ ಸಂಕೀರ್ಣ ಸಂಬಂಧಗಳುಳ್ಳ ಸಾಮಾಜಿಕ ಸಂರಚನೆಗಳಾಗಿವೆ.

ಬದುಕುವ ದಾರಿಯಾಗಬೇಕಾಗಿದ್ದ ಕೃಷಿ ಜಗತ್ತು ಮತ್ತೆ ತುಳಿಯುವ ಜೀವ ನಾಶದ ದಾರಿಯಾಗುವುದಕ್ಕೆ ಕಾರಣವಾಗುತ್ತದೆ. ಭೂಮಿಯ ಒಡೆತನಕ್ಕಾಗಿ ಜೀವನ ಪೂರ್ತಿ ಹೋರಾಡುವ ಚೋಮನಿಗೆ ತನ್ನ ಧಣಿಗಳ ಮುಂದೆ ಭೂಮಿಯ ಒಡೆಯನಾಗುವುದು ಸಾಧ್ಯವಾಗುವುದಿಲ್ಲ. ಸಾಂಪ್ರದಾಯಿಕ ಮನೋಧರ್ಮ ಈ ಪಲ್ಲಟದ ಸ್ಥಿತ್ಯಂತರವನ್ನು ಗ್ರಹಿಸುವ ರೀತಿಯೇ ಕ್ಷೀಷೆಯಾದುದು. "ಸಂಕಪ್ಪಯ್ಯನ ತಾಯಿಯ ಉತ್ತರ ಒಂದೇ, ಬೇರೆಯಾರಾದರೂ ಹಾಗೆ ಮಾಡಿದ್ದಾರೆಯೇ? ಆಮೇಲೆ ಮಾಡು. ಮೊದಲಾಗಿ ನೀನು ಹೊಲೆಯರಿಗೆ ಉಪವೀತ ಕೊಡುವುದು ಬೇಡ. ನಾಳೆ ನಿನಗೆ ಅಪಕೀರ್ತಿ ಬಂದೀತು ಎಂದಳು. ಸಂಕಪ್ಪಯ್ಯನವರು ಮುಂದಿನ ಚಿತ್ರವನ್ನು ಸ್ಮರಿಸಿಕೊಂಡರು. ಚೋಮನನ್ನು ಗೇಣಿಯ ಒಕ್ಕಲಿಗನನ್ನಾಗಿ ಮಾಡುವುದರಿಂದ ತನಗೆ ಅಪಕೀರ್ತಿಯೇ ಸರಿ ಎಂದು ನಿಶ್ಚಯ ಮಾಡಿಕೊಂಡರು (ಅದೇ, ಪು.೨೩)

'ಜಾತಿ' ಭಾರತದಲ್ಲಿ ಇಂದಿಗೂ ಜೀವಂತವಾದ ಗತಿಶೀಲ ಸಂಸ್ಥೆ. ಜಾತಿ ಸಾಮಾಜಿಕವಾಗಿ ಸಂಬಂಧಿಸಿದರೆ ಜೀತ–ಭೂಮಿ ಇವೆರಡು ಅರ್ಥಿಕತೆಗೆ ಸಂಬಂಧಿಸಿದ್ದು. ಜಾತಿ ಅದರ ವ್ಯಾಪ್ತಿ ಕೇವಲ ಸಾಮಾಜಿಕತೆಗಷ್ಟೇ ಸೀಮಿತವಾಗಿಲ್ಲ. ಗ್ರಾಮಗಳಲ್ಲಿ ಜಾತಿಯ ಮೂಲಕವೇ ಸಾಮಾಜಿಕ ಆರ್ಥಿಕ ಸಾಂಸ್ಕೃತಿಕ ಸಂಬಂಧಗಳು ಬದಲಾವಣೆಗಳು ಜಾತಿಯ ಸುತ್ತ ಹೆಣೆದುಕೊಳ್ಳುತ್ತದೆ. ಗ್ರಾಮ ಸಮಾಜದಲ್ಲಿ ಭೂಮಿ ಒಂದು ಸಂಪತ್ತು ಹಾಗೂ ಪ್ರತಿಷ್ಠೆಯ ಸಂಕೇತವೂ ಆಗುತ್ತದೆ. ಭೂಮಿ ಉತ್ಪಾದನಾ ಕ್ಷೇತ್ರವಾಗುತ್ತ ನಡೆದಂತೆಲ್ಲ ಒಡೆತನ ಮತ್ತು ಆಳು ಸಂಬಂಧಗಳು ಘಟಿಸುತ್ತಾ ಹೋದವು. ದುಡಿಮೆಯ ಉತ್ಪಾದನಾ ಕ್ಷೇತ್ರವು ಸಮಾಜವನ್ನು ವಿವಿಧ ವರ್ಗಗಳಾಗಿ ವಿಭಜಿಸಿತು. ಬುದ್ಧಿವಂತ ವರ್ಗ ಕೂತಲ್ಲಿಯೇ ದುಡಿವ ವರ್ಗವನ್ನು ದುಡಿಮೆಗೆ ಹಚ್ಚಿ ತಾನು ಮಾತ್ರ ಕೂತೇ ಉಣ್ಣುತ್ತಿತ್ತು. ಈ ವರ್ಗ ತಮ್ಮ ಮಕ್ಕಳ ಕಾಲಕ್ಕೆ ಇನ್ನೂ ಮುಂದಿನ ಕಾಲಕ್ಕೆ ಆಸ್ತಿ, ಸಂಪತ್ತು ಬೇಕಾಗುತ್ತದೆಂದು ದುಡಿಯುವವರನ್ನು ಮತ್ತಷ್ಟು ದುಡಿಮೆಗೆ ಹಚ್ಚಿತು. ಇಂತಹ ವೃತ್ತಿಗಳಿಂದಲೇ ಜಾತಿ ವಿಭಾಗಗಳೂ ಆ ಕಾಲಕ್ಕೆ ನಡೆಯಿತು.

ಶ್ರಮ ಬದುಕಿನ ಧರ್ಮವಾಗುವುದಕ್ಕಿಂತ ಬೆನ್ನು ಬಾಗಿಸಿ ದುಡಿಯುವವನು ಊಳಿಗದವನಾಗಿ ಅವನನ್ನು ನಿಗ್ರಹಿಸುವವನು ಮತ್ತೆ ಪಾಳೇಗಾರನಾಗಿ ಬೆಳೆಯಲು ಸಾಧ್ಯವಾಯಿತು. ಭೂಮಿಯ ವಿಸ್ತಾರ ಹೆಚ್ಚಿದಂತೆಲ್ಲಾ ಪಾಳೇಗಾರಿಕೆಯ ಅಧಿಕಾರ ದರ್ಪಗಳೂ ವಿಸ್ತೃತಗೊಂಡವು. ಮನುಷ್ಯ ಸಮಾಜದಲ್ಲಿ ಮೂಲ ಕತ್ತಲಿನಿಂದ ಬೆಳಕಿಗೆ, ಬೆಳಕಿನಿಂದ ಕತ್ತಲಿಗೆ ಸೇತುವೆ ಕಟ್ಟುತ್ತಾ ಬಂದ 'ಬೆವರು' ನಮ್ಮ ನಡುವಿನ ಒಂದು ಚಾರಿತ್ರಿಕ ಪ್ರಕ್ರಿಯೆ. ಹಗಲು ಇರುಳೆನ್ನದೆ ನಿರಂತರ ಕ್ರಿಯಾಶೀಲತೆಯಲ್ಲಿ ಮಗ್ನವಾಗಿ ಈ ಬೆವರು ಬೆಟ್ಟ ಗುಡ್ಡಗಳೆಲ್ಲ ಬದುಕನ್ನು ಹುಡುಕಿದೆ. ನದಿಗಳನ್ನು ನೆಲಮುಖಿಯಾಗಿಸಿ ಹಸಿರು ಬೆಳೆಸುವ ಉಸಿರಾಗಿದೆ. ತನ್ನ ತೊಡಗುವಿಕೆಯ ಮೂಲಕ ಬುದ್ಧಿ ಭಾವಗಳನ್ನು ಒಳಗೊಳ್ಳುತ್ತ ಸೃಜನಶೀಲ ನೆಲೆಗಳನ್ನು ನಿರ್ಮಾಣ ಮಾಡುತ್ತ ಬಂದಿದೆ. ಒಟ್ಟಾರೆ ಇದೊಂದು ಮನುಷ್ಯ ಚರಿತ್ರೆ ಎಂದೂ ಬತ್ತದ ಅಕ್ಷಯ ಪಾತ್ರೆ ಅದೇ ಭೂಮಿ ತತ್ವ

**೫.೩ ಜಾಗತೀಕರಣ ನಂತರದ ಸಾಹಿತ್ಯಾಭಿವ್ಯಕ್ತಿ ಸಮಕಾಲೀನ ಕಾದಂಬರಿಗಳು**

ಅನವಶ್ಯಕ ನಿರ್ಬಂಧಗಳಿಂದ ಮತ್ತು ನಿಯಂತ್ರಣಗಳಿಂದ ಅರ್ಥವ್ಯವಸ್ಥೆಯನ್ನು ಮುಕ್ತಗೊಳಿಸಿದ ಪ್ರಕ್ರಿಯೆಯನ್ನು ಉದಾರೀಕರಣ ಎಂದು ಹೇಳುತ್ತಾರೆ. ಇದು ಅರ್ಥ ವ್ಯವಸ್ಥೆಯ ನಿರ್ವಹಣೆಯಲ್ಲಿ

ಕಾನೂನುಗಳು, ನಿಯಮಗಳು, ವಿಧಿ ವಿಧಾನಗಳು, ನಿಯಂತ್ರಣಗಳು ಮುಂತಾದವುಗಳನ್ನು ಸರಳಗೊಳಿಸುವ ಪದ್ಧತಿಯೂ ಹೌದು. ಈ ರೀತಿಯ ಹತೋಟಿಗಳನ್ನು ಮತ್ತು ನಿರ್ಬಂಧಗಳನ್ನು ನಿರ್ಮೂಲನ ಮಾಡುವ ಮೂಲಕ ಉದ್ಯಮಿಗಳಿಗೆ ತಾವು ಇಚ್ಛಿಸುವ ಕೈಗಾರಿಕೆಗಳನ್ನು ಸ್ಥಾಪಿಸಲು ಹಾಗೂ ತಮಗೆ ಲಾಭದಾಯಕವೆನಿಸುವ ಸರಕುಗಳನ್ನು ಉತ್ಪಾದಿಸುವ ಮುಕ್ತ ಅವಕಾಶ ಕಲ್ಪಿಸುವುದು ಈ ನೀತಿಯ ಮುಖ್ಯ ಉದ್ದೇಶ.

೧೯೯೧ ರಲ್ಲಿ ಜಾರಿಗೆ ತರಲಾದ ಹೊಸ ಆರ್ಥಿಕ ನೀತಿಯು ಕೃಷಿ ವಲಯಕ್ಕೆ ನಿರ್ದಿಷ್ಟ ವ್ಯಾಪಿಸಿಲ್ಲವಾದರೂ ಹೊಸ ಆರ್ಥಿಕ ನೀತಿಯ ಅಂಶಗಳು ಕೃಷಿಯನ್ನು ಭಾದಿಸಿಲ್ಲವೆಂದು ಹೇಳುವುದು ಅಸಾಧ್ಯ ಸಮಗ್ರ ಆರ್ಥಿಕ ನೀತಿಯಲ್ಲಿ ಕೃಷಿಯ ಉದಾರೀಕರಣಕ್ಕೆ ಸ್ಥಾನ ಕಲ್ಪಿಸಲಾಗಿದ್ದು ಕೃಷಿ ವಲಯವು ಅನೇಕ ಕಾರಣಗಳಿಂದ ಉದಾರೀಕರಣಗೊಂಡಿದೆ. ಜನತೆಗೆ ಖರೀದಿ ಮತ್ತು ಮಾರಾಟಕ್ಕೆ ಮುಕ್ತ ಅವಕಾಶವನ್ನು ನೀಡಲಾಗಿದೆ. ಕೃಷಿಕರು ತಮ್ಮ ಜಮೀನಿನಲ್ಲಿ ಯಾವುದೇ ಬೆಳೆಗಳನ್ನು ಬೆಳೆಯಲು ಸ್ವತಂತ್ರರಾಗಿರುತ್ತಾರೆ. ದೇಶದೊಳಗಡೆ ಕೃಷಿ ಉತ್ಪಾದನೆ ಮೇಲಿದ್ದ ನಿರ್ಬಂಧಗಳನ್ನು ಬಹುತೇಕವಾಗಿ ತೆಗೆದು ಹಾಕಲಾಗಿದೆ. ಕೃಷಿ ಸರಕುಗಳ ಮತ್ತು ರಫ್ತುಗಳ ಮೇಲಿನ ನಿರ್ಬಂಧವನ್ನು ಸಡಿಲಗೊಳಿಸಲಾಗಿದೆ. ಅಂತೆಯೇ ಕೃಷಿಯ ಮೇಲಿನ ನೇರ ತೆರಿಗೆಗಳನ್ನು ಬಹುತೇಕ ಕಡಿಮೆಗೊಳಿಸಲಾಗಿದೆ. ಒಟ್ಟಾರೆ ದೇಶದಲ್ಲಿ ಉಧ್ಯಮ, ಉತ್ಪಾದನೆ, ಉದ್ಯೋಗ, ಮತ್ತು ಆರ್ಥಿಕ ಸುಧಾರಣೆಗೆ ಸುವರ್ಣವಕಾಶವನ್ನು ಒದಗಿಸಿದೆ ಎನ್ನುವ ವಾದವಿದೆ.

ಜಾಗತೀಕರಣ ಮತ್ತು ಉದಾರೀಕರಣದಂತಹ ಆರ್ಥಿಕ ನೀತಿಗಳು ಕೃಷಿಯ ಮೇಲೆ ತೀವ್ರತರವಾದ ಪ್ರತಿಕೂಲ ಪರಿಣಾಮಗಳು ಬೀರುತ್ತಿರುವುದು ಒಂದೆಡೆ ಕೃಷಿ ಅವಗಣನೆಯಾಗುತ್ತಿರುವುದಕ್ಕೆ ಸಾಕ್ಷಿಯಾಗಿದೆ. ಕೃಷಿ ಬದುಕು ವೃದ್ಧಿಸಿ ಮುಕ್ತಗೊಂಡಿತು ಎಂದು ಸರಳೀಕೃತಗೊಳಿಸಲಾಗದೆ ಆರ್ಥಿಕತೆಯ ಈ ಸ್ಥಿತ್ಯಂತರವು ಸಾಮಾಜಿಕ, ಸಾಂಸ್ಕೃತಿಕ, ಸಾಹಿತ್ಯಿಕವಾದ ಸ್ಪಂದನಗಳಿಗೂ ಕಾರಣವಾಗಿದೆ.

'ಜಾಗತೀಕರಣದ ಈ ಹೊಸ ಜಗತ್ತಿನಲ್ಲಿ ಒಂದೆಡೆ ಎದ್ದು ಕಾಣುವಂತೆ ಕಾಲ ದೇಶಗಳ ವಿಸ್ತರಣೆ ನಡೆಯುತ್ತಿದೆ. ಇನ್ನೊಂದೆಡೆ ಒಳಗೊಳಗೇ ಕಾಲ ದೇಶ ಪರಿಕಲ್ಪನೆಗಳ ಅರ್ಥದ ಸಂಕೋಚನೆಯ ಕ್ರಿಯೆಯೂ ಸಂಭವಿಸತೊಡಗಿದೆ. ಇದರ ಮೊದಲ ದುಷ್ಪರಿಣಾಮವೆಂದರೆ ಆದರ್ಶ ಸಮಾಜಗಳನ್ನು ಕುರಿತು ಪರ್ಯಾಯ ದೃಷ್ಟಿಕೋನಗಳ ಮೂಲಕ ಹುಟ್ಟುವ ದರ್ಶನವೊಂದರ ವಿನಾಶ. ಕಾರಣ ಆದರ್ಶ ಸಮಾಜವೊಂದರ ಕಲ್ಪನೆಯ ಭವಿಷ್ಯದಲ್ಲಾಗಲೀ, ಭೂತಕಾಲದಲ್ಲಾಗಲೀ, ಅಸ್ತಿತ್ವದಲ್ಲಿರಬಲ್ಲಂಥದೇ ಆಗಿರಬೇಕಿಲ್ಲ. ಇದು ಕೇವಲ ಮನುಷ್ಯರ ಮನೋಲೋಕದೊಳಗೆ ನಡೆಯುವ ಸಾಧ್ಯತೆಗಳ ಹುಡುಕಾಟವಷ್ಟೇ ಆಗಿಯೂ ಅಡಗಿರಲು ಸಾಧ್ಯ. ಒಂದು ಸಮಾಜದೊಳಗೆ ಅಂತಹ ಪರ್ಯಾಯಗಳನ್ನು ಹುಡುಕುವ ಆಟವನ್ನಾಡುವ ಸಾಮರ್ಥ್ಯ ಉಳಿದಿದೆಯೆಂಬುದೇ ಈ ಪರ್ಯಾಯ ಸಾಧ್ಯತೆಯೂ ಉಳಿದಿದೆಯೆಂಬುದಕ್ಕೆ ಸಾಕ್ಷ್ಯವಾಗಬಲ್ಲುದು (ವಿನಿಯ್ ಲಾಲ್ ಮತ್ತು ಆಶಿಶ್ ನಂದಿ,೨೦೧೦;ಪುಟ; ೦೬)

ಜಾಗತೀಕರಣವೆಂಬ ವಿಶ್ವವ್ಯವಸ್ಥೆ ಅರ್ಥವ್ಯವಸ್ಥೆಗೆ ಸಂಬಂಧಪಟ್ಟುದು ಎಂದು ಯೋಚನೆಯನ್ನು ಸೀಮಿತಗೊಳಿಸುವಂತಿಲ್ಲ. ಆರ್ಥಿಕ ಕ್ಷೇತ್ರದಲ್ಲಾದ ನಡೆ ಸಾಮಾಜಿಕ ಬದುಕಿನಲ್ಲೂ ಬೇರೆ ಬೇರೆ

ಆಯಾಮಗಳಲ್ಲಿ ಬದಲಾವಣೆಯನ್ನು ತಂದಿತು. ಈ ಪ್ರಕ್ರಿಯೆಗಳ ಪ್ರತಿಫಲನ ಸೃಜನಶೀಲ ಮನಸ್ಸುಗಳನ್ನು ಪ್ರಭಾವಿಸಿದ್ದ ಪರಿಣಾಮ ಸಾಹಿತ್ಯ ಕೃತಿಗಳ ಸ್ವರೂಪ ಮತ್ತು ರಚನೆಯಲ್ಲಿಯೂ ಬದಲಾವಣೆಯನ್ನು ತಂದಿತು. ಪ್ರಯೋಗಶೀಲತೆಯ ಮನೋಧರ್ಮದೊಂದಿಗೆ ಬದಲಾಗುತ್ತಿರುವ ಸಾಮಾಜಿಕ ಸಂರಚನೆಯ ಶಿಲ್ಪಗಳು ಹೊಸ ಹೊಸ ಸವಾಲುಗಳನ್ನು ಒಡ್ಡುವಂತಿದ್ದವು ಪರಿಣಾಮ ಜಾಗತೀಕರಣದ ನಂತರದಲ್ಲಿ 'ಆಧುನಿಕ್ಕೋತ್ತರವಾದ' ಎಂಬ ಹೊಸ ಪರಿಭಾಷೆಯ ಚಿಂತನೆಗಳು ಸೃಷ್ಟಿಗೊಂಡವು. "ಪೋಸ್ಟ್ ಮೋಡರ್ನಿಸಮ್" ಆಧುನಿಕ್ಕೋತ್ತರವಾದ ಎಂಬುದು ಆಕರ್ಷಕ ಪದವಲ್ಲ. ಇದು ನಮ್ಮ ಕಾಲದ ಒಂದು ಸೂಚಕ ಪರಿಭಾಷೆ. ಆಧುನಿಕ್ಕೋತ್ತರತೆಯು ನಾವು ಬದುಕುತ್ತಿರುವ ಜಗತ್ತನ್ನು ಚಿಂತಿಸುವ ಚಿಂತನೆಗಳನ್ನು ಮಾಡುವ ಕೆಲಸಗಳನ್ನು ಆಕ್ರಮಿಸುತ್ತಿದೆ. ನಮ್ಮ ಸ್ಥಿತಿ ಸ್ವರೂಪಗಳೆರಡನ್ನು ಪರಿ ಪರಿಯಾಗಿ ಅದು ನಿಯಂತ್ರಿಸತೊಡಗಿದೆ. ಆಧುನಿಕೋತ್ತರತೆಯೆಂಬುದು ಈಗ ತುಂಬ ಹೊಸತಾಗಿರುವ ಸರ್ವವ್ಯಾಪಿ ಗುಣದ ಒಂದು ಮೋಕ್ಷ ಮಾರ್ಗವೇ ಆಗಿ ನಮ್ಮೆದುರು ನಿಂತಿದೆ. ಎಲ್ಲವೂ ಕಾಲದೇಶಾಧೀನ ಆಕಸ್ಮಿಕ. ಆಧುನಿಕ್ಕೋತ್ತರತೆಯೆಂಬುದು ಎಲ್ಲ ರೀತಿಯ ಸತ್ಯದ ಸವಾಲುಗಳನ್ನು ನಿರಾಕರಿಸುತ್ತದೆ. ಯಾವುದನ್ನು ಖಂಡಿತವೆಂದು ಭಾವಿಸುವುದಿಲ್ಲ. ಸರ್ವವ್ಯಾಪಿಯಾದ ಒಂದು ಸಾಪೇಕ್ಷತೆಯ ಕಲ್ಪನೆಯನ್ನೇ ಅದು ವಿಜೃಂಭಿಸಿ ಕಾಣಿಸುತ್ತದೆ. ಒಂದು ಕಾಲಕ್ಕೆ ಆಮೇರಿಕಾದ ಆಧುನಿಕ್ಕೋತ್ತರ ಗುರುವಾಗಿದ್ದ ರಿಚಾರ್ಡ್ ರೋರ್ಟಿ ಹೇಳುವಂತೆ ಯಾವುದೇ ವಸ್ತು ವಿಚಾರಕ್ಕೂ ನಿಖರವಾಗಿ ಹೀಗೆಂದು ಸೂಚಿಸಬಹುದಾದ ಅಥವಾ ಪ್ರತಿನಿಧಿಸಿ ತೋರಿಸಬಹುದಾದ ಸ್ವಧರ್ಮವೆಂಬುದು ಇಲ್ಲ. ಆಧುನಿಕೋತ್ತರರ ಪ್ರಕಾರ ಜ್ಞಾನವು ಉದ್ಭವಿಸುವುದು ವಿಚಾರ ಜಿಜ್ಞಾಸೆಯಿಂದಲ್ಲ, ಕಲ್ಪನಾವಿಹಾರದಿಂದ ಆದ್ದರಿಂದ ಮನುಷ್ಯ ಸ್ವಭಾವವನ್ನು ಬಿಂಬಿಸಲಿಕ್ಕೆ ತತ್ವ ಶಾಸ್ತ್ರಕ್ಕಿಂತ ಹೆಚ್ಚು ಕಾಲ್ಪನಿಕ ಪ್ರಕಾರಗಳೇ ಶಕ್ತವೆಂದೂ ಸಿದ್ಧಾಂತಕ್ಕಿಂತ ಹೆಚ್ಚಾಗಿ ಕಥನ ಕ್ರಮವೇ ಸಮರ್ಥವೆಂದೂ ಅಧುನಿಕೋತ್ತರತೆಯ ಅಭಿಮತ. ದಾರ್ಶನಿಕ ಎಡ್ವಿನ್ ವಿಟ್‌ಗೆನ್ ಸ್ಟೈನ್ ನ ವಾದದ ಪ್ರಕಾರ– ನಮ್ಮ ಬಳಿ ಇರುವುದು ಕೇವಲ ಭಾಷೆಯೊಂದೇ, ಮಾತ್ರವಲ್ಲ ಈ ಭಾಷೆಯು ತನ್ನ ಅತ್ಯುತ್ತಮ ರೂಪದಲ್ಲೂ ವಾಸ್ತವಗಳನ್ನು ಪ್ರತಿನಿಧಿಸುವುದು ಅಜಮಾಸಿನಲ್ಲಿ, ಕಲ್ಮಶಯುಕ್ತವಾಗಿ ಭಾಷೆಯು ಏನನ್ನೋ ಪ್ರತಿನಿಧಿಸುತ್ತದೆ ಎಂಬ ಯೋಚನೆಯನ್ನು ನಾವು ಕೈ ಬಿಟ್ಟು ಬಿಡಬೇಕು. ಎನ್ನುತ್ತಾನೆ ರಿಚಾರ್ಡ್ ರೋರ್ಟಿ (ಅದೇ ಪುಟ ೪೨)

"ಆಧುನಿಕ್ಕೋತ್ತರತೆಯನ್ನು ಅದರ ಏಳು ವ್ಯಾಖ್ಯಾನ ರೂಪಿ ಲಕ್ಷಣಗಳ ಮೂಲಕ ನಾವು ಗ್ರಹಿಸಬಹುದು. ಸತ್ಯದ ನಿರಾಕರಣೆ, ವಾಸ್ತವದ ನಿರಾಕರಣೆ ಕೇವಲ ಪ್ರತಿಮೆಗಳು ಮಾತ್ರವೆಂಬ ನಂಬಿಕೆ, ಅರ್ಥವಂತಿಕೆಯ ನಿರಾಕರಣೆ, ಬಹುತ್ವದ ನಂಬಿಕೆ, ಸಮಾಜ ಪ್ರಾತಿನಿಧ್ಯ ಮತ್ತು ಸಕಲ ಸಂಶಯ ಇವು ಆ ಏಳು ಧೋರಣೆಗಳು. ಈ ಎಲ್ಲ ಧೋರಣೆಗಳು, ಕೂಡಿ ಬದುಕು– ಜಗತ್ತು ಮತ್ತು ಇಡಿಯ ವಿಶ್ವದ ಒಂದು 'ಕತ್ತರಿಸಲ್ಪಟ್ಟ' ದರ್ಶನವನ್ನು ನಮ್ಮೆದುರಿಗೆ ಪ್ರಸ್ತುತಪಡಿಸುತ್ತದೆ. (ಅದೇ ಪು ೪೩) ಈ ಎಲ್ಲಾ ಅಂಶಗಳು ಒಟ್ಟು ವಸ್ತು ಸ್ಥಿತಿಯನ್ನು ಗಂಭೀರವಾಗಿ ಹೇಳಿಯೂ ಸಂಕೀರ್ಣತೆಯನ್ನು ಮನಗಾಣಿಸುತ್ತದೆ. ಪರ –ವಿರೋದಗಳ ಚರ್ಚೆಯ ನಡುವೆ ವಿಚಾರವನ್ನು ಗ್ರಹಿಸುವ ಅಂಶವೂ ಮುಖ್ಯವೆನಿಸುತ್ತದೆ. ಎಳೆ ಎಳೆಯಾಗಿ ಒಂದೊಂದು ವಿಚಾರದ ಪರವಾಗಿ ಮಾತನಾಡುವುದಕ್ಕೂ ಅದನ್ನು ತಾತ್ವಿಕತೆಯ ಅರಳಿನಲ್ಲಿ ಗ್ರಹಿಸುವುದಕ್ಕೂ ವ್ಯತ್ಯಾಸವಿದೆ.

ಇಂಥ ಸನ್ನಿವೇಶದಲ್ಲಿ ಉಳಿದಿರುವ ಸಾಂಸ್ಕೃತಿಕ ಪ್ರತಿರೋಧದ ಮಾರ್ಗ ಒಂದೇ- ಅದು, ಆಧುನಿಕ್ಕೋತ್ತರ ಮಾರ್ಗವನ್ನು ಅರಿಯುವ ಪ್ರಕ್ರಿಯೆಯಿಂದಲೇ ಆರಂಭವಾಗುತ್ತದೆ. ಕಾರಣ ತಮ್ಮ ಜೀವಂತ ಸಂಪ್ರದಾಯಗಳ ಜತೆಗೆ ತಾವೂ ಜೀವಂತ ಉಳಿಯಬೇಕೆಂದು ಬಯಸುವ ಮತ್ತು ತಮ್ಮ ಸ್ವಂತಿಕೆಯ ವಿಶಿಷ್ಟ ಚಹರೆಗಳನ್ನು ನೀತಿ ಧರ್ಮದ ಕಲ್ಪನೆಗಳನ್ನು ಕಾಪಾಡಿಕೊಂಡು ತಮ್ಮ ಅಸ್ತಿತ್ವಕ್ಕೆ ಅರ್ಥ ತಂದುಕೊಳ್ಳಬೇಕೆಂದು ಬಯಸುವ ಎಲ್ಲ ಸಂಸ್ಕೃತಿಗಳೂ ಆಧುನಿಕ್ಕೋತ್ತರತೆಯನ್ನು ಆಮೂಲಾಗ್ರವಾಗಿ ಅರ್ಥ ಮಾಡಿಕೊಳ್ಳಬೇಕು. ಜಡ ಸಂಪ್ರದಾಯಗಳ ಮಿತಿಯನ್ನು, ಉಗ್ರ ಸಂಪ್ರದಾಯ ಮಾರ್ಗಗಳ ನಿಷ್ಫಲತೆಯನ್ನು ಅರಿತು ಗುರುತಿಸಿ ಆ ರೂಪಗಳಿಗೆ ಬೀಳದಂತೆ ಎಚ್ಚರವಹಿಸಬೇಕು. ಅರ್ಥಾತ್ ಸಂಪ್ರದಾಯಗಳನ್ನು ಕ್ರಿಯಾಶೀಲವಾಗಿ ಮಾರ್ಪಡಿಸಿಕೊಳ್ಳುತ್ತಾ ಪುನರ್ರೂಪಿಸಿಕೊಳ್ಳುತ್ತ ಪ್ರಜ್ಞಾಪೂರ್ವಕವಾಗಿ ಬದುಕುವುದು ಹಾಗೂ ಆ ಮೂಲಕ ಆಧುನಿಕ್ಕೋತ್ತರ ಅರ್ಥಹೀನತೆಯನ್ನು ಗೆಲ್ಲುವುದು- ಇದು ಮಾತ್ರವೇ, ಈಗ ಪಶ್ಚಿಮೇತರ ಲೋಕದೃಷ್ಟಿಗಳ ಉಳಿವಿಗೆ ಲಭ್ಯವಿರುವ ಉಪಾಯ. ಇದು ಕಷ್ಟದ ಸಂಕೀರ್ಣ ಯೋಜನೆ ನಿಜ, ಆದರೆ ಬಹುಕಾಲ ಉಳಿಯಬಲ್ಲ ಭವಿಷ್ಯವೊಂದನ್ನು ರೂಪಿಸಿಕೊಳ್ಳಲು ಅನುವು ಮಾಡಿಕೊಡಲು ಸಾಧ್ಯವಾಗುತ್ತದೆ.

ಎಲ್ಲ ಸಂಸ್ಕೃತಿಗಳು ಮತ್ತು ಸಂಪ್ರದಾಯಗಳ ಹೃದಯದಲ್ಲಿ ಒಂದು ಲೋಕದೃಷ್ಟಿ ಅಂದರೆ ವಿಶಿಷ್ಟವಾದ ಒಂದು ನೀತಿ-ಧರ್ಮದ ಪರಿಕಲ್ಪನೆ ಇರುತ್ತದೆ. ಸಾಂಪ್ರದಾಯಿಕ ಸಂಸ್ಕೃತಿಗಳು ತಮ್ಮ ವಿಭಿನ್ನ ರೂಪಗಳ ಮೂಲಕ ಇಂಥ ನೈತಿಕ ದರ್ಶನವೊಂದನ್ನು ಅಭಿವ್ಯಕ್ತಿಸುವ ಮತ್ತು ಸಂವಹಿಸುವ ಕೆಲಸ ಮಾಡುತ್ತಿರುತ್ತದೆ. ಜತೆಗೆ ನಿರ್ದಿಷ್ಟ ಐತಿಹಾಸಿಕ ಸಂದರ್ಭದಲ್ಲಿ ನಿಂತಿರುವ ಒಂದು ಜನವರ್ಗಕ್ಕೆ ಈ ಸಂಪ್ರದಾಯದ ಸಮಕಾಲೀನ ಮಹತ್ವ ಏನು ಎಂಬುದನ್ನು ಈ ಸಂಸ್ಕೃತಿಗಳು ಹುಡುಕಿ ತೋರಿಸುತ್ತ ಇರುತ್ತದೆ. ಆದ್ದರಿಂದ ಈ ಸಂಪ್ರದಾಯಗಳು ಜೀವಂತವಾಗಿ ಉಳಿಯಬೇಕು ಎಂದಾದರೆ ಅವು ಸಮಕಾಲೀನ ಪ್ರಶ್ನೆಗಳನ್ನು, ಸಮಸ್ಯೆಗಳನ್ನು, ಆಯ್ಕೆಗಳನ್ನು, ನಿರ್ಧಾರಗಳನ್ನು, ಚರ್ಚಿಸುವ ಜೀವಂತ ಮಾಧ್ಯಮವಾಗಿ ಉಳಿದುಕೊಳ್ಳುವುದು ಅಗತ್ಯ

ಸಂಸ್ಕೃತಿ ಎಂಬುದು ನಮ್ಮ ಕೆಲಸಕಾರ್ಯಗಳೆಲ್ಲ ಮುಗಿದ ಮೇಲೆ ಕೈಗೆತ್ತಿಕೊಳ್ಳುವ ಅಥವಾ ಹಬ್ಬ ಹರಿದಿನಗಳಲ್ಲಿ ಮಾತ್ರ ಆಚರಿಸುವ ಹೆಚ್ಚುವರಿ ಹವ್ಯಾಸವಲ್ಲ. ಸಂಸ್ಕೃತಿ ಎಂಬುದು ಅಷ್ಟೇ ಆಗಿಬಿಟ್ಟರೆ, ಆಗ ಅದು ಗತಕಾಲದ ಒಂದು ಲೋಕದೃಷ್ಟಿಯ ಪಳೆಯುಳಿಕೆ ಮಾತ್ರ. ಆಗ ಅದು ನಾವಿರುವ ಜಗತ್ತಿನ ಜತೆಗೆ ಯಾವ ರೀತಿಯ ಸಂವಾದವನ್ನು ನಡೆಸುವುದಿಲ್ಲ ಅಷ್ಟೇ. ಈ ದೃಷ್ಟಿಯಿಂದ ಐರೋಪ್ಯ ಸಂಸ್ಕೃತಿಗಳು ಇವತ್ತು ಆಧುನಿಕ್ಕೋತ್ತರವಾದವನ್ನು ಮತ್ತು ಅದು ಆಕರ್ಷಿಸಿ ಸೆಳೆಯುವ ಅವಲಂಬನೆ ಮತ್ತು ವಿನಾಶದ ಮೋಹಕ ಹಾದಿಯನ್ನು ತಿರಸ್ಕರಿಸಿ ಪ್ರತಿರೋಧಿಸಬೇಕು ಎಂದಾದರೆ ಆಗ ಪಶ್ಚಿಮೇತರ ಜಗತ್ತಿನ ಯಾವುದೋ ಒಂದು ಲೋಕದೃಷ್ಟಿ ಮಾತ್ರವೇ ಮರುಹುಟ್ಟು ಪಡೆದರೆ ಸಾಕಾಗುವುದಿಲ್ಲ. ಅಂಥ ಅಸಂಖ್ಯಾತ ಲೋಕದೃಷ್ಟಿಗಳ ಒಂದು ಹೆಣಿಗೆಯ ಜಾಲವೇ ಪುನರುತ್ಥಾನಗೊಳ್ಳಬೇಕಾಗುತ್ತದೆ.

ನೀತಿ ಧರ್ಮದ ಜಿಜ್ಞಾಸೆ ಯಾವತ್ತು ಸುಲಭವಾದುವಲ್ಲ. ಮತ್ತು ನಮ್ಮ ಮಾನವೀಯತೆಗೂ ಭೌದ್ಧಿಕತೆಗೂ ಅತ್ಯಂತ ದೊಡ್ಡ ಸವಾಲುಗಳು ಆದ್ದರಿಂದ ಪಶ್ಚಿಮೇತರ ಲೋಕದೃಷ್ಟಿಗಳ ನೀತಿ ಧರ್ಮದ

ಕಲ್ಪನೆಗಳನ್ನು ಮರಳಿ ಕೇಂದ್ರಕ್ಕೆ ತರುವುದು ಎಂದರೆಮತ್ತು ಹಳೆಯ ವ್ಯಾಖ್ಯಾನಗಳನ್ನೆಲ್ಲ ನಿರಾಕರಿಸಬೇಕೆಂದಾಗಲೀ ಅಥವಾ ಪಶ್ಚಿಮದಿಂದ ಬಂದ ಎಲ್ಲವನ್ನು ಕೈ ಬಿಟ್ಟು ಬಿಡಬೇಕೆಂದಾಗಲೀ ಅರ್ಥವಲ್ಲ ಬದಲು ಈ ಎರಡೂ ಮಾರ್ಗದ ಮಿತಿಗಳನ್ನು ಮೀರಿದ ಆಯ್ಕೆಯ ಪ್ರಕ್ರಿಯೆಯೊಂದು ಇಲ್ಲಿ ನಡೆಯಬೇಕಾಗುತ್ತದೆ. ಮತ್ತು ಅಂಥ ಆಯ್ಕೆಯಲ್ಲಿ ಪಾಲ್ಗೊಳ್ಳುವ ಮೂಲಕ ಪಶ್ಚಿಮೇತರ ಸಂಸ್ಕೃತಿಗಳು ತಮ್ಮ ತಮ್ಮ ವರ್ತಮಾನದ ಜವಾಬ್ದಾರಿಗಳನ್ನು ಹೊತ್ತುಕೊಂಡಂತೆಯೂ ಆಗುತ್ತದೆ. ಜತೆಗೆ ತಾವು ನಂಬುವ ಮೌಲ್ಯಯುತ ಭವಿಷ್ಯವನ್ನು ನಿರ್ಮಿಸುವ ದಿಕ್ಕಿನಲ್ಲಿ ಹೆಜ್ಜೆ ಇರಿಸಿದಂತೆಯೂ ಆಗುತ್ತದೆ. ಈ ಚಿಂತನೆಯ ಹಿನ್ನೆಲೆಯಲ್ಲಿ ರಚನೆಗೊಂಡ ಕೃತಿಗಳು ತಮ್ಮ ಪೂರ್ವ ಸೂರಿಗಳೊಂದಿಗೆ ಮುಖಾಮುಖಿಗೊಳ್ಳುತ್ತಲೇ ಸಂಕಥನಗಳನ್ನು ಮರು ನಿರೂಪಿಸಲು ಸಾಧ್ಯವಾಗಿದೆ. ಜಾಗತೀಕರಣದ ಪ್ರಭಾವದಿಂದ ಸೃಷ್ಟಿಯಾದ ಈ ನವವಸಾಹತುಶಾಹಿಯ ಚಿಂತನೆಯು ತಮ್ಮ ನೆಲ, ಜಲ, ಪರಂಪರೆ, ಪರಿಸರ, ಸಮುದಾಯ ಜ್ಞಾನದ ಪ್ರಧಾನ ಧಾರೆಗಳನ್ನು ಮತ್ತೆ ನಿರ್ವಚಿಸಿಕೊಳ್ಳುವ ಅರ್ಥ ಸಾಧ್ಯತೆಗಳನ್ನು ನೀಡಿತು.

ಕರ್ನಾಟಕದ ಕರಾವಳಿಯೂ ಈ ಪರಂಪರೆಗೆ ಭಿನ್ನವಾಗಿ ಉಳಿಯಲಿಲ್ಲ. ತಾವು ಬದುಕಿ ಬಾಳಿದ ಹಳ್ಳಿ ಗ್ರಾಮಗಳನ್ನು ಬಿಟ್ಟು ತೆರಳಿದವರಿಗೆ ಅಲ್ಲಿಯೇ ಇದ್ದು, ಸೂಕ್ಷ್ಮಜ್ಞರಾಗಿ ತಮ್ಮ ಚಿಂತನೆಯನ್ನು ದಾಖಲುಗೊಳಿಸುವುದರೊಂದಿಗೆ ಸೃಜನಶೀಲ ಮನಸ್ಸುಗಳೂ ಅದನ್ನು ದಾಖಲಿಸುತ್ತ ಹೋದವು. ಸಮುದಾಯಗಳು ಅಕ್ಷರ ಲೋಕಕ್ಕೆ ತಮ್ಮನ್ನು ತಾವು ತೆರೆದುಕೊಂಡು ಜೀವನಾನುಭವಗಳನ್ನು ದಾಖಲುಗೊಳಿಸಿದ್ದು, ಒಂದು ನೆಲೆಯಾದರೆ, ಮತ್ತೊಂದು ಪರಿಭಾಷೆಯಲ್ಲಿ ತಿಳುವಳಿಕೆಯ ನೆಲೆಯನ್ನು ವಿಸ್ತರಿಸುವ ಪ್ರಯತ್ನಗಳೂ ನಡೆದವು. ಲಿಂಗ ಸೂಕ್ಷ್ಮತೆಯ ಮತ್ತು ವರ್ಗ ಸಮಾನತೆಯ ಆಶಯಗಳನ್ನು ಹೊಂದಿ ಬರಹಗಳು ರಚನೆಯಾದುದು ವಿಶೇಷ ಕೃತಿಗಳು ಗಾತ್ರದಲ್ಲಿ ಬೃಹತ್ ಮತ್ತು ಮಹತ್ ಆಗುವುದಕ್ಕಿಂತ ಹೆಚ್ಚಾಗಿ ಪರಂಪರೆಯ ಕುರಿತಾದ ಒಲವುಗಳು ಹೆಚ್ಚುತ್ತಾ ಹೋದವು.

ಜಾಗತೀಕರಣ ಪೂರ್ವದ ಕಾದಂಬರಿಗಳಲ್ಲಿ ಮುಖ್ಯವಾಗಿ ಕಾರಂತರ ಆಯ್ದ ಕಾದಂಬರಿಗಳ ಮೂಲಕ ಕೃಷಿ ಸಂಸ್ಕೃತಿ ಪಲ್ಲಟದ ಚಾರಿತ್ರಿಕ ಆಯಾಮವನ್ನು ಗುರುತಿಸಿ ಈಗಾಗಲೇ ಚರ್ಚಿಸಲಾಗಿದೆ.ಕರಾವಳಿಯಲ್ಲಿ ಇಂದಿಗೂ ಚಾಲ್ತಿಯಲ್ಲಿರುವ ಆದಿಮ ಕೃಷಿಯ ವಿನ್ಯಾಸಗಳನ್ನು ನಿರೂಪಿಸುವ ಕುಮೆರಿ ಕೃಷಿಯನ್ನೇ ವಸ್ತುವಾಗಿರಿಸಿ ಕಾರಂತರು 'ಕುಡಿಯರ ಕೂಸು' ವಿನಂತಹ ಕಾದಂಬರಿಯನ್ನು ರಚಿಸಿದ್ದಾರೆ. ಆ ನಂತರದಲ್ಲಿ ಆದ ಬದಲಾವಣೆಗಳನ್ನು ಕಾರಂತರ ಕಾದಂಬರಿಗಳ ಮೂಲಕವೇ ಗುರುತಿಸಲು ಸಾಧ್ಯವಾಗಿದೆ. ಜಾಗತೀಕರಣದ ನಂತರದಲ್ಲಿ ರಚನೆಗೊಂಡ ಸಾಹಿತ್ಯ ಕೃತಿಗಳು ತಮ್ಮ ದೇಸೀ ಪರಂಪರೆಯ ಆಶಯಗಳನ್ನು ನೆಲಮೂಲದ ತಾತ್ವಿಕತೆಯೊಂದಿಗೆ ಸಮೀಕರಿಸಿದೆ. ಜಾಗತೀಕರಣ ಹುಟ್ಟು ಹಾಕಿದ ಈ ಎಚ್ಚರ ನೆಲದ ನಿಜಗಳನ್ನು ಪಿಸುಮಾತುಗಳಾಗಿ ಸಶಕ್ತವಾಗಿ ನುಡಿಯಲು ಕಾರಣವಾಗಿದೆ. ಬಹಳಷ್ಟು ಸಂಖ್ಯೆಯ ಕಾದಂಬರಿಗಳನ್ನು ಬರೆದವರಲ್ಲದೆ ಮಹತ್ವದ ಕೃತಿಗಳನ್ನು ರಚಿಸಿದ ಲೇಖಕರ ಬರಹಗಳನ್ನು ಇಲ್ಲಿ ಗಮನಿಸಲಾಗಿದೆ. ಬಹಳ ಮುಖ್ಯವಾಗಿ ಬೋಳಚಿತ್ತರಂಜನ್ ಶೆಟ್ಟಿಯವರ 'ಅಳಿದುಳಿದವರು' ನಾ.ಮೊಗಸಾಲೆಯವರ 'ಉಲ್ಲಂಘನೆ' ವಿಶುಕುಮಾರ್ ರವರ 'ಭೂಮಿ', ಎಚ್

ನಾಗವೇಣಿಯವರ 'ಗಾಂಧಿಬಂದ' ಪ್ರಮುಖ ಕೃತಿಗಳು. ಸಾಂದರ್ಭಿಕವಾಗಿ ಈ ಕೃತಿಗಳಲ್ಲಿ ನಿರೂಪಣೆಗೊಂಡ ಪಲ್ಲಟದ ಮೌಲ್ಯಗಳನ್ನು ಮುಂದಿನ ಅಧ್ಯಾಯದಲ್ಲಿ ಪರಿಕಲ್ಪನಾತ್ಮಕವಾಗಿ ಚರ್ಚಿಸಲಾಗಿದೆ. ಕಾಲ ಕಾಲದ ಕೃಷಿ ಪಲ್ಲಟವನ್ನು ಸಾಹಿತ್ಯಿಕ ಅಭಿವ್ಯಕ್ತಿಯ ಸೂಚನೆಯಾಗಿ ಓದಿನ ಮಿತಿಯೊಳಗೆ ಮರು ನಿರೂಪಣೆಗೊಳ್ಳುತ್ತದೆ. ಮುಂದಿನ ಅಧ್ಯಾಯಗಳು ಪರಿಕಲ್ಪನಾತ್ಮಕ ಚರ್ಚೆಯನ್ನು ನಡೆಸುವುದರೊಂದಿಗೆ ಸಾಹಿತ್ಯಿಕ ಅಭಿವ್ಯಕ್ತಿಯ ಪರಿಭಾಷೆಗಳನ್ನು ಗ್ರಹಿಸಲು ಸಾಧ್ಯವಾಗಿದೆ. ವೃತ್ತಿ, ಕುಟುಂಬ, ಸಾಮಾಜಿಕ ವ್ಯವಸ್ಥೆ ಸಾಮಾಜಿಕ-ಆರ್ಥಿಕ ಆಡಳಿತಾತ್ಮಕ ಕಾರಣಗಳೊಂದಿಗೆ ಆಧುನಿಕತೆಯು ಹೇಗೆ ಸ್ಥಿತ್ಯಂತರವನ್ನು ಹುಟ್ಟು ಹಾಕಿತು ಎನ್ನುವುದನ್ನು ಅಭ್ಯಸಿಸಲು ಸಾಧ್ಯವಾಗಿದೆ.

ಕನ್ನಡದ ಕಾದಂಬರಿಗಳಲ್ಲದೆ ತುಳುವಿನ ಸಾಹಿತ್ಯವನ್ನು ಈ ಪರಿಕಲ್ಪನಾತ್ಮಕ ನೆಲೆಯಲ್ಲಿ ಮರು ನಿರೂಪಣೆಗೊಳಿಸಿಕೊಂಡು ಹೊಸ ಅರ್ಥ ಸಾಧ್ಯತೆಗಳತ್ತ ವಿಸ್ತರಿಸಿಕೊಳ್ಳಲಾಗಿದೆ. ಕರಾವಳಿಯಲ್ಲಿ ಪ್ರಕಟಗೊಂಡ ಎಲ್ಲ ಕಾದಂಬರಿಗಳಿಗಿಂತ ಆಯ್ದ ಕೃತಿಗಳನ್ನು ಮಾತ್ರ ಆರಿಸಿಕೊಳ್ಳಲಾಗಿದೆ. ತಲೆಮಾರುಗಳ ಕತೆಯನ್ನು, ಕರಾವಳಿಯ ನೂರು ವರ್ಷದ ಚರಿತ್ರೆಯ ಏಳು ಬೀಳುಗಳ ಜತೆ 'ಕಾಲ' ದ ಚಲನೆಗೆ ಕಾದಂಬರಿಗಳು ಒತ್ತು ನೀಡಿವೆ. ಭೌಗೋಳಿಕ ಪ್ರದೇಶದ ಪ್ರತಿಸ್ಪಂದನದೊಂದಿಗೆ ಸಣ್ಣ ಸಣ್ಣ ಎಳೆಗಳ ಮೂಲಕ ಅವೆಲ್ಲವನ್ನು ಗ್ರಹಿಸಿದ ರೀತಿಯೂ ಅನನ್ಯವಾದುದು. ವ್ಯಕ್ತಿಯ ಮತ್ತು ಸಮುದಾಯದ ನಡೆಗಳೊಂದಿಗೆ ಬದಲಾವಣೆಯ ಗಾಳಿಗೆ ಸ್ಪಂದಿಸಿದ ಮನೋಧರ್ಮವೂ ಮುಖ್ಯವಾದುದು. ಅಲ್ಲಿರುವ ಎಚ್ಚರ ಮತ್ತು ಸ್ಥಿತ್ಯಂತರಗಳ ದಾಖಲಾತಿಯೊಂದಿಗೆ ಮುಂದಿನ ಕಾಲದ ಗ್ರಹಿಕೆಯ ಬಗೆಗಿನ ಪ್ರಜ್ಞಾಪೂರ್ವಕ ನೆಲೆಯ ಮೌಲ್ಯಗಳೂ ಮುಖ್ಯವೆನಿಸುತ್ತದೆ. ಅವೆಲ್ಲವನ್ನು ಪರಾಮರ್ಶಿಸುವ ಸೃಜನಶೀಲ ಮನಸ್ಸು ಜನರ ಲೋಕದೃಷ್ಟಿಯೊಂದಿಗೆ ಲೋಕ ಸತ್ಯಗಳನ್ನು ನುಡಿಯುತ್ತಿವೆ.

ಅಧ್ಯಾಯ ೬

# ಕೃಷಿ ಸಂಸ್ಕೃತಿ ಪಲ್ಲಟದ ಸಾಹಿತ್ಯಾಭಿವ್ಯಕ್ತಿ – ಪರಿಕಲ್ಪನಾತ್ಮಕ ನೆಲೆಗಳು

ವರ್ತಮಾನದ ಸಾಹಿತ್ಯಿಕ ನೆಲೆಯ ಸಂವಾದ ಚಿಂತನಾ ಪರತೆಗಳು ನಮ್ಮ ಮುಂದೆ ನೂರಾರು ಪ್ರಶ್ನೆಗಳನ್ನು ಎತ್ತುತ್ತದೆ. 'ಕೃಷಿ ಸಂಸ್ಕೃತಿ ಪಲ್ಲಟ' ಸತ್ವ ಆ ಸಂಸ್ಕೃತಿಯ ಆವರಣದಲ್ಲಿ ಹಲವು ಅರ್ಥ ಸಾಧ್ಯತೆಗಳಿಂದ ವಿಸ್ತರಿಸುತ್ತದೆ. ಕೃಷಿಯ ಅನ್ವಯಿಕತೆ ಮತ್ತು ಅದು ಒಳಗೊಳ್ಳಬೇಕಾದ ವಿಷಯಗಳನ್ನು ಗ್ರಹಿಸಿದರೆ ಪರಿಕಲ್ಪನಾತ್ಮಕ ನೆಲೆಯ ಪರಿಭಾಷೆಗಳಲ್ಲಿ ಪಲ್ಲಟದ ಸ್ವರೂಪಗಳನ್ನು ಗ್ರಹಿಸುವುದು ಅಧ್ಯಯನದ ಅನುಕೂಲತೆಗೆ ಅವಶ್ಯಕವಾದುದು. ಕೃಷಿ ಸಂಸ್ಕೃತಿಯ ಒಳಗೆಯೇ ಪಲ್ಲಟದ ಸ್ವರೂಪಗಳಿವೆಯೇ ಅಥವಾ ವಿಸ್ತರಣೆಗೊಳ್ಳುತ್ತ ಹೋದಂತೆ ಕೃಷಿ ಬದಲಾಗುತ್ತ ಹೋಯಿತೇ ಎಂಬ ಪ್ರಶ್ನೆ ದ್ವಂದ್ವಾತ್ಮಕವಾದುದು.

ಪಾರಂಪರಿಕವಾದ ಜಗತ್ತಿನಲ್ಲಿ ಸಾಂಪ್ರದಾಯಿಕವಾದ ಕೃಷಿ ಅನ್ವೇಷಣೆಗೊಳ್ಳುವ ಹಂತ ಬೇಟೆಯ ಹಂತದಿಂದ ಕೃಷಿಯ ಹಂತಕ್ಕೆ ಬಂದುದು ನಾಗರಿಕತೆಯು ಎಂದು ಬಹಳ ಸೂಕ್ಷ್ಮವಾಗಿ ವಿಶ್ಲೇಷಿಸಲಾಗುತ್ತದೆ. ಈ ಬದಲಾವಣೆಯ ಹಂತವು ಒಂದಾದ ಮೇಲೆ ಒಂದರಂತೆ ಇಲ್ಲಿ ಒಮ್ಮೆಲೆ ಸಂಭವಿಸುವುದು ಅಲ್ಲ. ಚರಿತ್ರೆಯ, ಸಮಾಜಶಾಸ್ತ್ರದ ಅಂಶಗಳ ಹಿನ್ನೆಲೆಯಲ್ಲಿ ಕೃಷಿಗೆ ಪೂರಕವಾದ ಆಯಗಾರಿಕೆಯ ವೃತ್ತಿಗಳು ಹುಟ್ಟಿಕೊಂಡವು. ಆಯಗಾರಿಕೆಯ ಕಸುಬು, ಕೌಶಲ್ಯ, ಸ್ಥೈರ್ಯ, ಜನರಲ್ಲಿ ಆತ್ಮವಿಶ್ವಾಸದಿಂದ ಬದುಕಲು ಸಾಧ್ಯವಾಯಿತು. ಕಸುಬುಗಳ ಹುಟ್ಟಿನ ಮೂಲಕ 'ಕುಲ' ವನ್ನು ವಿಶ್ಲೇಷಿಸುವ, ಅರ್ಥೈಸುವ ಪ್ರಯತ್ನಗಳೂ ನಡೆದವು. ಮುಖ್ಯವಾಗಿ ಕೃಷಿ ಕೆಲಸವನ್ನು ನಡೆಸಬೇಕಾದರೆ ಬೇಕಾದ ಸಲಕರಣೆಗಳ ರಚನೆಯಿಂದ ತಾವು ರಚಿಸಿದ ಉತ್ಪಾದಕ ವಸ್ತುವಿಗೆ ಪ್ರತಿಯಾಗಿ ಧಾನ್ಯಗಳನ್ನು ಪಡೆದರು. ಉತ್ಪಾದಕ ಸಮುದಾಯದೊಂದಿಗೆ ಉತ್ಪಾದನೆ ಮತ್ತು ಮಾರುಕಟ್ಟೆಯ ಸೌಲಭ್ಯಗಳನ್ನು ಪಡೆದುಕೊಳ್ಳುವ ನೆಲೆಯ ಚೇತರಿಕೆಯ ಕಾರ್ಯ ಚಟುವಟಿಕೆಗಳು ನಡೆದವು. ಕಮ್ಮಾರ, ಬಡಗಿ, ಕುಂಬಾರ, ನೇಕಾರ, ದಲಿತ ಕೂಲಿ ಕಾರ್ಮಿಕ ವರ್ಗವೊಂದು ಇತ್ತು. ಮರದ, ಕಬ್ಬಿಣದ ವಸ್ತುಗಳನ್ನು ಕಮ್ಮಾರರು, ಬಡಗಿಗಳು ರಚಿಸುತ್ತಿದ್ದರು. ಬುಡಕಟ್ಟು ಸಮುದಾಯದವರು ಕಾಡು ಉತ್ಪತ್ತಿಗಳಿಂದ ಕಾಡಿನ ಬಳ್ಳಿ ಬಿಳಲು ಬೆತ್ತಗಳನ್ನು ಬಳಸಿಕೊಂಡು ಗೆರಸೆ, ಬುಟ್ಟಿ, ಹೆಡಗೆಗಳನ್ನು ನಿರ್ಮಿಸುವುದು ಇವಲ್ಲದೆ ಮನೆ ವಾರ್ತೆಗೆ ಬೇಕಾದ ಕೆಲವು ವಸ್ತುಗಳನ್ನು ನಿರ್ಮಿಸುವುದು ಅವಶ್ಯವಾಗಿತ್ತು. ಕಮ್ಮಾರರು ಕುಡುಗೋಲು, ಕೊಡಲಿ ಪರ್ಕತ್ತಿಗಳನ್ನು, ಹಾರೆ, ಪಿಕಾಸು, ಪನೋರು ಇವುಗಳನ್ನು ಕೃಷಿ ಕಾರ್ಯವನ್ನು ಸುಲಭಗೊಳಿಸಲು ಬಳಸುವುದೂ ಮುಖ್ಯವಾಗಿತ್ತು. ಬಡಗಿಗಳು ನುಗ, ನೇಗಿಲು, ಹಲಗೆ ಪುಡಕೈಗಳ ರಚನೆ, ಬಳಕೆಗೆ ಉಪಯೋಗಿಸುತ್ತಿದ್ದರು. ದಿನ ಬಳಕೆಗೆ ಬೇಕಾದ ಮಣ್ಣಿನ ಪಾತ್ರೆಗಳನ್ನು ಬಳಸುತ್ತಿದ್ದರು. ಕುಂಬಾರರು ಧಾನ್ಯ ಸಂಗ್ರಹಣೆಗಾಗಿ ದೊಡ್ಡ ದೊಡ್ಡ ಗಾತ್ರದ ಮಣ್ಣಿನ ಪಾತ್ರೆಗಳನ್ನು ನಿರ್ಮಿಸುತ್ತಿದ್ದರು. ಈ ಮೂಲಕ ಎಲ್ಲವೂ ಕೃಷಿಗೆ ಪ್ರಯೋಜನವಾಗಿ ಬಳಸಲಾಗುತ್ತಿತ್ತು.

ವಸಹಾತುಶಾಹಿ ಆಡಳಿತದ ಪ್ರಭಾವ ಮತ್ತು ವಸಾಹತೀಕರಣದ ಮುನ್ನೆಡೆಯ ಪರಿಣಾಮ ಕೃಷಿ ಜಗತ್ತಿನಲ್ಲಿ ಆದ ಬದಲಾವಣೆ ವೈಯಕ್ತಿಕವಾಗಿ ಕುಟುಂಬ ಬಂದ ಸ್ಥಿತಿಯನ್ನು ಉಲ್ಲೇಖಿಸುತ್ತದೆ.

"ಆಹಾರ ಸಂಗ್ರಹಣೆಯಿಂದ ಆಹಾರ ಉತ್ಪಾದನೆಗೆ ಸಾಗಿದ ಪ್ರಕ್ರಿಯೆ ಕ್ರಿ.ಪೂ ೩೦೦ ರ ವೇಳೆಗೆ ಗಂಗಾ ಯಮುನಾ ಬಯಲುಗಳಲ್ಲಿ ಒಂದು ಹದಕ್ಕೆ ಬಂದಿತ್ತು. ಆಹಾರವನ್ನು ಉತ್ಪಾದಿಸುವ ಕೃಷಿಕ ವರ್ಗ ಸಮಾಜದಲ್ಲಿ ರಾನಿಕ ವ್ಯವಸ್ಥೆ ನೆಲೆಯಾಯಿತು. ಅಷ್ಟೇ ಅಲ್ಲದೆ ಈಗ ಯಜುರ್ವೇದ ಕಾಲದಲ್ಲಿದ್ದಂತೆ

ಮಳೆಗಾಲದಲ್ಲಿ ಬೇಸಾಯ ಮಾಡುವುದು ಇಲ್ಲವೇ ಸಂಚಾರ ಹೊರಡುವುದು ಎಂಬ ಜೀವನ ವಿಧಾನ ಹೊರಟು ಹೋಗಿ ಸ್ಥಿರವಾಗಿ ಬೇಸಾಯದಲ್ಲಿ ತೊಡಗುವುದು ಆರಂಭವಾಯಿತು. (ಶ್ರೀಮತಿ ಎಚ್. ಎಸ್ (ಅನು) ೧೯೯೮-ಪುಟ ೧೫೧) "ಸಮುದಾಯಗಳು ಇಷ್ಟೊಂದು ಸಂಖ್ಯೆಯಲ್ಲಿದ್ದವೆಂಬುದಷ್ಟೇ ಅಲ್ಲದೆ ಕೃಷಿಯು ರೂಢಿಗೆ ಬಂದಿದ್ದ ಪ್ರಾಂತಗಳಲ್ಲೂ ಸ್ಥಿರ ಕೃಷಿ ಎಂಬುದು ಇರಲೇ ಇಲ್ಲ. ಕೃಷಿಕರ ವ್ಯವಸಾಯೇತರ ಅಗತ್ಯಗಳನ್ನು ಪಟ್ಟಣ ಪ್ರದೇಶಗಳ ವೃತ್ತಿ ಶ್ರೇಣಿಗಳೂ ವರ್ತಕ ಶ್ರೇಣಿಗಳೂ ಕೂಡಿ ಪೂರೈಸುತ್ತಿದ್ದವು. ಮೌರ್ಯರ ಕಾಲಕ್ಕೆ ನಮ್ಮ ದೇಶಕ್ಕೆ, ಬಂದ ಮೆಗಸ್ತನೀಸ್ ಏಳು ವರ್ಗಗಳನ್ನು ಗುರುತಿಸಿದನು. ಅವುಗಳೂ ಗ್ರಾಮೀಣ ಕೃಷಿಕರ ವರ್ಗ ಒಂದಾದರೆ, ವೃತ್ತಿ ಪರರನ್ನು ವ್ಯಾಪಾರಸ್ತರು ಒಟ್ಟಾಗಿ ಪಟ್ಟಣ ಪ್ರಾಂತದ ಒಂದು ವರ್ಗವೆಂದು ಗುರುತಿಸುತ್ತಾನೆ" (ಅದೇ ೧೫೩)

"ಯಜ್ಞಗಳ ಕರ್ಮಕಾಂಡ" ಗಳನ್ನು ನಿರ್ವಹಿಸುವವರು ಬ್ರಾಹ್ಮಣರು. ವೈಶ್ಯರು ವ್ಯವಸಾಯವನ್ನು ವ್ಯಾಪಾರವನ್ನು ನಿರ್ವಹಿಸುವವರು. ಬಲಿಗಳ ರೂಪದಲ್ಲಿ ಹೆಚ್ಚುವರಿ ಉತ್ಪತ್ತಿಯನ್ನು ಎರಡೂ ಅಗ್ರ ವರ್ಣಗಳಿಗೆ ವೈಶ್ಯರು ಸಲ್ಲಿಸುತ್ತಾರೆ. ಶೂದ್ರರು ಆಯುಧಗಳನ್ನು ಹೊಂದಿರುವ ಹಕ್ಕನ್ನಾಗಲೀ ಭೂಮಿಯನ್ನು ಹೊಂದಿರುವ ಹಕ್ಕನ್ನಾಗಲೀ ಪಡೆಯಲು ಸಾಧ್ಯವಿಲ್ಲ. ಬದಲಿಗೆ ಅವರು ಈ ಮೇಲಿನ ಮೂರು ವರ್ಣಗಳವರೆಗೆ ಸಮಷ್ಠಿಯಾಗಿಯೇ ಸೇವೆಗೈಯಬೇಕಾಗಿತ್ತು. ಆ ಕಾಲದ ಕೃಷಿಕ ಸಮಾಜಕ್ಕೆ ಈ ವ್ಯವಸ್ಥೆ ಹೊಂದಿಕೆಯಾಗಿತ್ತು. (ಅದೇ, ಪು ೧೭೧)

"ಮೊದಲ ದಿನಗಳ ವ್ಯವಸಾಯಿಕ ಸಮಾಜವು ಈ ಹೊತ್ತಿಗೆ ಸಾಕಷ್ಟು ಪರಿಪಕ್ವಗೊಂಡು ಈ ಹೊತ್ತಿಗೆ ಅಸಂಖ್ಯ ಬಗೆಯ ವಸ್ತುಗಳನ್ನು ಉತ್ಪತ್ತಿ ಮಾಡತೊಡಗಿತ್ತು. ಈ ಉತ್ಪತ್ತಿಕಾರರೆಲ್ಲರನ್ನು ಸಾರಾ ಸಗಟಾಗಿ, ಶೂದ್ರರು ಎಂಬ ನಾಲ್ಕನೆಯ ವರ್ಣವೊಂದರಲ್ಲಿ ಸೇರಿಸಿ ಹೇಳುವುದು ಸೈದ್ಧಾಂತಿಕವಾಗಿ ಸಾಧ್ಯವಾಗಬಹದು. ಆದರೆ ಚಾರಿತ್ರಿಕ ಕ್ರಮದಲ್ಲಿ ಇವರೆಲ್ಲರೂ ಒಂದೇ ಬಾರಿಗೆ ಸ್ವಯಂ ಪೋಷಕ ಗ್ರಾಮಗಳೊಳಗೆ ಸೇರಲಿಲ್ಲವಾದ್ದರಿಂದ ಹೀಗೆ ಮಾಡುವುದು ಸರಿಯಾಗುವುದಿಲ್ಲ. ವೃತ್ತಿ ಶ್ರೇಣಿಗಳು ಒಂದೊಂದೇ ನಶಿಸುತ್ತಾ ಶ್ರಮಿಕರು ಗ್ರಾಮಗಳಲ್ಲಿ ನೆಲೆ ನಿಂತರು. ಒಂದೊಂದು ಒಂದೊಂದು ಜಾತಿಯಾಯಿತು. ಇದಾದ ನಂತರದಲ್ಲಿ ನಾಗರಿಕ ಸಮಾಜದೊಳಗೆ ಬಂದು ಸೇರಿದ ಸಮುದಾಯಗಳು ಸಹ ಶ್ರೇಣಿಗಳಾಗಿ ಬಂದು ಸೇರದೆ ನೇರವಾಗಿ ಜಾತಿಗಳಾಗಿಯೇ ಬಂದು ಸೇರಿದವು. (ಅದೇ, ಪುಟ. ೧೭೨)

ಸಮುದಾಯಗಳ ಸಮಷ್ಟಿ ತತ್ವವನ್ನು ನಾಶಗೊಳಿಸಿ ಕೃಷಿ ವಿಸ್ತರಣೆಯನ್ನು ಒಂದು ಸಾರ್ವಜನಿಕ ವಲಯದ ಪರಿಶ್ರಮ ಎಂಬಂತೆ ಪರಿಗಣಿಸಲಾಯಿತು. ಸಮುದಾಯಗಳ ಸಮಷ್ಟಿ ಜೀವನವನ್ನು ನಾಶಗೊಳಿಸಿ ಅವರನ್ನು ಸಾಮಾಜಿಕ ಸ್ವಾಧೀನ ಪಡಿಸಿಕೊಳ್ಳಬೇಕೆಂದರೆ ಭೇದ ಭಾವವನ್ನು ಹುಟ್ಟು ಹಾಕುವುದು ಅಗತ್ಯ ಎಂದು ನಿರ್ದೇಶಿಸಿದರು. ನೂತನ ಗ್ರಾಮೀಣ ಸಮಾಜವು ಹುಟ್ಟಿಕೊಂಡ ಕ್ರಮದೊಳಗೆ ವರ್ಗ ವ್ಯವಸ್ಥೆಯ ಪ್ರಮೇಯವೂ ಇಲ್ಲದೆಯೇ ಅನೇಕ ಶೂದ್ರ ಜಾತಿಗಳೂ ಹುಟ್ಟಿಕೊಂಡವು. ಇದಾದ ನಂತರದಲ್ಲಿ ವೃತ್ತಿ ನಿರತರಾಗಲೀ ಶೂದ್ರರೇ ಆದರು. ಜಾತಿ ವ್ಯವಸ್ಥೆಯಂತೆಯೇ ಜಾತಿ ತತ್ವವೂ ಎಲ್ಲ ಕ್ಷೇತ್ರಗಳಿಗೆ ವಿಸ್ತರಿಸಿತು.

"ಗ್ರಾಮೀಣ ಸ್ವಯಂ ಪೋಷಕತ್ವದ ಪರಿಣಾಮವೆಂದರೆ ಶ್ರಮ ವಿಭಜನೆ ಚೆನ್ನಾಗಿ ಬೇರೂರಿ ಹೊಸ ವೃತ್ತಿಗಳು ಹುಟ್ಟಿಕೊಂಡವು. ಸಂಸ್ಕೃತ ನಿಘಂಟು ಎನಿಸಿದ "ಅಮರ ಕೋಶ"ವನ್ನು ತೆರೆದರೆ ಈ ವೃತ್ತಿಗಳ ಹೆಸರನ್ನು ತಿಳಿಯಬಹುದು. ಅಮರಕೋಶದಲ್ಲಿ ಹೇಳಿರುವ ವೃತ್ತಿಗಳೆಂದರೆ ಹೂಗಾರ, ಚಮ್ಮಾರ, ಅಕ್ಕಸಾಲಿಗ, ಬಳೆಗಾರ, ಒಡ್ಡ, ಗಾಡಿ ಮಾಡುವವ ಇತ್ಯಾದಿ ಇವೆಲ್ಲವೂ ಗ್ರಾಮದೊಳಗೆ ಇರುವ ವೃತ್ತಿಗಳು" (ಅದೇ, ಪುಟ. ೧೮೯)

"ಗ್ರಾಮದಲ್ಲಿ ನೆಲೆನಿಂತ ವೃತ್ತಿಪರರು 'ಕುಟುಂಬಗಳ' ವ್ಯವಸಾಯೇತರ ಅಗತ್ಯಗಳನ್ನು ಪೂರೈಸುತ್ತಿದ್ದರು. ಅದಕ್ಕೆ ಪ್ರತಿಫಲವಾಗಿ ಅವರಿಗೆ ಬೆಳೆದದ್ದರಲ್ಲಿ ಸ್ವಲ್ಪ ಕೊಡುತ್ತಿದ್ದುದೇ ಅಲ್ಲದೆ ಕೃಷಿಯೋಗ್ಯವಾಗಿಸಿದ ಗ್ರಾಮದ ಬೀಡು ಭೂಮಿಗಳಲ್ಲೂ ಸ್ವಲ್ಪವನ್ನು ಕೊಡುತ್ತಿದ್ದರೆಂದು ಗುಪ್ತರಾಜರ ಶಾಸನಗಳಿಂದ ತಿಳಿದು ಬರುತ್ತದೆ. ಇದನ್ನು ಕೆಲವೆಡೆಗಳಲ್ಲಿ ಆಯಗಾರರ ಪದ್ಧತಿ ಎಂದೂ ಮಹಾರಾಷ್ಟ್ರದಲ್ಲಿ ಅಲೂಟೆದಾರ್, ಬಲೂಟೆದಾರ್ ಎಂದೂ ಕರೆಯಲಾಗಿದೆ." (ಅದೇ, ಪುಟ. ೧೮೯)

"ಭಾರತಕ್ಕೆ ಜಾತಿ ಪದ್ಧತಿ ಹೊಸತೇನೂ ಅಲ್ಲ. ಜಾತಿ ಹುಟ್ಟಿಕೊಂಡದ್ದು ೧೫೭೫ ವರ್ಷಗಳ ಹಿಂದೆ ಎಂಬ ವಿಷಯವನ್ನು ಅಧ್ಯಯನಗಳು ಕೈಗೊಂಡು ಬೆಳಕಿಗೆ ತರಲಾಗಿದೆ. ಗುಪ್ತರ ಸಾಮ್ರಾಜ್ಯದ ಅವಧಿಯಲ್ಲಿ ಹೊಸ ಸಾಮಾಜಿಕ ವ್ಯವಸ್ಥೆ ಆರಂಭವಾಯಿತು. ಭಿನ್ನ ಸಾಮಾಜಿಕ ವ್ಯವಸ್ಥೆ ಆರಂಭವಾಯಿತು. ಭಾರತದಲ್ಲಿ ಇದುವರೆಗೆ ಎರಡು ವಂಶವಾಹಿಗಳು ಇವೆ ಎಂದು ಹೇಳಲಾಗುತ್ತಿತ್ತು. ಆದರೆ ಎರಡಲ್ಲ ನಾಲ್ಕು ವಂಶವಾಹಿಗಳು ಇವೆ, ಅಲ್ಲದೆ ಅಂಡಮಾನ್ ಮತ್ತು ನಿಕೋಬಾರ್ ದ್ವೀಪಗಳು ಇವೆ. ಅಲ್ಲದೆ ಅಂಡಮಾನ್ ಮತ್ತು ನಿಕೋಬಾರ್ ದ್ವೀಪಗಳಲ್ಲಿ ಮತ್ತೊಂದು ಪ್ರತ್ಯೇಕ ವಂಶವಾಹಿ ಇದೆ. ಜೀವಶಾಸ್ತ್ರದ ನ್ಯಾಷನಲ್ ಇನ್ಸ್ಟಿಟ್ಯೂಟ್ ಆಫ್ ಬಯೋ ಮೆಡಿಕಲ್ ಜಿನೋಮಿಕ್ಸ್‌ನ ವಿಜ್ಞಾನಿಗಳು ಇದನ್ನು ದೃಢಪಡಿಸಿದ್ದಾರೆ" (ಪ್ರಜಾವಾಣಿ ದಿನಪತ್ರಿಕೆ; ೨೭/೧/೧೬ ಪುಟ. ೧)

"ಪ್ರಸ್ತುತ ನಮ್ಮ ನಡುವೆ ಇರುವ ಹಿಂದುಳಿದ ಬುಡಕಟ್ಟು ಜನಾಂಗಗಳ ಪದ್ಧತಿಗಳನ್ನು ಅಭ್ಯಸಿಸಿದರೆ 'ಅಕ್ಷ-ಕೃಷಿ' ಗಳ ಸಂಬಂಧವನ್ನು ಸುಮ್ಮನೆ ತಳ್ಳಿ ಹಾಕಲು ಬರುವುದಿಲ್ಲ. ಅವರಲ್ಲಿ ಕೃಷಿ ಯೋಗ್ಯ ಭೂಮಿಯನ್ನು ಹಂಚಿಕೊಳ್ಳಲು ಆಗಿಂದಾಗ್ಗೆ ಹೀಗೆ 'ಚೀಟಿ ಎತ್ತುವ' ಪದ್ಧತಿ ಈಗಲೂ ಇದೆ. ಅದು ಸಮಾನತೆ ಮತ್ತು ಪಕ್ಷಪಾತ ರಹಿತ ಹಂಚಿಕೆಗೆ ಒಂದು ಸಾಧನ. ಪೆಷಾವರ್ ಸುತ್ತ ಮುತ್ತ ಈ ಪದ್ಧತಿಯು ಸುಮಾರು ೧೯೦೦ ವರೆಗೂ ಇದ್ದಿತೆಂದು ಬೇಡನ್-ಪವೆಲ್ ಕೃತಿಯಿಂದ ತಿಳಿಯುತ್ತದೆ. ಭೂಮಿಯನ್ನು ಚೀಟಿ ಎತ್ತಿ ಪಡೆಯಲಾಗುತ್ತಿತ್ತು. ಭೂಮಿಯ ಗುಣದಲ್ಲಿ ವ್ಯತ್ಯಾಸವಿದ್ದರೆ ಹತ್ತಾರು ವೃತ್ತಗಳನ್ನು ರಚಿಸಿ, ಉತ್ತಮ, ಮಧ್ಯಮ, ಮತ್ತು ಕನಿಷ್ಠವೆಂದು ಭೂಮಿಯನ್ನೆಲ್ಲಾ ವಿಂಗಡಿಸಲಾಗುತ್ತಿತ್ತು. ಪ್ರತಿಯೊಬ್ಬರು ಪ್ರತಿಯೊಂದು ವೃತ್ತದಿಂದಲೂ ಸ್ವಲ್ಪ ಸ್ವಲ್ಪ ಭೂಮಿಯನ್ನು ತೆಗೆದುಕೊಂಡು ಅಸಮಾನ ಹಂಚಿಕೆಯನ್ನು ನಿವಾರಿಸಿಕೊಳ್ಳುತ್ತಿದ್ದರು. ಆದಾಗ್ಯೂ ಏರು ಪೇರಾಗುವ ಸಂಭವವಿರುವುದರಿಂದ ಅವರು ಆಗಿಂದ್ದಾಗ್ಗೆ ಭೂಮಿಯನ್ನು ಅದಲು-ಬದಲು ಮಾಡಿಕೊಳ್ಳುತ್ತಿದ್ದರು". (ರಾಮಕೃಷ್ಣ.ಜಿ (ಅನು), ೨೦೧೧; ಪುಟ ೩೭೬)

ಭೂಮಿಯ ಹಂಚಿಕೆ ಮತ್ತು ಒಡೆತನದ ಕಾರಣವಾಗಿ ಹಲವಾರು ತರತಮದ ನಿರ್ದೇಶನಗಳು ಕಾಣಿಸಿಕೊಂಡವು. ಆಹಾರ ಮನುಷ್ಯರ ಮೂಲಭೂತ ಅವಶ್ಯಕತೆಯಾಗಿದ್ದು, ಕೃಷಿಯು ಅನ್ವೇಷಣೆಗೊಂಡು ವಿಸ್ತರಣೆಯಾಗುವ ಹಂತದಲ್ಲಿ ಹಲವಾರು ಸ್ಥಿತ್ಯಂತರಗಳನ್ನು ಹೊಂದಿದ್ದರ ಪರಿಣಾಮ, ವರ್ಗ-ವರ್ಣಗಳೆಂಬ ತರತಮದ ಭಾವಗಳು ಹುಟ್ಟುವುದಕ್ಕೂ ಸಾಧ್ಯವಾಯಿತು. ಪಲ್ಲಟಗಳು ಪ್ರಾದೇಶಿಕವಾಗಿ ಯಾವ ಸ್ವರೂಪದಲ್ಲಿ ನಡೆಯಿತು ಎನ್ನುವುದನ್ನು ಇಲ್ಲಿ ಗುರುತಿಸಬಹುದು. ಬದಲಾಗುತ್ತ ಬಂದ ಕಾಲಧರ್ಮದಲ್ಲಿ ವೃತ್ತಿಗಳೊಂದಿಗೆ ಪ್ರವೃತ್ತಿಗಳು ಅವುಗಳ ಗುಣಧರ್ಮಗಳೂ ಪ್ರಮುಖ ಸ್ಥಾನವನ್ನು ಪಡೆಯಿತು. ಒಂದು ಕಾಲಕ್ಕೆ ಬಹಳ ಪ್ರಮುಖ ಮೌಲ್ಯವೆಂದು ಗುರುತಿಸಿಕೊಂಡದ್ದು ಕಾಲಾನುಕ್ರಮದಲ್ಲಿ ಬದಲಾಗುತ್ತ ಸಾಗಿದೆ. ಸಾಮೂಹಿಕ ದುಡಿಮೆ ಮತ್ತು ಸಾಮೂಹಿಕ ಬಾಳುವೆಯ ನಡುವೆಯೂ ಆಯಗಾರಿಕೆಯ ವೃತ್ತಿಗಳು ಕೃಷಿಗೆ ಪೂರಕವಾಗಿದ್ದುದು ಕೃಷಿಯ ವಿಸ್ತರಣೆಗೆ ಅನುವು ಮಾಡಿಕೊಟ್ಟಿತು. ಅವೆಲ್ಲವನ್ನು ಮೀರಿ ಕಾಲದ ಓಘದಲ್ಲಿ ಹುಟ್ಟಿಕೊಂಡ ಹೊಸ ವ್ಯವಸ್ಥೆಯಲ್ಲಿ ಉದ್ಯೋಗಗಳ ಮರು ಸೃಷ್ಟಿ ವಿಭಿನ್ನ ರೂಪವನ್ನು ಪಡೆಯಿತು. ಬರಿಯ ಆಯಗಾರಿಕೆಯ ವೃತ್ತಿಗಳು ಮಾತ್ರವಲ್ಲ ದುಡಿಮೆಯ ಪರಿಕಲ್ಪನೆಯೇ ಬದಲಾಗಿ ಭಿನ್ನ ಉದ್ಯೋಗದ ಪರಿಭಾಷೆಗಳು ಹುಟ್ಟಿಕೊಂಡವು. ಬದಲಾವಣೆಯನ್ನು ಬಹಳ ಮುಕ್ತತೆಯಿಂದ ಸ್ವೀಕರಿಸಿದ ಕರಾವಳಿಗರ ಜನ ಜೀವನದಲ್ಲಿ ಕಳೆದ ನೂರು ವರ್ಷಗಳ ಚರಿತ್ರೆಯಲ್ಲಿ ಬಹಳಷ್ಟು ಏರು ಪೇರು ತಲ್ಲಣ, ಸ್ಥಿತ್ಯಂತರಗಳಾಗಿವೆ. ಇವೆಲ್ಲವನ್ನು ಕರಾರುವಕ್ಕಾಗಿ ದಾಖಲಿಸಬೇಕೆಂಬ ಇರಾದೆಯಿಂದಲ್ಲ, ಸಾಂಧರ್ಬಿಕವಾಗಿ ಸೂಕ್ಷ್ಮ ಮನಸ್ಸಿನ ಬರಹಗಾರರು ತಮ್ಮ ಮುಖ್ಯ ಬರಹಗಳಲ್ಲಿ ದಾಖಲುಗೊಳಿಸಿದ್ದಾರೆ. ಮನುಜರ ಬದುಕು ಬದಲಾದ ಪರಿಗೆ ಈ ಪಲ್ಲಟಗಳು ಹೇಗೆ ಕಾರಣವಾಗಿವೆ ಎನ್ನುವ ಮೂಲಕ ಸಂವೇದನಾಶೀಲ ನಿರೂಪಣೆಗಳು ಈ ಹಿನ್ನೆಲೆಯಲ್ಲಿ ಮುಖ್ಯವೆನಿಸುತ್ತದೆ.

**೬.೧ ಕುಲಕಸುಬಿನಿಂದ ಕುಲದಾಚೆಗೆ:** ಪಾರಂಪರಿಕವಾದ ಜಗತ್ತಿನಲ್ಲಿ ಸಾಂಪ್ರದಾಯಿಕವಾದ ಹಂತಕ್ಕೆ ಬಂದುದು ನಾಗರಿಕತೆಯು ಎಂದು ಬಹಳ ಸೂಕ್ಷ್ಮವಾಗಿ ವಿಶ್ಲೇಷಿಸಲಾಗುತ್ತದೆ. ಈ ಬದಲಾವಣೆಯ ಹಂತವು ಒಂದಾದ ಮೇಲೆ ಒಂದರಂತೆ ಇಲ್ಲಿ ಒಮ್ಮೆಲೆ ಸಂಭವಿಸುವುದು. ಅಲ್ಲಿ ಚರಿತ್ರೆಯ, ಸಮಾಜಶಾಸ್ತ್ರದ ಅಂಶಗಳ ಹಿನ್ನೆಲೆಯಲ್ಲಿ ಕೃಷಿಗೆ ಪೂರಕವಾದ ಆಯಗಾರಿಕೆಯ ವೃತ್ತಿಗಳು ಹುಟ್ಟಿಕೊಂಡವು. ಆಯಗಾರಿಕೆಯ ಕಸುಬು, ಕೌಶಲ್ಯ, ಸ್ಥೈರ್ಯ, ಜನರಲ್ಲಿ ಆತ್ಮವಿಶ್ವಾಸದಿಂದ ಬದುಕಲು ಸಾಧ್ಯವಾಯಿತು. ಕಸುಬುಗಳ ಹುಟ್ಟಿನ ಮೂಲಕ **'ಕುಲ'** ವನ್ನು ವಿಶ್ಲೇಷಿಸುವ, ಅರ್ಥೈಸುವ ಪ್ರಯತ್ನಗಳೂ ನಡೆದವು. ಮುಖ್ಯವಾಗಿ ಕೃಷಿ ಕೆಲಸವನ್ನು ನಡೆಸಬೇಕಾದರೆ ಬೇಕಾದ ಸಲಕರಣೆಗಳ ರಚನೆಯಿಂದ ತಾವು ರಚಿಸಿದ ಉತ್ಪಾದಕ ವಸ್ತುವಿಗೆ ಪ್ರತಿಯಾಗಿ ಧಾನ್ಯಗಳನ್ನು ಪಡೆದರು. ಉತ್ಪಾದಕ ಸಮುದಾಯದೊಂದಿಗೆ ಉತ್ಪಾದನೆ ಮತ್ತು ಮಾರುಕಟ್ಟೆಯ ಸೌಲಭ್ಯಗಳನ್ನು ಪಡೆದುಕೊಳ್ಳುವ ನೆಲೆಯ ಚೇತರಿಕೆಯ ಕಾರ್ಯ ಚಟುವಟಿಕೆಗಳು ನಡೆದವು, ಕಮ್ಮಾರ, ಬಡಗಿ, ಕುಂಬಾರ, ನೇಕಾರ, ದಲಿತ ಕೂಲಿ ಕಾರ್ಮಿಕ ವರ್ಗವೊಂದು ಇತ್ತು. ಮರದ ಕಬ್ಬಿಣದ ವಸ್ತುಗಳನ್ನು ಕಮ್ಮಾರರು ಬಡಗಿಗಳು ರಚಿಸುತ್ತಿದ್ದರು. ಬುಡಕಟ್ಟು ಸಮುದಾಯದವರು ಕಾಡುತ್ಪತ್ತಿಗಳಿಂದ ಕಾಡಿನ ಬಳ್ಳಿ, ಬಿಳಲು ಬೆತ್ತಗಳನ್ನು ಬಳಸಿಕೊಂಡು ಗೆರಸೆ, ಬುಟ್ಟಿ, ಹೆಡಗೆಗಳನ್ನು ನಿರ್ಮಿಸುವುದು ಅವಶ್ಯವಾಗಿತ್ತು.

ಕಮ್ಮಾರರು ಕುಡುಗೋಲು, ಕೊಡಲಿ ಪರ್ಕತ್ತಿಗಳನ್ನು ಹಾರೆ, ಪಿಕಾಸು, ಪನೋರು, ವಿನ್ಯಾಸಗಳು ಕೃಷಿ ಕಾರ್ಯವನ್ನು ಸುಲಭಗೊಳಿಸಲು ಬಳಸುವುದೂ ಮುಖ್ಯವಾಗಿತ್ತು. ಬಡಗಿಗಳು ನುಗ ನೇಗಿಲು, ಹಲಗೆ, ಪುಡುಕೈಗಳ ರಚನೆ ಬಳಕೆಗೆ ಉಪಯೋಗಿಸುತ್ತಿದ್ದರು. ದಿನ ಬಳಕೆಗೆ ಬೇಕಾದ ಮಣ್ಣಿನ ಪಾತ್ರೆಗಳನ್ನು ಬಳಸುತ್ತಿದ್ದರು. ಕುಂಬಾರರು ಧಾನ್ಯ ಸಂಗ್ರಹಣೆಗಾಗಿ ದೊಡ್ಡ ದೊಡ್ಡ ಗಾತ್ರದ ಮಣ್ಣಿನ ಪಾತ್ರೆಗಳನ್ನು ನಿರ್ಮಿಸಿದರು. ಈ ಮೂಲಕ ಕೃಷಿಗೆ ಪ್ರಯೋಜನವಾಗಿ ಬಳಸಲಾಗುತ್ತಿತ್ತು.

"ಚೋಮನ ದುಡಿ"ಕಾದಂಬರಿಯಲ್ಲಿ ದಲಿತನಾದ ಚೋಮ ಕೃಷಿಕನಾಗುವ ಸಾಧ್ಯತೆಗಳಿಗಾಗಿ ಒದ್ದಾಡುವ ಬದುಕಿನ ಕೊನೆಯ ಕ್ಷಣದವರೆಗೂ ಹೋರಾಟ ಮಾಡುವುದು, ಕುಲಕಸುಬನ್ನು ದಾಟುವ ಸಂದರ್ಭದ ದಲಿತನ ಮನೋ ವ್ಯಾಕುಲತೆಯನ್ನು ನಿರೂಪಿಸುವಂತಿದೆ. ಸಮಾಜವು ದಲಿತ ಕೃಷಿಕನಾಗುವುದನ್ನು ಸ್ವೀಕರಿಸುವುದಿಲ್ಲ. ಜಾತಿ ಮತ್ತು ಜೀತ ಅವಿನಾಭಾವ ಸಂಬಂಧಗಳಾಗಿ ಬೆಳೆದು ಬಂದು ಆ ಊಳಿಗ ಮತ್ತು ಬುಟ್ಟಿಯ ಕೆಲಸದಿಂದ ಬಿಡುಗಡೆ ಹೊಂದಲಾರದೆ ಅಸಹಾಯಕನಾಗುತ್ತಾನೆ. ವೃತ್ತಿ ಮತ್ತು ಜಾತಿಯ ನಿಷ್ಪನ್ನಗಳನ್ನು ಹೇಳುವುದಾದರೂ ಅದು ಸರಳ ರೇಖಾತ್ಮಕವಾದುದಲ್ಲ. ತೀರಾ ಸಂಕೀರ್ಣವಾದ ಜಾತಿ ವ್ಯವಸ್ಥೆಯೊಳಗೆ ವೃತ್ತಿಯಿಂದಾಗಿಯೇ ಜಾತಿ ಹುಟ್ಟಿತು ಎಂದು ಸರಳವಾಗಿ ಹೇಳಲಾಗುವುದೇ ಎಂಬುದು ಪ್ರಶ್ನೆ, ಸ್ವಾವಲಂಬನೆ ಮತ್ತು ಸ್ವಂತಿಕೆಯ ಅನನ್ಯತೆಯನ್ನು ಹೊಂದಿದ ಸಮುದಾಯಗಳು ಅವುಗಳನ್ನು ಮೀರಿ ನಡೆದುಕೊಳ್ಳಲಿಲ್ಲವೇ ಎನ್ನುವ ಅಂಶವೂ ಮುಖ್ಯ.

ಸರಳವಾದ ಸಮಾಜಶಾಸ್ತ್ರೀಯವಾದ ನಿಷ್ಪನ್ನದಂತೆ ವೃತ್ತಿಯಿಂದ ಜಾತಿ ಸೃಷ್ಟಿಯಾಯಿತು ಎನ್ನುತ್ತಾರೆ. ಕೃಷಿಯು ಯಾವುದೇ ಜಾತಿಯ ಕಸುಬು ಮೂಲದಲ್ಲಿ ಆಗಿತ್ತೇ ಎಂದು ಅನ್ವೇಷಿಸಿದರೆ ಕಾಡಿನ ಕೆಲವು ಬುಡಕಟ್ಟು ಸಮುದಾಯಗಳು ಅದರದೇ ಆದ ಕೃಷಿ ಪರಂಪರೆಯನ್ನು ಹೊಂದಿದ್ದರು. ಕಾಡಿನ ಮತ್ತು ಬಯಲು ಕುಮೆರಿ ಕೃಷಿಯೊಂದಿಗೆ ಮಳೆ ನೀರನ್ನೇ ಆಶ್ರಯಿಸಿ ಬೆಳೆದ ದೇವ ಮಾತೃಕ ಬೆಳೆಗಳೂ ಇದ್ದವು. ಪಟ್ಲ, ಬೈಲು, ಮಜಲು, ಬೆಟ್ಟು ಗದ್ದೆಗಳೆಂದು ವರ್ಗೀಕರಿಸಿ ಕೃಷಿ ಜಗತ್ತನ್ನು ವಿಸ್ತರಿಸುತ್ತ ಆಹಾರದ ಬೆಳೆಗಳ ಬೆಳೆಯನ್ನು ಬೆಳೆದಂತೆಲ್ಲ ಆಹಾರದ ಸ್ವಾವಲಂಬನೆ ಮತ್ತು ಸಂಗ್ರಹಣೆಯ ಪರಿಭಾಷೆಗಳು ಹೆಚ್ಚುತ್ತ ಹೋದವು. ಆ ಕಾಲದ ಹಂತದಲ್ಲಿ ಕೃಷಿಕರಲ್ಲದ ಕುಲದವರೂ ಕೂಡಾ ಹಸಿವು ಮತ್ತು ಆಹಾರದ ಮೂಲ ನೆಲೆಯಲ್ಲಿ ಈ ಸ್ಥಿತ್ಯಂತರಗಳನ್ನು ಕಂಡುಕೊಂಡರೆನ್ನುವುದು ವಾಸ್ತವ ಸತ್ಯ. ಕುಡಿಯರು ಕಾಡಿನಲ್ಲಿ ಕುಮೆರಿ ಕೃಷಿ ಮಾಡಿದ್ದಲ್ಲದೆ ಸ್ಥಿರನಿವಾಸಿಗಳಾಗಿ ಪರಿವರ್ತನೆ ಹೊಂದಿದ್ದ ಸತ್ಯವನ್ನು ಅರ್ಥೈಸಿಕೊಳ್ಳಬಹುದು. ಚಾರಿತ್ರಿಕವಾಗಿ ಯಾವ ಹಂತದಲ್ಲಿ ಕುಲಕಸುಬಿನಿಂದ ಕುಲದಾಚೆಗೆ ವೃತ್ತಿಗಳು ಸ್ಥಿತ್ಯಂತರಗೊಂಡವು ಎಂದು ಇದಮಿತ್ಥಂ ಎಂದು ಹೇಳುವುದು ಕ್ಲಿಷ್ಟವೇ ಆಗಿದೆ. ಈ ಸಮಸ್ಯೆಯನ್ನು ಎತ್ತಿಕೊಂಡಾಗ ವಸಾಹತುಶಾಹಿಯ ಪೂರ್ವದಲ್ಲಿ ಕುಲಕಸುಬು ಪಲ್ಲಟವಾಯಿತೇ ಅಥವಾ ವಸಾಹತುಶಾಹಿ ಆಡಳಿತದ ಪರಿಣಾಮವಾಗಿ ಪರಂಪರೆಯ ಬಗೆಗಿನ ದೃಷ್ಟಿಕೋನಗಳು ಬದಲಾಗಿ ಪಲ್ಲಟವು ಸಾಧ್ಯವಾಯಿತೇ? ಎನ್ನುವುದೂ ಪ್ರಶ್ನೆಯಾಗಿದೆ. ಕೃಷಿ ಜಗತ್ತಿನ ಒಳಗೇ ಪಲ್ಲಟದ ಬೀಜಗಳಿರುವಾಗ ಕೃಷಿ ಸಂಸ್ಕೃತಿ ಪಲ್ಲಟವಾಗುತ್ತ ಸಾಗಿದ್ದು ಅಚ್ಚರಿಯಲ್ಲ. ಚಾರಿತ್ರಿಕವಾಗಿ ಕುಲಕಸುಬಿನಲ್ಲಿ ಆದ ಪಲ್ಲಟ ಮತ್ತು ವಸಾಹತು ಶಾಹಿ ಆಡಳಿತದ ಪೂರ್ವ ಕಾಲದ್ದು. ಕರಾವಳಿಯಲ್ಲಿ

ಕೃಷಿಯೇ ಪ್ರಮುಖ ಕಸುಬಾಗಿದ್ದು ಕೃಷಿಯನ್ನು ಹೇಗೆ ನಡೆಸಬೇಕು ಎಂಬ ತಿಳುವಳಿಕೆ ನೀಡಲು ತುಳುವರು ಕೇರಳ ತಮಿಳುನಾಡಿಗೆ ತೆರಳಿದ ಉಲ್ಲೇಖಗಳು ಶಾಸನಗಳಲ್ಲಿ ಉಲ್ಲೇಖವಿದೆ. ಈ ಬಗ್ಗೆ ಬಾಬು ಶಿವ ಪೂಜಾರಿಯವರು ಹೀಗೆ ವಿಶ್ಲೇಷಿಸುತ್ತಾರೆ. ತುಳುವರನ್ನು ತಮ್ಮ ಊರುಗಳಿಗೆ ಕರೆಸಿಕೊಂಡು ಕೃಷಿ ಮಾಡಿದ ಉಲ್ಲೇಖಗಳಿವೆ. ಒಂದನೇ ರಾಜ ರಾಜ ಚೋಳ ಕೃಷಿಯಿಲ್ಲದೆ ಆರ್ಥಿಕಾಭಿವೃದ್ಧಿ ಸಾಧ್ಯವಿಲ್ಲವೆಂದು ತುಳು ನಾಡಿನ ಕೃಷಿಕರನ್ನು ಕೇರಳ ತಮಿಳುನಾಡಿಗೆ ಆಮಂತ್ರಿಸಿದ್ದರು. ೩೫-೪೦ ವರ್ಷಗಳ ಕಾಲ ಈ ತುಳುವರು ಕೃಷಿಯ ಸೂಕ್ಷ್ಮಗಳನ್ನು ಕಲಿಸಿದ್ದರು. ಇವರನ್ನು ಶಾಸನಗಳಲ್ಲಿ "ತುಳು ವೆಲ್ಲಾಳರು" ಎಂದು ಉಲ್ಲೇಖಿಸಲಾಗಿದೆ. ಏತಗಳು, ಮೆಟ್ಟು ಹಣೆಗಳು, ಉಳುಮೆಗೆ ಬಳಸುತ್ತಿದ್ದ ಕೋಣಗಳ ವಿವರಗಳು ಪ್ರಮುಖ ಉಲ್ಲೇಖಗಳಾಗಿವೆ.

ದಲಿತರು ಕೃಷಿ ಭೂಮಿಯನ್ನು ಹೊಂದಿದ್ದರೇ ಎನ್ನುವ ಪ್ರಶ್ನೆಯನ್ನು ಎತ್ತಿಕೊಂಡರೆ 'ಭೂಮಿ' ಖಾಸಗಿ ಒಡೆತನವನ್ನು ಹೊಂದುವ ಮೂಲದಲ್ಲಿ ಯಾರಿಗೂ ಸ್ಪರ್ಧೆ ಇರಲಿಲ್ಲ. ಕರಾವಳಿಯಲ್ಲಿ ಇಂದಿಗೂ ಕುಮೆರಿ ಕೃಷಿಯನ್ನು ಸಹಜವಾಗಿ ಮಾಡುವ ಕುಡುಬಿಗಳು ಇಂದಿಗೂ ಕಾಡಿನಲ್ಲಿಯೂ ಇದ್ದಾರೆ. ಈ ಬಗ್ಗೆ ಈ ಹಿಂದಿನ ಅಧ್ಯಾಯಗಳಲ್ಲಿ ಚರ್ಚಿಸಿದ್ದು, ಆದಿಮ ಕೃಷಿಯಿಂದ ವಿಸ್ತರಣೆಯಾಗುತ್ತ ಕುಲ ಮೂಲದ ಆಹಾರದ ಅನ್ವೇಷಣೆಯೂ ಇಂದು ಸಾಂಸ್ಕೃತಿಕ ಆಚರಣೆಯಲ್ಲಿ ಅನನ್ಯತೆಯ ಭಾಗವೇ ಆಗಿದೆ.

ಮರಳಿ ಮಣ್ಣಿಗೆ ಕಾದಂಬರಿಯಲ್ಲಿ ರಾಮ ಐತಾಳರು ಪೌರೋಹಿತ್ಯ ಮಾಡುತ್ತಿದ್ದವರು ಕೃಷಿಕರಾಗಿದ್ದಾರೆ. ಶೀನ ಮಯ್ಯರ ಮಗ ಹೋಟೇಲು ಉದ್ದಿಮೆ ನಡೆಸಿ ಅನ್ನ ಮಾರಿ ದುಡ್ಡು ಮಾಡಿದ್ದು, ಲಚ್ಚ ಸಾಗುವಳಿಯ ಮನೆಯಲ್ಲಿ ಅದರ ಕಷ್ಟಗಳನ್ನೆಲ್ಲ ನೋಡಿಕೊಂಡೇ ಬೆಳೆದನಾದರೂ ಇಂಗ್ಲಿಷ್ ಶಿಕ್ಷಣಕ್ಕೆ ತೆರೆದುಕೊಂಡಾಗ ಸಾಗುವಳಿಯ ಕಾರ್ಯದಿಂದ ವಿಮುಖನಾಗುತ್ತಾನೆ. ರಾಮ ಐತಾಳರ ಮೊಮ್ಮಗ ರಾಮ ಸಂಗೀತ, ಹೋಟೇಲು ದುಡಿಮೆಯನ್ನು ಆಯ್ಕೆ ಮಾಡಿಕೊಂಡರೂ ಮರಳಿ ಕಡಲ ತೀರದ ಗದ್ದೆಗಳಿಗೆ ಸಾಗುವಳಿ ಮಾಡಲು ಸಿದ್ಧರಾಗುವುದು, ಹೊಗೆಸೊಪ್ಪಿನ ಗದ್ದೆಗಳಿಗೆ ನೀರು ಹಾಕಬೇಕಾದರೆ ಕೃಷಿಯ ಆಯ್ಕೆಯ ಆ ಸ್ಥಿತಿ ಬಹಳ ಮುಖ್ಯ.

"ರಾಮ ಐತಾಳರು ಈಗೀಗ ದೂರದ ಮನೆಗಳ ಪೌರೋಹಿತ್ಯವನ್ನು ಬಿಡುತ್ತ ಬರಬೇಕಾಯಿತು. 'ನನ್ನಿಂದ ಈ ಹೊಳೆ ದಾಟುವುದು, ನಡೆದಾಡುವುದು ಇನ್ನಿನ್ನು ಸಾಧ್ಯವಿಲ್ಲ. ಹಾಗೆಂದು ಮನೆಯಲ್ಲಿ ತೀರಾ ಬೇಸರವಾಯಿತೆಂದರೆ ಸತ್ಯ ನಾನು ಕೆಲಸ ಇಲ್ಲದೆಯೂ ಇರಲಾರೆ. ಮನೆಯ ಸಾಗುವಳಿ ಮಾಡುವುದೂ ಕಷ್ಟವಾಗಿ ಹೆಸರಿಗೆ ಮಾತ್ರ ಸಾಗುವಳಿಯಾಗಿದೆ" (ಶಿವರಾಮ ಕಾರಂತ.ಕೆ, ೨೦೧೩; ಪುಟ ೧೯೯) ರಾಮ ಐತಾಳರ ಮಗ ಲಕ್ಷ್ಮೀನಾರಾಯಣ (ಲಚ್ಚ) ನಿಗೆ ವಿದ್ಯಾಭ್ಯಾಸ ಮಾಡುವ ಸಂದರ್ಭದಲ್ಲಿ ಹುಟ್ಟಿಕೊಂಡ ಚರ್ಚೆಗೆ ಅವನನ್ನು ಐಗಳ ಮಠಕ್ಕೋ ಸರಕಾರ ಶಾಲೆಗೋ ಎಲ್ಲಿಗೆ ಕಳುಹಿಸುವುದೆಂಬ ಚರ್ಚೆ ಬಂದಾಗ ಬ್ರಾಹ್ಮಣ ಹುಡುಗನಾಗಿ ತನ್ನ ಕುಲವೃತ್ತಿಯಾದ ಪೌರೋಹಿತ್ಯ ಮಾಡಿದರಾಯಿತು. ಅದರಾಚೆಗಿನ ಅವಶ್ಯಕತೆಯಿಲ್ಲ ಎಂಬ ವಾದವಿದೆ. "ಆ ಬರಹ ಅಲ್ಲದೆ ಹೋದರೆ ಅಷ್ಟೇ ಹೋಯಿತು ಬರೆದು ಓದಿ ಆಗಬೇಕಾದದ್ದೇನಿಲ್ಲ, ಅದೆಲ್ಲ ಗುರಿಕಾರರ ಮಕ್ಕಳಿಗೆ ಇವನಿಗೆ ನಿನ್ನ ಹಾಗೆ ಎಂಟು ಅಷ್ಟಕ ಅಧ್ಯಯನ ಆಗಿಬಿಟ್ಟರೆ ಸಾಕು. ನಿನ್ನ ಅನಂತರ ಪೌರೋಹಿತ್ಯಕ್ಕೆ ಯಾರಾದರೂ ಬೇಡವೇ?" (ಅದೇ, ಪು ೧೨೭)

"ಶೀನಮಯ್ಯರ ಮಕ್ಕಳು ನಡೆಯಲು ಬರುವ ಮೊದಲೇ ಬೆಂಗಳೂರಿಗೆ ಹೋಗಿ ರಾಶಿ ರಾಶಿ ರೂಪಾಯಿಗಳನ್ನು ಸಂಪಾದಿಸುತ್ತಿರುವುದು ಅವರ ಕಣ್ಣಿಗೆ ಬಂದಿದೆ. ಆ ಮಕ್ಕಳಿಂದ ಶೀನನು ಶೀನ ಮಯ್ಯನಾಗಿ ಮೆರೆದಾಡುವುದು ಅವರಿಗೆ ತಿಳಿದಿದೆ. ಅವನು ಗುರಿಕಾರನಾಗಿರುವಾಗ ತನ್ನ ಮಗನಿಂದ ತನಗೆ ಕೀರ್ತಿ ಬರಬಹುದು? ಅವನ ಮಕ್ಕಳು ಕಾಫಿ ಲೋಟ ತೊಳೆದು ಅಲ್ಲಿ ಹಣ ಮಾಡಿದರೆ ತನ್ನ ಮಗ ಇಂಗ್ಲಿಷ್‌ನ್ನು ಕಲಿತು ವಕೀಲನಾಗಿ ಊರಲ್ಲೇ ಯಾಕೆ ಹಣ ದೋಚಬಾರದು" (ಅದೇ, ಪುಟ ೧೨೮) ಪುರೋಹಿತ ವೃತ್ತಿಯ ಬಗ್ಗೆ ಐತಾಳರು ಹೇಳುವ ಮಾತು ಅವರಿಗೆ ಆ ಬಗ್ಗೆ ನಿಕೃಷ್ಟತೆಯ ಅಭಿಪ್ರಾಯ ಆ ಕಾಲದ ಮೌಲ್ಯವನ್ನು ನಿರೂಪಿಸುತ್ತದೆ." ಥೂ- ಆ ಅನ್ನ ಮಾರಿದ ದುಡ್ಡು ನನಗೆ ಬೇಡ, ಅದಕ್ಕಿಂತಲೂ ನನ್ನ ಐದು ಕೋರ್ಜಿ ಹುಟ್ಟುವಳಿಯಿಂದ. ಅವನ ಜೀವನ ಕೂತಲ್ಲೇ ಸಾಗೀತು ಮೇಲೆ ಪೌರೋಹಿತ್ಯ ಮಾಡಿದರೆ ಊಟಕ್ಕೆ ಯಾವ ಕೊರತೆಯೂ ಬರಲಾರದು (ಅದೇ ಪು ೧೩೧)

"ಅಣ್ಣ ಲಚ್ಚ ಓದಿದ್ದು ಸಾಕು ಅಲ್ಲಿ ಪಡುಮುನ್ನೂರಿನವರು ಹುಚ್ಚು ಕಟ್ಟಿಸಿ ಇಂಗ್ಲೀಷು, ಇಂಗ್ಲೀಷು ಅಂದರೆ ನೀನು ಹಾಗೆಯೇ ಕುಣೀಯಬೇಡ. ನಾಳೆ ನಿನ್ನ ಕುಟುಂಬದ ಕೆಲಸ ಬಿಡಲಿಕ್ಕೆ ಬಂದೀತೇ! ನಿನ್ನ ಕುಲದವರನ್ನು ಪುರೋಹಿತಿಕೆಗೆ ನಂಬಿದವರ ಗತಿಯೇನು? ಅವರಲ್ಲಿ ಒಂದು ಶ್ರಾದ್ಧ, ಒಂದು ಮದುವೆಯಾದರೆ ಇನ್ನು ಮುಂದೆ ಹೋಗಬೇಕು ಯಾರು....? (ಅದೇ, ಪುಟ ೧೪೦) ಕೃಷಿ ಮತ್ತು ಕುಲಕಸುಬು ಕಾಲ ಸಾಗಿದಂತೆ ಬದಲಾಗುತ್ತ ಸಾಗುತ್ತದೆ. ನಾಗವೇಣಿ ಆ ಹೋದ ಕಾಲಗಳ ಗಣನೆ ಮಾಡುತ್ತಿರುತ್ತಾಳೆ.

"ಕಾರು ತಿಂಗಳಿಗೆ ಬತ್ತದ ಬೇಸಾಯ, ಮುಂದೆ ಕೊಡಿ ತಿಂಗಳಲ್ಲಿ ಹುರುಳಿ ಬೇಸಾಯ, ಮಕರ ಸಂಕ್ರಾಂತಿಗೆ ಸೌತೆಯ ಹಿತ್ತಲು- ಇವೆಲ್ಲಾ ಎಣಿಸುವವಳು." (ಅದೇ, ಪುಟ. ೨೨೦)ವಿದ್ಯಾವಂತನಾದ ರಾಮನಿಗೆ ಉದ್ಯೋಗ ಲಭಿಸದೆ ಹೋದಾಗ ಮದ್ರಾಸು, ಮುಂಬೈ, ಪಯಣದಲ್ಲೂ ನೆಲೆ ಕಾಣದೆ ಇದ್ದಾಗ ರಾಮನಲ್ಲಿ ದ್ವಂದ್ವ ಕಾಡುತ್ತದೆ.

"ಹೋಟೇಲಿನ ದುಡ್ಡಿನ ಮೇಲೆ ತನ್ನ ಅಜ್ಜನಿಗೆ ಎಂಥ ತಿರಸ್ಕಾರ ಇತ್ತೆಂದೂ ತಿಳಿದಿದ್ದನು. ಅವನ ಮನಸ್ಸಿಗೆ ಆ ಉದ್ಯೋಗವೊಂದು ಹೀನವೆಂದು ಕಾಣಿಸದೆ ಹೋದರೂ ತನ್ನ ಅಜ್ಜನು ಯಾರನ್ನು ದ್ವೇಷಿಸುತ್ತಿದ್ದನೋ ಅವರ ಕುಲದಲ್ಲೇ ತಾನು ಆಳಾಗಿ ದುಡಿಯುವುದೇ ಎಂಬ ಪ್ರಶ್ನೆ ಮಾತ್ರ ಬಲವಾಯಿತು. (ಅದೇ, ಪು. ೩೫೭)

ರಾಮರಾವ್ ಇಂಗ್ಲೀಷ್ ಕಲಿತು ಸನ್ನಡತೆಯವನಾಗಿ, ತನ್ನಲ್ಲಿರುವ ವಿಶಿಷ್ಟ ಹವ್ಯಾಸಗಳಾದ ಸಂಗೀತ, ಸಾಹಿತ್ಯ, ಚಿತ್ರಕಲೆಗಳಿಂದ ಬದುಕು ಸಾಗಿಸಲು ಬವಣೆ ಪಡುತ್ತಾನೆ. ತಾಯಿ ಬರೆದ ಪತ್ರದಿಂದ ಅಜ್ಜ ಕರಡಿಗೆಯಲ್ಲಿ ಹೂತಿಟ್ಟ ದುಡ್ಡು ಸಿಕ್ಕು ಬದುಕಿನ ದಿಕ್ಕನ್ನೆ ಬದಲಾಯಿಸುವ ಪ್ರಸ್ತಾಪ ಮರಳಿ ಕೃಷಿ ಜಗತ್ತಿಗೆ ದಾಖಲಾಗುವ ಪ್ರಸ್ತಾಪ ಬರುತ್ತದೆ. ನಾಗವೇಣಿ ಹೀಗೆ ಬರೆಯುತ್ತಾಳೆ. "ಇನ್ನೇಕೆ ಅಲ್ಲಿ ತೊಳಲುತೀ? ಗೇಣಿಗೆ ಸ್ವಲ್ಪ ಜಮೀನನ್ನು ಕೊಂಡು, ಇಲ್ಲೇ ನಟ್ಟು ಬಿತ್ತಿ ಕೊಯ್ದು ಬದುಕನ್ನು ಕಳೆಯುವ" (ಅದೇ, ಪು. ೩೯೬)

"ಈಗ ನಮ್ಮ ಊರಲ್ಲಿ ಗಂಡು ಹುಳುಗಳೇ ಕಾಣಿಸವು. ಬೇಸಾಯದ ಸಮಯಕ್ಕೆ ಎಲ್ಲರೂ ಬೆಂಗಳೂರಿಂದಲೋ, ಹಾವೇರಿಯಿಂದಲೋ ಯಾವ ಯಾವ ಊರುಗಳಿಂದಲೋ ಬರುತ್ತಾರೆ. ಮುಂದೆ ನಟ್ಟಿ ಮಾಡಿಸಿ ಹೋದರೆ ತಿರುಗಿ ಕೊಯ್ಲಿಗೆ ಬಂದಾರು. ಅಲ್ಲಿಂದ ಮುಂದೆ ಎಂಟು ತಿಂಗಳ ತನಕ ಅಸ್ತವಾಗುತ್ತಾರೆ. ಏನಾದರೂ ಮದುವೆ ಮುಂಜಿ ಇದ್ದಾರೆ ಮಾತ್ರ ಬರುತ್ತಾರೆ" (ಅದೇ, ಪು.೩೦೨) ಕೃಷಿಯಲ್ಲಿ ಸಾಮಾಜಿಕವಾಗಿ ಬಹಳ ದೊಡ್ಡ ಪಲ್ಲಟವಿದು. ಎಲ್ಲ ಕಾಲದ ತಂದೆ ತಾಯಿಯವರಿಗೆ ತಮ್ಮ ಮಕ್ಕಳ ಭವಿಷ್ಯದ ಬಗ್ಗೆ ಕಾಡುವ ಪ್ರಶ್ನೆಗಳು ಹೌದು.

"ಚಿಕ್ಕಪ್ಪ ನಾನೊಬ್ಬಳೇ ಆಗಿದ್ದರೆ ಇನ್ನು ಕೋಡಿಯಲ್ಲೋ ಬಿದ್ದಿರಬಹುದು ಎನಿಸುತ್ತದೆ. ಆದರೆ ರಾಮ ಅಲ್ಲಿದ್ದುಕೊಂಡು ಮಾಡುವುದೇನು? ಅವನಿಂದ ನಟ್ಟಿ, ಕೊಯ್ಲು, ಸುಡು ಮಣ್ಣು ಮಾಡಿ ದಿನ ಕಳೆಯಲು ಬಂದಿತೇ? ಸರಕಾರದವರು ಇದೇ ರೀತಿ ಹತ್ತು ವರ್ಷ ನಡೆಸಿದ್ದಾರೆ ನೇಗಿಲು ನೊಗ ಹಿಡಿಯಲಿಕ್ಕೆ ಕೆಳಗಿನವರು ಯಾರ್‍ಯಾರೂ ಬರಲಾರರು. ಆಮೇಲೆ ಬ್ರಾಹ್ಮಣರೇ ಹೊರಟರಾಯಿತು ಹೂಡಲಿಕ್ಕೆ." (ಅದೇ, ಪು. ೧೨೯)

ರಾಮ ಉದ್ಯೋಗಾರ್ಥಿಯಾಗಿ ಸುಶಿಕ್ಷಿತನಾಗಿ ಬೆಂಗಳೂರು ಮೈಸೂರು ಸುತ್ತಾಡಿದರೂ ಉದ್ಯೋಗ ಲಭಿಸದೆ ನಿರುದ್ಯೋಗಿಯಾಗುವುದು ಬಿ.ಎ ಪಾಸು ಮಾಡಿಯೂ ಹೋಟೇಲಿನ ಕೆಲಸ ನಿರ್ವಹಿಸುತ್ತಾ ಜೀವನ ಸಾಗಿಸಿದ ಅನಿವಾರ್ಯತೆ ಲಭಿಸುತ್ತದೆ. ಕುಲಕಸುಬನ್ನು ಮೀರಿ ವಸಾಹತುಶಾಹಿ ಜಗತ್ತಿನ ಉದ್ಯೋಗಕ್ಕೆ ದಾಖಲಾಗಲು ಸಾಧ್ಯವಾಗದೇ ಹೋಗಿ ತಾನು ಬಾಲ್ಯದಲ್ಲಿ ಕಲಿತ ಸಂಗೀತ, ಚಿತ್ರಕಲೆಗಳಿಂದ ಜೀವನ ನಿರ್ವಹಣೆ ಮಾಡಲು ಸಾಧ್ಯವಾಗುವುದು.

"ಸಮಾಜವಾದ ಮತ್ತು ಆಧುನಿಕ ಸಮಾಜವಾದದ ಹಿನ್ನೆಲೆಯಲ್ಲಿ ಅವರು ಸುಖೀಗಳಾದುದು. ಅವರೆಲ್ಲ ಅಷ್ಟು ಸುಖೀಗಳಾಗಿ ಬದುಕುತ್ತಿರುವುದಾದರೆ ಅದು ಅನ್ನದೊಂದಿಗೆ ಅಲ್ಲ. ಬರಿಯ ಮಾತಿನಿಂದಲೇ ಅದೂ ಪ್ರಪಂಚದಲ್ಲಿ ಕ್ಯಾಪಿಟೆಲಿಸಂಮಾಯವಾಗುವ ಕಾಲದ ಆನಂತರದ ಸ್ವರ್ಣ ಯುಗದ ವಿಚಾರವಾದ ಮಾತುಗಳಿಂದ ಮುಂಬಯಿಯಲ್ಲಿ ಬದುಕುವ ಯಾವನೊಬ್ಬ ತರುಣ ನಿರುದ್ಯೋಗಿಯೂ ಸಮಾಜವಾದಿಯಾಗಿ ಕೆಂಪೇರಲು ಮೂರು ವಾರಕ್ಕಿಂತ ಮಿಕ್ಕಿ ಆದ ಬೇರಲ್ಲ" (ಅದೇ, ಪು. ೩೮೧)

"ಊರಲ್ಲಿದ್ದವರೇ ಹಳ್ಳಿ ಹಳಸಿ ಪಟ್ಟಣ ಸೇರುವಾಗ ! ಇಲ್ಲೇನು ಅವಡೆ ಸೊಪ್ಪಿನ ತಾಳ್ಳು ತಿನ್ನಲಿಕ್ಕೆ ಆಸೆಯಾಗಿ ಬರುವುದೇ? ನಮ್ಮೂರು ನೋಡಿದ್ದೀಯಾ ಈಗ? ಗಂಡು ಮಕ್ಕಳಿಗೆ ಉಪನಯನ ಆಯಿತು ಎಂದರೆ ಬೆಂಗಳೂರಿಗೆ ಓಟ! ಈಗ ಕೋಟದ ಊರು ಎಂದರೆ ಹೆಣ್ಣು ಮಕ್ಕಳ ಊರು, ನನ್ನಂತಹ ಕಣ್ಣು ಕಾಣದ ಜಬ್ಬುಗಳು, ಇನ್ನು ಬೇರೆ ದಾರಿ ಇಲ್ಲದವರು ಇರುವ ತಾವು ನಮ್ಮ ಕಿಟ್ಟನಿಗೆ ನಾನು ಹೇಳಿದೆ. ಸಾಕು ನನ್ನ ಹೋಟೇಲು ಇದ್ದ ನಾಲ್ಕು ಮುಡಿ ಗದ್ದೆಗಳನ್ನು ರೂಢಿ ಮಾಡಿಕೊಂಡು ಬದುಕುವ ಎಂದರೆ ಹೋಟೇಲಿದ್ದು ಬಾರಿ ಸಂಭ್ರಮ ಮಾಡುತ್ತೇನೆಂದು ಕುಂದಾಪುರದಲ್ಲಿಯೇ ಇದ್ದಾನೆ. (ಅದೇ, ಪು. ೩೦೦)

"ನಗದು ಒಂದು ಆಣಿಯಾದರೂ ಬೇಡವೇ? ಮನೆಯಿಂದ ತೆಂಗಿನಕಾಯಿ ಒಯ್ದರೂ ಬಾಳೆಯ ಹಣ್ಣು, ದೇವರಿಗೆ ಮೂರು ಕಾಸು ಕಾಣಿಕೆ ಮೇಲೆ ಮುಕ್ಕಾಲಿಗೆ ಮಂಡಕ್ಕಿ ಒಟ್ಟು ಒಂದಾಣೆಯ ಬದುಕು ಎಲ್ಲಿಂದ ಬರಬೇಕು ಆ ಕಾಸು ಅತ್ತೆಯೊಡನೆ ಅದೇ ಪ್ರಸ್ತಾಪ ಮಾಡಿದಳು ನಾಗವೇಣಿ...... ಒಂದು ಸೇರು ಅಕ್ಕಿಯನ್ನಾದರೂ ಮಾರಿ ತೇರಿನ ಖರ್ಚು ಮಾಡುವ ಎಂದು ನಿರ್ಧರಿಸಿದಳು. (ಅದೇ, ಪುಟ. ೨೬೦) (ಸಾಲಿಗ್ರಾಮ ಜಾತೆಗೆ ತೆರಳಲು ಬೇಕಾದ ದುಡ್ಡಿನ ಅವಶ್ಯಕತೆಯನ್ನು ಈ ಸಂದರ್ಭ ನಿರೂಪಿಸುತ್ತದೆ. ಕಾಲ ಸರಿದಂತೆ ಅಕ್ಕಿ ಧಾನ್ಯಗಳಿಗಿಂತ ದುಡ್ಡಿನ ಬೆಲೆ ಪ್ರಮುಖವಾಗಿ ಹಣ ಸಂಪಾದನೆಯೇ ಬದುಕಿನ ಉದ್ದೇಶವಾದುದ್ದನ್ನು ಕಾರಂತರು ಮೂರು ತಲೆಮಾರುಗಳ ಕತೆಯಲ್ಲಿ ಸೂಕ್ಷ್ಮವಾಗಿ ನಿರೂಪಿಸುತ್ತಾರೆ. ಇಲ್ಲಿ ಭೂಮಾಲೀಕ ವರ್ಗದ ಕುಟುಂಬವೊಂದರ ಚಿತ್ರಣ ಮಾತ್ರ ಇದೆ. ಕೃಷಿ ಕೂಲಿ ಕಾರ್ಮಿಕರ ಸುತ್ತ ಇದ್ದ ಒಕ್ಕಲು ಮಕ್ಕಳ ಬದುಕಿನ ಬವಣೆಗಳಿಲ್ಲ.

ನಾ ಮೊಗಸಾಲೆ ಯವರ 'ಉಲ್ಲಂಘನೆ' ಕಾದಂಬರಿ ಒಟ್ಟು ಐದು ತಲೆಮಾರಿನ ಜೀವನ ಕ್ರಮದಲ್ಲಿ ಆದ ಸ್ಥಿತ್ಯಂತರಗಳನ್ನು ಹೇಳುತ್ತಾ ಹೋಗುತ್ತದೆ. ಇದಕ್ಕೆ ಕಾರಣ ಆರ್ಥಿಕ ಸಾಮಾಜಿಕ ಕಾರಣಗಳಾದರೂ ಸಾಂಸ್ಕೃತಿಕ ಲೋಕ ವಿಭಿನ್ನವಾಗುತ್ತ ಹೋಗುತ್ತದೆ. ಸಾಂತೇರು ಗುತ್ತಿನ ವಂಶ ವೃಕ್ಷದಲ್ಲಿ ಆರಂಭದ ಎರಡು ಮೂರು ತಲೆಮಾರುಗಳು ಕೃಷಿಯಲ್ಲಿ ಗುರುತಿಸಿಕೊಂಡವು. ವಸಾಹತುಶಾಹಿಯ ಆಡಳಿತದ ಪರಿಣಾಮ ಹಲವಾರು ಬದಲಾವಣೆಗಳು ಕಣ್ಣಿಗೆ ರಾಚುವಂತೆ ಕಾಣುತ್ತದೆ. ಶಾಂತಕ್ಕೆ ಮತ್ತು ಶೀನಪ್ಪ ಹೆಗಡೆಯ ಕಾಲಕ್ಕೆ ಸಾಂತೇರ್ ಗುತ್ತು ಕೃಷಿಯನ್ನೇ ನೆಟ್ಟಿದ್ದರೂ ಅಳಿಯ ಸೇಸಪ್ಪ ಹೆಗ್ಡೆ ತನಗೆ ಸಿಕ್ಕ ಶಿಕ್ಷಣ, ಸ್ವಾತಂತ್ರ್ಯ ಚಳುವಳಿಯಲ್ಲಿ ಪಾಲು ಪಡೆದಿದ್ದು ದುಡಿಮೆಯ ಪರಿಭಾಷೆಯೂ ಬದಲಾಯಿತು.

"ನಮ್ಮ ಸಮುದಾಯದಲ್ಲೂ ಈಗ ಕೃಷಿಯಷ್ಟೇ ಹೆಚ್ಚಿನ ಆಧ್ಯತೆ ಇಂಗ್ಲಿಷ್ ವಿದ್ಯಾಭ್ಯಾಸದ ಕಡೆಗೂ ಪ್ರಾರಂಭವಾಗಿದೆ. (ಮೊಗಸಾಲೆ.ನಾ, ೨೦೦೮; ಪು. ೨೨೩) ಇಂಗ್ಲಿಷ್ ಶಿಕ್ಷಣ ಪಡೆದ ಪರಿಣಾಮ ಸಮಾಜದಲ್ಲಿ ಆದ ಸ್ಥಿತ್ಯಂತರಗಳು ಕುಟುಂಬದಲ್ಲಿ ಮತ್ತು ಸಮಾಜದಲ್ಲಿ ಗೋಚರವಾಗುವಂತಿದೆ. "ಸಂಕಪ್ಪ ಈ ಶಾಲೆಯಲ್ಲಿ ಮೊದಲ ವರುಷದ ಮೊದಲ ವಿದ್ಯಾರ್ಥಿ. ಅವನು ಕುಳಿತುಕೊಳ್ಳಲಿಕ್ಕಾಗಿಯೇ ಶಾಂತಕ್ಕ ಒಂದು ಪುಟ್ಟ ಬೆಂಚೊಂದನ್ನು ಶೀನಾಚಾರಿಯಲ್ಲಿ ಮಾಡಿಸಿದರು.... ಸಾಂತೇರ್ ಗುತ್ತಿನ ಕೂಲಿಯಾಳುಗಳ ಮಕ್ಕಳು ಅಥವಾ ಗುತ್ತಿನಾರ್ ಮಕ್ಕಳಲ್ಲಿ ಯಾರೂ ಮೊದಲಿಗೆ ಈ ಶಾಲೆಯ ಕಡೆ ಮುಖ ಹಾಕಲಿಲ್ಲ. ಆದರೆ ಗುತ್ತಿನಾರ್ ಗುತ್ತಿನ ಯಜಮಾನಿ ಮತ್ತು ಗುತ್ತಿನ ಮನೆಗೆ ರೈಗಳು, ಬಂದಷ್ಟು ಸಲವೂ 'ಬರವು ಬೋಡು' ಎಂದು ಮೇಲಿಂದ ಮೇಲೆ ಅವರಿಗೆಲ್ಲ ಹೇಳುತ್ತಲೇ ಬಂದದ್ದರಿಂದ ಗುತ್ತಿನ ಹುಡುಗ ಸಂಕಪ್ಪನ ಜೊತೆಗೆ – ಕರಿಯ ಪೂಜಾರಿಯ ಅಳಿಯ ಬಾಬು ಪೂಜಾರಿ, ಹಸನಬ್ಬನ ಮಗ ಆದಂಕುಟ್ಟಿ, ಇನಾನ ಸೋಜನ ಮಗ ಒಚ್ಚ, ಐತು ಮೂಲ್ಯನ ಮಗ ಮಹಾಬಲ ಮೊದಲಾದವರು ಶಾಲೆಯ ಮೆಟ್ಟಿಲೇರಲು ನಿಧಾನವಾಗಿ ಮುಂದೆ ಬಂದರು.

ಎರಡನೇ ವರುಷದಲ್ಲಿ ಮತ್ತೆ ಊರ ಏಳೆಂಟು ಮಕ್ಕಳು ಸೇರ್ಪಡೆಗೊಂಡರು. ಅವರು ತಂತಮ್ಮ ಮನೆಗಳಲ್ಲಿ ಆ, ಇ ಅಕ್ಷರಗಳನ್ನು ಹೊಂದಿಸಿ ಓದುವುದನ್ನು ನೋಡಿ ಒಂಬತ್ತು ಕೆರೆಯ ಉಳಿದ ರೈತಾಪಿ

ಜನರಿಗೂ ತಮ್ಮ ಮಕ್ಕಳು ಶಾಲೆಗೆ ಹೋದರೆ ಆದೀತು ಎಂದು ಅನಿಸತೊಡಗಿತು. ಅಂಥವರಿಗೆ ಕೂಲಿ ಕೆಲಸಗಳಿಗೆ ಹೋಗದಿದ್ದರೆ ಹೊಟ್ಟೆ ತುಂಬದು! ಕೂಲಿಗೆ ಹೋದರೂ ಮನೆಯಲ್ಲಿರುವ ಅವರ ಮಕ್ಕಳನ್ನು ನೋಡಿಕೊಳ್ಳಲು ಇಲ್ಲವೇ ದನಕರುಗಳನ್ನು ಮೇಯಿಸಲು; ಅಂಗಳದ ಕಾಗೆ ನಾಯಿಗಳನ್ನು ಓಡಿಸಲು ಮನೆಯಲ್ಲಿ ಮಕ್ಕಳು ಬೇಕೆ ಬೇಕು ಎಂಬ ಸ್ಥಿತಿ ಇತ್ತು. ಓದಿ ಮಾಡುವುದೇನು ಎಂದು ಇಂಥವರೂ ಕೆಲಕಾಲ ಸುಮ್ಮನಿದ್ದರು, ಅಲ್ಲದೆ ಅದಕ್ಕೆ ಪರಿಹಾರ ಸೂಚಿಸುವ ಮಂದಿ ಆಗ ಊರಲ್ಲಿ ಯಾರೂ ಇರಲಿಲ್ಲ. ಮಕ್ಕಳನ್ನು ಶಾಲೆಗೆ ಕಳುಹಿಸಿ ಎಂದು ಹೆತ್ತವರನ್ನು ಒತ್ತಾಯಿಸುವ ಧೈರ್ಯ ಮತ್ತು ಉತ್ಸಾಹವೂ ಅಂದಿನ ಅಧ್ಯಾಪಕರುಗಳಲ್ಲಿ ಇರಲಿಲ್ಲ. (ಮೊಗಸಾಲೆ.ನಾ ೨೦೦೮, ಪು. ೨೨೪)

"ಕೃಷಿ ಕೆಲಸವನ್ನು ಒತ್ತಟ್ಟಿಗಿರಿಸಿ ಶಿಕ್ಷಣ ಕಡೆ ಮುಖ ಮಾಡಿದವರೆಲ್ಲ ಒಮ್ಮೆಲೆ ವೃತ್ತಿಯನ್ನು ಬದಲಾಯಿಸಲಿಲ್ಲ. 'ಸಾಂತೇರ್ ಗುತ್ತಿನಲ್ಲಿ ಎಣೆಲ್' ಬೆಳೆಯ ಕಟಾವು ಮುಗಿಯಿತು. ಸುಗ್ಗಿ ಸಾಗುವಳಿಯ ಚಟುವಟಿಕೆಗಳು ಪ್ರಾರಂಭವಾದವು. ಭೂ ಮಸೂದೆ ಜಾರಿಗೊಂಡ ಮೇಲೆ ಗುತ್ತಿನ ಮನೆಯ ಒಕ್ಕಲುಗಳೆಲ್ಲ ಮನೆಯ ಎಲ್ಲಾ ಗುತ್ತಿನ ಸಂಬಂಧವನ್ನು ಕಳಕೊಂಡು ಸ್ವತಂತ್ರರಾಗಿದ್ದರು.(ಅದೇ, ಪು. ೩೨೧)

"ಹಿಂದೆ ಈ ಗೇಣಿದಾರರಿಗೆ ನಮಗೆ ಗೇಣಿ ಕೊಡಬೇಕು ಎಂಬ ಭಯ ಇತ್ತು. ಆ ಕಾರಣದಿಂದಲೂ ಅವರಿಗೆ ಬೆವರು ಸುರಿಸಿ ದುಡಿಯುತ್ತಿದ್ದರು. ಈಗ ಯಾರ ಹಂಗೂ ಅವಕ್ಕಿಲ್ಲ. ಮುಂದೆ ಶುದ್ಧ ಸೋಮಾರಿಗಳಾಗುತ್ತಾರೆ ನೋಡು ಈ ಭೂಮಿ ಈ ತನಕ ಸಮೃದ್ಧಿಯನ್ನು ಅವರಿಗೂ ನಮಗೂ ಕೊಟ್ಟಿತ್ತು. ಇನ್ನು ಹಾಗಲ್ಲ ಭೂಮಿ ಕೂಡಾ ಬಂಜೆಯಾಗುತ್ತಾಳೆ" (ಅದೇ, ಪು. ೩೨೨)

'ಗುತ್ತಿನ ಕೃಷಿ ಕಾರ್ಯಗಳು ಮೂಲದಾಳುಗಳು ಮತ್ತು ಇನ್ನಿತರ ಬಿಡು ಒಕ್ಕಲುಗಳಿಂದ ಮಾತ್ರ ನಡೆಯಬೇಕಾದ ಸ್ಥಿತಿ ಬಂತು. ಮಾಜಿ ಗೇಣಿದಾರರಿಗೂ ಕೂಲಿ ಕೊಟ್ಟರೂ, ಅವರು ಗುತ್ತಿನ ಅಂಗಳಕ್ಕೆ ಬರುವುದು ನಿಂತು ಹೋಯಿತು. (ಅದೇ, ಪು ೩೫೮) ಆದಂಕುಟ್ಟಿ ಕರಾವಳಿಯ ಹೆದ್ದಾರಿಯ ಬದಿಯಲ್ಲಿ ಸರಕಾರಿ ಜಮೀನಲ್ಲಿ ಮನೆ ನಿರ್ಮಿಸಿಕೊಂಡ. ಅವನ ಮಾವ ಹಾಜಿ ಮುಮ್ಮಟ್ಟಿಯವರು ಸಾಧು ಬೀಡಿಯ ಬೀಡಿ ಬ್ರಾಂಚು ಉಳ್ಳಾಲ ಮತ್ತು ಒಂಭತ್ತು ಕೆರೆಯ ಹೊಸಂಗಡಿಯಲ್ಲಿ ತೆರೆದು ಕೊಡಿಸಿದರು. (ಅದೇ, ಪು. ೩೫೮)

ಆದಂ ಕುಟ್ಟಿಯ ಬೀಡಿ ಬ್ರಾಂಚಿನಿಂದ ಬೀಡಿ ಎಲೆ ಮತ್ತು ತಂಬಾಕಿನ ಪುಡಿಯನ್ನು ಕೊಂಡು ಹೋಗಿ ಬೀಡಿ ಕಟ್ಟಲು ಮೊದ ಮೊದಲು ಒಂಭತ್ತು ಕೆರೆಯಲ್ಲಿ ಯಾರೂ ಹೆಚ್ಚು ಉತ್ಸಾಹ ತೋರಿಸಲಿಲ್ಲ. ಆದರೆ ಗುತ್ತಿನ ಗೇಣಿದಾರಿಗಿದ್ದ ಮೂಸಬ್ಬ, ಮೊಯಿದಿನ್, ಮತ್ತೆ ಹುಸೇನ್ ಬ್ಯಾರಿಯ ಮನೆಯ ಅದಂಕುಟ್ಟಿಯೂ ಅವನ ಹೆಂಡತಿ ಹಾಜಿರಳೂ ಬೀಡಿ ಕಟ್ಟುವ ಕಲೆ ಎಷ್ಟು ಸುಲಭ ಎಂದು ಹೇಳಿಕೊಟ್ಟರು. ವಾರದೊಳಗೆ ಉಳಿದ ಮನೆಗಳಿಂದ ಒಬ್ಬೊಬ್ಬರಂತೆ ಮೂರು ಮಂದಿ ಆದಂಕುಟ್ಟಿಯ ಬ್ರಾಂಚಿಗೆ ಒಂದಷ್ಟು ಬೀಡಿಗಳನ್ನು ಕಟ್ಟಿ ತಂದೊಪ್ಪಿಸಿದರು. ಆದಂ ಕುಟ್ಟಿ ತನ್ನ ಅಂಗಡಿಗೆ ಬಂದವರಿಗೆಲ್ಲ 'ನೋಡಿ ಇದು ಇಂಥವರು ಕಟ್ಟಿದ ಬೀಡಿ ಎಷ್ಟು ಚೆನ್ನಾಗಿದೆ ನೋಡಿ' ಅವನ್ನು ಪ್ರದರ್ಶಿಸಿದ ಪ್ರಯತ್ನ ಪಟ್ಟರೆ ದಿನವೊಂದಕ್ಕೆ

ಒಂದು ಸಾವಿರ ಬೀಡಿ ನೀವೂ ಕಟ್ಟಬಹುದು ನೀವು ದಿನಕೂಲಿಗಿಂತಲೂ ಎರಡರಷ್ಟು ಸಂಪಾದನೆಯನ್ನು ಸಂಪಾದಿಸಬಹುದು ಎಂಬ ಭಾಷಣ ಬಿಗಿಯ ತೊಡಗಿದ.

ತಿಂಗಳ ಒಳಗೆ ದಂಬಮೂಲೆ ಕೂಸಕ್ಕ, ಕುಂಟಲಪಾಡಿಯ ಕಮಲಕ್ಕ, ದೇಂದೊಟ್ಟಿನ ಶಾರದ ಹೀಗೆ ಕೂಲಿ ಕೆಲಸಕ್ಕೆ ಹೋಗುವ ಮನೆಮಂದಿಗಳಲ್ಲಿನ ಹುಡುಗಿಯರು ಆದಂ ಕುಟ್ಟಿಯ ಬೀಡಿ ಬ್ರಾಂಚಿಗೆ ಬಂದು ಹೋಗಲು ಪ್ರಾರಂಭಿಸಿದರು. ಅವರಿಗೆಲ್ಲ ಸ್ವತಃ ಹಾಜೀರಳೇ ಬೀಡಿ ಕಟ್ಟುವ ಕೌಶಲ್ಯವನ್ನು ತಿಳಿಸಿಕೊಟ್ಟಳು. ಮಳೆ ಬಿಸಿಲಿಗೆ ಹೋಗಿ ಇಡೀ ದಿನ ಬೆವರು ಸುರಿಸಿ ದುಡಿದು ಗಳಿಸುವುದಕ್ಕಿಂತ ಒಂದು ಒಂದೂವರೆ ಪಾಲಿನಷ್ಟು ಸಂಪಾದನೆಯನ್ನು ಮನೆಯೊಳಗೆ ಕುಳಿತು ಬೀಡಿ ಕಟ್ಟಿ ಗಳಿಸಬಹುದು ಎಂದುಕೊಂಡರು ಅವರು. ಅವರು ತಾವೂ ಯಾಕೆ ತೊಡಗಿಕೊಳ್ಳಬಾರದೆಂಬ ಉತ್ಸಾಹದ ಗಾಳಿ ಒಂಭತ್ತು ಕೆರೆಯ ಪ್ರತಿ ಮನೆ ಮನೆಗಳ ಬಾಗಿಲುಗಳನ್ನು ನಿಧಾನ ಬಡಿಯತೊಡಗಿತು.(ಅದೇ, ಪು. ೩೫೯)

ಆದಂ ಕುಟ್ಟಿಯ ಬೀಡಿ ಬ್ರಾಂಚ್ ಪ್ರಾರಂಭವಾಗಿ ಆರು ತಿಂಗಳಾಯಿತು. ಅಷ್ಟರಲ್ಲಿ "ನಮ್ಮ ಜಮೀನಿನಲ್ಲಿ ಹಿಂದೆ ಬಿಡು ಒಕ್ಕಲುಗಳಾಗಿ ಇದ್ದವರೆಲ್ಲ ಈಗ ಬೇಕೆಂದರೂ ನಮ್ಮ ಜಮೀನಿನ ಕೆಲಸಕ್ಕೆ ಬರುವುದು ಕಡಿಮೆಯಾಗಿದೆ. ಅಕ್ಕ ಹೀಗೇ ಆದರೆ ಇನ್ನು ನಾಲ್ಕು ವರುಷದಲ್ಲಿ ಯಾರೂ ಕೃಷಿ ಕಾರ್ಯದಲ್ಲಿ ತೊಡಗಿಕೊಳ್ಳುವುದು ಕಷ್ಟ' (ಅದೇ ಪು ೪೪೩)ಕಾಲ ಬದಲಾದಂತೆ ಕಸುಬುಗಳೂ, ಬದಲಾಗುತ್ತ ಬಂದವು.

"ಇದು ನಿನ್ನ ಕೃಷಿ ಕಾರ್ಯಕ್ಕೆ ಮಾತ್ರವಲ್ಲ ಸುಂದರ, ಹೋಟೆಲ್ ಉದ್ಯಮವೂ ಎದುರಿಸುತ್ತಿರುವ ಸಮಸ್ಯೆಯೂ ಇದೇ. ಈಗ ನೋಡು ನಮ್ಮ ಹೋಟೇಲಿಗೆ ನಾಲ್ಕೆ ನಾಲ್ಕು ಜನ ಬೇಡ, ಎರಡು ಜನವನ್ನಾದರೂ ಈ ಒಂಭತ್ತುಕೆರೆಯಿಂದ ಮಾಡಿ ಕೊಡಲು ನಿನಗೆ ಸಾಧ್ಯವೇ? ಇಲ್ಲ ಉಹ್ಞೂ ಅಂತ ಕಾಣುತ್ತದೆ ನನಗೆ. ನಾನು ಚಿಕ್ಕವಳಿದ್ದಾಗ ಮಾವ ಅಥವಾ ಅಮ್ಮ ನಮ್ಮ ಗೇಣಿ ಅಥವಾ ಬಿಡು ಒಕ್ಕಲುಗಳನ್ನು ಕರೆದು ನಿನ್ನ ಮಗನನ್ನು ಮುಂಬೈಗೆ ನಮ್ಮ ಚಿಕ್ಕಪ್ಪನ ಹೋಟೇಲಿಗೆ ಅಲ್ಲದೆ ಬೇರೆ ಬೇರೆ ಹೋಟೇಲುಗಳಿಗೂ ಎಷ್ಟೋ ಮಂದಿ ಹೋಗುತ್ತಿದ್ದರು. ಅಂಥಲ್ಲಿ ಈಗ ಒಬ್ಬ ಹುಡುಗನನ್ನು ಬೇಕೆಂದರೂ ಇಂಥ ಕೆಲಸಕ್ಕೆ ಹೊರಡಿಸುವುದು ಕಷ್ಟ! ಎಂದಳು" (ಅದೇ, ಪು. ೪೪೪)

ಗದ್ದೆ ಸಾಗುವಳಿಯನ್ನು ತ್ಯಜಿಸಿ ಹೋಟೇಲು ಉದ್ದಿಮೆಯನ್ನು ಆರಿಸಿಕೊಂಡು ಬಾಳಿದ ಜನ ಸಮುದಾಯಗಳಿಗೆ ಬದಲಾದ ಕೌಶಲ್ಯವನ್ನು ಅರಗಿಸಿಕೊಂಡು ಬಾಳುವುದೂ ಸುಲಭವಿರಲಿಲ್ಲ. ಹೋಟೇಲ್‌ನಂತಹ ಉದ್ದಿಮೆಯೂ ಹಳ್ಳಿಯು ನಗರೀಕರಣಕ್ಕೆ ಬದಲಾಗುತ್ತಿರುವಾಗಲೂ ಸ್ಥಿತ್ಯಂತರಗೊಂಡಿತು. ಹಳ್ಳಿಯನ್ನು ಸಂಪರ್ಕಿಸಲು ನಿರ್ಮಾಣಗೊಂಡ ರಸ್ತೆಗಳು, ಆರಂಭವಾದ ಹೊಸ ಉದ್ದಿಮೆಗಳು ಮತ್ತು ಹೊಸ ರೀತಿಯ ಕೆಲಸಗಳು, ಜನ ಸಂಪರ್ಕಗಳು ಮತ್ತು ವಿಶ್ರಾಂತಿಯ ತಂಗುವ ದಾಣಗಳ ಅನಿವಾರ್ಯತೆ ಹಸಿವಿನ ಮೂಲಭೂತ ಸಮಸ್ಯೆಯ ಬಗೆಗೆ ಹೊಸ ದಿಶೆಯಿಂದ ಯೋಚಿಸುವಂತೆ ಮಾಡಿತು. ಮರಗಳನ್ನು ಕಡಿಯುವ ಕೆಲಸ ಮಾಡುತ್ತಾ ಮರದ ವ್ಯಾಪಾರ ಮಾಡಿದಂತೆ ಕಪ್ಪು ಕಲ್ಲನ್ನು ಕೈಯಲ್ಲಿ ಕಡಿಯುವ ಕೆಲಸ ಮಾಡುತ್ತಾ ಕಲ್ಲಿನ ಕೋರೆಗಳನ್ನು ನಿರ್ಮಿಸಿದ್ದರು. 'ನಾನು ಪುಷ್ಪಕರನ್ ಕೇರಳದ ತ್ರಿಶ್ಯೂಕ್‌ನಿಂದ ಬಂದಿದ್ದೇನೆ. ಕೈಯಿಂದ ಕೆಂಪುಕಲ್ಲನ್ನು ಕಡಿದುಕೊಡುವ ಕೂಲಿಕಾರ ನಾನು (ಅದೇ ಪು

೩೯) ಊರು ಬೆಳೆದಂತೆಲ್ಲಾ ಮನೆಗಳ ವಿನ್ಯಾಸ ಅದನ್ನು ಕಟ್ಟುವ ರೀತಿಯಲ್ಲಿ ಬದಲಾವಣೆಗಳಾದಾಗ ಹುಲ್ಲು, ಮಣ್ಣಿನಿಂದ ನಿರ್ಮಿಸುತ್ತಿದ್ದ ಮರ, ಕಲ್ಲುಗಳಿಂದ ನಿರ್ಮಾಣ ಮಾಡುವ ಹಂತಕ್ಕೆ ಬಂತು. ಹೊಸ ತಂತ್ರಜ್ಞಾನದ ವಿನ್ಯಾಸದ ಕೆಲಸಗಳಿಗೆ ದೂರದ ಊರುಗಳಿಂದ ಜನ ಬಂದು ಸಿದ್ಧತೆಗಳನ್ನು ಮಾಡಿಕೊಳ್ಳುವ ಹಾಗೆಯೇ ಅದರ ಕೌಶಲ್ಯವನ್ನು ರೂಢಿಸಿಕೊಂಡರು. ನಿಮ್ಮ ಊರಲ್ಲಿ ಒಬ್ಬರು ಟಿಂಬರ್ ಮರ್ಚೆಂಟ್ ಇದ್ದರಲ್ಲಾ ಕೃಷ್ಣ ಶೆಟ್ಟಿ ಅಂತ ಅವರು ಮರವನ್ನು ಸಿಗಿದು ಹಲಗೆ ರೀಪು ಪಕಾಸು ಮಾಡಿಸಲಿಕ್ಕೆ ಜನ ಬೇಕು ಎಂದು ಕೊಂಡು ತಿಂಗಳ ಹಿಂದೆ ನಮ್ಮ ಊರಿಗೆ ಬಂದಿದ್ದರು. ಅಲ್ಲಿಂದ ಉಣ್ಣಿ ಕೃಷ್ಣನ್ ಮತ್ತು ವಾಸುದೇವನ್ ಎನ್ನುವ ಇಬ್ಬರು ಈಗ ಇಲ್ಲಿಗೆ ಬಂದಿದ್ದಾರೆ ಅವರೇ ನನಗೆ ಈ ವಿಚಾರ ಹೇಳಿದ್ದು.! (ಅದೇ, ಪುಟ. ೩೭) ಕೆಲಸದ ಸ್ವರೂಪ ಬದಲಾಯಿತು. ಆದಂ ಕುಟ್ಟಿಯ ಬೀಡಿ ಪ್ರಾರಂಭವಾಗಿ ಆರು ತಿಂಗಳಾಯಿತು. ಅಷ್ಟರಲ್ಲಿ ಆತನ ಒಂಭತ್ತುಕೆರೆಯ ಬೀಡಿ ಬ್ರಾಂಚಿನಲ್ಲಿ ಹದಿನೈದಕ್ಕೂ ಮಿಕ್ಕಿ ಹುಡುಗಿಯರು ನೋಂದಾಯಿಸಲ್ಪಟ್ಟಿದ್ದರು. ಉಳ್ಳಾಲದ ಬೀಡಿ ಬ್ರಾಂಚಿನಲ್ಲಿ ಅದರ ಎರಡರಷ್ಟು ಹುಡುಗಿಯರು ಉತ್ಸಾಹ ತೋರಿಸಿದು ಎನ್ನುವ ವಾರ್ತೆ ಒಂಭತ್ತು ಕೆರೆ ತುಂಬಾ ತುಂಬಿತು.

"ಇನ್ನೆರಡು ವರ್ಷಗಳಲ್ಲಿ ಒಂಭತ್ತು ಕೆರೆಯ ಕೂಲಿ ಕಾರ್ಮಿಕರ ಮನೆ ಮಂದಿ ಮಾತ್ರವಲ್ಲ ಮಾಜಿ ಗೇಣಿದಾರರ ಮನೆಮಂದಿಯೂ ಬೀಡಿ ಉಧ್ಯಮದಾಚೆ ಉತ್ಸಾಹ ತೋರಿಸುತ್ತಾರೆ ಎಂಬ ಆತ್ಮ ವಿಶ್ವಾಸ ಆದಂ ಕುಟ್ಟಿಯಲ್ಲಿ ಹುಟ್ಟಿತು.

"ಇದೀಗ ಆದಂಕುಟ್ಟಿಯ ಹೊಸಂಗಡಿಯ ಬೀಡಿ ಬ್ರಾಂಚ್ ವರುಷದೊಳಗೆ ದೊಡ್ಡದಾಗಿ ಕಾರ್ಯ ನಿರ್ವಹಿಸಲು ತೊಡಗಿದೆ. ಅಲ್ಲಿಗೆ ಬರುವ ಮಂದಿಯ ಜೀವನಾವಶ್ಯಕತೆಗಳನ್ನು ಪೂರೈಸಲಿಕ್ಕಾಗಿ ಅದರ ಪಕ್ಕದಲ್ಲೇ ಆತ ತನ್ನದೇ ಆದ ಒಂದು ಜಿನಸಿ ಅಂಗಡಿಯನ್ನು ತೆರೆದಿದ್ದಾನೆ. ಇದರಿಂದಾಗಿ ಹೊಸಂಗಡಿಯ ಮುಂದೆ ಸದಾ ಜನ ಗಿಜಿಗಿಜಿಸಲು ತೊಡಗಿದ್ದಾರೆ. ಅದೇ ಸುಮಾರಿಗೆ ಪಾನ ನಿಷೇದ ರದ್ದಾಗಿ ಶೇಂದಿ ಶರಾಬುಗಳ ಅಂಗಡಿಗಳೂ ಆ ಅಂಗಡಿಯ ಪಕ್ಕದಲ್ಲೇ ಮೇಲೆದ್ದಿವೆ. ಇವುಗಳ ಜೊತೆಗೆ ಚಾ, ಕಾಫಿ ಚಾಕಣಗಳೂ ಇದ್ದರೆ ಒಳಿತಲ್ಲ ಎಂದು ಯಾರೋ ಒಬ್ಬರು ಆದಂಕುಟ್ಟಿಗೆ ಸಲಹೆ ನೀಡಿದ್ದಾರೆ ಒಂಭತ್ತು ಕೆರೆಯಲ್ಲಿ ಕೂಲಿ ಕಾರ್ಮಿಕನಾಗಿರುವ ಮಹಾಬಲ ನಾಯ್ಕನ ಮಗ ರಾಗು (ರಾಘವ) ಮುಂಬಯಿಯಲ್ಲಿ ಹೋಟೇಲ್ ಮಾಣಿಯಾಗಿದ್ದಾತ ಊರಿಗೆ ಬಂದಿದ್ದಾಗ ಅವನನ್ನು ಆದಂಕುಟ್ಟಿ ನೀನು ಇಲ್ಲಿ ಹೋಟೆಲ್ ನಡೆಸುವುದಾದರೆ ನಾನು ಅದರ ಎಲ್ಲ ವ್ಯವಸ್ಥೆ ಮಾಡಿಕೊಡುತ್ತೇನೆ ಎಂದು ಉತ್ತೇಜಿಸಿದ್ದಾನೆ. ಮಹಾಬಲನಾಯ್ಕನಿಗೂ ಮಗ ರಾಗು ಊರಲ್ಲೇ ಉಳಿದರೆ ಆಗಬಹುದೆಂಬ ಅಭಿಪ್ರಾಯ ಮೊದಲೇ ಇದ್ದುದು ಈಗ ನಿಜವಾಗುವುದು ಖುಶಿಯಾಗಿದೆ. ಅಪ್ಪ ಮಗ ಇಬ್ಬರೂ ಒಪ್ಪಿದ್ದರಿಂದ ಹೊಸಂಗಡಿಯಲ್ಲಿ ರಾಗು ನಾಯ್ಕನ"ರಾಗವೇಂದ್ರ ಭವನ' ಈಗ ಹುಟ್ಟಿಕೊಂಡಿತು." (ಅದೇ, ಪು. ೩೨೯)

ಕೃಷಿ ಕೆಲಸವು ಪಲ್ಲಟಗೊಂಡಾಗ ಬದಲಾದ ವೃತ್ತಿಗಳೊಂದಿಗೆ ಬಂದಿರುವ ಹೊಸ ವೃತ್ತಿಗಳು ಪರಂಪರೆಯ ಕಸುವನ್ನು ಮಾತ್ರ ಬದಲಾಯಿಸಿದ್ದಲ್ಲ. ಜೀವನಕ್ರಮವನ್ನು ಸ್ಥಿತ್ಯಂತರಗೊಳಿಸಿಕೊಂಡವು. ಸಾಮಾಜಿಕ ಮಂಚಲನೆಯಲ್ಲಿ ವೃತ್ತಿಗಳ ಸ್ಥಿತ್ಯಂತರವು ಜೀವನಮಟ್ಟವನ್ನು ಬದಲಾಯಿಸಿತು. ಕೃಷಿಯೇತರ

ಕಸುಬೊಂದು ಆದಾಯದ ಮೂಲವಾದಾಗ ವೃತ್ತಿಯ ನೈಪುಣ್ಯತೆಯನ್ನು ಗಳಿಸಿಕೊಳ್ಳುವುದೂ ಮುಖ್ಯವಾಯಿತು. ಕೃಷಿಯನ್ನು ತ್ಯಜಿಸದೆಯೇ ಜೀವನೋಪಾಯಕ್ಕಾಗಿ ಹುಟ್ಟಿಕೊಂಡ ಉದ್ಯೋಗಗಳು ಮತ್ತು ಹೊಟೇಲ್ ಉದ್ದಿಮೆಯ ಕೌಶಲ್ಯವನ್ನು ಪಡೆಯುವುದು ಸುಲಭವಾದ ಕೆಲಸವಾಗಿರಲಿಲ್ಲ. ಹಳ್ಳಿಯಲ್ಲಿ ವ್ಯಾಪಾರ ವಹಿವಾಟುಗಳು ಬೆಳೆದದ್ದರಿಂದ ಕೆಲಸದ ಸ್ವರೂಪಗಳೂ ಬದಲಾದವು ನಗರವನ್ನು ಪ್ರವೇಶಿಸಿದ ಜನರು ವೃತ್ತಿಯನ್ನು ಬದಲಾಯಿಸಿ ಹೊಟ್ಟೆಪಾಡಿಗಾಗಿ ಆರಿಸಿಕೊಂಡ ದಾರಿಗಳೂ ಭಿನ್ನವಾಗಿದ್ದವು. ಆಯಾಮಗಳೂ ಬದಲಾಗುತ್ತ ಹೋದುದು ಸ್ಥಿತ್ಯಂತರದ ಸ್ವರೂಪವೇ ಆಗಿತ್ತು. ಹೊರದುಡಿಮೆ ಮತ್ತು ಊರು ಬಿಟ್ಟು ದೂರ ನಿಂತು ಮಾಡುವ ಕೆಲಸದ ಅವಶ್ಯಕತೆಗಳ ಜತೆಗೆ ಮೂಲಭೂತ ಅವಶ್ಯಕತೆಗಳೂ ಅವಶ್ಯವಾಗಿತ್ತು. ಪ್ರಯಾಣ ಮತ್ತು ಕೆಲಸದ ದಣಿವಿಗೆ ಅನಿವಾರ್ಯತೆಗೆ ಅನುಗುಣವಾಗಿ ಅಂಗಡಿ ಮುಗ್ಗಟ್ಟುಗಳೊಂದಿಗೆ ಹೋಟೇಲು ಉದ್ದಿಮೆಯೂ ಹುಟ್ಟಿಕೊಂಡಿತು. ಪುಷ್ಪಕರ್ ಆದಂಕುಟ್ಟಿಯಲ್ಲಿ ಸಾಂಧರ್ಭಿಕವಾಗಿ ಹೀಗೆ ನುಡಿಯುತ್ತಾನೆ. "ನೀವು ಇಲ್ಲಿಗೆ ಬರುವ ಎಲ್ಲರಿಗೂ ಒಂದು ಚಾ ಕುಡಿಯುವ ವ್ಯವಸ್ಥೆ ಮಾಡಿದರೆ ತುಂಬಾ ಉಪಕಾರ ಇತ್ತು!" (ಅದೇ, ಪು. ೩೯೮) "ಆದಂಕುಟ್ಟಿ ಸಣ್ಣಗೆ ನಕ್ಕ, ಪುಷ್ಪಕರನ್ ಹೇಳುವುದರಲ್ಲಿ ಅರ್ಥ ಇದೆ ಎನ್ನಿಸಿತು ಅವನಿಗೆ, ತನ್ನ ಅಂಗಡಿಯ ಪಕ್ಕದಲ್ಲೇ ಒಂದು ಹೋಟೆಲ್ ತೆರೆದರೆ, ರಾಷ್ಟ್ರೀಯ ಹೆದ್ದಾರಿ ಇಲ್ಲಿ ಹಾದು ಹೋಗುವುದರಿಂದ ವ್ಯಾಪಾರ ಚೆನ್ನಾಗಿ ನಡೆಯಬಹುದು ಎಂದುಕೊಂಡು ಆತ, ಕೆಂಪು ಕಲ್ಲಿನ ವ್ಯಾಪಾರ, ಆಮೇಲೆ ಮರದ ವ್ಯಾಪಾರ ಎಂದು ಕಟ್ಟುತ್ತಾ ಹೋದ. ತಾನೇ ಒಂದು ಲಾರಿ ಮಾಲಕನಾದ ಹಾಗೆ, ಆಮೇಲೆ ಒಂದು ಇದ್ದ ಲಾರಿ ಎರಡಾದ ಹಾಗೆ, ಎರಡು ಇದ್ದ ಲಾರಿಗಳು ನಾಲ್ಕು ಆದ ಹಾಗೆ ... (ಅದೇ, ಪು ೩೯೮) ಕೃಷಿಯಿಂದ ವ್ಯಾಪಾರದ ಕಡೆಗೆ ಸಾಗುವ ಆರ್ಥಿಕತೆ ಆದಾಯದ ಸುಲಭ ಮೂಲವಾಗುವುದರೊಂದಿಗೆ ಒಂದು ಹತ್ತು ಪಟ್ಟು ಆಗುವುದರಿಂದ ಸಂಪತ್ತಿನ ವೃದ್ಧಿಯೂ ಆಗುತ್ತದೆ. ಗುಡ್ಡ ಅಗೆದು ಮಾಡಿದ ಗದ್ದೆಗಳಲ್ಲಿ ಕಲ್ಲು ಸಿಗುವ ಸ್ಥಳಗಳು ನಿಧಿಯ ತಾಣಗಳೇ ಆಗುತ್ತದೆ. 'ಏನೆಂದರೂ ಮುಕ್ಕಾಲು ಎಕರೆಯಷ್ಟು ಇದೆ ಈ ಗದ್ದೆ ಇದರಲ್ಲಿ ಎಷ್ಟು ಸಾವಿರ ಕಲ್ಲಿದೆ ಎಂದು ಈಗ ಹೇಳಲಾಗದು. ನೀವು ಈಗ ಕಟ್ಟಲು ಹೊರಟಂಥ ನೂರು ಮನೆಗಳಿಗೆ ಇಲ್ಲಿರುವ ಕಲ್ಲು ಸಾಕು' ಎಂದ (ಅದೇ, ಪು. ೩೯೯) ಬೆಳೆ ಬೆಳೆಯಬೇಕಾದ ಗದ್ದೆ ಮನೆ ನಿರ್ಮಾಣದ ಕೆಂಪು ಕಲ್ಲಿನ ಕೋರೆಯಾಗಿ ಪರಿವರ್ತನೆ ಹೊಂದುತ್ತದೆ. ವ್ಯಾಪಾರದ ಒಂದು ಕೊಂಡಿಯಿಂದ ಇನ್ನೊಂದಕ್ಕೆ ಸಂಪರ್ಕವಿತ್ತು. "ನೀವು ನನಗೆ ಕಲ್ಲು ಕಡಿದುಕೊಡಿ ನಾನು ನಿಮಗೆ ಬೇಕಾದ ಗಿರಾಕಿಗಳನ್ನು ಹುಡುಕಿ ತರುತ್ತೇನೆ ಎಂದ (ಅದೇ, ಪು. ೪೦೦) ಇಷ್ಟು ಮಾತ್ರವಲ್ಲ ವ್ಯಾಪಾರ ಬೆಳೆದುದರಿಂದ ಊರಿನ ಸ್ವರೂಪವೂ ಬದಲಾಗುತ್ತ ಬಂತು. "ನಿಧಾನವಾಗಿ ಆದಂ ಕುಟ್ಟಿಯ ಅಂಗಡಿಯ ಮುಂದೆ ಕಲ್ಲಿನ ಲಾರಿಗಳು ಸಾಲೋ ಸಾಲು ಬಂದು ನಿಲ್ಲಲು ಪ್ರಾರಂಭವಾಯಿತು. ಅದರಲ್ಲಿನ ಡ್ರೈವರ್, ಕ್ಲೀನರ್ ಮತ್ತು ಕೂಲಿಕಾರರಿಗೆ ದಿನಕ್ಕೆ ನಾಲ್ಕಾರು ಬಾರಿ 'ಚಾ –ತಿಂಡಿ– ಮಧ್ಯಾಹ್ನ ಊಟ ಬೇಕು ಎಂಬಂತಾಯಿತು. ಆದಂಕುಟ್ಟಿ ಒಂದು ಮುಳಿ ಹುಲ್ಲಿನ ಚಪ್ಪರ ಹಾಕಿ, ಹೋಟೇಲ್ ತೆರೆದ ಆಮೇಲೆ ಹಾಜಿರಾಳ ತಂದೆ ಮುಮ್ಮಟಿ ಇದ್ದಲ್ಲಿಗೆ ಹೋಗಿ ಅವರಿಂದ 'ಕೈಕಡ' ಕೈ ಸಾಲ ಎಂದುಕೊಂಡು ಎಂದು ಹತ್ತು ಸಾವಿರ ರೂಪಾಯಿಗಳನ್ನು ತಂದ ತನ್ನ ಅಂಗಡಿಯ ಪಕ್ಕದಲ್ಲೇ ನಾಲ್ಕು ತಿಂಗಳಲ್ಲಿ ಒಂದು ಕಟ್ಟಡವನ್ನು ಎಬ್ಬಿಸಿ

'ಬದ್ರಿಯಾ ಹೋಟೇಲ್ ಎಂದು ಬೋರ್ಡು ತಗುಲಿಸಿದ' (ಅದೇ, ಪುಟ. ೪೦೦) ನಗರೀಕರಣದ ಸ್ವರೂಪಗಳು ಕಸುಬುಗಳು ಬದಲಾಗಲು ಒಂದು ಕಾರಣವಾದರೆ ಇನ್ನೊಂದು ನೆಲೆಯಲ್ಲಿ ಹೊಸ ಉದ್ದಿಮೆಗಳು ಇಲ್ಲಿಗೆ ಕಾಲಿರಿಸಿದುವು. ಕರಾವಳಿಯ ಕಾಡು ಗುಡ್ಡಗಳಲ್ಲಿ ಹೊಗೆಸೊಪ್ಪು ಬೆಳೆದು ತಂಬಾಕಿನ ವ್ಯಾಪಾರ ಹೆಚ್ಚಿದ್ದಲ್ಲದೆ, ತಂಬಾಕನ್ನೇ ಕಚ್ಚಾ ಪದಾರ್ಥವಾಗಿ ಬಳಸುವ ಬೀಡಿ ಉದ್ದಿಮೆಯೂ ಆರಂಭವಾಯಿತು. ಕೃಷಿಯ ಯಾವ ಸಂಪರ್ಕವೂ ಇಲ್ಲದೆ ಹೊಸ ರೀತಿಯ ದುಡಿಮೆ ಬೀಡಿ ಉದ್ದಿಮೆಯಲ್ಲದೆಯೂ ಕೈಕಸುಬುಗಳ ಉದಯವೂ ಆಯಿತು. 'ಸಾಧು ಬೀಡಿ' ಯ ಬೀಡಿ ಬ್ರಾಂಚುಗಳನ್ನು ಉಳ್ಳಾಲ ಮತ್ತು ಒಂಭತ್ತುಕೆರೆಯ 'ಹೊಸಂಗಡಿ' ಯಲ್ಲಿ ತೆರೆದು ಕೊಡಿಸಿದರು. ಅಳಿಯನಿಗೆ ಓಡಾಡಲು ತಾನು ಆರು ವರ್ಷ ಉಪಯೋಗಿಸಿಕೊಂಡಿದ್ದ ೧೯೭೦ ರ ಮಾಡೆಲಿನ ಅಂಬಾಸಿಡರ್ ಕಾರನ್ನು ಮುಮ್ಮಟ್ಟಿ ಸಾಹುಕಾರರು ಉಡುಗೊರೆಯಾಗಿಯೂ ನೀಡಿದರು. (ಅದೇ, ಪು. ೩೫೮).

ಪಾರಂಪರಿಕವಾದ ಕಸುಬುಗಳು ಬೇರೆ ಬೇರೆ ಸಾಮಾಜಿಕ ಆರ್ಥಿಕ ಕಾರಣಗಳಿಗಾಗಿ ಬದಲಾಗುತ್ತ ಹೋದವು. ಸುಲಭದ ಆದಾಯದ ವ್ಯವಹಾರವಾಗಿ ಒಂದಕ್ಕೆ ಹತ್ತು ಪಟ್ಟು, ಸಾವಿರ ಪಟ್ಟಾಗುವ ವ್ಯಾಪಾರ ಹೆಚ್ಚಿನ ಗಮನ ಸೆಳೆಯಿತು. ದುಡಿಯುವವನಿಗಿಂತಲೂ ದುಡಿಸುವವನಿಗೆ ಹೆಚ್ಚಿನ ಆದಾಯವಿತ್ತು. ದುಡಿಸಿಕೊಳ್ಳುವ ತಾಕತು ಮತ್ತು ಬಂಡವಾಳದ ದೌಲತ್ತು ಇಲ್ಲಿ ಪ್ರಮುಖ ಸ್ಥಾನ ಪಡೆಯಿತು. ಕೃಷಿ ಕೆಲಸದ ಕಷ್ಟವನ್ನು ಅಷ್ಟು ಸುಲಭಕ್ಕೆ ಅಗಿಸಿಕೊಳ್ಳುವುದೂ ಸರಳವಲ್ಲ.

ನಾಗರಿಕತೆಯೆಂದು ಕರೆಯುವ ಸ್ಥಿತ್ಯಂತರದ ಹಂತದಲ್ಲಿ ಒಂದು ಸ್ಥಿತಿಯಿಂದ ಇನ್ನೊಂದು ಸ್ಥಿತಿಗೆ ಬದುಕು ಬದಲಾಗುತ್ತ ಸಾಗಿತ್ತು ಎನ್ನುವುದನ್ನು ಮರೆಯುವಂತಿಲ್ಲ "ಸಂಕಪ್ಪ ಹೆಗ್ಡೆಯವರಿಗೆ ವಾಸ್ತವದಲ್ಲಿ ಭತ್ತದ ತೆನೆಗಳು ಕುಣಿಯುತ್ತಿದ್ದ ತಮ್ಮ ಹಿಂದಿನ ಜಮೀನು ಈಗ ಕಲ್ಲಿನಕೋರೆಗಳಾಗುತ್ತಿರುವುದನ್ನು ನೋಡಿ ನೋವು ಆಗಿತ್ತು. ಆದರೆ ಮನುಷ್ಯ ತಾನೇ ಕಾಡನ್ನು ಕಡಿದು ನಾಡು ಮಾಡಿದ್ದು ಎಂಬ ಅರಿವೂ ಅವರಿಗಿತ್ತು. ಅದೇ ಹೊತ್ತಿಗೆ ಐದಾರು ಸಾವಿರ ವರುಷಗಳ ಹಿಂದೆ ಇಂದಿನ ಥಾರ್ ಮರುಭೂಮಿಯ ಪ್ರದೇಶವೂ ಹಚ್ಚ ಹಸಿರಾಗಿದ್ದುದನ್ನು ನಾಗರಿಕತೆ ಹೇಗೆ ನಾಶಮಾಡಿತು ಎಂಬುದೂ ಅವರಿಗೆ ನೆನಪಿಗೆ ಬಂತು.

ಇತ್ತ ಎರಡು- ಮೂರು ವರುಷದಲ್ಲಿ ಆದಂಕುಟ್ಟಿ ಕಲ್ಲಿನ ವ್ಯಾಪಾರಿಯಾಗಿ ಪರಿವರ್ತಿತನಾದ ಅವನ ಬೀಡಿ ಬ್ರಾಂಚಿನ ವ್ಯವಹಾರ, ಜಿನಸು ಅಂಗಡಿಯ ವ್ಯಾಪಾರ ಬದ್ರಿಯಾ ಹೋಟೇಲ್ ಉದ್ಯಮವನ್ನೆಲ್ಲ ನಡೆಸಲು ಆತ ಸೋದರಿಯರ ಗಂಡಂದಿರನ್ನೆಲ್ಲ ತಾನಿರುವಲ್ಲಿಗೆ ಕರೆಸಿದ. ಅವರಿಗೆ ಒಂದೊಂದರ ಜವಾಬ್ದಾರಿ ವಹಿಸಿಕೊಟ್ಟ. ಈ ಕಲ್ಲಿನ ವ್ಯಾಪಾರದೊಂದಿಗೆ ಮನೆಗಳನ್ನು ಕಟ್ಟುವ ಕಂಟ್ರಾಕ್ಟ್ ಕೆಲಸವನ್ನು ವಹಿಸಿಕೊಳ್ಳತೊಡಗಿದ. ಆ ಮನೆಗಳಿಗೆ ಬೇಕಾದ ಮರಮಟ್ಟುಗಳನ್ನು ಕೃಷ್ಣ ಶೆಟ್ಟರಿಂದಲೋ ಅಥವಾ ಸಾಮಿಲ್ಲಿನಿಂದಲೋ ಕೊಳ್ಳುವುದಕ್ಕಿಂತ ತಾನೇ ಖುದ್ದಾಗಿ ಮರದ ವ್ಯಾಪಾರಕ್ಕೂ ಇಳಿಯಬಾರದೇಕೆ ಎಂದೂ ಯೋಚಿಸತೊಡಗಿದ. (ಅದೇ, ಪು. ೪೦೧)

ವ್ಯಾಪಾರದ ಒಂದು ಹಂತಕ್ಕೆ ಬಂದೊಡನೆ ಅದಕ್ಕೆ ಒಡನಾಡಿಯಾಗಿ ಜತೆಯಾಗುವ ಇನ್ನೊಂದು ವ್ಯಾಪಾರವೂ ಜತೆ ಸೇರಿ ಆರ್ಥಿಕತೆ ಮತ್ತು ಆದಾಯದ ಪ್ರಮಾಣ ವೃದ್ಧಿಸುತ್ತದೆ. ಒಂದಿಷ್ಟು ಜಾಣ್ಮೆ ವ್ಯವಹಾರ

ಚಾತುರ್ಯ ಮಾತ್ರ ಇಲ್ಲಿ ಪ್ರಾಮುಖ್ಯತೆ ಪಡೆಯುತ್ತದೆ. ಕಾಲ ಕಾಲಕ್ಕೆ ಬದಲಾಗುತ್ತ ಹೋದ ಜೀವನಕ್ರಮ ಮತ್ತು ಮೌಲ್ಯಗಳು ಶ್ರಮದಿಂದ ಹಣದ ಕಡೆಗೆ ಸಾಗುವುದಕ್ಕೆ ಸಾಧ್ಯವಾಯಿತು.

ಹೋಟೇಲು ಉದ್ದಿಮೆ ಬೆಳೆಯಲು ಕಾರಣವಾದ ಸಾಮಾಜಿಕ ಸಂದರ್ಭಗಳು ಹಳೆ ಮೈಸೂರು ಪ್ರಾಂತ್ಯದಲ್ಲಿದ್ದ ವಾರಾನ್ನದ ಪರಿಕಲ್ಪನೆಗಳಿಗಿಂತ ಭಿನ್ನವಾದುವು. ಅನ್ನವನ್ನು ಮಾರಾಟ ಮಾಡಬಾರದು, ಅನ್ನದಾನ ಶ್ರೇಷ್ಠದಾನ ಎಂದ ಸಮುದಾಯಗಳೇ ಅನ್ನವನ್ನು ಮಾರಾಟ ಮಾಡುತ್ತ ಸಾಗಿ ವ್ಯಾಪಾರವನ್ನು ಹೆಚ್ಚಿಸಿಕೊಂಡದ್ದು ಈಗ ಇತಿಹಾಸ. ದುಡಿಮೆಯ ಪರಿಭಾಷೆಯಲ್ಲಿ ವ್ಯಾಪಾರದ ಪರಿಭಾಷೆಯೇ ಬೇರೆ. ಇಂದು ವ್ಯಾಪಾರ ಜಗತ್ತನ್ನು ಆಳುತ್ತಿರುವ ಹೊತ್ತಲ್ಲಿ, ಕೃಷಿಯ ಮೂಲಕ ಲೋಕದ ಹಸಿವೆಯನ್ನು ನಿವಾರಿಸಿ ಕೊಳ್ಳುವುದೂ ಜರೂರತ್ತಾಗಿದೆ. ಆಧುನಿಕ ಕೃಷಿಯಲ್ಲಿ ಯಂತ್ರೋಪಕರಣಗಳಿಂದ ಮಾನವ ಶ್ರಮ ಕಡಿಮೆಯಾಗಿದೆ. ಕೀಟನಾಶಕಗಳಿಂದ ತಿನ್ನುವ ಆಹಾರವೂ ವಿಷಮಯವಾಗಿದೆ. ಬೇರೆ ಬೇರೆ ಕಾರಣಗಳಿಗಾಗಿ ಬದಲಾದ ಸಾಮಾಜಿಕ ಸಂದರ್ಭಗಳಲ್ಲಿ ಕೃಷಿಯ ಸ್ವರೂಪ ಬದಲಾಗುವುದರೊಂದಿಗೆ ಜೀವನ ಕ್ರಮದ ಸ್ವರೂಪವೂ ಬದಲಾಯಿತು. ವಲಸೆಯೂ ನಿರಂತರವಾಗಿ ಕೃಷಿ ಸಂಸ್ಕೃತಿಯ ಪಲ್ಲಟಕ್ಕೆ ಕಾರಣವಾಯಿತು. ಕೃಷಿಗೆ ಪೂರಕವಾಗಿದ್ದ, ಪರ್ಯಾಯವಾಗಿದ್ದ ಕಸುಬುಗಳೆಲ್ಲ ರೂಪಾಂತರ ಹೊಂದಿದ್ದರ ಜತೆಗೆ ಹೊಸ ಕಸುಬುಗಳು ಹುಟ್ಟಿಕೊಂಡವು. ಪರಿವರ್ತನಾಶೀಲಗೊಳ್ಳುತ್ತಿರುವ ಸಮಾಜದಲ್ಲಿ ಇದು ಸಹಜವೂ ಅಗಿತ್ತು. ಜೀವನ ಮೌಲ್ಯಗಳು ಬದಲಾಗುತ್ತ ಸಾಗಿ ಮಾರುಕಟ್ಟೆ ಜಗತ್ತಿಗೆ ಕೊಳ್ಳುಬಾಕ ಸಂಸ್ಕೃತಿಗೆ ಬದಲಾದ ತನ್ನನ್ನು ತಾನು ಮುಡಿಪಾಗಿರಿಸಿಕೊಳ್ಳುವತ್ತ ಸಾಗಿದೆ. ಆರ್ಥಿಕತೆಯು ಅಭಿವೃದ್ಧಿಯ ಉತ್ತುಂಗ ಹಂತವೆಂದು ಸ್ಥಾಪಿಸಿಕೊಳ್ಳುತ್ತ ಎಲ್ಲವನ್ನು ಹಣಕಾಸಿನ ಲೆಕ್ಕಾಚಾರದಲ್ಲಿ ಅಳೆಯುವ ಮಾನದಂಡಗಳು ಮುನ್ನೆಲೆಗೆ ಬಂದವು. ಕೃಷಿ ಭೂಮಿಯ ವಿಸ್ತರಣೆಯಿಂದ ಸಾಮಾಜಿಕ ಘನತೆ ಮತ್ತು ಅಧಿಕಾರ ಕೇಂದ್ರದಲ್ಲಿ ಗುರುತಿಸಿಕೊಂಡಿದ್ದ ಸಾಮಾಜಿಕ ಸಂರಚನೆಗಳೂ ವಿರಚನೆಗೊಳ್ಳುತ್ತ ಹೋದವು. ವಸಾಹತುಶಾಹಿ ಆಡಳಿತದ ಅಂತ್ಯ ರಾಷ್ಟ್ರೀಯತೆಯ ಪರಿಕಲ್ಪನೆ, ಪಂಚವಾರ್ಷಿಕ ಯೋಜನೆಗಳೊಂದಿಗೆ ಹಸಿರು ಕ್ರಾಂತಿಯ ಮೂಲಕ ಕೈಗಾರಿಕಾ ಕ್ರಾಂತಿ ಎಂದು ಸರಳವಾಗಿ ನಿರೂಪಿಸಿದರೂ ಸಾಮಾಜಿಕ ಬದುಕಿನ ಸಂರಚನೆಯಲ್ಲಿ ಬಹಳಷ್ಟು ಬದಲಾವಣೆಗಳಾದವು. ಕೃಷಿಯ ಬಗ್ಗೆ ಹೊಸ ಕಾನೂನುಗಳು ಬಂದವು. ಒಕ್ಕಲು ಮಸೂದೆ ಕಾನೂನು ಬಹಳಷ್ಟು ಬದಲಾವಣೆಗಳನ್ನು ತಂದಿತು. ಭೂಮಿಯ ಒಡೆತನದಲ್ಲಾದ ಸ್ಥಿತ್ಯಂತರ, ಜಾತಿ ಮತ್ತು ಜೀತದ ಪ್ರಶ್ನೆಗಳು ಬಹುಸೂಕ್ಷ್ಮ ಎಳೆಯ ಸಂಗತಿಗಳಾಗಿ ಗುರುತಿಸಲ್ಪಟ್ಟಿತು. ಎಲ್ಲವೂ ಒಮ್ಮಿಂದೊಮ್ಮೆಲೆ ಆಕಸ್ಮಿಕದಂತೆ ಘಟಿಸಲಿಲ್ಲ. ಈ ಪಲ್ಲಟವು ಎಲ್ಲಾ ಪ್ರದೇಶದಲ್ಲೂ ಒಂದೇ ರೂಪದಲ್ಲೂ ಇರಲಿಲ್ಲ. ಇಂಗ್ಲೀಷ್ ಶಿಕ್ಷಣ ಕ್ರಮ, ಲಾರ್ಡ್ ಮೆಕಾಲೆಯ ಶಿಕ್ಷಣದ ರೂಪುರೇಷೆಗಳು ಹೊಸ ಆಲೋಚನಾ ಕ್ರಮಗಳಿಗೆ ತೆರೆದುಕೊಳ್ಳುವಂತೆ ಮಾಡಿತು. ದುಡಿಮೆ ಮತ್ತು ಉದ್ಯೋಗದ ಪರಿಕಲ್ಪನೆ ಹೊಸ ಪರಿಭಾಷೆಯಲ್ಲಿ ಬದಲಾಗುತ್ತ ಹೋಯಿತು.

ಕುಟುಂಬದ ಒಳಗೆ ಮತ್ತು ಕುಟುಂಬದಾಚೆಗಿನ ಬಂಧುತ್ವ ಮತ್ತು ಮನುಷ್ಯ ಮನುಷ್ಯ ನಡುವಿನ ಬಾಂಧವ್ಯದ ಸ್ವರೂಪಗಳೂ ಬದಲಾಗುತ್ತ ಹೋದವು. ಸಾಮಾಜಿಕ ಬದುಕಿನ ಗತಿಶೀಲತೆಯಲ್ಲೂ ಬದಲಾವಣೆಗಳಾದುದರಿಂದ ಸಾಮಾಜಿಕ ಸಂರಚನೆಯ ವಿನ್ಯಾಸಗಳೇ ಬದಲಾದವು. ಕೃಷಿ ಕುಟುಂಬಗಳಲ್ಲಿ

ಎಲ್ಲರೂ ಜತೆಯಾಗಿ ಬಾಳುವುದು ಕೃಷಿ ಕಾರ್ಯ ಚಟುವಟಿಕೆಗೆ ಅನಿವಾರ್ಯವಾಗಿತ್ತು. ಕೂಡು ಕುಟುಂಬಗಳು ಜತೆಯಾಗಿ ಉಣ್ಣುವುದೂ ದುಡಿಯುವುದೂ ಪ್ರಮುಖ ಮೌಲ್ಯವಾಗಿತ್ತು. ಒಕ್ಕಲು ಮಸೂದೆ ಕಾನೂನಿಂದ ಧಣಿ–ಒಕ್ಕಲುಗಳ ಒಡೆತನದ ಸ್ವರೂಪವೂ ಬದಲಾಯಿತು. ಹೊರ ದುಡಿಮೆ ಮತ್ತು ಹೊರ ವಲಸೆ ಆ ಕಾಲದ ಅನಿವಾರ್ಯತೆಯೂ ಆಗಿತ್ತು.

ಕುಲಕಸುಬು ಭೂ ಮಾಲೀಕರು ಮತ್ತು ಕೃಷಿ ಕೂಲಿ ಕಾರ್ಮಿಕರು ಎರಡು ವರ್ಗಗಳಲ್ಲೂ ಪರಿಣಾಮ ಬೀರಿದೆ. ಭೂಮಿಯ ವಾರೀಸುದಾರರೂ ತಮ್ಮ ವೃತ್ತಿಗಳನ್ನು ತ್ಯಜಿಸಿ ಬೇರೆ ಕಸುಬುಗಳತ್ತ ಗಮನ ಕೊಟ್ಟಿದ್ದಾರೆ. ಉಳ್ಳವರ ಗದ್ದೆಗಳಲ್ಲಿ ಬೆವರು ಸುರಿಸಿ ದುಡಿಯುತ್ತಿದ್ದ ಕೃಷಿ ಕೂಲಿ ಕಾರ್ಮಿಕರ ಬದುಕಿನಲ್ಲೂ ಬದಲಾವಣೆಗಳನ್ನು ತಂದಿದೆ. ಈ ಸ್ಥಿತ್ಯಂತರ ಅನಿವಾರ್ಯ ಮತ್ತು ಸಹಜ. ಭೂಮಿಯ ಉತ್ಪನ್ನ ಮತ್ತು ಆದಾಯಗಳಿಗೆ ಮಿತಿ ಇದ್ದುದರಿಂದ ಅತಿ ಸುಲಭವಾಗಿ ಅತಿ ಹೆಚ್ಚು ಸಂಪಾದಿಸುವ ವ್ಯಾಪಾರ, ಉದ್ದಿಮೆ ಬಿಳಿ ಕಾಲರ್ ಹುದ್ದೆಗಳೂ ತಾವು ಮಣ್ಣು ಮೈ ಕೈಗೆ ಮೆತ್ತಿಕೊಳ್ಳಬೇಕಿಲ್ಲ ಎನ್ನುವ ಎಚ್ಚರವೂ ಕಾರಣವಾಗಿತ್ತು. ಅತಿಯಾದ ಹಸಿವು ಮತ್ತು ಅತಿಯಾದ ಬಡತನದ ಅಸಹಾಯಕತೆಗಿಂತ ಆರ್ಥಿಕವಾಗಿ ಬಲಿಷ್ಠರಾಗುವುದೂ ಬಹುಮುಖ್ಯವಾಗಿತ್ತು. ಕೃಷಿ ಮರ್ತ್ಯದ ಕೇಲಿಯೇ ಆದರೂ ಹೊಸತನಕ್ಕೆ ತುಡಿಯುವ ಮನುಷ್ಯ ಸಹಜ ಮನೋಧರ್ಮವೂ ಇದಕ್ಕೆ ಪ್ರೇರಣೆಯಾಗಿದ್ದಿತು. ತೀರಾ ಸವಾಲಿನ ಮತ್ತು ಹೊಸ ಚೈತನ್ಯದ ಶಕ್ತಿಯಾಗಿ ಅಭದ್ರತೆಯ ನಡುವೆಯೂ ಅಸ್ಥಿರವಾದ ಬದುಕಿನ ಸ್ಥಿರತೆಯ ಪರಿಕಲ್ಪನೆಯೂ ಅಲ್ಲಿ ಪ್ರಮುಖ ಪಾತ್ರ ವಹಿಸುತ್ತದೆ. ಈ ವೃತ್ತಿಯಿಂದಾದ ಪಲ್ಲಟ ಕಟ್ಟಿದ ಕೃಷಿ ಸಂಸ್ಕೃತಿಯ ಎಳೆಯ ಹೆಣಿಗೆಗಳು ಒಂದೊಂದೇ ಬಿಚ್ಚಿಕೊಳ್ಳಲೂ ಕಾರಣವೂ ಆಗಿದೆ. ಅವಿಭಕ್ತತೆಯಿಂದ ವಿಭಕ್ತತೆಯೆಡೆಗೆ ಕುಟುಂಬ ಜೀವನ ಬದಲಾಗಲು ಪ್ರಮುಖ ಕಾರಣ ಇದಾಗಿದೆ. ಹಂತ ಹಂತವಾಗಿ ಸಾಗಿದ ಈ ಸ್ಥಿತ್ಯಂತರ ಹೊಸ ಉದ್ಯೋಗಗಳ ಸೃಷ್ಟಿಗೂ ಕಾರಣವಾಗಿ ಒಟ್ಟು ಸಾಮಾಜಿಕ ಸಂರಚನೆಯಲ್ಲಿಯೇ ಸಂಚಲನವನ್ನುಂಟು ಮಾಡಿತು.

**೬.೨ ಅವಿಭಕ್ತತೆಯಿಂದ ವಿಭಕ್ತತೆಯೆಡೆಗೆ**

ಸಾಮುದಾಯಿಕ ದುಡಿಮೆ ಮತ್ತು ಸಾಮುದಾಯಿಕ ಬದುಕಿನ ಪರಿಕಲ್ಪನೆಯನ್ನು ಹೊಂದಿದ ಬುಡಕಟ್ಟು ಸಮುದಾಯದ ಬೇರುಗಳನ್ನು ಇಂದಿಗೂ ಉಳಿಸಿಕೊಂಡಿರುವ ಕರಾವಳಿಯಲ್ಲಿ ಸಾಮಾಜಿಕ ಸಂರಚನೆಗಳೇ ಅತ್ಯಂತ ವಿಶಿಷ್ಟವಾದುದು. ಹೆಣ್ಣನ್ನು ಕೇಂದ್ರ ಸ್ಥಾನದಲ್ಲಿರಿಸಿ ಕಟ್ಟಿದ ಸಮಾಜದಲ್ಲಿ 'ಒಂದು ತೆನೆ ಸಾವಿರ ಧಾನ್ಯ'ಗಳಿಂದ ಹುಟ್ಟಿದ ಪರಿಕಲ್ಪನೆ ಇದು. ಹೆಣ್ಣಿನ ಜನನ ಮತ್ತು ಪ್ರಜನನ ಶಕ್ತಿಯನ್ನು ಆರಾಧನಾ ಸ್ಥಾನದಲ್ಲಿರಿಸಿ ನಿರೂಪಣೆಗೊಳ್ಳುವುದರೊಂದಿಗೆ ಕುಲ ಮೂಲವನ್ನು ಗುರುತಿಸಲು ಇರುವ ಬಳಿಪದ್ಧತಿ ಇದಕ್ಕೆ ಬಹಳ ಮುಖ್ಯ ಆಧಾರ. ಆಹಾರದ ಮೂಲವನ್ನು ಗುರುತಿಸುವುದು ನೆಲ ಮೂಲವನ್ನು ನಿರೂಪಿಸುವಂತಹುದು ಆಗಿದೆ. ಸಸ್ಯದ ಬಳ್ಳಿಗಳ ಹೆಸರುಗಳಿಂದ ಗುರುತಿಸಲ್ಪಡುವ ಕುಲಗಳಿಂದ ಕುಟುಂಬದ ಮೂಲ ತಿಳಿಯಲು ಸಾಧ್ಯವಾಗಿದೆ. ಈ ಕುಟುಂಬದ ಕುಲ ಮೂಲವನ್ನು ತಾಯಿಯ ಬಳಿಯಿಂದ ಗುರುತಿಸಲಾಗುತ್ತದೆ. ಸಹಜವಾಗಿಯೇ ಭೂಮಿಯ ಒಡೆತನವೂ ಹೆಣ್ಣಿನ ಮೂಲಕವೇ ಗುರುತಿಸಲ್ಪಡುತ್ತದೆ. ಕುಟುಂಬದಲ್ಲಿ ಹೆಣ್ಣಿಗಿರುವಷ್ಟು ಅಧಿಕಾರ ಸ್ವಾಯತ್ತತೆಗಳು ಹೆಚ್ಚು ಸಂಪತ್ತಿನ ಒಡೆತನವೂ ಆಕೆಯ ಮೂಲಕವೇ

ಗುರುತಿಸಿಕೊಳ್ಳಲು ಸಾಧ್ಯವಾಯಿತು. ಸಂತತಿಯನ್ನು ಬೆಳೆಸುವ ಹೆಣ್ಣು ಮತ್ತು ಬೆಳೆಯನ್ನು ಬೆಳೆವ ಫಲವಂತಿಕೆಯನ್ನು ಹೊಂದಿದ ಭೂಮಿ ಈ ಎರಡನ್ನು ಸಮೀಕರಿಸುತ್ತ ಕಟ್ಟಿದ ಸಂಸ್ಕೃತಿ ಚಿಂತನೆಯಲ್ಲಿನ ಭೂಮಿಯನ್ನು ಹೆಣ್ಣಾಗಿಯೂ ಹೆಣ್ಣನ್ನು ಭೂಮಿಯಾಗಿಯೂ ಸಮೀಕರಿಸುತ್ತ ಸಂಪತ್ತಿನ ಪರಿಕಲ್ಪನೆಯನ್ನು ಈ ಹಿನ್ನೆಲೆಯಲ್ಲಿಯೇ ಕಟ್ಟಿ ಬೆಳೆಸಲಾಗಿದೆ. ಹೆಚ್ಚು ಮಕ್ಕಳನ್ನು ಹೆರುವ ಸಾಮರ್ಥ್ಯವನ್ನು ಹೊಂದಿರುವ ಹೆಣ್ಣು ಮತ್ತು ಹೆಚ್ಚು ಫಸಲನ್ನು ಪಡೆಯಲು ಸಾಧ್ಯವಾಗುವ ಭೂಮಿ ಮಹತ್ವವನ್ನು ಪಡೆದುಕೊಂಡಿತು. ಆರಾಧನೆಯ ಕೇಂದ್ರದಲ್ಲಿ ಸೃಷ್ಟಿ ಶೀಲ ಗುಣವನ್ನು ಹೊಂದಿದ ಭೂಮಿ ಮತ್ತು ಹೆಣ್ಣು ಸಮಾನವಾಗಿ ಗುರುತಿಸಿಕೊಂಡರು ಪ್ರಕೃತಿಯ ಮೂಲ ತತ್ವವನ್ನು ಅರಗಿಸಿಕೊಳ್ಳುತ್ತ ಆ ಮೂಲಕ ಸೃಜನಶೀಲತೆ ಮತ್ತು ಸಹಜಶೀಲ ಗುಣಗಳ ಮೂಲಕ ಹೆಣ್ಣು ತನ್ನ ಘನತೆ ಗೌರವಗಳನ್ನು ಕಾಯುವುದರೊಂದಿಗೆ ಭೂಮಿಯ ಹಿರಿಮೆಯನ್ನು ಹೆಚ್ಚಿಸಲು ಸಾಧ್ಯವಾಗಿದೆ.

ವಿಸ್ತಾರವಾದ ಭತ್ತದ ಗದ್ದೆಗಳು ಬಹಳ ಫಸಲನ್ನು ಪಡೆದು ಆದಾಯವನ್ನು ಹೆಚ್ಚಿಸುತ್ತಿದ್ದುದರಿಂದ ದೈವದ ದೇವರ ಹೆಸರಿನ ಗದ್ದೆಗಳು ನಿರ್ಮಾಣಗೊಂಡವು. ಅತಿ ವಿಶಾಲವಾದ ಈ ಗದ್ದೆಗಳು ಹೆಚ್ಚಿನ ಫಸಲನ್ನು ಪಡೆಯಲು ಸಾಧ್ಯವಾಗುವ ತಾಣಗಳಾದವು. ಮಣ್ಣಿನ ಗುಣದಿಂದ ಗದ್ದೆಗಳನ್ನು ಹೆಸರಿಸುತ್ತ ಗದ್ದೆಯ ಬದುವಿನ ಸಮೀಪದಲ್ಲಿರುವ ಮರಗಳಿಂದಲೂ ಗದ್ದೆಗಳನ್ನು ಹೆಸರಿಸುತ್ತ ಫಲವಂತಿಕೆಯನ್ನು ಗುರುತಿಸುತ್ತಿದ್ದರು. ಮನೆ ಮುಂದಿನ ಗದ್ದೆ 'ಬಾಕಿಮಾರು' ಆದರೆ ಹುಣಸೆ ಮರದ ಕೆಳಗಿರುವುದು 'ಪುನ್ಕೆಮಾರ್' ಆಗುತ್ತಿತ್ತು. ಗದ್ದೆಯ ಹೆಸರುಗಳಿಂದಲೇ ಅದರ ವಿಸ್ತೀರ್ಣ ಫಲವಂತಿಕೆಯನ್ನು ತಿಳಿಯಲು ಸಾಧ್ಯವಾಗಿದೆ. ಭೂಮಿಯ ಒಡೆತನ ಹೆಣ್ಣಿನ ನಾಮಧೇಯದಲ್ಲಾದರೂ ಅಲ್ಲಿ ದುಡಿಯಲು ಗಂಡು, ಹೆಣ್ಣು ಎಂಬ ವ್ಯತ್ಯಾಸವೇನೂ ಇರಲಿಲ್ಲ. ಎಷ್ಟು ಹೆಚ್ಚಿನ ಸಂಖ್ಯೆಯಲ್ಲಿ ದುಡಿಮೆಯ ವರ್ಗ ಲಭಿಸುತ್ತದೋ ಅಲ್ಲಿಯವರೆಗೆ ಭೂಮಿಯು ವಿಸ್ತಗಿಸುತ್ತ ಹೋಯಿತು. ಕುಟುಂಬದ ಸದಸ್ಯರಲ್ಲಿ ಹೆಂಗಸರು, ಮಕ್ಕಳ ಜತೆಗೆ ಗಂಡಸರೂ ದುಡಿಯುತ್ತಿದ್ದರು. ಕುಟುಂಬ ಸದಸ್ಯರಿಂದ ಸ್ವಂತ ಜಮೀನುಗಳಲ್ಲಿ ದುಡಿಮೆ ಅಸಾಧ್ಯವಾದುದರಿಂದ ಕಾಡಿನ ಬುಡಕಟ್ಟಿನ ಉಳಿದ ಸಮುದಾಯಗಳನ್ನು ಶ್ರಮದ ನಿರ್ವಹಣೆಗಾಗಿ ಉಳಿದವರನ್ನು ನಾಡಿಗೆ ಕರೆತರಲಾಯಿತು. ಪಶುಪಾಲನೆ, ಬೇಟೆಯ ಸ್ಥಿತಿಯಲ್ಲೇ ಉಳಿದ ಸಮುದಾಯಗಳನ್ನು ಒತ್ತಾಯ ಪೂರ್ವಕವಾಗಿ ಕಾಡಿನಿಂದ ನಾಡಿಗೆ ವಲಸೆ ಬರುವಂತೆ ನೋಡಿಕೊಳ್ಳಲಾಯಿತು. ಪರಿಣಾಮ ವಿಸ್ತಾರವಾದ ಭೂಮಿಗಳಲ್ಲಿ ಆಹಾರದ ಮೂಲಕ್ಕಾಗಿ ಹೊಟ್ಟೆಯ ಪಾಡಿಗಾಗಿ ದುಡಿಯಲು ಹಲವಾರು ಸಮುದಾಯಗಳು ಲಭ್ಯವಾದವು. ಇದು ಪಾಳೇಗಾರಿಕೆ ಮತ್ತು ಉಳಿಗಮಾನ್ಯ ಪದ್ಧತಿಯ ಹುಟ್ಟಿಗೂ ಕಾರಣವಾಯಿತು. ಬಿಟ್ಟಿ ಚಾಕರಿ ಮತ್ತು ಪ್ರತಿಫಲವಿಲ್ಲದ ದುಡಿಮೆಯೆಂದರೆ ಒಡೆಯನ ಗದ್ದೆ ಮನೆಯಂಗಳದಲ್ಲಿ ದುಡಿಯುವುದೇ ಅನಿವಾರ್ಯತೆಯಾಗಿತ್ತು. ಸ್ವತಂತ್ರವಾಗಿ ಕಾಡಿನಲ್ಲಿ ಬದುಕುತ್ತಿದ್ದ ಸಮುದಾಯಗಳನ್ನು ತಮ್ಮ ಕೈ ಕೆಳಗಿನ ಆಳುಗಳಾಗಿ ಪರಿವರ್ತಿಸಿ 'ಜಾತಿ' ಯ ಪರಿಕಲ್ಪನೆಯನ್ನು ಹುಟ್ಟು ಹಾಕಿ ಅದರ ಮೂಲಕ ವ್ಯಕ್ತವಾದ ಮೇಲು- ಕೀಳು, ಸ್ಪೃಶ್ಯ-ಅಸ್ಪೃಶ್ಯದ ಮನೋಧರ್ಮವು ಮನುಷ್ಯ ಮನುಷ್ಯರ ಮಧ್ಯೆ ಕಂದಕವನ್ನು ಸೃಷ್ಟಿಸಿತು. 'ಜಾತಿ' ಮತ್ತು ಜೀತ ಒಂದು ಪಿಡುಗಾಗಿ ಜನ ವರ್ಗ ವ್ಯತ್ಯಾಸದ ಸೃಷ್ಟಿಗೂ ಕಾರಣವಾಯಿತು. ಅತ್ಯಂತ ವಿಸ್ತಾರವಾದ ಭೂಮಿಯ

ಒಡೆತನವನ್ನು ಹೊಂದಿದವರು ಜಮೀನ್ದಾರರಾಗಿ ಪಾಳೇಗಾರರಾಗಿ ಮುಂದುವರಿದರೆ ಭೂ ರಹಿತರಾದವರು ಜೀತದಾಳುಗಳಾಗಿ ದುಡಿಯುತ್ತಿದ್ದರು. ಆಹಾರದ ಮೂಲ ಸಂಗ್ರಹಣೆಯನ್ನು ದಾಟಿ ಉತ್ಪಾದನೆಯೆಡೆಗೆ ಪರಿವರ್ತನೆ ಹೊಂದುವುದು ಸಾಮುದಾಯಿಕ ದುಡಿಮೆಯ ಪ್ರತಿಫಲವಾದುದರಿಂದ ಗದ್ದೆ ತುಂಬ ದುಡಿಯಲು ಆಳು ಮನೆ ತುಂಬ ಜನರಿರುವುದು ಅವಶ್ಯವಾಗಿತ್ತು.

ಸಮಾಜಶಾಸ್ತ್ರಜ್ಞರ ಚಿಂತನೆಯ ಪ್ರಕಾರ ಕುಟುಂಬ ಜೀವನವು ಕೂಡುವ ಮತ್ತು ಉಂಬುವ ಚಟುವಟಿಕೆಗಳೊಂದಿಗೆ ದೇಹ ಮತ್ತು ಸಂತತಿ ಬೆಳೆಯಲು ಕಾರಣವಾಯಿತು. ಕುಟುಂಬದಲ್ಲಿಯೂ ಅತಿ ಹೆಚ್ಚು ಮಕ್ಕಳನ್ನು ಪಡೆದ ಹೆಣ್ಣಿಗಿರುವ ಗೌರವ ಸ್ಥಾನಮಾನಗಳು ಜತೆಗೆ ಆ ಮೂಲಕ ಅವಳಿಗೆ ದಕ್ಕುತ್ತಿದ್ದ ಭೂಮಿಯ ಒಡೆತನದ ವಿಸ್ತಾರದ ಅಂಶವೂ ಮುಖ್ಯ ಪರಿಕಲ್ಪನೆಯಾಗಿತ್ತು. ಮನೆಯಲ್ಲಿ ಹುಟ್ಟಿದ ಹೆಣ್ಣಿಗೆ ಮತ್ತು ಅವಳ ಮಕ್ಕಳಿಗೂ ಸಮಪಾಲು ಪಡೆಯುತ್ತ ಅದು ಒಂದೆಡೆ ಜನಬಲದ ಅಧಿಕಾರ ಮತ್ತು ಭೂಮಿಯ ಒಡೆತನದ ಅಧಿಕಾರವನ್ನು ಹೊಂದಿತು. ಕುಟುಂಬದ ಯಜಮಾನಿಯಾಗಿಯೂ ಹೆಣ್ಣು ಮಕ್ಕಳೇ ಇದ್ದ ಮಾತೃ ಮೂಲದ ಕುಟುಂಬ ಸಂರಚನೆಗಳು ತರವಾಡುಗಳೆಂದು ಕರೆಯಲ್ಪಡುತ್ತಿತ್ತು. ಕುಟುಂಬದ ಮೂಲದ ಮನೆತನಗಳನ್ನು ಹೆಣ್ಣಿನ ಮೂಲದಿಂದ ಗುರುತಿಸುತ್ತ ಅವಳಿಂದಲೇ ಭೂಮಿಯ ಒಡೆತನದ ಗುರುತೂ ಸಾಧ್ಯವಾಗುತ್ತಿತ್ತು. ಸಹಜವಾಗಿಯೇ ಹೆಣ್ಣನ್ನು ಕೇಂದ್ರ ಸ್ಥಾನದಲ್ಲಿರಿಸಿ ಕಟ್ಟಿದ ಕುಟುಂಬಗಳು ಅವಿಭಕ್ತ ಕುಟುಂಬಗಳೇ ಆಗಿದ್ದವು. ಕುಟುಂಬ ವ್ಯವಸ್ಥೆಯ ಒಳಗಡೆ ಹೆಣ್ಣು ಕೇಂದ್ರ ಸ್ಥಾನದಲ್ಲಿದ್ದರೆ ಹೊಟ್ಟೆಯ ಹಸಿವಿನ ನಿರ್ವಹಣೆಗಾಗಿ ನಡೆಸುವ ಅಡುಗೆಯ ಕಾರ್ಯಗಳು ಅವರನ್ನು ಒಟ್ಟು ಸೇರಿಸುತ್ತಿತ್ತು. ಕುಟುಂಬದಲ್ಲಿ ಮೂರು ನಾಲ್ಕು ಕವರುಗಳೂ ಸೇರಿ ಅವಿಭಕ್ತ ಕುಟುಂಬವೆನಿಸುತ್ತಿತ್ತು. ಎಲ್ಲರನ್ನು ಒಟ್ಟು ಸೇರಿಸುವ ಮತ್ತು ಭೂಮಿ ವಿಭಜನೆಗೊಳ್ಳದ ಏಕತ್ರವಾಗಿ ಉಳಿಯಲು ಶ್ರಮದ ಹಂಚಿಕೆ ಆಗಲು ಕಾರಣವಾದರೂ ಆದಾಯ ಸಂಪತ್ತು ಏಕ ವ್ಯಕ್ತಿಯ ಅಧೀನದಲ್ಲಿ ಇರುತ್ತಿತ್ತು. ಭೂಮಿಯ ಒಡೆತನ ಒಬ್ಬರ ಅಧೀನದಲ್ಲಿದ್ದಾಗ ನಿರ್ವಹಣೆ ಸರಳವಾಗಿತ್ತು. ದುಡಿಸುವ ಮತ್ತು ದುಡಿಯುವ ಎರಡೂ ವರ್ಗಗಳೂ ಏಕಸೂತ್ರವಾಗಿ ಕಾಣಿಸಿಕೊಂಡವು. ಊಳಿಗದ ದುಡಿಮೆಯನ್ನು ಅಳಿಯ ಸಂತಾನ ಕಟ್ಟಿನ ಮಿತಿಗಳನ್ನೂ ಅರಿತೂ ಸಾಮುದಾಯಿಕವಾಗಿ ಎಲ್ಲರೊಳಗೂ ಒಳಗೊಳ್ಳುವುದು ಸಾಧ್ಯವಾಗಿತ್ತು. ಕರಾವಳಿಯಲ್ಲಿ ಈ ಪರಂಪರೆಯ ಕುಟುಂಬ ವ್ಯವಸ್ಥೆಯನ್ನು ಮುಂದುವರಿಸಿದವರು ಜೈನಧರ್ಮಿಯರು ಆಗಿದ್ದರು. ಅದಕ್ಕೆ ಕಾರಣಗಳೇನೇ ಇರಲಿ, ಸಾಮಾಜಿಕ, ಆರ್ಥಿಕ, ಧಾರ್ಮಿಕ ಪಲ್ಲಟಗಳೂ ಮುಖ್ಯವಾಗುತ್ತದೆ.ಕುಟುಂಬ ವ್ಯವಸ್ಥೆಯೊಳಗಿನ ವ್ಯತ್ಯಾಸ ಸಾಮಾಜೀಕರಣದ ಕಾರಣದೊಂದಿಗೆ ರಾಜಕೀಯ ಕಾರಣವೂ ಮುಖ್ಯವಾಗಿತ್ತು.

ವಸಾಹತು ಶಾಹಿ ಆಡಳಿತ ತಂದ ಪಲ್ಲಟ ಬಹಳ ಮುಖ್ಯವಾಗಿ ಅವಿಭಕ್ತ ಕುಟುಂಬಕ್ಕೆ ಕಾರಣವಾಯಿತು. ಕೃಷಿಯನ್ನು ಹೊರತುಪಡಿಸಿ ಮೊದಲ ಬಾರಿಗೆ ದುಡಿಮೆಯ ಪರಿಕಲ್ಪನೆ ವ್ಯತ್ಯಯ ಹೊಂದಿದೆ. ಸಣ್ಣ ಪುಟ್ಟ ಕಾರ್ಖಾನೆಗಳಲ್ಲಿ ದುಡಿಯುತ್ತ ತಮ್ಮ ಆದಾಯದ ಮೂಲವನ್ನು ಕಂಡುಕೊಂಡರು. ಅನ್ನ ಮೂಲಕ್ಕೆ ಒಡೆಯನ ಮನೆಯಂಗಳವನ್ನಷ್ಟೇ ಗಮನಿಸಬೇಕಾದ ಅವಶ್ಯಕತೆಯಿರಲಿಲ್ಲ. ಪರಿಣಾಮ ಆಹಾರದ ಮೂಲದಿಂದ ದುಡಿಮೆಯ ಬೇರೆ ಮೂಲಕ್ಕೆ ತಮ್ಮನ್ನು ಸ್ಥಳಾಂತರಿಸಿಕೊಳ್ಳುವುದು ಸಾಧ್ಯವಾಯಿತು.

ಆಹಾರದ ಸ್ವಾವಲಂಬನೆಯಿಂದ ಸಿಕ್ಕಿದ ಸ್ವಾತಂತ್ರ್ಯವೂ ಅವಿಭಕ್ತ ಕುಟುಂಬಗಳು ವಿಭಕ್ತವಾಗಲೂ ಕಾರಣವಾಗಿದೆ. ನೂರು –ಇನ್ನೂರು ಜನರಿರುವ ಕುಟುಂಬಗಳಲ್ಲಿ ಬಲಿಷ್ಠರಾದವರ ಪ್ರಾಬಲ್ಯ ಮತ್ತು ಅಸಹಾಯಕರ ತುಳಿತ ನಿರಂತರವಾಗಿ ನಡೆದಿತ್ತು. ಪರಿಣಾಮ ಬಡತನವಾದರೂ ಸ್ವತಂತ್ರವಾಗುವುದು ಹೆಚ್ಚು ಸೂಕ್ತ ಅನಿಸಿದೆ. ಸ್ವಂತಿಕೆ ಮತ್ತು ಸ್ವಾವಲಂಬನೆಯ ಸ್ವಾಯತ್ತತೆ ಪಾಳೇಗಾರಿಕೆ ಮತ್ತು ಊಳಿಗಮಾನ್ಯತೆಗೂ ಹಿನ್ನೆಡೆಯನ್ನುಂಟು ಮಾಡಿದೆ. ಕೃಷಿ ಭೂಮಿಗಳು ಹರಿದು ಹಂಚಲ್ಪಟ್ಟಾಗ ಅವಿಭಕ್ತತೆಯ ಏಕ ಸೂತ್ರತೆಯೂ ಉಳಿಯಲು ಸಾಧ್ಯವಿಲ್ಲ. ಶ್ರಮ ದುಡಿಮೆ ಆದಾಯಗಳ ಪರಿಭಾಷೆಗಳೂ ಬದಲಾಗಲು ಸಾಧ್ಯವಾಗಿವೆ.

ಊರನ್ನು ಬಿಟ್ಟು ನಡೆದ ಹೊರವಲಸೆ ಮತ್ತು ಊರಲ್ಲಿದ್ದುಕೊಂಡೇ ದುಡಿಮೆಯ ಸ್ವರೂಪವನ್ನು ಬದಲಾಯಿಸಿ ನಡೆದ ಒಳವಲಸೆಯೂ ಕುಟುಂಬ ಜೀವನದ ಮೇಲೆ ಪರಿಣಾಮ ಬೀರಿತು. ವಸಾಹತು ಶಾಹಿ ಆಡಳಿತ ಜಮೀನ್ದಾರಿ ಪದ್ಧತಿಯನ್ನು ಪೋಷಿಸಿ ತೆರಿಗೆಯನ್ನು ಹೆಚ್ಚಿಸಿದರು. ರೈತರನ್ನು ಸಾಲಗಾರರನ್ನಾಗಿ ಮಾಡುವುದಕ್ಕೂ ಕಾರಣವಾಯಿತು. ರೈತ ದಂಗೆ ಮತ್ತು ಚಳುವಳಿಗಳಿಂದ ಹುಟ್ಟಿಕೊಂಡ ಸ್ವಾವಲಂಬನೆ ಕೃಷಿಯನ್ನು ರೂಪಾಂತರಗೊಳಿಸಿಕೊಳ್ಳುವುದಕ್ಕೆ ಕಾರಣವಾಯಿತು. ಆಹಾರದ ಬೆಳೆಯಿಂದ ವಾಣಿಜ್ಯ ಬೆಳೆಗೆ ಸಾಗುತ್ತಲೇ ಸ್ವಾತಂತ್ರ್ಯ ನಂತರದ ದಿನಗಳಲ್ಲಿ ಕೃಷಿಯಿಂದ ಕೈಗಾರಿಕೆಗೆ ಪರಿವರ್ತನೆ ಹೊಂದಿತು. ಪಂಚವಾರ್ಷಿಕ ಯೋಜನೆಗಳು, ನಗರೀಕರಣ ಸ್ವಾತಂತ್ರ್ಯಾ ನಂತರದಲ್ಲಿ ಪ್ರಭಾವ ಬಿರಿದ ಆಧುನಿಕತೆ ಇವೆಲ್ಲವೂ ಸವಲತ್ತಿನ ಜನರು ಸಮಾಜದೆಡೆಗೆ ಸಾಗುವಂತೆ ಮಾಡಿತು. ೧೯೭೪ ರಲ್ಲಿ ಬಂದ ಉಳುವವನೇ ಹೊಲದೊಡೆಯ ಎಂಬ ಕಾನೂನು ಗೇಣಿದಾರರನ್ನು ಸ್ವತಂತ್ರರಾಗಿಸಿತು. ವಿಸ್ತಾರವಾದ ಜಮೀನ್ದಾರಿ ಗದ್ದೆಗಳಲ್ಲಿ ದುಡಿಯುತ್ತಿದ್ದವರು ಸ್ವತಂತ್ರರಾಗಿ ಸಾಗುವಳಿ ಮಾಡಲಾರಂಭಿಸಿದಾಗ ಉಚಿತವಾಗಿ ಗದ್ದೆಗಳನ್ನು ಪಡೆದ ಮೊದಲ ತಲೆಮಾರು ಸಾಗುವಳಿಮಾಡಿದಂತೆ ಎರಡನೆಯ ತಲೆಮಾರು ಮಾಡಲಿಲ್ಲ. ಕುಟುಂಬದಲ್ಲಿ ಭೂಮಿ ಮತ್ತೆ ಹರಿದು ಹಂಚಿ ಹೋಗಿ ತುಂಡು ಭೂಮಿಗಳಾದವು.

ಭೂಮಿಯ ಒಡೆತನದ ಮತ್ತು ಅದರಿಂದ ದಕ್ಕಿದ ಅಧಿಕಾರ ಕೇಂದ್ರಗಳು ಮನೆತನದ ಹೆಗ್ಗಳಿಕೆಗಳೂ ಆಗಿದ್ದವೂ. ಬಲಿಷ್ಠ ಸಮುದಾಯಗಳು ಗುತ್ತು, ಬಾವ, ಬೀಡು, ಚಾವಡಿ ಬರ್ಕೆಗಳ ಮೂಲಕ ಗುರುತಿಸಿಕೊಳ್ಳುತ್ತಿದ್ದರು. ಅತ್ಯಂತ ವಿಸ್ತೃತವಾದ ಭೂಮಿಯ ಒಡೆತನದ ನಿರ್ವಹಣೆಗೆ ಅವಿಭಕ್ತ ಕುಟುಂಬಗಳು ಅವಶ್ಯವೂ ಆಗಿದ್ದವು. ಗುತ್ತು, ಬೀಡುಗಳಿಗೆ ಒಕ್ಕಲುಗಳಾಗಿದ್ದವರೂ ತುಂಬು ಕುಟುಂಬಗಳಲ್ಲಿ ವಾಸಿಸುವವರೇ ಆಗಿದ್ದರು. ವಿಸ್ತಾರವಾದ ಕೃಷಿ ಭೂಮಿಯ ಕೆಲಸಗಳೊಂದಿಗೆ ಕೈ ಕಾಲುಗಳಿಗೆ ಆಳುಗಳನ್ನು ನೇಮಿಸಿಕೊಂಡು ದರ್ಪದಿಂದ ಪಾಳೇಗಾರಿಕೆ ನಡೆಸಿದವರೂ ಇದ್ದಾರೆ. ಸಾಮಾಜಿಕ, ಆರ್ಥಿಕ, ಕೌಟುಂಬಿಕ ಕಾರಣಗಳಿಗಾಗಿ ಅವಿಭಕ್ತತೆಯಿಂದ ವಿಭಕ್ತತೆಯೆಡೆಗೆ ಸಾಗಿದ ಪರಿಯನ್ನು ಕರಾವಳಿಯ ಕಾದಂಬರಿಗಳು ನಿರೂಪಿಸುತ್ತದೆ.

ಭೂಮಿಯ ಒಡೆತನಕ್ಕೆ ರೂಪಕದಂತೆ ಇರುವ ಗುತ್ತು ಬೂಡುಗಳು ಅನಾಥವಾಗುವ ಅವನ್ನು ಸುಸ್ಥಿತಿಯಲ್ಲಿಡಲೂ ಸಾಧ್ಯವಾಗದೇ ಹೋದ ಪರಿಯನ್ನು ನಿರೂಪಿಸುತ್ತಾರೆ. ಬೋಳ ಚಿತ್ತರಂಜನ್ ದಾಸ್ ಶೆಟ್ಟಿಯವರು ಬರೆದ 'ಅಳಿದುಳಿದವರು' ಕಾದಂಬರಿ ಇದನ್ನು ಮಾರ್ಮಿಕವಾಗಿ ನುಡಿಯುತ್ತದೆ. ಹಂಡೆಯ ಗಂಜಿಯಿಂದ ಕುದುಪೆಯ ಗಂಜಿಗೆ ಸ್ಥಳಾಂತರಗೊಳ್ಳುವ ಕಾಲದ ಮೌಲ್ಯಗಳೂ ರೂಪಕಾತ್ಮಕತೆ ಪಡೆಯುತ್ತದೆ.

ನೂರಿನ್ನೂರು ಜನರು ಇರುವ ಕುಟುಂಬಗಳಲ್ಲಿ ಎಲ್ಲರ ಅಭಿಪ್ರಾಯಗಳಿಗೂ ಬೆಲೆ ಸಿಗುವುದಿಲ್ಲ. ಸಾಮೂಹಿಕ ಒಡೆತನಕ್ಕೆ ಸೇರಿದ ಭೂಮಿಯಲ್ಲಿ ಸಾಗುವಳಿ ಮಾಡುತ್ತ ಅವಿಭಕ್ತವಾಗಿ ಬಾಳುತ್ತಿದ್ದ ಬೈಲಂಗಳ ಗುತ್ತಿನ ಸಾವಿರಾರು ಮುಡಿ ಉಪ್ಪೋಳಿಯ ಭೂಮಿ ಗುತ್ತಿನಾರ್ ಜತ್ತಪ್ಪ ಶೆಟ್ಟಿಯ ನಿರ್ವಹಣೆಯಿಂದ ನಿಭಾಯಿಸಲ್ಪಡುತ್ತಿತ್ತು. ಜತ್ತಪ್ಪ ಶೆಟ್ರು ಹಿರಿಯರಾದ ಬೊಮ್ಮಯ ಶೆಟ್ರು ಗಳಿಸಿಕೊಟ್ಟ ಹುಟ್ಟುವಳಿಯನ್ನು ಒಂದು ಅಕ್ಕಿಯೂ ಕೊರತೆ ಮಾಡದೆ ತುಂಬಿದ ಕುಟುಂಬವನ್ನು ಗುತ್ತಿನ ಅಧಿಕಾರವನ್ನು ಇವರ ಕೈಗೊಪ್ಪಿಸಿದ್ದರು. ಕಾದಂಬರಿಯ ಮೊದಲರ್ಧ ಭಾಗದಲ್ಲಿ ಅವಿಭಕ್ತ ಕುಟುಂಬಗಳು ಇದ್ದಾಗ ಬೈಲಂಗಳ ಗುತ್ತು, ಕುಬೇರು ಗುತ್ತುಗಳ ಹಿರಿತನವನ್ನು ಸಂಪತ್ತಿನ ಶ್ರೀಮಂತಿಕೆಯನ್ನು ವಿವರಿಸುತ್ತಾರೆ. ವೈವಾಹಿಕ ಸಂಬಂಧಗಳಲ್ಲೂ ಗುತ್ತು ಮನೆತನಗಳ ಮಧ್ಯದ ಒಡನಾಟಗಳೇ ಮುಖ್ಯವಾಗುತ್ತದೆ. ಕೂಡು ಕುಟುಂಬಗಳನ್ನು 'ಕವರು' ಗಳೆಂದು ಕರೆದು ಹಿರಿಯ ಕವರು, ಕಿರಿಯ ಕವರು, ಬಲಾಢ್ಯರು, ಅಸಮರ್ಥರು ಆಗುವ ಪರಿಯನ್ನು ನಿರೂಪಿಸುತ್ತ ಹೋಗುತ್ತದೆ. ಹೊಟ್ಟೆಯ ಹಸಿವಿನಿಂದ ದೇಹದ ಹಸಿವಿನವರೆಗೂ ಬಲಾಢ್ಯ ಮತ್ತು ಅಸಹಾಯಕರ ನಡುವಿನ ವ್ಯತ್ಯಾಸವನ್ನು ಹೇಳಿದರೂ ಎಲ್ಲರೂ ಜತೆಯಾಗಿ ಬದುಕುವ ಮೌಲ್ಯವೇ ಪ್ರಧಾನವಾಗುತ್ತದೆ. ಕುಟುಂಬದ ಐಕ್ಯತೆಯೇ ಕೌಟುಂಬಿಕ ಘನತೆಯಾಗಿ ವ್ಯಕ್ತವಾಗುತ್ತದೆ. ಗುತ್ತಿನಾರ್‌ನ ತಮ್ಮ ವೀರಪ್ಪ ಬಲಶಾಲಿಯಾದ ತೋಳ್ಬಲದವನಾಗಿಯೂ ದುಡಿಮೆದಾರನಾಗಿರುವುದು, ವಿಟ್ಟು ಗೋಪರು ಬಲಶಾಲಿಗಳಾಗಿದ್ದರೂ ದುರ್ಬಲ ಕವರಿನವರಾಗಿದ್ದು ಕುಟುಂಬದ ಒಳಗೆ ಎಲ್ಲರಿಗೂ ಸಮಾನತೆಯಿಲ್ಲ ಎಂದು ನಿರೂಪಿಸುತ್ತಾರೆ. ಅಧಿಕಾರ ಕೇಂದ್ರದಲ್ಲಿರುವ ಗುತ್ತಿನಾರ್‌ನ ಹಿಡಿತದಲ್ಲಿ ಎಲ್ಲವೂ ಇದ್ದು ಅಧಿಕಾರದ ಬಲವಿದ್ದವರು ಉಳಿದವರೆಲ್ಲರನ್ನು ದುಡಿಸಿಕೊಳ್ಳುತ್ತಾರೆ. ಇವರು ಆರಾಮವಾಗಿ ದುಡಿಯುತ್ತಲೇ ಇರುತ್ತಾರೆ. ವೀರಪ್ಪ ಗೌರಿಯರ ವಿವಾಹದ ಪ್ರಸಂಗವನ್ನು ವಿವರಿಸುತ್ತಲೇ ಅನ್ಯೋನ್ಯವಾಗಿದ್ದ ದಾಂಪತ್ಯವನ್ನು ಗೌರಿಯ ಅಣ್ಣ ತೌಡ ಶೆಟ್ಟಿ ಅಹಂಕಾರದಿಂದ ಮುರಿಯಲು ಯತ್ನಿಸುತ್ತಾನೆ. ಕಾದಂಬರಿಯ ಕುತೂಹಲದ ಘಟ್ಟವಾಗಿ ವಿಟ್ಟು ಗೋಪರು ಗೌರಿಯನ್ನು ಕಳವಾರು ತುಪ್ಪೆ ಗುತ್ತುವಿನ ಬೈ ಹುಲಿನ ಮುಟ್ಟೆಗೆ ಬೆಂಕಿ ಹಾಕಿ ಗಂಡ ಬದುಕಿದ್ದಾಗಲೇ ನಡೆಯುವ ಮರು ಮದುವೆಯನ್ನು ಗುತ್ತಿಗೆ ಅವಮಾನವೆಂದು ಭಾವಿಸಿ ಬೈಲಂಗಳ ಗುತ್ತಿಗೆ ಕರೆ ತರುತ್ತಾರೆ. ಕುಟುಂಬಗಳ ಮಧ್ಯೆ ಗೌರವದ ಪ್ರಶ್ನೆಯಾಗಿ ಸಂಘರ್ಷಕ್ಕೆ ಕಾರಣವಾಗುವ ಈ ಪ್ರಸಂಗ ಹಿಂಸೆಗೆ ಪ್ರಚೋದನೆ ನೀಡುತ್ತದೆ. ದಂಡು ಸಾಧಿಸಲು ಬಂದ ಗುತ್ತಿನವರನ್ನು ಸೋಲಿಸಿ ತೌಡ ಶೆಟ್ಟಿಯ ಗುತ್ತಿನಾರ್ ಆದರೂ ತಲೆಗೆ ಸಾವಿನ ಹೊರೆ ಹೊರಿಸಿ ಅವಮಾನಿಸಲಾಗುತ್ತದೆ. ಇಲ್ಲೆಲ್ಲ ವ್ಯಕ್ತಿ ಪ್ರಜ್ಞೆಗಿಂತ ಕುಟುಂಬದ ಗುತ್ತಿನ ಗೌರವವೇ ಪರಸ್ಪರ ಪ್ರತಿಸ್ಪರ್ಧೆಗೆ ಒಳಗಾಗುತ್ತದೆ. ತಪ್ಪು ಯಾರದೇ ಆಗಿರಲಿ, ಗುತ್ತಿನಾರ್‌ನ ಮಾತಿಗೆ ತಲೆಬಾಗಿ ಇಡೀ ಊರಿಗೆ ಊರೇ ಗುತ್ತಿನಾರ್‌ನ ಪರವಾಗಿ ನಿಲ್ಲುತ್ತದೆ. ಒಡೆಯನಿಗಾದ ಅವಮಾನ ಸೋಲುಗಳು ತಮ್ಮ ಅವಮಾನ ಸೋಲುಗಳೆಂದೇ ಒಪ್ಪಿಕೊಳ್ಳುತ್ತಾರೆ. ಈ ಪಾಳೇಗಾರಿಕೆಯ ವ್ಯವಸ್ಥೆಯಲ್ಲಿ ವ್ಯಕ್ತಿ ಪ್ರಜ್ಞೆಗೆ, ಕುಟುಂಬ ಪ್ರಜ್ಞೆಗೆ ಮಾನ್ಯತೆಯಿಲ್ಲ. ಒಂದು ಕಾಲಕ್ಕೆ ಅದೇ ಮೌಲ್ಯವಾಗಿತ್ತು. ಗುತ್ತು ಮನೆತನಗಳಲ್ಲೂ ಬಲಾಢ್ಯರು ಮಾತ್ರ ಬದುಕುಳಿದ ಅಸಹಾಯಕರು ಮೂಲೆಗೆ ತಳ್ಳಲ್ಪಟ್ಟುದು ಸುಳ್ಳಲ್ಲ. ಗುತ್ತಿನ ಘನತೆ ಉಳಿಸಿದ ವಿಟ್ಟು–ಗೋಪರಿಗೆ ಗುತ್ತಿನ ಮೂವತ್ತು ಮುಡಿ ಭೂಮಿಯನ್ನು ಇಬ್ಬರಿಗೂ ಹಂಚಿಕೊಡಲಾಗುತ್ತದೆ.

ವೀರಪ್ಪ–ಗೌರಿಯರಿಗೂ ಸ್ಥಾನಮಾನಕ್ಕಾಗಿ ಐವತ್ತು ಮುಡಿ ಭೂಮಿಯನ್ನು ನೀಡಿ ಸ್ವತಂತ್ರಗೊಳಿಸಲಾಗುತ್ತದೆ. ಬಲಾಢ್ಯರು ಹೀಗೆ ವಿಭಕ್ತರಾದರೆ ಎಲ್ಲರಿಗೂ ಇದೇ ರೀತಿ ಪ್ರತ್ಯೇಕತೆಯನ್ನು ಕಾಯ್ದುಕೊಳ್ಳಲಾಗುವುದಿಲ್ಲ. ಬೈಲಂಗಳ ಗುತ್ತಿನ ಯಜಮಾನಿಕೆಯಲ್ಲಿ ಅಸಮಾನತೆ ಹೆಚ್ಚುತ್ತ ಹೋಗುತ್ತದೆ. ಗುತ್ತಿನಾರ್‌ನ ಪತ್ನಿ ನಾಗಪ್ಪ ಶೇನವಾರ ತಂಗಿ ಕುಸುಮ, ಕುಬೇರು ಗುತ್ತಿನವಳಾಗಿ ತನ್ನ ಹನ್ನೆರಡು ಮಕ್ಕಳ ಸಾಕಲು ಗಂಟು ಕಟ್ಟಲು ಆರಂಭಿಸಿ ಕುಟುಂಬಿಕರನ್ನು ಹೊಟ್ಟೆಗಿಲ್ಲದೆ ದಂಡಿಸುತ್ತಾಳೆ. ಹೊಟ್ಟೆಯ ಹಸಿವು ಮತ್ತು ಮೈ ಮುರಿಯ ದುಡಿತ ಗುತ್ತನ್ನು ಒಗ್ಗಟ್ಟಾಗಿ ನಿಲ್ಲಿಸುವಲ್ಲೂ ಸೋಲುತ್ತದೆ. ತೀವ್ರ ಬಡತನ ಗುತ್ತಿನ ಬಡ ಕವರಿನ ಗಂಡು ಮಕ್ಕಳು ಸುದ್ದಿ ಇಲ್ಲದೆ ಮುಂಬೈಗೆ ತೆರಳಲು ಹಡಗು, ಬಸ್ಸು ಹತ್ತುತ್ತಾರೆ. ಇದು ವಿಭಕ್ತತೆಯ ಎರಡನೆಯ ಹಂತ. ಗುತ್ತಿನ ಆಡಳಿತದಲ್ಲಾದ ಸ್ಥಿತ್ಯಂತರ ಕುಟುಂಬಿಕರನ್ನು ಮನೆ ಮಕ್ಕಳಂತೆ ಭಾವಿಸದೆ ಇದ್ದಾಗ ಅಸಹನೆ ತಲೆ ಎತ್ತುತ್ತದೆ. ತನ್ನ ತವರಿನಲ್ಲಿ ಮೂರು ಸಾವಿರ ಮುಡಿ ಹಿಡುವಳಿಯ ವಿಸ್ತಾರ ಭೂಮಿ ಇದ್ದಾಗಲೂ ಸ್ವಾರ್ಥವನ್ನು ಬಿಡದ ಹೆಣ್ಣು ಮಕ್ಕಳು ಸೊಸೆಯಂದಿರಾಗಿ ಅಧಿಕಾರ ಕೇಂದ್ರದಲ್ಲಿದ್ದಾಗ ಗುತ್ತು ತನ್ನ ಘನತೆಯನ್ನು ಕಳಕೊಳ್ಳುತ್ತ ಸಾಗಲು ಕಾರಣವಾಯಿತು.

"ಜತ್ತಪ್ಪ ಶೆಟ್ರಗೆ ಈಗ ಗುತ್ತಿನಲ್ಲಿ ವಿಶ್ವಾಸವಿರುವುದು ಹೆಂಡತಿ ಕುಸುಮಳೊಬ್ಬಳಲ್ಲಿ ಮಾತ್ರ. ಗುತ್ತಿನಲ್ಲಿ ಮಿಕ್ಕುಳಿದವರು ಕೆಲಸಕ್ಕೆ ಬಾರದ ಪಡ್ಪೋಷಿಗಳು. ಕುಸುಮ ಏನು ಹೇಳುತ್ತಾಳೋ ಅದೆಲ್ಲ ವೇದವಾಕ್ಯ. ಗುತ್ತಿನ ಹೊರ ಆಡಳಿತ ಒಳ ಆಡಳಿತ ಎಲ್ಲಾ ಕುಸುಮಳ ಕೈ ಸೇರಿತು. ಒಣ ಮೀನು ತಂದ ಕೇಕದ ಬೆಸ್ತರವಳಿಗೆ ಒಂದು ಸೇರು ಭತ್ತ ಅಳೆಯಬೇಕಾದರೂ ತಾನೇ ಸೇರು ಹಿಡಿದು ಹೋಗುತ್ತಾಳೆ. ಹುಲ್ಲು, ಸೊಪ್ಪು ತಂದವರಿಗೆ ಉಣಬಡಿಸಲೂ ಅವಳೇ ಹೋಗುತ್ತಾಳೆ. ಮಜ್ಜಿಗೆ ಕಡೆದೊಡನೆ ಬೆಣ್ಣೆ ತಗೆಯಲೂ ಅವಳು ಹಾಜರಿರುತ್ತಾಳೆ. ಒಂದಲ್ಲ ನಾಲ್ಕಾರು ಬೀಗದ ಕೈ ಗೊಂಚಲುಗಳೀಗ ಅವಳ ಸೊಂಟದಲ್ಲಿ ತೂಗಾಡುತ್ತಿವೆ. ಎಲ್ಲಾ ಕಾರುಬಾರು ಕುಸುಮಳ ಕೈಯಲ್ಲಿ, ಮಿಕ್ಕವರನ್ನು ತಲೆ ಎತ್ತಿ ಗುತ್ತಿನಲ್ಲಿ ಏನು ನಡೆಯುತ್ತದೆ ಎಂದು ಪ್ರಶ್ನಿಸಲೂ ಅವಳು ಎಡೆಕೊಡುವುದಿಲ್ಲ. ಎಲ್ಲೆಡೆಯೂ ತನ್ನ ಗಂಟು ಕಟ್ಟುವ ಕಾರಸ್ಥಾನಕ್ಕೆ ಅಡ್ಡಿ ಬಾರದಂತೆ ನೋಡಿಕೊಂಡಳು (ಬೋಳ ಚಿತ್ತರಂಜನ್ ದಾಸ್ ಶೆಟ್ಟಿ, ೧೯೯೦;ಪು. ೩೪೩)

ಹಸಿವು ಮನುಷ್ಯನ ಮೂಲಭೂತ ಅಗತ್ಯ ಹೊಟ್ಟೆಯನ್ನು ವಿರಮಿಸಲು ಬೇಕಾದ ತಂಪಾದ ನೆಳಲಿಗೆ ಜತೆಯಾಗಿ ಬಾಳಿದವರಿಗೆ ಅದೂ ಸಿಗಲಿಲ್ಲ. ಸ್ವಾರ್ಥ ದುರಾಸೆಗಳೇ ಇದಕ್ಕೆ ಮೂಲ ಕಾರಣವಾದವು. "ಬೈಲಂಗಳ ಗುತ್ತಿನ ಕುಟುಂಬಿಕರಿಗೆ ಉಣ್ಣುವ ಗಂಜಿಯ ಕೊರತೆ ಬಂದರೂ ಜತ್ತಪ್ಪ ಶೆಟ್ಟರು ಕಂಗೆಡಲಿಲ್ಲ. ಭಾವ ಶೇನವರು ಬಂದು ಹತ್ತು ದಿನ ಬೈಲಂಗಳ ಗುತ್ತಿನಲ್ಲಿ ಉಳಿದರೂ ಅವರನ್ನು ಅತಿಥಿಯಂತೆ ಸತ್ಕರಿಸಿದರು. ಶೇನವರು ತನ್ನ ತಂಗಿ ಮಾಡಿ ಹಾಕಿದ ಕೋಳಿ ರೊಟ್ಟಿ ಅಡ್ಡೆ ಪುಂಡಿಗಳನ್ನು ಚೆನ್ನಾಗಿ ತಿಂದುಂಡು ತಂಗಿಗೆ ಮಿಕ್ಕವರ ಹೊಟ್ಟೆ ಹೊಡೆದು ಗಂಟು ಗಳಿಸುವುದು ಹೇಗೆ ಎಂಬ ದಾರಿ ಹೇಳಿಕೊಟ್ಟರು. ಜತ್ತಪ್ಪ ಶೆಟ್ರಗೂ ಭಾವನ ದೆಸೆಯಿಂದ ಅಡ್ಡೆ ಪುಂಡಿ ರೊಟ್ಟಿ ಮೇಜವಾನಿ ದಿನಾ ಸಿಗುತ್ತಿತ್ತು. ತಾವು ಹೊಟ್ಟೆ ತುಂಬಾ ತಿಂದುಂಡರೇ ವಿನಾ ಕುಟುಂಬಿಕರಿಗಾಗಿ ಚೂರು ಪಾರು ಉಳಿದದ್ದನ್ನಾದರೂ ಬಡಿಸು ಕುಸುಮಾ,

ಅವರು ಒಂದಿಷ್ಟು ಅಡ್ಡೆ ರೊಟ್ಟಿಯ ರುಚಿ ನೋಡಲಿ ಎಂಬ ಮಾತು ಜತ್ತಪ್ಪ ಶೆಟ್ರ ಬಾಯಿಂದ ಬರಲಿಲ್ಲ. " (ಬೋಳ ಚಿತ್ತರಂಜನ್ ದಾಸ್ ಶೆಟ್ಟಿ; ೧೯೯೦; ಪು. ೩೪೫)"

ಗುತ್ತಿನ ಯಜಮಾನನ ಬೇಜವಾಬ್ದಾರಿಯೂ ಕುಟುಂಬ ವಿಭಕ್ತಿಗೆ ಕಾರಣವಾಗಿತ್ತು. ಕಣ್ಣ ಮುಂದಿರುವ ಅಸಮಾನತೆ ಅಸಹನೆಯನ್ನು ಹೆಚ್ಚಿಸಲು ಸಾಧ್ಯವಾಯಿತು. ಕೃಷಿ ಕಾರ್ಯಕ್ಕಾಗಿ ಒಟ್ಟಾಗಿ ದುಡಿಯಬೇಕಾದ ಕುಟುಂಬ ಒಟ್ಟಾಗಿ ಉಣ್ಣಲು ಜತೆ ಸೇರಲಿಲ್ಲ. ಕೆಲವರು ಉಂಡು ತೇಗಿದರೆ, ದುಡಿದವರು ಖಾಲಿ ಹೊಟ್ಟೆಯಲ್ಲಿ ಬಸವಳಿದರು. ಬಹಳ ಸೂಕ್ಷ್ಮ ಎಳೆಗಳೂ ಕುಟುಂಬದ ವಿಚ್ಛಿದ್ರತೆಗೆ ಕಾರಣವಾದವು.

"ಬೈಲಂಗಳ ಗುತ್ತಿನ ಕುಟುಂಬದ ದುಃಖವನ್ನು ಕೇಳುವವರಿಲ್ಲದಂತಾಯಿತು. ಹಸಿವಿನಿಂದ ಕಂಗಟ್ಟ ಕುಟುಂಬ ಗುತ್ತಿನಲ್ಲಿರುವ ಚೂರು ಪಾರು ಅಧಿಕಾರವನ್ನು ಕಳಕೊಂಡಿತು. ಕುಸುಮಳನ್ನು ಕೇಳದೆ ಎಲೆ ಅಡಿಕೆ ಸಂಚಿಗೂ ಕೈ ಹಾಕಬಾರದು ಸಣ್ಣ ಮಕ್ಕಳು ಹೊಟ್ಟೆ ಹುಳು, ಶೀತ ಕೆಮ್ಮಿನ ಬಾಧೆಯಿಂದ ನರಳಿದರೂ ಕುಸುಮಳನ್ನು ಕೇಳದೆ ಓಮ, ಜೀರಿಗೆ, ಒಳ್ಳೆ ಮೆಣಸಿನ ಕಷಾಯ ಮಾಡಿಕೊಡಲೂ ಅವರಿಗೆ ಅಧಿಕಾರ ಇಲ್ಲದಂತಾಯಿತು. ಕುಟುಂಬಿಕರಿಗೆ ಕುಟುಂಬದ ಸ್ಥಿತಿಗತಿ ಅರ್ಥವಾಯಿತು. ಹತ್ತು ಹಲವು ಮಕ್ಕಳ ತಾಯಂದಿರು ಚಿಂತೆಗೀಡಾದರು. ಹುಟ್ಟಿದ ಊರಲ್ಲಿ ಮಕ್ಕಳನ್ನು ಅನ್ನಕ್ಕಾಗಿ ದುಡಿಸುವಂತಿಲ್ಲ, ಕೂಲಿ ಮಾಡಿದರೆ ಕುಟುಂಬ ದುರ್ಗತಿಯನ್ನು ಊರೂರು ಸಾರಿದಂತಾಗುತ್ತದೆ ಹಾಗಾಗಿ ಮಕ್ಕಳನ್ನು ಪರವೂರಿಗೆ ದುಡಿಯಲು ಕಳುಹಿಸಿ ಕೊಡುವ ನಿರ್ಧಾರ ಮಾಡಿದರು.

ದಿಕ್ಕು ದೆಸೆ ತಿಳಿಯದೆ ಹನ್ನೆರಡು ಹದಿನಾಲ್ಕು ವರುಷದ ಮಕ್ಕಳನ್ನು ಪರ ಊರ ದಾರಿಯ ಮೋಟಾರು ಬಸ್ಸು ಹತ್ತಿಸಿದರು. ಆ ಎಳೆ ಕಂದಮ್ಮಗಳನ್ನು ಮೋಟಾರು ಬಸ್ಸು ಹತ್ತಿಸಿದಾಗ ತಾಯಿ ಮಕ್ಕಳ ಅಗಲುವಿಕೆಯ ಕರುಳ ಕೂಗು ಗುತ್ತಿನ ಕಂಬ ಕಂಬಕ್ಕೂ ತಟ್ಟಿತು.ಕುಟುಂಬವನ್ನಗಲಿದ ಮಕ್ಕಳು ಬಸ್ಸಿನಲ್ಲಿ ಹೋಗುತ್ತಿರುವಾಗ ಬಿಕ್ಕಿ ಬಿಕ್ಕಿ ಅಳುತ್ತಿದ್ದರೆ ತಾಯಂದಿರು ಹಟ್ಟಿ ಕೊಟ್ಟಿಗೆಯ ಕಂಬಕ್ಕೆ ತಲೆ ಇಟ್ಟು ತಮ್ಮ ಮಕ್ಕಳಿಗೆ ಬಂದ ದುರ್ಗತಿಗೆ ಅಳುತ್ತಿದ್ದರು." (ಅದೇ, ಪು. ೩೪೬)

"ನೂರಾರು ಜನರಿರುವ ಮನೆಗಳಲ್ಲಿ ಒಂದಿಬ್ಬರು ಮಕ್ಕಳು ಊರು ಬಿಟ್ಟಾಗ ಮನೆಯ ಯಜಮಾನರ ಗಮನಕ್ಕೆ ಬರಲಿಲ್ಲ. ದಿನ ಕಳೆದಂತೆ ಬೊಂಬಾಯಿಗೆ ಪಯಣಿಸಿದವರ ಲೆಕ್ಕ ಸಿಕ್ಕಿತು. ಗುತ್ತಿನಲ್ಲಿ ಜನಸಂಖ್ಯೆ ಕಡಿಮೆಯಾಯಿತು. ದನಕರುಗಳನ್ನು ಗುಡ್ಡೆಗೆ ಮೇಯಲು ಹೊಡೆಯಲು ಹುಡುಗರ ಅಭಾವ ಕಂಡು ಬಂತು" (ಅದೇ, ಪು. ೩೪೬)

ಇದು ವಿಭಕ್ತತೆಯ ಎರಡನೆಯ ಹಂತದಲ್ಲಿ ಗುತ್ತು ಮನೆತನಗಳಲ್ಲಿ ಆದ ಕವರಿನ ಪಾಲುಗಳು ಒಂದೊಂದು ಕುಟುಂಬವನ್ನು ಪ್ರತ್ಯೇಕಗೊಳಿಸಿದವು. ಗುತ್ತಿನ ವಿಸ್ತಾರವಾದ ಮನೆಯಲ್ಲಿ ಬೇರೆ ಬೇರೆ ವಿಭಾಗಗಳನ್ನು ಮಾಡಿಕೊಂಡು ಪ್ರತ್ಯೇಕತೆಯನ್ನು ಮಾಡಿದರು. "ದಿನಗಳು ವರ್ಷಗಳಾಗಿ ಉರುಳಿದವು. ಬೊಂಬಾಯಿಯ ಸಂಪಾದನೆ ಗುತ್ತಿನ ಉತ್ಪಾದನೆಯನ್ನು ಹೆಚ್ಚಿಸಲಿಲ್ಲ. ಹಟ್ಟಿ ಕೊಟ್ಟಿಗೆಗಳ ಗೋಡೆ ಜರಿದ ಬಿತ್ತು, ಗುತ್ತಿನ ಮಾಡು ಹಂಚು ಒಡೆದು ಅಲ್ಲಲ್ಲಿ ಬಿಸಿಲು ಮಳೆ ನೀರು ಒಳಗೆ ಇಣುಕಿತು, ಮನೆ ತುಂಬಾ

ಓಡಾಡುತ್ತಿದ್ದವರ ಸಂಖ್ಯೆ ಕಡಿಮೆಯಾಯಿತು. ಒಂದು ಅಗುಳೂ ಉಳಿಯದೆ ತೊಳೆದಿಟ್ಟಂತೆ ನಿರ್ಮಲಗೊಳ್ಳುತ್ತಿದ್ದ ಹಂಡೆಯ ಗಂಜಿ ಜಾನುವಾರುಗಳಿಗಾಗುವಷ್ಟು ಮಿಕ್ಕಿತು. ಹೆಗ್ಗಣಗಳೂ ಅಲ್ಲಲ್ಲಿ ಬಿಲಕೊರೆದು ಮನೆ ತುಂಬಾ ಓಡಾಡಿದವು. ಅಂತರ, ಪಡಸಾಲೆ, ಕೋಣೆಗಳಲ್ಲಿ ಹುತ್ತ ಬೆಳೆಯಿತು. ದೈವ ದೇವಾಲಯಗಳು ನೇಮ ಜಾತ್ರೆಗಳೆಲ್ಲ ಕೊರಗಿದವು. ಗುತ್ತಿನಾರ್ ಕೈಗೆ ಸಿಕ್ಕಿದ್ದನ್ನ ಮಾರಿದರು. ಅಡವಿಯ ಮರಮಟ್ಟು ಮಾರಿ ತಿಂದು ಅಡವಿಯನ್ನು ಬೋಳುಗೊಳಿಸಿದರು. ಗುತ್ತಿನಾರ್ ತಮ್ಮ ದರ್ಬಾರು ನಿಲ್ಲಿಸಲಿಲ್ಲ. (ಅದೇ, ಪುಟ. ೩೭೫)

"ಕುಟುಂಬದ ಒಳಗೆ ಕಾಣಿಸಿಕೊಂಡ ಬಡತನ, ಕೃಷಿ ಭೂಮಿಯನ್ನು ದುಡಿಯುವವರಿಲ್ಲದೆ ಉಂಟಾದ ಬಿಕ್ಕಟ್ಟು ದುಡಿದರು ಹೊಟ್ಟೆ ತುಂಬಾ ಅನ್ನವಿಲ್ಲದ ಸ್ಥಿತಿ ಅಂತಃ ಕಲಹಗಳನ್ನು ಇನ್ನಷ್ಟು ಹೆಚ್ಚಿಸಿತು. ಪರಿಣಾಮ ಕುಟುಂಬದ ನ್ಯಾಯ ಹಂಡೆಯ ಗಂಜಿಯ ರುಚಿಯನ್ನು ಕೆಡಿಸಿತು. ಪಾಲಿಗೆ ಬಂದದ್ದು ಪಂಚಾಮೃತ ಎಂದು ಬಟ್ಟಲಿಗೆ ತುಟಿ ಕಚ್ಚಿ ರುಚಿಯಿಂದ ಕುಡಿಯುತ್ತಿದ್ದ ಗಂಜಿ ತೆಳಿ ವಿಷ ಕುಡಿದಷ್ಟು ಕಹಿಯಿಂದ ಕುಟುಂಬಿಕರಗಂಟಲಳಿಯಿತು." (ಅದೇ,ಪು.೩೮೨) ಅಸಹನೆ, ಅಸಮಾಧಾನಗಳೆಲ್ಲ ಒಳಗೊಳಗೆ ಕುದಿಯುತ್ತಾ ಪ್ರತ್ಯೇಕತೆಯ ಮನೋಧರ್ಮವನ್ನು ಬೆಂಬಲಿಸಿದವು. ಕುಟುಂಬದ ಒಳಗಿನ ದ್ವೇಷಗಳು ಕೊಲೆ-ಸುಲಿಗೆಗಳಾಗಿ ಪ್ರತಿಫಲನಹೊಂದಲು ಹೆಚ್ಚು ಸಮಯ ಬೇಕಾಗಲಿಲ್ಲ. ಕೋರ್ಟು ಕಟ್ಟಲೆಗಳು ನ್ಯಾಯಾಲಯದ ಮೆಟ್ಟಿಲು ಹತ್ತುವುದು ಕಣ್ಣ ಮುಂದಿನ ಸತ್ಯವಾಯಿತು.

'ಅಳಿದುಳಿದವರು' ಕಾದಂಬರಿಯಲ್ಲಿ ಒಂದು ಅಧ್ಯಾಯವನ್ನು ಅವಿಭಕ್ತತೆಯಿಂದ ವಿಭಕ್ತತೆಯ ಸ್ಥಿತ್ಯಂತರಗಳು ಹೇಗಾಯಿತು ಎನ್ನುವ ಅಂಶವನ್ನು ರೂಪಕಾತ್ಮಕವಾಗಿ ನಿರೂಪಿಸುತ್ತಾರೆ . ಗುತ್ತಿನ ಹೊರ ಆವರಣದಲ್ಲಾದ ಆಡಳಿತದ ಬದಲಾವಣೆ ಒಳ ಆಡಳಿತವನ್ನು ವ್ಯಾಪಿಸಿಕೊಂಡು ಅತ್ಯಂತ ದುಸ್ತರವೆನಿಸಿತು. ಇದು ನಾಲ್ಕನೆಯ ಹಂತದ ಬದಲಾವಣೆ ಹಂಡೆಯ ಗಂಜಿಯಿಂದ ಮಡಕೆಯ ಗಂಜಿಗೆ ಎಂದು ವಿವರಿಸುತ್ತಾರೆ. ಇದು ಮುಂದೆ ಕುದುಪೆಯ ಗಂಜಿಯಾಗಿ ಪರಿವರ್ತನೆಯಾಯಿತು. ಗುತ್ತಿನ ಗಂಡು ಮಕ್ಕಳು ಹೆಂಡತಿಯ ಆಸ್ತಿಯನ್ನು ನಂಬಿ ಬಾಳ ಬೇಕಾಯಿತು.

"ಹಂಡೆಯ ಗಂಜಿ ಉಣ್ಣುತ್ತಿದ್ದ ಕುಟುಂಬ ಮಡಕೆ ಗಂಜಿ ಉಣ್ಣುವ ಸ್ಥಿತಿಗೆ ಬಂದಿಳಿಯಿತು. ವ್ಯಾಜ್ಯ ಕಲಹಗಳ ಮಧ್ಯೆ ಕುಟುಂಬ ಗಂಜಿ ಉಣ್ಣುತ್ತಿದೆ" (ಅದೇ, ಪು. ೪೦೫). ಭೂಮಿಯ ಹಂಚುವಿಕೆಯಲ್ಲಿ ಪಾರಂಪರಿಕವಾಗಿ ಅಳಿಯ ಸಂತಾನ ಕಟ್ಟಿನ ಕಟ್ಟು ಕಟ್ಟಳೆಗಳಂತೆ ಮನೆಯ ಗಂಡು ದುಡಿಯಲು, ಮನೆ ಮಗಳು ಭೂಮಿಯ ಯಜಮಾನಿಯಾದಾಗ ಎದುರಾದ ಸಂಘರ್ಷ ಬಿಕ್ಕಟ್ಟುಗಳೂ ಸರಳವಾದವುಗಳಲ್ಲ. "ಮನೆಯ ಮಗನಿಗೆ ಒಂದು ಪಾಲು, ಮನೆಯ ಮಗಳಿಗೆ ಅವಳ ಮಕ್ಕಳಿಗೂ ಪಾಲು, ಅಂದೇ ಹುಟ್ಟಿದ ಮಗುವಿಗೂ ಕುಟುಂಬ ಬೆಳೆಸಿ ಸಾಕಿದ ಗಂಡಿಗೂ ಸಮಾನ ಪಾಲು ಎಂಬ ತೀರ್ಮಾನ ಗಂಡುಗಳನ್ನು ದಿಕ್ಕೆಡಿಸಿತು. ಮಗಳಿಗೂ ಅವಳ ಮಕ್ಕಳಿಗೂ ಕುಟುಂಬದ ಭೂಮಿಯಲ್ಲಿ ಹಕ್ಕಿದೆ, ಆದರೆ ಮಗನ ಮಕ್ಕಳಿಗೆ ಇಲ್ಲಿ ಹಕ್ಕಿಲ್ಲ" (ಅದೇ ಪು. ೪೦೫)

ಇವಿಷ್ಟೇ ಅಲ್ಲದೆ ಭೂಮಿಯನ್ನು ಪಡೆದ ಗಂಡು ಮಕ್ಕಳು 'ಅಶನಾರ್ಥದ ಭೂಮಿ' ಎಂಬ ಹೊಸ ಪರಿಭಾಷೆಗೂ ಕಾರಣಕರ್ತರದರು. "ಕುಟುಂಬ ಹಿರಿಯ ತನಗೆ ಸಿಕ್ಕಿದ ಒಂದಂಶ ಪಾಲನ್ನು ಉಳಲು ಸಾಧ್ಯವಾಗದೆ, ಆ ಭೂಮಿಯಲ್ಲಿ ದುಡಿದರೆ ಉಣ್ಣಲು ಸಾಕಾಗದು ಎಂದು ಅಶನಾರ್ಥ ನಿಗದಿ ಮಾಡಿ ಭೂಮಿ ಉಳುವ ಹಕ್ಕನ್ನು ಬಹು ಅಂಶದ ಪಾಲುಗಾರ್ತಿಯರಿಗೆ ಕೊಟ್ಟರು. ಕುಟುಂಬ ಪಾಲು ಪಡೆದ ಸ್ವಲ್ಪ ವರುಷಗಳಲ್ಲಿ ಅಶನಾರ್ಥ ಕ್ರಮ ಪ್ರಕಾರ ಸಂದಾಯ ಮಾಡಿದರು. ಆ ನಂತರ ಕುಟುಂಬದ ಒಂದಂಶ ಪಾಲುದಾರ ಗಂಡು ದುರ್ಬಲನೆಂದು ತಿಳಿದು ಅಶನಾರ್ಥ ಕೊಡುವುದನ್ನು ನಿಲ್ಲಿಸಿದರು. ಗಂಡಿಗೆ ಅಶನಾರ್ಥ ಕೊಡುವುದು ಕುಟುಂಬಕ್ಕೆ ಭಾರವೆನಿಸಿತು. ಅಶನಾರ್ಥ ಹುಟ್ಟುವಳಿ ಅಂದರೆ ಭೂಮಿಯಲ್ಲಿ ಹಕ್ಕಿಡದೆ ಭೂಮಿಗೆ ಗೇಣಿ ನಿಗದಿ ಮಾಡಿಕೊಡುತ್ತಾ ಬರುವುದು. ಅಶನಾರ್ಥ ಗಂಡು ಬದುಕಿದ ದಿನದವರೆಗೆ ಮಾತ್ರ ಲಭ್ಯ. ಅವನ ಹೆಂಡತಿ ಮಕ್ಕಳು ಆ ಭೂಮಿಯಲ್ಲಿ ಅವನೊಂದಿಗೆ ದುಡಿದು ಉಣ್ಣುತ್ತಿದ್ದರೂ ಅವರಿಗೆ ಆ ಭೂಮಿಯಲ್ಲಿ ಹಕ್ಕಿಲ್ಲ. ಅವನ ಉತ್ತರಕ್ರಿಯೆಯಂದು ಕುಟುಂಬಕ್ಕೆ ಬಿಟ್ಟುಕೊಟ್ಟು ಹೆಂಡತಿ ಮಕ್ಕಳು ನಿರ್ಗತಿಕರಾಗಿ ತೆರಳಬೇಕು. ಅವರ ದುಡಿಮೆಯಿಂದ ಗೈದ ಫಲ ಪೈರು ಮನೆಯಿಲ್ಲದಲ್ಲಿ ಮನೆ, ಹಟ್ಟಿ ಕೊಟ್ಟಿಗೆ ಕಟ್ಟಿ ಕೊಂಡಿದ್ದರೂ ಅವರಿಗೆ ಅಲ್ಲಿ ಉಳಿಯುವ ಹಕ್ಕಿಲ್ಲ. ಅದರ ಖರ್ಚು ವೆಚ್ಚವನ್ನಾದರೂ ಕೊಡಿ ಎಂದು ಕೇಳುವ ಹಕ್ಕು ಇಲ್ಲ. ಗಂಡು ಕುಟುಂಬದಿಂದ ಪಡೆದ ಒಂದಂಶ ಭೂಮಿಯೂ ಅವನ ಹೆಂಡತಿ ಮಕ್ಕಳ ಪಾಲಿಗೆ ಇಲ್ಲವಾಯಿತು. (ಅದೇ, ಪು. ೪೦೬)

ಅಳಿಯ ಸಂತಾನ ಕಟ್ಟಿನ ನಿಯಮಗಳಿಂದಾಗಿ ಗಂಡು ಭೂಮಿ ವಂಚಿತನಾದರೆ, ಅದನ್ನು ಮೀರಿ ಮದುವೆಯಾಗಿ ಬಂದ ಸೊಸೆಯಂದಿರು ಗುತ್ತುಗಳಲ್ಲಿ ಯಜಮಾನಿಕೆ ನಡೆಸಿ ಕುಟುಂಬಿಕರನ್ನು ಶೋಷಿಸಿದ್ದರಿಂದ, ಅದರಲ್ಲೂ ಬಲಿಷ್ಠ ಕವರ್‌ಗಳ ಗುತ್ತಿನಾರರ ಪತ್ನಿಯಿಂದ ಭೂಮಿ ಹರಿದು ಹಂಚಿ ಹೋಗಲು ಕಾರಣವಾಯಿತು. ಬೈಲಂಗಳ ಗುತ್ತು ಒಡೆದು ಚೂರು ಚೂರಾಗಿತ್ತು. ಗುತ್ತಿನ ಚಾವಡಿಯಲ್ಲಿ ಪಾಲು ಒಳಕೋಣೆಗಳು ವಿಭಾಗವಾಗಿ ಅಡುಗೆ ಕೋಣೆಗಳು ಹಟ್ಟಿ ಕೊಟ್ಟಿಗೆಗಳು ಅಡಿಗೆ ಕೋಣೆಗಳಾಗಿದ್ದವು. ಹೊಲಗಳನ್ನು ಒಡ್ಡು ಹಾಕಿ ವಿಂಗಡಿಸಲಾಗಿತ್ತು.

"ಗುತ್ತಿಗೊಬ್ಬ ಗುತ್ತಿನಾರ್ ಇದ್ದ ಕಾಲ ಒಂದಿತ್ತು. ಈಗ ವಿಭಾಗಕ್ಕೊಬ್ಬಳು ಗುರುಕಾರ್ತಿ. ಗುತ್ತಿನ ವಿದ್ಯಾವಂತರು ದೈವ ದೇವರುಗಳನ್ನು ಕಡೆಗಣಿಸಿ ದೈವದ ಮಂಚವನ್ನು ಹರಿಯುವ ಹೊಳೆಯಲ್ಲಿ ಬಿಟ್ಟಿದ್ದರು. ಧಾನ್ಯ ಸಿರಿ ಎಂದು ಹೆಸರಾದ ಹೆಬ್ಬಾವು ಭತ್ತದ ಕಣಜ ಸುತ್ತಿಕೊಂಡು ತಲೆಮಾರಿನಿಂದ ಬಿದ್ದು ಕೊಂಡಿತು. ಹೆಬ್ಬಾವಿನ ಮೈ ತೊಳೆದು ಹರಿವ ನೀರಿನಿಂದ ಬರುವ ಫಸಲು ಹಿರಿಯರಿಗೆ ತಿಳಿದಿತ್ತು. ಕಿರಿಯರಿಗೆ ಕಿರಿ ಕಿರಿಯಂತೆ ಕಂಡು ಹೆಬ್ಬಾವನ್ನು ಗುಂಡಿಟ್ಟು ಕೊಂದಿದ್ದರು. (ಅದೇ ಪು ; ೪೧೯)

"ವಿಸ್ತಾರವಾದ ಭೂಮಿಯ ಒಡೆತನವನ್ನು ಹೊಂದಿ ಅದರ ರಕ್ಷಣೆಗಾಗಿ ದುಡಿಯುತ್ತಿದ್ದ ಒಂದು ತಲೆಮಾರು ಮೊದಲ ಹಂತದಲ್ಲಿ ಕುಟುಂಬದಿಂದ ದೂರ ನಿಂತಿತು. ತಾವು ಬದುಕಿ ಬಾಳಿದ ಮನೆಯನ್ನು ಮರಳಿ ನೋಡಲು ಮತ್ತು ಪ್ರತ್ಯೇಕತೆಯನ್ನು ರುಜುವಾತು ಪಡಿಸುವಂತಿತ್ತು. ವಿಟ್ಟು ಗೋಪ ವೀರಪ್ಪರಂಥ ಹಿರಿಯರು ಬದುಕಿದ್ದಾರೆ. ಕುಟುಂಬದೊಳಗೆ ನಡೆಯುತ್ತಿರುವ ಕಲಹ, ಕಾನೂನು ಅಕ್ರಮಗಳನ್ನು ಕೇಳಿ

ಕಣ್ಣೀರು ಸುರಿಸುತ್ತಾರೆ. ಅಪ್ಪಿ ತಪ್ಪಿ ಕುಟುಂಬಿಕರನ್ನೊಮ್ಮೆ ಕಂಡು ಬರುವ ಎಂದು ಬೈಲಂಗಳ ಗುತ್ತಿನ ಮೊಗಸಾಲೆ ಹತ್ತಿದರೆ ಗುತ್ತು ತುಂಬಾ ಮನೆಗಳು. ಮೊಗಸಾಲೆ ಹತ್ತುವಲ್ಲಿ ಆರಂಭವಾದ ಮನೆಗಳು ಹಟ್ಟಿ ಕೊಟ್ಟಿಗೆಯಲ್ಲೂ ಕಂಡು ಬರುತ್ತದೆ. ಕುಟುಂಬಿಕರು ಗುತ್ತು ಕಾಣಲು ಬಂದ ಹಿರಿಯನಿಗೆ ಕಾಲು ತೊಳೆಯಲು ಹತ್ತೆಂಟು ತಂಬಿಗೆ ನೀರು ತಂದಿಡುತ್ತಾರೆ. ತಾ ಮೊದಲು ನಾ ಮೊದಲು ಎಂದು ಓಡೋಡಿ ಬಂದು ರಂಗು ರಂಗಿನ ಮಾತುಗಳಿಂದ ಸತ್ಕರಿಸುತ್ತಾರೆ. ಬಂದಿರುವ ಹಿರಿಯನಿಗೆ ಉಭಯ ಸಂಕಟ ಯಾರಲ್ಲಿ ಹೋಗಲಿ ಯಾರಲ್ಲಿ ಉಣ್ಣಲಿ? ಎಲ್ಲೂ ಆತ್ಮೀಯ ಭಾವನೆ ಕಂಡು ಬರದಿದ್ದಾಗ ತುದಿನಾಲಗೆಯ ಸತ್ಕಾರಕ್ಕೆ ಮರುಳಾಗದೆ, ಗುತ್ತಿನ ವೈಭವದ ಚಿತ್ರಣಗಳನ್ನು ಕಣ್ಣ ಮುಂದೆ ತಂದಿರಿಸಿಕೊಂಡು ಒಂದು ಬೃಹದಾಕಾರದ ತುಪ್ಪೆ ಇರುವ ಅಂಗಳದಲ್ಲಿ ಗುಪ್ಪೆ ಗುಪ್ಪೆ ತುಪ್ಪೆಗಳು ನಿಂತಿರುವುದನ್ನು ಕಂಡು ಉಸ್ಸಪ್ಪಾ ಎಂದು ನಿಟ್ಟುಸಿರಿಟ್ಟು ಕುಟುಂಬದೊಳಗೆ ನೀರು ಮುಟ್ಟದೆ ಬಂದಂತೆ ಹಿಂತಿರುಗುತ್ತಾರೆ." (ಅದೇ, ಪು ೪೧೦)

ವಿಸ್ತಾರವಾದ ಗುತ್ತಿನ ಮನೆಗಳು ಹೀಗೆ ಹರಿದು ಚಿಂದಿಯಾದರೆ ಬಿಡಿ ಒಕ್ಕಲು ಮನೆಗಳು ಅವಿಭಕ್ತವಾಗಿ ಉಳಿಯುವುದಿಲ್ಲ. ಮನೆ ತುಂಬಾ ಜನರಿದ್ದವರು ಈಗ ಏಕಾಂಗಿಗಳಾದರು. ಗದ್ದೆ ಇದ್ದರೂ ಅದನ್ನು ಸಾಗುವಳಿ ಮಾಡಲು ಸಾಧ್ಯವಾಗದೆ ಹಾಗೆಯೇ ಹಡಿಲು ಹಾಕಿದರು. ಹೆಣ್ಣು ಮಕ್ಕಳು ದೊಡ್ಡ ಪಾಲನ್ನು ಪಡೆದರೂ ಅವರ ಮಕ್ಕಳು ಇದ್ದ ಮನೆಯೊಳಗೆ ಪ್ರತ್ಯೇಕ ಒಲೆ ಹಚ್ಚಿದರು. " ಬೈಲಂಗಳ ಗುತ್ತಿನಿಂದ ಪ್ರತ್ಯೇಕವಾದ ಗುತ್ತಿನ ಹೆಣ್ಣು ಮಗಳು ವಿಸ್ತಾರವಾದ ಭೂಮಿಯನ್ನು ಪಡೆದರೂ ನಂತರದಲ್ಲಿ ಅದು ಮಂಡೆ ಪಾಲಾಯಿತು. ರಾಧಾಳ ಮಗ ಗಂಗಯ ಮನೆಬಿಟ್ಟು ಹೋಗಿ, ಉಳಿದ ಭೂಮಿಯನ್ನು ಹೆಣ್ಣು ಮಕ್ಕಳು ಮಂಡೆ ಪಾಲು ಮಾಡಿಕೊಂಡರು. ಮನೆಯ ಹದಗೆಟ್ಟ ಸ್ಥಿತಿಯನ್ನು ಬೊಂಬಾಯಿಯವರಿಗೂ ತಿಳಿಸಿದಳು. ಬೊಂಬಾಯಿಯವರೂ ಬಂದರು. ಮನೆ ಭೂಮಿಯನ್ನು ಮಂಡೆ ಪಾಲಿನಂತೆ ಬಾಯ್ದೆರೆ ಪಾಲು ಮಾಡಿಕೊಂಡರು. ಅವರಿಗೆ ಸರಿಕಂಡವರಿಗೆ ಉಳಲು ಕೊಟ್ಟು ಬೊಂಬಾಯಿಗೆ ಹೊರಟು ಹೋದರು. ರಾಧ ಬೈಲಂಗಳ ಗುತ್ತು ಒಡೆದು ತಂದ ಭೂಮಿ ಮತ್ತೆ ಹಂಚಿ ಹರಿದು ರಾಧಾಳ ಸಣ್ಣ ಮನೆಯಲ್ಲೂ ಈಗ ಮೂರು ಒಲೆ ಉರಿಯುತ್ತಿದೆ. ಶಾಮಲಳ ಹೆಸರಲ್ಲೊಂದು, ವಿಮಲಳ ಹೆಸರಲ್ಲೊಂದು, ರಾಧ ಮತ್ತು ಅವಳ ಮದುವೆಯಾಗದ ಮಗಳು ಇವರೀರ್ವರು ಸೇರಿ ಒಂದು. ಕುಟುಂಬ ಒಂದಾಗಿ ಉಣ್ಣುತ್ತಿದ್ದ ಹಂಡೆಯ ಗಂಜಿ ಹೀಗೆ ಸಹನೆ ಕಳೆದುಕೊಂಡು ಮಡಕೆಯ ಗಾತ್ರಕ್ಕೆ ಬಂತು, ಹಾಗೆ ಮಡಕೆಯ ಗಂಜಿಯೂ ಒಡೆದು ತನ್ನ ಗಾತ್ರದಿಂದ ಕುಸಿದು ಕುದ್ಪೆಯ ಗಂಜಿಯಾಯಿತು. ಬೈಲಂಗಳ ಗುತ್ತು ಒಡೆದು ಚೂರು ಚೂರಾಯಿತು ಸಂಸಾರ". (ಅದೇ ಪು ೫೫೬)

ಭೂಮಿಯ ವಿಸ್ತಾರ ಮತ್ತು ಅನ್ನ ಬೇಯಿಸುವ ಪಾತ್ರೆಯ ಗಾತ್ರವನ್ನು ಸಮೀಕರಿಸುತ್ತ ಛಿದ್ರವಾದ ಕುಟುಂಬಗಳು ಕೌಟುಂಬಿಕ ಶಕ್ತಿ ಜನ ಬಲವನ್ನು ನಿರೂಪಿಸಲು ಸಾಧ್ಯವಾಯಿತು. ಶ್ರಮದ ದುಡಿಮೆ ಮತ್ತು ಜತೆಯಾಗಿ ಉಣ್ಣುವ ಸಣ್ಣ ಸಣ್ಣ ಖುಶಿಯ ಕ್ಷಣಗಳು ಕಂಡವರು ಇಂದು ಮುಖ ಊದಿಸಿ ಮುಖ ತಿರುವುತ್ತಾ ಬಾಳಿದರು. ಶ್ರಮದ ದುಡಿಮೆಗೆ ಪೂರಕವಾಗಿ ಕಟ್ಟಿಕೊಂಡ ಬದುಕಿನಲ್ಲಿ ಬೆವರು ಸುರಿಸಿ ದುಡಿಯುವುದು ಅತಿ ಅವಶ್ಯವಾಗಿತ್ತು.

'ಉಲ್ಲಂಘನೆ' ಕಾದಂಬರಿ ಕರಾವಳಿಯ ನೂರು ವರ್ಷದ ಕತೆಯನ್ನು ಹೇಳುತ್ತಾ ಐದು ತಲೆಮಾರುಗಳಲ್ಲಿ ಗುತ್ತಿನ ಸ್ವರೂಪ ಬದಲಾಗುತ್ತ ಬಂದುದನ್ನು ಹೇಳುತ್ತಾರೆ. ಬಹಳ ಮುಖ್ಯವಾಗಿ ಶಾಂತಕ್ಕೆ ಮತ್ತು ಅಂಬಕ್ಕೆಯ ಕಾಲಕ್ಕಾಗುವಾಗ ಆಗಿರುವ ಬದಲಾವಣೆಗಳನ್ನು ನಿರೂಪಿಸುತ್ತಾರೆ. ಒಕ್ಕಲು ಮಸೂದೆ ಕಾನೂನು ಭೂಮಿಯ ಒಡೆತನದಲ್ಲಿ ತಂದ ಬದಲಾವಣೆಗಳನ್ನು ನಿರೂಪಿಸುತ್ತಾರೆ. ಒಕ್ಕಲು ಮಸೂದೆ ಕಾನೂನು ಭೂಮಿಯ ಒಡೆತನದಲ್ಲಿ ತಂದ ಬದಲಾವಣೆಗಳನ್ನು ನಿರೂಪಿಸುತ್ತಾ ಕುಟುಂಬಗಳೂ ವಿಭಕ್ತವಾದುದನ್ನು ಹೇಳುತ್ತಾರೆ. ಮನೆ ತುಂಬ ಆಳು ಕಾಳುಗಳು ಹಾಗೂ ಕೃಷಿ ಕೆಲಸಕ್ಕೆ ಅಂಗಳದ ತುಂಬ ಇದ್ದ ಆಳುಗಳು ಎಲ್ಲರನ್ನು ಕಳಚಿಕೊಂಡು ಸಾಂತೇರ್ ಗುತ್ತಿನಲ್ಲಿ ಕೊನೆಗೆ ಅಂಬಕ್ಕ ಒಬ್ಬಳೇ ಇರಬೇಕಾದ ಪರಿಸ್ಥಿತಿ ಬರುತ್ತದೆ. ಅಂಗಳದಲ್ಲಿದ್ದ ಮೂಲದ ಆಳುಗಳಾದ ಕೊರಗ ಕರ್ಗಿಯರೇ ಅಂಬಕ್ಕೆಯನ್ನು ಗಮನಿಸುವ ಔಷದೋಪಚಾರ ಮಾಡಬೇಕಾದ ಪರಿಸ್ಥಿತಿ ಉಂಟಾಗುತ್ತದೆ. ಬಂದ ಒಕ್ಕಲು ಮಸೂದೆ ಕಾನೂನು ಉಳುವವನೇ ಹೊಲದೊಡೆಯನಾಗಿಸಿ ಗೇಣಿಯ ಆಳುಗಳೆಲ್ಲ ಸ್ವತಂತ್ರರಾದರೂ ಆ ಕುಟುಂಬಗಳೇ ಅವಿಭಕ್ತವಾಗಿ ಉಳಿಯಲಿಲ್ಲ. ಅವರಲ್ಲಿ ಮತ್ತೆ ಮಂಡೆ ಪಾಲುಗಳಾಗಿ ಭೂಮಿಯೊಂದಿಗೆ ಕುಟುಂಬವೂ ಛಿದ್ರವಾಯಿತು. "ಸಾಂತೇರ್ ಗುತ್ತಿನಲ್ಲಿ ಎಣೆಲೆ ಬೆಳೆಯ ಕಟಾವು ಮುಗಿಯಿತು. ಸುಗ್ಗಿ ಸಾಗುವಳಿಯ ಚಟುವಟಿಕೆಗಳು ಪ್ರಾರಂಭವಾದವು. ಭೂ ಮಸೂದೆ ಜಾರಿಗೊಂಡ ಮೇಲೆ ಗುತ್ತಿನ ಮನೆಯ ಒಕ್ಕಲುಗಳೆಲ್ಲ ಮನೆಯ ಎಲ್ಲಾ ಸಂಬಂಧವನ್ನು ಆಗಲೇ ಕಳೆದುಕೊಂಡು ಸ್ವತಂತ್ರರಾಗಿದ್ದರು. (ಮೊಗಸಾಲೆ.ನಾ; ೨೦೦೮; ಪು: ೩೨೧) ಕೃಷಿ ಕಾರ್ಯ ಚಟುವಟಿಕೆಗೆ ಒದಗದೆ ಕೂಲಿಯಾಳುಗಳು ತಮ್ಮ ಕುಟುಂಬದ ಒಳಗೂ ವಿಭಕ್ತತೆಯ ಕುತೂಹಲ ಭರಿತ ಸಂಗತಿಗಳು ಗೋಚರಿಸುತ್ತಿವೆ. ಕುಟುಂಬಗಳು ವಿಭಕ್ತವಾಗುವಾಗ ಮಾತೃ ಮೂಲದಿಂದ ಪಿತೃಮೂಲದೆಡೆಗೆ ಸಾಗಿದ್ದು ಒಂದು ದೊಡ್ಡ ಸ್ಥಿತ್ಯಂತರ ಗುತ್ತಿನ ಮನೆಗಳಲ್ಲದೆ ಒಕ್ಕಲಿನ ಮನೆಗಳಲ್ಲೂ ಈ ರೀತಿಯ ಸ್ಥಿತ್ಯಂತರವಾಯಿತು. ಕುಟುಂಬ ರಚನೆಯ ವಿನ್ಯಾಸ ಮತ್ತು ಭೂಮಿಯ ಒಡೆತನದಲ್ಲೂ ಈ ಬದಲಾವಣೆಯನ್ನು ಗುರುತಿಸಬಹುದು. "ಭೂ ಮಸೂದೆ ಜ್ಯಾರಿಗೊಂಡ ಮೇಲೆ ನಮ್ಮ ಅಪ್ಪನ ಅಳಿಯಂದಿರಾದ ಕಿಟ್ಟ ಮತ್ತು ಬಾಬು ಇಬ್ಬರೂ ಸೇರಿ ಅವರ ತಾಯಿ ಅಂದರೆ ನಮ್ಮ ಅಪ್ಪನ ತಂಗಿ ಶಂಕ್ರಿಯ ಹೆಸರಿನಲ್ಲಿ ಭೂ ನ್ಯಾಯ ಮಂಡಳಿಗೆ ಅರ್ಜಿ ಸಲ್ಲಿಸಿದ್ದರು (ನಿಮಗೂ ಗೊತ್ತು ಅದಕ್ಕೆ ನಾವೂ ಆಕ್ಷೇಪ ಎತ್ತಲಿಲ್ಲ. ನ್ಯಾಯವಾಗಿ ಅಳಿಯ ಸಂತಾನ ಕಟ್ಟಿನ ಪ್ರಕಾರ ಈ ಭೂಮಿಯನ್ನು ಗೇಣಿಗೆ ವಹಿಸಿಕೊಂಡದ್ದು ನನ್ನಪ್ಪ ಕರಿಯ ಪೂಜಾರಿಯೇ. ಅದರ ಹಕ್ಕು ಈಗ ಹೋಗುತ್ತಿರುವುದು ಭೂನ್ಯಾಯ ಮಂಡಳಿಗೆ. ಅರ್ಜಿ ಸಲ್ಲಿಸಿದ ನನ್ನ ಅಪ್ಪನ ತಂಗಿಯ ಮಕ್ಕಳಿಗೇ ಮಕ್ಕಳ ಕಟ್ಟಿನ ಪ್ರಕಾರ ಅದು ಅವರಿಗೆ ಸಲ್ಲಿಸತಕ್ಕದ್ದು ಎನ್ನುವುದು ಸರಿಯೇ, ಆದ್ದರಿಂದ ಅದಕ್ಕೆ ನಮ್ಮ ಆಕ್ಷೇಪ ಇಲ್ಲ. ಆದರೆ ನಮ್ಮ ಮಾವ ನಾವು ಗೇಣಿಗೆ ವಹಿಸಿಕೊಂಡಿದ್ದ ಜಮೀನಿನ ಗೇಣಿದಾರನಾಗಿದ್ದುದರಿಂದ ಭೂ ನ್ಯಾಯ ಮಂಡಲಿಗೆ ಅರ್ಜಿ ಸಲ್ಲಿಸುವಾಗ ಆತ ನಮ್ಮ ಅಮ್ಮ ಸೀತುನ ಹೆಸರಿನಲ್ಲೇ ಅರ್ಜಿ ಸಲ್ಲಿಸಬೇಕಿತ್ತು. ಆದರೆ ಮಾವ ಹಾಗೆ ಅರ್ಜಿ ಸಲ್ಲಿಸದೇ ತನ್ನ ಹೆಸರಿನಲ್ಲೇ ಅರ್ಜಿ ಸಲ್ಲಿಸಿದ್ದಾರೆ. ಅದರ ಹಕ್ಕುದಾರರೆಂದು ತನ್ನ ಹೆಂಡತಿ ಮಕ್ಕಳ ಹೆಸರನ್ನು ಮಾತ್ರ ನಮೂದಿಸಿದ್ದಾರೆ. ಇದು ತಿಳಿದದ್ದು ಮೊನ್ನೆ ಟ್ರಿಬ್ಯುನಲ್‌ನಿಂದ ನೋಟೀಸು ಜ್ಯಾರಿಯಾದ ಮೇಲೆ.

ಇದನ್ನೆಲ್ಲ ನನ್ನ ತಮ್ಮ ನನಗೆ ಪತ್ರ ಬರೆದು ತಿಳಿಸಿದ. ಇದರಿಂದಾಗಿ ನಮಗೆ ಅಂದರೆ ನನ್ನ ಅಮ್ಮನ ಮಕ್ಕಳಿಗೆ ನ್ಯಾಯೋಚಿತವಾಗಿ ಸಿಗಬೇಕಾದ ಭೂಮಿ ಸಿಗದ ಹಾಗೆ ಆಗಿದೆ. ಅಲ್ಲದೇ ನಮ್ಮ ಅಪ್ಪನ ಸೊಸೆ ವಾರಿಜಳಿಗೆ ಇಲ್ಲಿ ನಿಮ್ಮ ಭೂಮಿಯಲ್ಲೂ ಪಾಲು ಸಿಕ್ಕಿದೆ. ಅಲ್ಲಿ ನಮ್ಮ ಭೂಮಿಯಲ್ಲೂ ಪಾಲು ಸಿಗುವಂತಾಗಿದೆ. ಇದು ಎಷ್ಟು ಸರಿ ಎಂದು ನಾನು ಮಾವನಲ್ಲಿ ಕೇಳಿದೆ ಅದಕ್ಕೆ ಆತ 'ನೀವೆಲ್ಲ ಎಲ್ಲಿದ್ದಿರಿ ಇಷ್ಟು ವರುಷ? ನೀನು ಮುಂಬಯಿಯಲ್ಲಿ ಇದ್ದು ಸಾಕಷ್ಟು ದುಡಿದು ಸಂಪಾದಿಸಿರುವಿ ನಿನ್ನ ತಮ್ಮ ಇಲ್ಲಿ ಮಂಗಳೂರಿನಲ್ಲಿ ಮಾಸ್ತರಿಕೆ ಮಾಡುತ್ತಿದ್ದು ಅವನ ಸಂಸಾರ ಅವನೊಂದಿಗೆ ಇದೆ. ನಿನ್ನ ಸಹೋದರಿಯರಿಗೆಲ್ಲ ನಾನೇ ಮದುವೆ ಮಾಡಿಕೊಟ್ಟೆ. ಇಲ್ಲಿ ಈ ಮಣ್ಣಿನಲ್ಲಿ ಕೆಸರು ಮಾಡಿದ್ದು ನಾನು ಮತ್ತು ನನ್ನ ಮಕ್ಕಳು ಮಾತ್ರ' ಎಂದು ಹೇಳುತ್ತಾರೆ. ಅವರು ದುಡಿಯಲಿಲ್ಲ ಅಂತ ನಾನೂ ಹೇಳುವುದಿಲ್ಲ ಆದರೆ ನನ್ನ ಮಾವನ ಹೆಂಡತಿಗೆ ಅರ್ಥಾತ್ ನಮ್ಮಪ್ಪನ ಸೊಸೆಗೆ ಎರಡೂ ಕಡೆಗಳಲ್ಲಿ ಭೂಮಿ ಸಿಗುತ್ತದೆ ಆದರೆ ನನ್ನಮ್ಮನಿಗೆ ಎಲ್ಲೂ ಇಲ್ಲ. ಅದು ಎಷ್ಟು ನ್ಯಾಯ ಎನ್ನುವುದು ನನ್ನ ಪ್ರಶ್ನೆ (ಅದೇ, ಪು. ೩೯೧). ಪರಂಪರೆಯಿಂದ ಬಂದ ಕುಟುಂಬದ ರೀತಿ ನೀತಿಗಳನ್ನು ಮೀರಿ ಭೂಮಿಯನ್ನು ಹಂಚಿಕೊಂಡರು ಮಾತೃ ಪ್ರಧಾನ ಕುಟುಂಬ ವ್ಯವಸ್ಥೆಯ ಒಳಗಡೆ ನಡೆದ ಈ ಬೆಳವಣಿಗೆ ಅವಿಭಕ್ತ ಕುಟುಂಬಗಳು ವಿಭಕ್ತವಾಗುವಾಗ ಸಾಮುದಾಯಿಕ ಕಲ್ಪನೆಗಿಂತ ವೈಯಕ್ತಿಕ ಸ್ವಾರ್ಥಗಳ ಕುಟುಂಬ ಕೇಂದ್ರಿತವಾಗುತ್ತದೆ. ಕುಟುಂಬದ ಭೂಮಿ ಅದರ ನಿರ್ವಹಣೆಯನ್ನು ಮಾಡುತ್ತಿದ್ದವರೇ ಜವಾಬ್ದಾರಿಯನ್ನು ವಹಿಸಿಕೊಂಡು, ಉಳಿದ ಹಕ್ಕುದಾರರಿಂದ ಕಸಿದುಕೊಳ್ಳುವುದು ವಿಪರ್ಯಾಸವಾಗಿದೆ. ಕುಟುಂಬದ ಅರ್ಥವೇ ಸಮೂಹದ ಪರಿಕಲ್ಪನೆಯನ್ನು ಮೀರಿ ವೈಯಕ್ತಿಕತೆಯೆಡೆಗೆ ಸಾಗುತ್ತದೆ. ಅಷ್ಟೇ ಅಲ್ಲದೆ ಕುಟುಂಬ ರಚನಾ ವಿನ್ಯಾಸವೂ ರೂಪಾಂತರ ಹೊಂದುವುದಲ್ಲದೆ ತಲೆಮಾರುಗಳಿಗೆ ಸಿಕ್ಕ ಭೂಮಿಯ ಒಡೆತನ ಹಕ್ಕು ಸ್ವಾಮ್ಯಗಳು ಬದಲಾಗಲೂ ಸಾಧ್ಯವಾಯಿತು. ಹೆಣ್ಣಿನ ಒಡೆತನದಲ್ಲಿದ್ದ ಭೂಮಿಯ ಯಜಮಾನಿಕೆ ಗಂಡಿನ ಒಡೆತನಕ್ಕೆ ಪರಭಾರೆಯಾದಾಗ ಅಲ್ಲಿ ತಾನು –ತನ್ನದು ಎನ್ನುವ ಅಂಶವೇ ಮುನ್ನೆಲೆಗೆ ಬರುತ್ತದೆ. ಬಂದ ಸರಕಾರದ ಕಾನೂನು ಮತ್ತು ಅದನ್ನು ಪ್ರಯೋಜನಕ್ಕೆ ಆಗುವಂತೆ ಬಳಸಿಕೊಂಡ ಲೋಕದ ಎಲ್ಲ ಜನತೆ ಒಬ್ಬರನ್ನು ಕಂಡು ಮಗದೊಬ್ಬರು ಅದನ್ನು ಅನುಸರಿಸುತ್ತಾರೆ. ಗುತ್ತಿನ ಮನೆಯಾಗಲೀ ಒಕ್ಕಲಿನ ಮನೆಯಾಗಲೀ ಭೂಮಿಯ ಒಡೆತನವೆಂದರೆ ಇದೇ ಎಂಬ ಅರ್ಥದಲ್ಲಿ ಪರಿಭಾವಿಸುತ್ತಾರೆ. ಇದನ್ನು ಸಂಕುಚಿತತೆ, ಸ್ವಾರ್ಥ ಎಂದು ಪರಿಭಾವಿಸುವುದಕ್ಕಿಂತ ಆ ಕಾಲದ ಗತಿಶೀಲತೆಗೆ ಜನರ ಪ್ರತಿಸ್ಪಂದನವೂ ಇದಾಗಿತ್ತು ಎಂದು ಅರ್ಥೈಸಿಕೊಳ್ಳುವುದರಲ್ಲಿ ವಾಸ್ತವವಿದೆ. ಆದರ್ಶ ರಾಜ್ಯದ ಕಲ್ಪನೆಗಳಿಗಿಂತಲೂ ವಾಸ್ತವಕ್ಕೆ ಮುಖ ಮಾಡಿರುವ ಸಮುದಾಯ ತಮ್ಮ ಅಸ್ಮಿತೆಯ ಹಿನ್ನೆಲೆಯಲ್ಲೂ ಇದನ್ನು ನಿರೂಪಿಸಿಕೊಂಡಿದೆ.

'ಉಲ್ಲಂಘನೆ' ಕಾದಂಬರಿಯಲ್ಲಿ ದಾಖಲಾದ ಅಂಶಗಳನ್ನು ಗಮನಿಸಿದರೂ, ನೂರಾರು ಜನರು ಇದ್ದ ಕುಟುಂಬ ಇಂದು ಸಂಖ್ಯಾಬಲದಿಂದ ಕನಿಷ್ಠವಾಗುತ್ತ ಹೋಗುತ್ತದೆ. ಅದು ಸಾಂತೇರ್ ಗತ್ತು ಆಗಿರಬಹುದು, ಇಲ್ಲವೇ ಅವರ ಒಕ್ಕಲುಗಳಾಗಿದ್ದ ಕುಟುಂಬವೂ ಆಗಿರಬಹುದು. ಕೃಷಿಯಲ್ಲಿ ಆದ ಸ್ಥಿತ್ಯಂತರ, ಆಧುನಿಕತೆ ಮತ್ತು ಕರಾವಳಿಯಿಂದ ಮುಂಬೈಗೆ ನಡೆದ ಹೊರ ವಲಸೆ ವೃತ್ತಿಯನ್ನು ಬದಲಾಯಿಸುವುದರೊಂದಿಗೆ ಕುಟುಂಬ, ಜಾತಿಯ ಸಂರಚನೆಗಳೂ ಹೊಸ ರೂಪ ಪಡೆದುಕೊಳ್ಳುತ್ತವೆ. ಸಾಂತೇರ್ ಗುತ್ತಿನ ಗುತ್ತಿನಾರ್

ಆಗಬೇಕಾದ ಸುಂದರ ಗುತ್ತನ್ನು ಬಿಟ್ಟು ತೆರಳಿ "ಸಾಂತೇರ್ ಗ್ರೂಫ್ ಆಫ್ ಹೋಟೇಲ್" ಎಂದು ಹೋಟೇಲ್ ಉದ್ದಿಮೆಯನ್ನು ತನಗೆ ವರದಕ್ಷಿಣೆಯಾಗಿ ಸಿಕ್ಕ ಒಂದು ಹೋಟೇಲ್ ನಿಂದ ವೃದ್ಧಿಸುತ್ತಾನೆ. ಹಳ್ಳಿಯಲ್ಲಿ ಹುಟ್ಟಿಕೊಂಡ ಹೊಸ ಬೆಳವಣಿಗೆಗಳು ಆದಂ ಬ್ಯಾರಿಯ ವ್ಯಾಪಾರವನ್ನು ವೃದ್ಧಿಸುವುದರೊಂದಿಗೆ ಅವನ ವ್ಯವಹಾರ ಸಿರಿವಂತಿಕೆಗಳು ಉಳಿದವರ ಕಣ್ಣು ಕುಕ್ಕುವಂತೆ ಮಾಡುತ್ತದೆ. ಇಡೀ ಹಳ್ಳಿಯೇ ಒಂದು ಕುಟುಂಬವಾಗಿ ಗುತ್ತಿನ ಆಡಳಿತಕ್ಕೊಳಪಟ್ಟ ಒಬ್ಬರಿಗೊಬ್ಬರು ಸಹಾಯ ಹಸ್ತರಾಗಿ ಬಾಳುತ್ತಿದ್ದವರು ಯಾರ ನಿಗ್ರಹಕ್ಕೂ ಒಳ ಪಡದೆ ಬಾಳಲಾರಂಭಿಸಿದರು. ಸಮಯ ಸಂದರ್ಭಗಳನ್ನು ದುರುಪಯೋಗಿಸಿಕೊಂಡವರೂ ಇದ್ದರು. ಪ್ರೌಢಿಮೆಯ ವ್ಯಕ್ತಿತ್ವವನ್ನು ಹೊಂದಿದ ಗಾಂಧಿವಾದಿಯೂ ಆದ ಸಂಕಪ್ಪ ಹೆಗ್ಡೆ, ತನ್ನನ್ನು ಗುತ್ತಿನಾರ್ ಎಂದು ಕರೆಸಿಕೊಳ್ಳುವ ಪಟ್ಟವನ್ನು ಒಪ್ಪಿಕೊಳ್ಳದೆ ಅದಕ್ಕೆ ಸಿದ್ಧವಾಗುವ ಬದ್ಧತೆಯ ಮನಸ್ಥಿತಿ ಮೆಚ್ಚುವಂತಹುದು.

"ಬದಲಾಗುತ್ತ ಹೋಗುವುದು ಕಾಲದ ಧರ್ಮ. ಅದಕ್ಕೆಲ್ಲ ನಾವು ಹೊಂದಿಕೊಳ್ಳದಿದ್ದರೆ ನಿನ್ನ ಹಾಗೆ ಭಾವುಕರಾಗಿ ಆರೋಗ್ಯ ಕೆಡಿಸಿಕೊಳ್ಳಬೇಕೇ ವಿನಃ ಮತ್ತೇನೂ ಮಾಡಲಾಗದು" (ಅದೇ, ಪು. ೪೫೦). ಬದಲಾವಣೆಯನ್ನು ಸಕರಾತ್ಮಕವಾಗಿ ಸ್ವೀಕರಿಸುತ್ತ ಸಾಗಿದ ಮನೋಧರ್ಮದಿಂದ ಅವೆಲ್ಲಕ್ಕೂ ಸ್ಪಂದಿಸುವುದು ಸಾಧ್ಯವಾಯಿತು. ಭೂಮಿಯ ಒಡೆತನದ ಸ್ವರೂಪ ಬದಲಾದದ್ದು ಮಾತ್ರವಲ್ಲ ಭೂಮಿಯನ್ನು ನೋಡುವ ದೃಷ್ಟಿಕೋನವೂ ಸ್ಥಿತ್ಯಂತರವಾಯಿತು.

ಶ್ರಮದ ಹಂಚಿಕೆಗಾಗಿ ಕಟ್ಟಿಕೊಂಡ ಅವಿಭಕ್ತತೆ ನಾಲ್ಕೈದು ಹಂತಗಳಲ್ಲಿ ವಿಭಕ್ತವಾಗುತ್ತ ಸಾಗಿ ಬೇರೆ ಬೇರೆ ಸ್ವರೂಪದ ಆಯಾಮಗಳನ್ನು ಪಡೆದುಕೊಂಡಿತು. ಭೂಮಿಯೂ ಹರಿದು ಹಂಚಿ ಹೋಗಿದ್ದು ಮಾತ್ರವಲ್ಲದೆ ವ್ಯಕ್ತಿಪ್ರಜ್ಞೆಯ ತರ್ಕಗಳೇ ಮುನ್ನೆಲೆಗೆ ಬಂದವು. ಆಧುನಿಕತೆ ಕೈಗಾರಿಕೆ ಕಾರ್ಖಾನೆಗಳಲ್ಲಿ ಮತ್ತೆ ಕುಟುಂಬದ ಸಂರಚನೆಗೂ ಹೊಸ ಸ್ವರೂಪವನ್ನು ಕೊಟ್ಟವು. ಕುಟುಂಬದ ಉತ್ಪಾದನೆಯನ್ನು ಪ್ರಾಯೋಜನಿಕ ದೃಷ್ಟಿಯಿಂದ ನೋಡುತ್ತ ತಮಗೆ ಅದರಿಂದ ಆಗುವ ಲಾಭವೇನು ನಷ್ಟವೇನು ಎನ್ನುವ ಭಾವನಾತ್ಮಕ ಸಂಬಂಧ ಮತ್ತು ಬಾಂಧವ್ಯಗಳಿಗಿಂತ ವ್ಯವಹಾರಗಳೇ ಪ್ರಮುಖವಾಗುತ್ತದೆ. ಸಾಂತೇರ್ ಗುತ್ತಿನ ಸುಂದರನ ಮಗ ಪ್ರಶಾಂತ ತನ್ನ ಬಾಸ್ ಮೆಹ್ತಾನಿಗೆ ಇಡೀ ಗುತ್ತಿನ ಆಸ್ತಿ ಭೂಮಿಯನ್ನು ಮಾರಲು ಹೊರಡುತ್ತಾನೆ, ಅಂಬಕ್ಕೆಯ ಮಗಳು ಶಾರದಾಳ ಮಗಳು ಪ್ರಜ್ಞಾ ಸಾಂತೇರ್ ಎಂ.ಬಿ.ಬಿ.ಎಸ್ ಓದಿಯೂ ಗುತ್ತನ್ನು ಉಳಿಸಿಕೊಳ್ಳಬೇಕಾದ ದರ್ದನ್ನು ಯೋಚಿಸುತ್ತಾಳೆ. ವಿಶೇಷ ಆರ್ಥಿಕ ವಲಯಕ್ಕಾಗಿ ಭೂಮಿಯನ್ನು ಕಳಕೊಳ್ಳಲೂ ಸಿದ್ಧಳಾಗದೆ ಕುಟುಂಬ ಪ್ರೇಮದಿಂದಲೇ ತನ್ನ ಗುತ್ತಿನ ಮನೆತನವನ್ನು ಉಳಿಸುವಪ್ರಯತ್ನ ಸಾಗುತ್ತದೆ. ಕೃಷಿಯನ್ನು ಕೃಷಿ ಭೂಮಿಯನ್ನು ಉಳಿಸಿಕೊಳ್ಳಬೇಕೆನ್ನುವ ಉತ್ಸಾಹದಿಂದ ಕುಟುಂಬ ಪ್ರೇಮವನ್ನು ಉಳಿಸಿಕೊಳ್ಳುವ ಯತ್ನ ಮಾಡುತ್ತಾಳೆ.

ಅವಿಭಕ್ತತೆಯಿಂದ ವಿಭಕ್ತತೆಗೆ ಕಾರಣಗಳು ನೂರಾರು ಆದರೂ ಅವುಗಳ ಹಂತಗಳು ನಾಲ್ಕೈದು ಹಂತದಲ್ಲಿದ್ದರೂ ವರ್ತಮಾನದಲ್ಲಿ ವಿಭಕ್ತವಾಗಿರುವುದು ಕಣ್ಣಿಗೆ ಕಾಣುತ್ತಿರುವ ಸತ್ಯ ಈ ವಾಸ್ತವದ ಮಧ್ಯೆ ಕೃಷಿ ಭೂಮಿ ಒಂದು ಹಂತದಲ್ಲಿ ಕೃಷಿಯ ಸ್ವರೂಪದಲ್ಲಿ ಬದಲಾವಣೆಯನ್ನು ತಂದರೆ ಇಂದು ಕೃಷಿಯೇ

ಕಾಣೆಯಾಗುತ್ತಿದೆ. ಹೊಸ ಅರ್ಥಿಕ ನೀತಿಗಳು ವಿಸ್ತರಿಸುತ್ತಿರುವ ಉದ್ದಿಮೆ ವಲಯ, ಸೃಷ್ಟಿಯಾಗುತ್ತಿರುವ ಉದ್ಯೋಗವಕಾಶಗಳ ಮಧ್ಯೆ ಹಳ್ಳಿಗಳಲ್ಲಿರುವವರೆಲ್ಲ ನಗರಗಳಿಗೆ ವಲಸೆ ಹೋಗುವುದು ಸಾಮಾನ್ಯವಾಗಿದೆ. ಕಾರ್ಪೊರೇಟ್ ಜಗತ್ತು ಬೆಳೆದಂತೆಲ್ಲ ಹುಟ್ಟಿಕೊಂಡ ಸ್ಮಾರ್ಟ್ ಸಿಟಿಗಳಲ್ಲಿ ಆಹಾರದ ಸ್ವಾವಲಂಬನೆಯ ಪ್ರಶ್ನೆಯೇ ಇಲ್ಲ. ಸಾವಯವದ ಕೂಗು ಒಂದಿಷ್ಟು ಕಿರಿದಾಗಿ ಕೇಳಿಸಿಕೊಂಡರೂ ಸಿದ್ಧ ಆಹಾರವು ಒಂದು ಬೃಹತ್ ಉದ್ದಿಮೆಯಾಗಿಯೇ ಬೆಳೆಯುತ್ತಿದೆ. ಎಲ್ಲವನ್ನು ಕಾಸು ಕೊಟ್ಟು ಖರೀದಿಸಬಹುದು ಎಂಬ ಮನೋಧರ್ಮದ ಮಧ್ಯೆ 'ದುಡ್ಡಿ'ಗೆ ಮಹತ್ವ ಬಂದು ಆದರ್ಶ ಮೌಲ್ಯಗಳೊಂದಿಗೆ ಹಿರಿಯರನ್ನು ಮೂಲೆಗೆ ತಳ್ಳಲಾಗಿದೆ. ಕಾಲಾಂತರದಲ್ಲಿ ಬದುಕಿನ ಕ್ರಮ ಗತಿಶೀಲತೆ, ಮೌಲ್ಯಾಂಕನಗಳು ತೀರಾ ಯಂತ್ರಗಳಂತೆ ಮನುಷ್ಯರನ್ನು ಸೃಷ್ಟಿ ಮಾಡುತ್ತಿದೆಯಲ್ಲದೆ ಬಾಂಧವ್ಯಗಳಾಗಲೀ, ಭಾವುಕತೆಗಳಾಗಲೀ ಪ್ರಮುಖವಾಗಿಲ್ಲ. ಒಂದು ಕಾಲಕ್ಕೆ ಸತ್ಯದ ಸಾಕ್ಷಾತ್ಕಾರಕ್ಕೆ ಪ್ರತಿಪಾದನೆಯಾಗಿದ್ದ ಮಣ್ಣು 'ದುಡ್ಡಿ' ನ ಇಡುಗಂಟಾಗಿ ಲಾಭ ನಷ್ಟಗಳ ಲೆಕ್ಕಚಾರಗಳೇ ಮುನ್ನೆಲೆಗೆ ಬರುತ್ತಿದೆ. ಕುಟುಂಬಗಳು ಸಣ್ಣದಾಗುತ್ತ ಅಕ್ಕರೆ ಪ್ರೀತಿಗಳು ಹೆಚ್ಚಲಿಲ್ಲ. ಸವಲತ್ತು ಲಭಿಸಿದರೂ ಬಂಧುತ್ವ ಲಭಿಸಲಿಲ್ಲವೆನ್ನುವುದು ವಾಸ್ತವ.

**೬.೩ಪಾಳೇಗಾರಿಕೆ ಊಳಿಗಮಾನ್ಯ ವ್ಯವಸ್ಥೆಯಿಂದ ಕುಟುಂಬ ಮೂಲಕ್ಕೆ**

'ಭೂಮಿ' ಚರಿತ್ರೆಯ ಉದ್ದಕ್ಕೂ ಬಹಳ ಚರ್ಚಿತವಾದ ವಿಷಯ ವಸ್ತುವಾಗಿದೆ. ಭೂಮಿಯ ಒಡೆತನ ಮತ್ತು ಅನುಭೋಗ ಆಯಾಯ ಕಾಲಮಾನದಲ್ಲಿ ಬೇರೆ ಬೇರೆ ಅರ್ಥ ಸಾಧ್ಯತೆಗಳನ್ನು ಹೊಂದಿರುವಂತಹುದು. ಚರಿತ್ರೆಯನ್ನು ಗಮನಿಸಿದರೆ ಭೂಮಿಯ ಕುರಿತಾದ ದಾಖಲಾತಿಗಳು ಶಾಸನಗಳಲ್ಲಿ ಬಾಯ್ದೆರೆಯಾದ ಮೌಖಿಕ ಕಥನಗಳಲ್ಲಿ ಆರಾಧನೆ, ಆಚರಣೆ, ನಂಬಿಕೆ, ನಿಷೇಧಗಳೆಲ್ಲದರಲ್ಲೂ ಪ್ರಾಪ್ತಿಯಾಗುತ್ತದೆ. ಪಶುಪಾಲನೆಗೆ ಪೂರಕವಾಗಿದ್ದ ಕೃಷಿ, ಸ್ಥಿರ ಕೃಷಿಯಾಗಿ ಪರಿವರ್ತನೆ ಹೊಂದಿದ ಮಾದರಿ ಒಂದು ವಿಧವಾದರೆ ಕೃಷಿಯೇ ಮೂಲವಾಗಿ ಅದಕ್ಕೆ ಪೂರಕವಾಗಿ ಪಶುಪಾಲನೆಯನ್ನು ಬೆಳೆಸಿದ್ದು ಇನ್ನೊಂದು ಮಾದರಿ. ಸಾಮುದಾಯಿಕ ಕೃಷಿ ಸಾಮೂಹಿಕ ಶ್ರಮದೊಂದಿಗೆ ವ್ಯವಸಾಯೇತರ ವೃತ್ತಿ ನೈಪುಣ್ಯದ ಶ್ರಮಗಳನ್ನು ಬಯಸುತ್ತಿತ್ತು. ಕೃಷಿಗೆ ಪೂರಕವಾದ ಸಲಕರಣೆ ಸಾಮಾಗ್ರಿಗಳನ್ನು ತಯಾರಿಸುವ ವರ್ಗಗಳು ಸೇರಿ ಗ್ರಾಮ ಸಮಾಜದ ನಿರ್ಮಾಣವಾಯಿತು. ಕೃಷಿ ಯೋಗ್ಯವಾದ ಭೂಮಿಯಲ್ಲದೆ ಸೀತಾ ಭೂಮಿಗಳೆಂಬ ಹೆಸರಿನ ಭೂಮಿಗಳೂ ಇದ್ದವು. ಅವು ಪ್ರಭುತ್ವ ನೇತೃತ್ವದಲ್ಲಿ ಕೃಷಿ ಯೋಗ್ಯವಾಗಿ ಮಾಡಲಾದ ಬೀಡು ಭೂಮಿಗಳು. ಈ ಬೀಡು ಭೂಮಿಗಳು ತೆರಿಗೆಯ ವಿನಾಯಿತಿಯನ್ನು ಪಡೆದುದರಿಂದ ಕೃಷಿ ವಿಸ್ತರಣೆಯೂ ಆಯಿತು. ಖಾಸಗಿ ಭೂಮಿಯ ಒಡೆತನದ ಪರಿಕಲ್ಪನೆಯು ಹುಟ್ಟಿಕೊಂಡು ವಿಸ್ತಾರವಾದ ಕೃಷಿ ಯೋಗ್ಯ ಭೂಮಿಯ ಯಜಮಾನರಾಗಬೇಕೆಂಬ ಪರಿಕಲ್ಪನೆಯೂ ಮುಖ್ಯವೆನಿಸಿತು.

ವ್ಯವಸಾಯ ಸಮಾಜವು ಹುಟ್ಟಿಕೊಂಡ ನಂತರದಲ್ಲೂ ಭೂಮಿಯ ಸಮಷ್ಟಿ ಒಡೆತನ ಬಹುಕಾಲದವರೆಗೆ ಮುಂದುವರಿದೇ ಇತ್ತು. ಸಮುದಾಯಗಳು ತಾವು ಕೃಷಿಯೋಗ್ಯವಾಗಿಸಿ ನೇಗಿಲಿನ ಹಿಡಿತಕ್ಕೆ ತಂದುಕೊಂಡ ಭೂಮಿಯನ್ನು ತಮ್ಮ ಸಮಷ್ಟಿ ಆಸ್ತಿಯಾಗಿಯೇ ಹೊಂದಿರುತ್ತಿದ್ದರು. ಹಾಗಾಗಿ ಗ್ರಾಮಗಳಲ್ಲಿ ಪ್ರಧಾನ ವ್ಯವಸಾಯ ಕ್ಷೇತ್ರಗಳು ಸಮಷ್ಟಿ ಆಸ್ತಿಯಾಗಿಯೇ ಮುಂದುವರೆದವು. ಆದರೆ ಗ್ರಾಮದ

ಹೊರಭಾಗಗಳಲ್ಲಿನ ಬಂಜರು ಭೂಮಿಗಳನ್ನು ಮಾತ್ರ ಯಾರೆಂದವರು ತಮ್ಮ ಸ್ವಂತ ಶ್ರಮದಿಂದ ನೇಗಿಲಿನ ಹಿಡಿತಕ್ಕೆ ತಂದುಕೊಂಡರು. ಈ ಭೂಮಿ ಅವರ ಆಸ್ತಿ ಎನಿಸಲು ಇದರಿಂದ ಮೊದಲಾಯಿತು. ಮೊದಲು ಯಾರು ಉಳಲು ಆರಂಭಿಸುತ್ತಾನೋ ಯಾರೂ ಮೊದಲು ಆ ಭೂಮಿಯನ್ನು ಕೃಷಿಯೋಗ್ಯವಾಗಿಸುತ್ತಾನೋ ಅದು ಅವನದೇ ಆಗುತ್ತದೆ.

ಮಾನವನು ಕೃಷಿ ಕೆಲಸಕ್ಕೆ ತೊಡಗಿದಾಗ ತಮ್ಮ ಶಕ್ತಿ ಸಾಮರ್ಥ್ಯಕ್ಕನುಗುಣವಾಗಿ 'ಭೂಮಿ' ಯನ್ನು ಸಾಗುವಳಿ ಮಾಡುತ್ತಿದ್ದನು. ಅಲೆಮಾರಿಯಾದ ಮನುಷ್ಯನಿಗೆ ಭೂಮಿ ಉತ್ಪನ್ನ ವಸ್ತುವೆಂದು ತಿಳಿದಾಗ ಸ್ವಾರ್ಥವೂ ಹೆಚ್ಚುತ್ತಾ ಹೋಯಿತು. ಮೊದಲಾಗಿ 'ಭೂಮಿ'ಯನ್ನು ಸಾಮೂಹಿಕವಾಗಿ ಉಳುಮೆ ಮಾಡುತ್ತಿದ್ದುದು ತಪ್ಪಿ ಹೋಗಿ ವ್ಯಕ್ತಿಗತವಾಯಿತು. ಅದಕ್ಕೂ ಮುಂಚೆ ಬೀಳು ಭೂಮಿ, ಗೋಮಾಳ, ಹುಲ್ಲುಗಾವಲು, ಸಾಮೂಹಿಕವಾಗಿ ಉಪಯೋಗವಾಗುತ್ತಿದ್ದವು. 'ಗ್ರಾಮಗಳು' ಸ್ವಾವಲಂಬಿಯಾದ ಉತ್ಪಾದನಾ ಕೇಂದ್ರಗಳಾಗಿ ರೂಪಿತವಾಗಿದ್ದು ಇಲ್ಲಿಂದಲೇ. ನೈಸರ್ಗಿಕವಾಗಿ ದೊರೆಯುವ ಗಾಳಿ, ಬೆಳಕು, ನೀರು ಹಲವಾರು ಸೌಲಭ್ಯಗಳನ್ನು ಉಚಿತವಾಗಿ ಪಡೆಯುವಂತೆಯೇ ಪ್ರಾರಂಭದಲ್ಲಿ 'ಭೂಮಿ' ಯನ್ನು ಉಚಿತವಾಗಿಯೇ ಪಡೆಯುತ್ತಿದ್ದ ಅಲೆಮಾರಿಯಾಗಿದ್ದ ಮಾನವರಿಗೆ 'ಕೃಷಿ' ಯ ಮೂಲಕ ನಾಗರಿಕರಾಗಿ ಮಾಡುವಲ್ಲಿ ಭೂಮಿ ಮಹತ್ತರ ಪಾತ್ರ ವಹಿಸಿತು.

ಮಾನವನು ಒಂದು ನಿರ್ದಿಷ್ಟ ಪ್ರದೇಶದಲ್ಲಿ ವಾಸಿಸಲು ಆರಂಭಿಸಿದ ದಿನಗಳಲ್ಲಿ ಸೀಮಿತ ಜಾಗವನ್ನು ಪ್ರತಿ ವರ್ಷವೂ ಸಾಗುವಳಿ ಮಾಡತೊಡಗಿದರು. 'ಭೂಮಿ' ಉತ್ಪಾದನಾ ಕ್ಷೇತ್ರವೆಂದು ಮನುಷ್ಯನಿಗೆ ಅರಿವಾದ ಕಾಲದಿಂದ ಆತನ ಸ್ವಾರ್ಥ ಸಣ್ಣತನಗಳು ಇಮ್ಮಡಿಯಾಗುತ್ತ ಹೋದವು. ಭೂಮಿ ಒಡೆತನ ಜಾಸ್ತಿಯಾದಾಗ ತನ್ನಿಂದ ಸಾಗುವಳಿ ಮಾಡಲು ಆಗದ ಭೂಮಿಯನ್ನು ಇತರರಿಗೆ 'ಗೇಣಿ' ಕೊಡಲು ಆರಂಭಿಸಿದರು. ಇಲ್ಲಿಂದ ಭೂ ಒಡೆತನ ಸ್ವಾಧೀನ–ಅಧೀನ ಪರಿಕಲ್ಪನೆ ಆರಂಭವಾದವು. ಮಾನವರು ತನ್ನ ಆರ್ಥಿಕ ಚಟುವಟಿಕೆಗಳಿಗೆ ಮತ್ತೊಬ್ಬರನ್ನು ಬಳಸಿಕೊಳ್ಳಲು 'ಭೂಮಿ' ಯು ಮೂಲ ಉತ್ಪಾದಕ ಶಕ್ತಿಯಾಯಿತು. ಜಮೀನ್ದಾರರ ಆಸ್ತಿ ಅಂತಸ್ತುಗಳು 'ಭೂಮಿ' ಯಿಂದಲೇ ನಿರ್ಧರಿತವಾದವು. ಸಹಜವಾಗಿಯೇ ಆರ್ಥಿಕವಾಗಿ ಸ್ಥಿತಿವಂತರಾಗಿದ್ದವರು ಶಕ್ತಿಶಾಲಿಯಾಗಿಯೂ, ಸ್ಥಿತಿವಂತರಲ್ಲದವರು ಬಲಹೀನರಾಗಿಯೋ ಉಳಿಯಲು 'ಭೂಮಿಯೇ ಪ್ರಮುಖ ಕಾರಣವಾಯಿತು. ಜಮೀನ್ದಾರ–ಸೇವಕ–ಶೋಷಕ–ಶೋಷಿತರ ಚರಿತ್ರೆಯು ಅಂಕುರಿಸಲು ಅವಕಾಶವಾಯಿತು.

ಸಾಮುದಾಯಿಕ ಭೂಮಿಯ ಒಡೆತನದೊಂದಿಗೆ ಸಹಜವಾಗಿ ಬೆಳೆಯುವ 'ಕುಮೆರಿ ಕೃಷಿ' ಯ ಪರಿಕಲ್ಪನೆ ಇಂದಿಗೂ ಕರಾವಳಿಯಲ್ಲಿದೆ. ಆಧುನಿಕವಾಗಿ ಕರಾವಳಿ ಎಷ್ಟೇ ಮುಂದುವರಿದಿದ್ದರೂ, ಆರ್ಥಿಕ ಮುಕ್ತತೆಗೆ ತೆರೆದು ಕೊಂಡಿದ್ದರೂ ಆರಂಭದ ಕುಮೆರಿ ಕೃಷಿ ಇಂದು ಎರಡು ಸ್ವರೂಪದಲ್ಲಿ ಚಾಲ್ತಿಯಲ್ಲಿದೆ. ಕಾಡಿನಲ್ಲಿ ಅಲೆಮಾರಿಗಳಾಗಿ ವಾಸಿಸುತ್ತಿದ್ದ ಮಲೆಕುಡಿಯರು ತಮ್ಮ ಅವಶ್ಯಕತೆಗೆ ಸಾಮರ್ಥ್ಯಕ್ಕೆ ಅನುಗುಣವಾಗಿ ಕಾಡುಪ್ರಾಣಿಗಳಿಂದ ರಕ್ಷಿಸಿಕೊಂಡು ಕಾಡನ್ನು ಸುಟ್ಟು ಹಾಕಿ ಮತ್ತು ಗುದ್ದಲಿಯಿಂದ ಮಣ್ಣನ್ನು ಹದಗೊಳಿಸಿ ಭತ್ತದ ಬೆಳೆ ಬೆಳೆಯುತ್ತಿದ್ದರು. ತಮ್ಮ ಅವಶ್ಯಕತೆಗೆ ಎಷ್ಟು ಅಗತ್ಯವಿದೆ ಅಷ್ಟನ್ನು ಸಾಮೂಹಿಕ ಒಡೆತನದಲ್ಲೇ

ಹದಗೊಳಿಸಿ ಫಸಲನ್ನು ಪಡೆಯುತ್ತಿದ್ದರು. ಈ ರೀತಿಯ ಕೃಷಿ ಸಂಸ್ಕೃತಿ ನಿರೂಪಣೆಯ ಸಾಹಿತ್ಯಾಭಿವ್ಯಕ್ತಿ ಬಗ್ಗೆ ಕಾರಂತರು ತಮ್ಮ 'ಕುಡಿಯರ ಕೂಸು' ಕಾದಂಬರಿಯಲ್ಲಿ ಉಲ್ಲೇಖಿಸಿದ್ದಾರೆ. ಕುಡಿಯರ ಬದುಕಿನ ಬಗ್ಗೆ ಬರೆಯಲು ಅಲ್ಲಿಯ ಬೆಟ್ಟಗಳಿಗೆ ತೆರಳಿ ಅವರೊಂದಿಗೆ ಕೆಲಕಾಲ ನೆಲೆ ನಿಂತು ಆ ಅನುಭವ ಕಥನಗಳೇ ಕೃತಿ ರೂಪವಾಗಿ ಪ್ರಕಟಗೊಳಿಸಿದ್ದಾರೆ.

ಆದಿಮ ಕೃಷಿ ಪರಂಪರೆಯ ಕುಮೆರಿ ಕೃಷಿಯ ಉಲ್ಲೇಖ ಕರಾವಳಿಯ ಸಾಹಿತ್ಯಾಭಿವ್ಯಕ್ತಿಯಲ್ಲಿರುವುದು ವಿಶೇಷವೂ ಹೌದು. ಈ ಬಗೆಗಿನ ವಿಶ್ಲೇಷಣೆಯನ್ನು ಈ ಹಿಂದಿನ ಅಧ್ಯಾಯದಲ್ಲಿ ಚರ್ಚಿಸಲಾಗಿದೆ. ಸಾಮೂಹಿಕ ಒಡೆತನದ 'ಭೂಮಿ' ವ್ಯಕ್ತಿಯೊಬ್ಬನ ಖಾಸಗಿ ಒಡೆತನದ 'ಭೂಮಿ'ಯಾಗಿ ರೂಪಾಂತರ ಹೊಂದಿ ಕಾಡಿನ ಮಂದಿ ಕೃಷಿ ಕೂಲಿ ಕಾರ್ಮಿಕರಾದುದು ವಾಸ್ತವ ಸತ್ಯ. ಭೂಮಿಯ ಒಡೆತನದೊಂದಿಗೆ ಪಾಳೇಗಾರಿಕೆಯ ಚಿಂತನೆ ಬೆಳೆಯುವುದರೊಂದಿಗೆ ಈ ಕೃಷಿ ಕೂಲಿ ಕಾರ್ಮಿಕರೇ ಊಳಿಗದ ಆಳುಗಳಾಗಿ ಪರಿವರ್ತನೆ ಹೊಂದಿದರು. ಕೃಷಿಯ ಅನ್ವೇಷಣೆಯಿಂದ ವಿಸ್ತರಣೆಯೆಡೆಗೆ ಸಾಗಿದ ಹಂತಗಳಿವು.

"ಕ್ರಿ .ಶ ಒಂದು ಸಾವಿರದ ನಂತರದಲ್ಲಿ ಗ್ರಾಮೀಣ ಭೂ ಮಾಲಿಕತ್ವವು ವಿಸ್ತರಿಸುತ್ತಲೇ ಎರಡು ಸಾವಿರ ವರ್ಷಗಳ ಚರಿತ್ರೆ ಸಾಗಿ ಬರುತ್ತ ಕ್ರಿ.ಪೂ ಒಂದು ಸಾವಿರದ ಕಾಲಕ್ಕೆ ಆಹಾರ ಸಂಗ್ರಹ ಪಶುಪಾಲನೆಯ ಸ್ಥಾನದಲ್ಲಿ ಆರಂಭಗೊಂಡ ಆಹಾರ ಉತ್ಪತ್ತಿಯು ಸ್ಥಿರ ವ್ಯವಸಾಯವನ್ನೂ ಸ್ವಯಂ ಪೋಷಕ ಗ್ರಾಮೀಣ ಸಮಾಜವನ್ನು ಹುಟ್ಟು ಹಾಕಿ ಭೂ ಮಾಲೀಕತ್ವದ ಹಂತವನ್ನು ಮುಟ್ಟಿತು. ಈ ಎರಡು ಸಾವಿರ ವರ್ಷಗಳೂ ಸಂಸ್ಕೃತಿ, ಮತ, ಸಾಹಿತ್ಯ, ಆಚಾರಗಳಲ್ಲಿ ಬಂದ ಎಲ್ಲ ಬದಲಾವಣೆಗಳಿಗೂ ಈ ಪರಿಣಾಮ ಪ್ರಕ್ರಿಯೆಯೇ ಮೂಲ ಸ್ವಯಂ ಪೋಷಕ ಗ್ರಾಮಗಳು ಭಾರತೀಯ ಭೂ ಮಾಲೀಕತ್ವಕ್ಕೆ ಇರುವ ಪ್ರಮುಖ ಲಕ್ಷಣ. ಇದಕ್ಕೆ ಮೂಲವೆಂದರೆ ವೃತ್ತಿ ಶ್ರೇಣಿಗಳು ಕ್ಷೀಣಿಸಿ ಗ್ರಾಮಗಳಲ್ಲಿ ಅವು ಕುಲ ಕಸುಬುಗಳಾಗಿ ನೆಲೆಗೊಂಡದ್ದು, ಕಾರಣವಾಯಿತು." (ಶ್ರೀಮತಿಎಚ್.ಎಸ್ ಅನು; ೨೦೧೨; ಪು ೨೦೨)

ಗ್ರಾಮಗಳು ವಿಸ್ತರವಾದಂತೆಲ್ಲ ಖಾಸಗಿಯ ಭೂಮಿಯ ಒಡೆತನದ ಪರಿಭಾಷೆಗಳು ವಿಸ್ತಾರಗೊಂಡವು. ಸಾಮ್ರಾಜ್ಯದ ಪರಿಕಲ್ಪನೆಯಿಂದಲೂ ಭೂಮಿಯ ಯಜಮಾನ್ಯದ ಪರಿಭಾಷೆ ವಿಸ್ತೃತಗೊಂಡಿತು. ಆಡಳಿತದ ಕಾರಣಕ್ಕಾಗಿ ನಡೆಸಿದ ಪ್ರಾದೇಶಿಕವಾದ ಒಡೆತನ ಅಲ್ಲಿ ಬಲಿಷ್ಠವಾದ ಸಮುದಾಯಗಳಿಗೇ ಲಭಿಸಿತು. ಯುದ್ಧಗಳಲ್ಲಿ ದಂಡನಾಯಕನಾಗಿ ದಳಪತಿಗಳಾಗಿ ಪ್ರಮುಖ ಸ್ಥಾನಗಳಲ್ಲಿದ್ದವರಿಗೆ ವಿಶೇಷವಾದ ಒತ್ತನ್ನು ನೀಡಿ ಭೂಮಿಯನ್ನು ನೀಡಲಾಗುತ್ತಿತ್ತು. ವೃತ್ತಿಗಳೆಲ್ಲ ಜಾತಿ ಶ್ರೇಣಿಗಳಾಗಿ ರೂಪಾಂತರ ಹೊಂದಿ ಸ್ಥಿರ ಗ್ರಾಮಗಳಲ್ಲಿ ಸಿಕ್ಕ ಮಾನ್ಯತೆ ವಿಶಿಷ್ಟವಾದುದು. ಕಾಲಾಂತರದಲ್ಲಿ ಸ್ಥಾಪನೆಗೊಂಡ ಆಲಯಗಳಿಗೆ ರಾಜರುಗಳು ಉಂಬಳಿ ಕೊಟ್ಟ ಫಲವತ್ತಾದ ಕೃಷಿ ಭೂಮಿಗಳು ಸಂಪತ್ತಿನ ಮೂಲವೇ ಆದವು. 'ದೇವರ ಬೆನ್ನಿ' ಎಂದು ಕರೆಯಲ್ಪಡುವ ಈ ಗದ್ದೆಯನ್ನು ದೇವಾಲಯದ ನಿರ್ವಹಣೆ ಮಾಡುವವರಲ್ಲದೆ ಸಾಮಾನ್ಯ ಕೃಷಿ ಕೂಲಿ ಕಾರ್ಮಿಕರು ದುಡಿದು ಫಸಲನ್ನು 'ಗೇಣಿ' ಯ ಸ್ವರೂಪದಲ್ಲಿ ನೀಡಬೇಕಾಗುತ್ತಿತ್ತು. 'ಗೇಣಿ' ಎಂದರೆ ಭೂಮಿಯನ್ನು ಸಾಗುವಳಿ ಮಾಡಿ ಪಡೆದ ಫಸಲಿಗಾಗಿ ಒಡೆಯನಿಗೆ ಕೊಡುವ ಫಸಲು ಅದು ಬೆಳೆಗಳ ಸ್ವರೂಪದಲ್ಲೇ ಇರುತ್ತಿತ್ತು. ಭತ್ತ ಧಾನ್ಯಗಳೇ ಪ್ರಮುಖವಾಗಿದ್ದವು.

ತುಂಬಾ ವಿಸ್ತಾರವಾದ ಭೂಮಿಯನ್ನು ಹೊಂದಿದವರಿಂದ ಕೃಷಿ ಕೂಲಿ ಕಾರ್ಮಿಕರು ಭೂಮಿಯನ್ನು ಪಡೆಯುತ್ತಿದ್ದರು. ಚಾಲು ಗೇಣಿ, ಮೂಲಗೇಣಿ, ದೇವರ ಬೆನ್ನಿ, ಹೀಗೆ ಭೂಮಿಯ ಒಡೆತನಕ್ಕೂ ನೂರಾರು ನಿಯಮಗಳು ಸೃಷ್ಟಿಯಾದವು. ಚಾಲುಗೇಣಿ, ನಿರ್ವಹಣೆಯಲ್ಲಿ ವರ್ಷಂಪ್ರತಿ ಗೇಣಿಯನ್ನು ಲೆಕ್ಕ ಪ್ರಕಾರ ನಡೆಸುತ್ತಿದ್ದರು. ಮೂಲ ಗೇಣಿ ಎಂದರೆ ಗದ್ದೆಯನ್ನು ಖಾಯಮ್ಮಾಗಿ ಗೇಣಿಗೆ ಪಡೆಯುವುದಾಗಿತ್ತು. 'ದೇವರ ಬೆನ್ನಿ' ಎನ್ನುವುದು ದೇವರ ದೇವಾಲಯಗಳ ಹೆಸರಿನಲ್ಲಿ ಅದರ ಖರ್ಚು ವೆಚ್ಚಗಳ ನಿರ್ವಹಣೆಗೆ ನೀಡಿದ ಉಂಬಳಿ ಗದ್ದೆಯನ್ನು ಕೃಷಿ ಮಾಡಿ ಅದಕ್ಕೆ ನೀಡುವ ಗೇಣಿಯಾಗಿತ್ತು. ಹೀಗೆ ಗೇಣಿಗೆ ಕೊಟ್ಟು ಕೃಷಿ ಮಾಡುವಾಗ ಗೇಣಿದಾರರ ದುಡಿತದಲ್ಲಿ ಬಹುಪಾಲನ್ನು ತಾವೇ ಇಟ್ಟುಕೊಳ್ಳುತ್ತಿದ್ದರು. ಜತೆಗೆ ಕೃಷಿಯೇತರ ಚಟುವಟಿಕೆಗಳ ಕೊರತೆಯಿಂದ ಭೂ ರಹಿತ ಕೃಷಿ ಕಾರ್ಮಿಕರು ಅವರಲ್ಲಿ ಜೀತಕ್ಕೆ ಅಥವಾ ಕನಿಷ್ಠ ಕೂಲಿಗೆ ದುಡಿಯುವ ಅನಿವಾರ್ಯತೆ ಇತ್ತು. ಗೇಣಿ ಪದ್ಧತಿಯಲ್ಲಿ ರೈತರ ದುಡಿತದ ಬಹುಪಾಲನ್ನು ಭೂ ಮಾಲೀಕರು ಕಸಿದುಕೊಳ್ಳುತ್ತಿದ್ದರು. ಭೂ ರಹಿತರಾದವರು ಸಾಮಾನ್ಯ ಶ್ರಮಿಕ ವರ್ಗದ ಹಿಂದುಳಿದ ವರ್ಗದವರು ಮತ್ತು ದಲಿತರು. ತಮ್ಮ ಆಹಾರದ ಹಸಿವಿನ ಮೂಲವನ್ನು ಒಡೆಯನ ಮನೆಯಂಗಳಕ್ಕೆ ಅಂಟಿಸಿಕೊಳ್ಳುವುದು ಅವರಿಗೆ ಅನಿವಾರ್ಯವಾಗಿತ್ತು. ತಮ್ಮ ಅಧೀನದಲ್ಲಿ ನೂರಾರು ಜನ ಆಳುಗಳು ಬಿಟ್ಟಿ ಚಾಕರಿ ಮಾಡುವುದರೊಂದಿಗೆ ಯಾವುದನ್ನು ಪ್ರಶ್ನಿಸದೆ ಬಾಳುವುದು ಮಾಮೂಲಾಗಿತ್ತು. ಭೂಮಿಯ ಯಜಮಾನ್ಯವನ್ನು ಹೊಂದಿದ ಜೈನರು ಮತ್ತು ಬಂಟರು ನಂತರದಲ್ಲಿ ಬ್ರಾಹ್ಮಣರು, ಬಿಲ್ಲವರು ತಮ್ಮ ಅಧಿಕಾರದ ಪ್ರಾಪ್ತಿಯಿಂದ ಬಹು ವಿಸ್ತೀರ್ಣದ ಭೂ ಮಾಲಕತ್ವವನ್ನು ಹೊಂದಿದರು. ಇಡೀ ಹಳ್ಳಿಗೆ ಹಳ್ಳಿಯೇ, ಊರಿಗೆ ಊರೇ ಒಬ್ಬನೇ ಯಜಮಾನನ ಆಡಳಿತಕ್ಕೆ ಒಳಪಟ್ಟು ಸಾವಿರಾರು ಎಕರೆ ಪ್ರದೇಶಗಳ ಭೂಮಿಯ ಒಡೆಯರಾದರು. ಗದ್ದೆಗೆ ಹಾಕುವ ಭತ್ತವೋ ಧಾನ್ಯವೋ ಇತರ ಅಳತೆಯಿಂದ ಮಣ್ಣಿನ ವಿಸ್ತಾರವನ್ನು ಅಳತೆ ಮಡುತ್ತಿದ್ದ ರೈತರು ತಾವು ದುಡಿದು ಒಡೆಯನ ಸಂಪತ್ತನ್ನು ಹೆಚ್ಚಿಸುತ್ತಿದ್ದರು. ಭೂಮಿಯ ವಿಸ್ತೀರ್ಣವನ್ನು ನಿರೂಪಿಸುವಂತೆ ಆ ಕುಟುಂಬಗಳನ್ನು ಗುತ್ತು, ಬಾವ, ಬೂಡು, ಬರ್ಕೆ ಎಂದು ಕರೆಯುತ್ತಿದ್ದರು. ಸಾಮಾಜಿಕ ಸ್ಥಾನ ಮಾನಗಳು ಮತ್ತು ಅಧಿಕಾರ ಪ್ರಾಪ್ತಿಯಾದಾಗ ಸಹಜವಾಗಿಯೇ ಪಾಳೇಗಾರಿಕೆ ಊಳಿಗಮಾನ್ಯ ವ್ಯವಸ್ಥೆಯನ್ನು ಮೈಗೂಡಿಸಿಕೊಂಡರು. ಅನುಭೋಗಕ್ಕೆ ಅತಿ ವಿಸ್ತಾರವಾದ ಭೂಮಿಯ ಒಡೆತನ, ಕೈ ಕಾಲುಗಳಿಗೆ ಬಿಟ್ಟಿ ಚಾಕರಿಯ ಜೀತದ ಆಳುಗಳು ಸಂಪತ್ತಿನ ಅಧಿಪತ್ಯ ಮತ್ತು ಭೂಮಿಯ ಒಡೆತನ ಸಾಮಾಜಿಕ ಅಸಮಾನತೆಗೆ ಕಾರಣವಾಗಿತ್ತು.

ವಸಾಹತುಶಾಹಿ ಆಡಳಿತದ ಕಾಲದಲ್ಲಿ ಭೂಮಿಯ ನಿರೂಪಣೆಯಲ್ಲಿ ಹೊಸ ಅರ್ಥ ಸಾಧ್ಯತೆಗಳು ಹುಟ್ಟಿಕೊಂಡವು. ಭೂಮಿಯನ್ನು ಪ್ರಾಯೋಜನಿಕ ದೃಷ್ಟಿಯಿಂದ ಅಳತೆ ಮಾಡಿ ವಿಭಾಗಿಸಿದ್ದು, ಅದರಲ್ಲಿ ಬೆಳೆಯುವ ಬೆಳೆ ಮತ್ತು ನೀರಾವರಿಯನ್ನು ಗಮನಿಸಿ ಖುಷ್ಕಿ, ತರಿ, ಖದೀಂ ಎಂದು ವಿಭಾಗಿಸಿಕೊಂಡರು. ಒಮ್ಮೆ ಸಾಗುವಳಿ ಮಾಡಿ ಹಾಗೆ ಖಾಲಿ ಬಿಡುವ ಭೂಮಿ 'ಅಚ್ಚೆಟ್ಟು' ಎಂದು ಕರೆಯಲ್ಪಡುತ್ತಿತ್ತು. ಜಾಗವೂ ಮನೆ ನಿರ್ಮಾಣದಡಿಯ ಪ್ರದೇಶವಾಗಿದ್ದು ಸಾಗುವಳಿ ಮಾಡದೆ ಹಾಗೆ ಇದ್ದ ಭೂಮಿಯಾದರೆ 'ಪರಂಬೋಕು' ಎನ್ನುತ್ತಿದ್ದರು. ಇಂತಹ ಎಲ್ಲ ಭೂಮಿಗಳಿಗೂ ವಿಧಿಸುವ ತೆರಿಗೆಯ ಸ್ವರೂಪ ಭಿನ್ನವಾಗಿತ್ತು.

ಧಾನ್ಯದ ಸ್ವರೂಪದಿಂದ ತೆರಿಗೆಯು ಹಣದ ರೂಪಕ್ಕೆ ಬದಲಾವಣೆ ಹೊಂದಿತು. ತೆರಿಗೆ ಸಲ್ಲಿಸಲು ರೈತರು ಸಾಲ ಮಾಡಿಕೊಳ್ಳಬೇಕಾಯಿತು. ಅತ್ಯಂತ ಶ್ರೀಮಂತ ಜಮೀನ್ದಾರರಿಗೆ ತಮ್ಮ ಗದ್ದೆಗಳನ್ನು ಅಡವಿರಿಸಿ ಮಾಡಿದ ಸಾಲ ತೀರಿಸಲು ಸಾಧ್ಯವಾಗದೆ ಇದ್ದಾಗ, ಕೃಷಿ ಭೂಮಿಯನ್ನು ಕಳಕೊಂಡರು. ಸಾಮಾನ್ಯ ಕೃಷಿ ಕೂಲಿ ಕಾರ್ಮಿಕರಾಗಿ ಶ್ರೀಮಂತ ಜಮೀನ್ದಾರರ ಭೂಮಿಯಲ್ಲಿ ಸಾಗುವಳಿ ಮಾಡಬೇಕಾಯಿತು. ಪಾಳುಗಾರಿಕೆ ವ್ಯವಸ್ಥೆಯನ್ನು ಮತ್ತಷ್ಟು ಪೋಷಿಸಿದ ವಸಾಹತುಶಾಹಿ ಆಡಳಿತ ವ್ಯಾಪಾರದ ತಕ್ಕಡಿಯಿಂದ ಭೂಮಿಯ ಒಡೆತನಕ್ಕೆ ಮೊದಲಡಿ ಇಟ್ಟಿತು.

ಕರಾವಳಿಯು ಎರಡು ಜಿಲ್ಲೆಗಳು ಭೌಗೋಳಿಕವಾಗಿ ಮತ್ತು ಗ್ರಾಮ ಸಂರಚನೆಯ ವಿನ್ಯಾಸದ ಮೂಲಕ ವಿಭಿನ್ನವಾಗಿ ಗುರುತಿಸಿಕೊಂಡಿವೆ. ಜಾತಿ ವ್ಯವಸ್ಥೆ ಗ್ರಾಮಗಳಲ್ಲಿ ಇದ್ದರೂ ಕೃಷಿ ಭೂಮಿ ಮತ್ತು ಭೂಮಿಯ ಒಡೆತನದ ನಿರ್ವಹಣೆ ಯಜಮಾನನ ಸುಪರ್ದಿಯಲ್ಲೇ ನಿರ್ವಹಣೆಯಾಗುತ್ತಿತ್ತು. ಎತ್ತರವಾದ ಗುಡ್ಡಗಳು ಅವುಗಳ ಬುಡದಲ್ಲಿ ವಿಸ್ತಾರವಾದ ಬಯಲುಗಳು ಒಂದೇ ಕುಟುಂಬದ ನಿರ್ವಹಣೆಗೆ ಒಳಪಟ್ಟು ಸಾಗುವಳಿ ಮಾಡುತ್ತಿದ್ದ ಭೂಮಿಗಳಾಗಿದ್ದವು. ಕಣ್ಣಿಗೆ ಕಾಣಿಸುವಷ್ಟು ವಿಸ್ತಾರವಾದ ಭೂಮಿಗಳಲ್ಲದೇ ಒಂದು ಗುಡ್ಡ ಬಯಲು ದಾಟಿ ವಿಸ್ತಾರವಾದ ಭೂಮಿಯು ಒಬ್ಬನೇ ಪಾಳೇಗಾರ ಇಲ್ಲವೆ ಜಮೀನ್ದಾರನ ಆಡಳಿತಕ್ಕೊಳಪಟ್ಟು ಇರುತ್ತಿತ್ತು. ವಸಾಹತುಶಾಹಿ ಆಡಳಿತದ ಪರಿಣಾಮ ಮೊದಲ ಬಾರಿಗೆ ರೈತ ಚಳುವಳಿ ರೈತ ದಂಗೆಗಳು ಕರಾವಳಿಯಲ್ಲಿ ಹುಟ್ಟಿಕೊಂಡಿತು. 'ಪುಟ್ಟ ಬಸವ' ನೆಂಬ ರೈತ ೧೮೩೭ ರಲ್ಲಿ ನಡೆಸಿದ 'ಅಮರ ಸುಳ್ಯದ ದಂಗೆ' ಚಾರಿತ್ರಿಕ ಮಹತ್ವವನ್ನು ಪಡೆದು 'ಕಲ್ಯಾಣಪ್ಪನ ಕಾಟ್‌ಕಾಯಿ' ಎಂದೇ ತುಳುವಿನಲ್ಲಿ ಪ್ರಸಿದ್ಧವಾಗಿದೆ. ರೈತರು ತೆರಿಗೆ ಮತ್ತು ಭೂಮಿಯ ಒಡೆತನ ವಿರುದ್ಧ ನಡೆಸಿದ ಈ ಹೋರಾಟದ ಕಥನದ ಚಳುವಳಿಯಾಗಿ ಗುರುತಿಸಿಕೊಳ್ಳದೆ ಬ್ರಿಟಿಷರ ನಿರೂಪಣೆಯಂತೆ ದರೋಡೆ, ಲೂಟಿ ದಂಗೆಯಾಯಿತು. ವಸಾಹತು ಪ್ರಭುಗಳು ಭಾರತದ ನೈಸರ್ಗಿಕ ಸಂಪನ್ಮೂಲಗಳನ್ನು ತಮ್ಮ ಸ್ವಾರ್ಥಕ್ಕೆ ಬಳಸಿಕೊಂಡಂತೆ ಜನಶಕ್ತಿಯನ್ನು ಮೂಲವಸ್ತುವಿನಂತೆ ಬಳಸಿಕೊಂಡರು. ವಸಾಹತುಶಾಹಿಗಳ ನೀತಿ ಮೂಲಭೂತವಾಗಿ ವ್ಯಾಪಾರಿ ಮನೋಧರ್ಮವಾಗಿದ್ದಿತು. ಲಾಭ ನಷ್ಟಗಳ ಲೆಕ್ಕಾಚಾರವೇ ಇಲ್ಲಿ ಪ್ರಮುಖವಾಗಿದ್ದಿತು. ಒಂದು ಹಂತದಲ್ಲಿ ವಸಾಹತುಶಾಹಿ ಆಡಳಿತದ ಪ್ರತಿಫಲವಾಗಿ ಸಮುದಾಯ ಮತ್ತು ಸಾಮಾಜಿಕರಲ್ಲಿ ಹಲವು ಬದಲಾವಣೆಗಳಾದವು. ಸಮುದಾಯಗಳು ಇದ್ದ ಹಾಗೆಯೇ ಉಳಿದು ಬರಲು ಸಾಧ್ಯವಿಲ್ಲ. ಸಂಸ್ಕೃತಿ ಪರಂಪರೆಯ ಹೆಸರಿನಲ್ಲಿ ಸಮುದಾಯಗಳು ಹಾಗೆಯೇ ಉಳಿದು ಬರಬೇಕೆನ್ನುವುದು ಮೂಲಭೂತವಾದವೂ ಆಗುತ್ತದೆ. ಸಾಮಾಜಿಕ ಸಂರಚನೆಯ ಮುಂಚಲನೆಯಲ್ಲಿ ಹಲವು ವ್ಯತ್ಯಾಸಗಳು ಆದುದರಿಂದ ಸ್ಥಿತ್ಯಂತರಗಳಾದವು. ಆಧುನಿಕ ಶಿಕ್ಷಣ ನೀತಿ ಪಡೆದ ಇಂಗ್ಲಿಷ್ ಶಿಕ್ಷಣ ಕ್ರಮ ಕೃಷಿಯ ಸ್ವರೂಪದಲ್ಲಾದ ಬದಲಾವಣೆ ವ್ಯಾಪಾರದ ಕಡೆಗೆ ಕೊಟ್ಟ ಒತ್ತು ಈ ಎಲ್ಲ ಕಾರಣಗಳಿಂದ ಒಟ್ಟು ಕೃಷಿ ಸಂಸ್ಕೃತಿಯಲ್ಲೂ ಬದಲಾವಣೆಗಳಾದವು. ಸ್ವಾತಂತ್ರ್ಯ ಹೋರಾಟ, ರಾಷ್ಟ್ರೀಯ ಚಳುವಳಿ, ಸ್ವತಂತ್ರ ಭಾರತದ ರಾಜಕೀಯ ಆರ್ಥಿಕ ಕಾರ್ಯ ಯೋಜನೆಗಳು ಕೃಷಿಯಲ್ಲೂ ಬದಲಾವಣೆಗಳನ್ನು ತಂದವು. ಮೊದಲ ಪಂಚವಾರ್ಷಿಕ ಯೋಜನೆಗಳಲ್ಲಿ ರೈತ ಭಾರತದ ಬೆನ್ನೆಲುಬು ಎನ್ನುತ್ತಲೇ 'ಜೈ ಜವಾನ್ ಜೈ ಕಿಸಾನ್' ನಂತಹ ಘೋಷ

ವಾಕ್ಯಗಳಲ್ಲಿ ಕೃಷಿಗೆ ಒತ್ತು ನೀಡುತ್ತೇವೆ ಎಂಬ ಘೋಷಣೆಗಳಂತೆ ಕಾರ್ಯ ತಂತ್ರಗಳೂ ನಿರೂಪಿಸಲ್ಪಟ್ಟವು. ಕೃಷಿಯೊಂದಿಗೆ ಕಾರ್ಖಾನೆಗಳೂ ಸ್ಥಾಪಿಸಲ್ಪಟ್ಟವು. ಸುಸಜ್ಜಿತವಾದ ಕಾರ್ಖಾನೆಗಳೊಂದಿಗೆ ವಿಸ್ತಾರವಾದ ಕೃಷಿ ಭೂಮಿಗಳು ನಾಶವಾದವು.

ಆಧುನಿಕತೆ ಕರಾವಳಿಯ ಕೃಷಿಯ ಮೇಲೆ ಉಂಟು ಮಾಡಿರುವ ಪಲ್ಲಟಗಳನ್ನು ಈ ಹಿಂದಿನ ಅಧ್ಯಾಯಗಳಲ್ಲಿ ಬಹಳ ದೀರ್ಘವಾಗಿ ಚರ್ಚಿಸಲಾಗಿದೆ. ಬದಲಾದ ದುಡಿಮೆಯ ಪರಿಕಲ್ಪನೆಯೊಂದಿಗೆ ಸಂಪತ್ತಿನ ಪರಿಕಲ್ಪನೆಯೂ ವ್ಯತ್ಯಾಸವಾಗುತ್ತ ಸಾಗಿತ್ತು. 'ಹಣ' ಧಾನ್ಯದ ಸ್ಥಾನವನ್ನು ಅತಿಕ್ರಮಿಸಿಕೊಂಡಾಗ ವ್ಯವಹಾರವೇ ಸಂಪತ್ತಿನ ಸುಲಭ ಸಂಗ್ರಹದ ಮೂಲ ಎಂದು ಪರಿಭಾವಿಸಲಾಯಿತು. ಸಾಮಾಜಿಕವಾದ ಕಾರಣಗಳೊಂದಿಗೆ ಆರ್ಥಿಕವಾದ ಕಾರಣಗಳೂ ಇಲ್ಲಿ ಪ್ರಮುಖ್ಯವೆನಿಸುತ್ತದೆ. ಕೃಷಿ ಮತ್ತು ಅದಕ್ಕೆ ಪೂರಕವಾಗಿದ್ದ ವೃತ್ತಿಗಳು ಬದಲಾಗುತ್ತ ಸಾಗುವುದರೊಂದಿಗೆ ಅವಿಭಕ್ತವಾಗಿದ್ದ ಕುಟುಂಬಗಳೂ ವಿಭಕ್ತವಾಗುತ್ತ ಸಾಗಿದವು. ಜಾತಿಯ ಅಸ್ಮಿತೆ ನೇರವಾಗಿ ನಾಶವಾಗದೆ ಇದ್ದರೂ ಜಾತಿಯಿಂದ ಹುಟ್ಟಿದ ಜೀತವು ದುಡಿಯುವ ವರ್ಗ ಮತ್ತು ದುಡಿಸುವ ವರ್ಗವನ್ನು ಹುಟ್ಟುಹಾಕಿತು. ದುಡಿಯುವವರು ಅರೆ ಹೊಟ್ಟೆ ಉಂಡು ದುಡಿಸುವವರು ಮೈ ಬೆಳೆಸಿಕೊಂಡು ಕೂತೇ ಉಣ್ಣುವ ಈ ಪರಂಪರೆಯೇ ಪಾಳೇಗಾರಿಕೆ. ವಿಸ್ತಾರವಾದ ಭೂಮಿಯ ಒಡೆತನ ಇದಕ್ಕೆ ಮೂಲವಾದರೂ ಅದರ ಮೂಲಕ ಪಡೆದ ಸಾಮಾಜಿಕ ಸ್ಥಾನಮಾನ, ಅಧಿಕಾರ ಅಂತಸ್ತು ಪ್ರಮುಖವಾದದ್ದು. ಈ ಸಾಮಾಜಿಕ ಸಂರಚನೆಯನ್ನು ವಿಘಟಿಸಿ ಕುಟುಂಬ ಮೂಲಕ್ಕೆ ವ್ಯಕ್ತಿ ಪ್ರಜ್ಞೆಯ ಕಡೆಗೆ ಸಾಗುವುದಕ್ಕೆ ಹಲವಾರು ಕಾರಣಗಳಿದ್ದರೂ ಆ ಚಲನೆ ನಿಧಾನವಾಗಿ ನಡೆಯಿತು. ರಾಷ್ಟ್ರೀಯ ಚಳುವಳಿ ಸುಧಾರಣಾವಾದಿ ನೆಲೆಗಳಲ್ಲದೆ ಚಲನಶೀಲವಾದ ಸಮಾಜದಲ್ಲಿ ಸ್ಥಿತ್ಯಂತರಗಳೂ ನಡೆದವು. ಸ್ವತಂತ್ರ ಭಾರತದಲ್ಲಿ ಬಂದ ಹೊಸ ಸಮಾಜವಾದಿ ಚಿಂತನೆಯ ಸುಧಾರಣೆಯ ಕ್ರಮಗಳು ಸಮಾನತೆಯ ತತ್ವಗಳು ಸಾಮುದಾಯಿಕ ಬದುಕಿನ ಬದಲಾವಣೆಗೆ ಕಾರಣವಾಯಿತು. ಅಧಿಕಾರಕ್ಕೆ ಬಂದ ಸರಕಾರದ ಹೊಸ ಮಸೂದೆಗಳೂ ಫಲಶ್ರುತಿಯಾಗಿ ೧೯೭೪ ರಲ್ಲಿ ಬಂದ ಉಳುವವನೇ ಹೊಲದೊಡೆಯನೆಂಬ ಕಾನೂನು ಒಕ್ಕಲು ಮಸೂದೆಯಾಗಿ ಭೂಮಿಯ ಒಡೆತನದಲ್ಲಿ ಸ್ಥಿತ್ಯಂತರವನ್ನು ತಂದಿತು. ಗೇಣಿಗೆ ನೀಡಲ್ಪಟ್ಟ ಜಮೀನುಗಳೆಲ್ಲ ಗೇಣಿದಾರರಿಗೆ ವರ್ಗಾವಣೆಗೊಂಡು ಭೂ ಮಾಲೀಕರು ನಿರ್ಗತಿಕರಾಗುವ ಸಂದರ್ಭಗಳು ಒದಗಿ ಬಂದವು. ಇವೆಲ್ಲವೂ ಪೂರಾ ಕಪ್ಪು ಬಿಳುಪು ಚಿತ್ರಗಳಂತೆ ಬದಲಾವಣೆಗೊಂಡುದು ಅಲ್ಲ. ಗೇಣಿದಾರರನ್ನು ಬಲಾತ್ಕಾರವಾಗಿ ಒಕ್ಕಲೆಬ್ಬಿಸಿ ಅವರನ್ನು ನಿರ್ಗತಿಕರಾಗಿಸಿದ ಸಂದರ್ಭಗಳೂ ಇದೆ. ಮತ್ತೆ ಕೆಲವು ಸಂದರ್ಭಗಳಲ್ಲಿ ಯಜಮಾನನ ಮನೆಯ ನಿವೇಶನದ ತಳದ ಭೂಮಿಯೂ ತನ್ನದೆಂದು ಡಿಕ್ಲರೇಷನ್ ಕೊಟ್ಟು ಯಜಮಾನ ಬೀದಿಯಲ್ಲಿ ನಿಲ್ಲುವಂತೆ ಮಾಡಿದ ಒಕ್ಕಲು ಮನೆತನಗಳೂ ಇದ್ದವು. ಕೆಲವು ಭೂಮಾಲೀಕರು ತಾವಾಗಿಯೇ ತಮ್ಮ ಗೇಣಿದಾರರಿಗೆ ಭೂಮಿಯನ್ನು ಗೇಣಿಚೀಟಿನ ನಿಯಮನುಸಾರ ಉದಾರವಾಗಿ ನೀಡಿದರು. ಈ ಸರಕಾರಿ ಕೆಲಸವನ್ನು ಮಾಡಿಕೊಳ್ಳಲು ಸಲಹೆ ಸುಚನೆಗಳನ್ನು ನಿರ್ದೇಶಿಸುವುದರೊಂದಿಗೆ ಸ್ವತಂತ್ರರಾಗಿ ಬದುಕುವುದಕ್ಕೆ ಅವಕಾಶ ಮಾಡಿಕೊಟ್ಟರು. ಕರಾವಳಿಯ ದಕ್ಷಿಣ

ಕನ್ನಡ ಜಿಲ್ಲೆಯಲ್ಲಿ ಭೂ ಮಾಲೀಕರು ಉಳುವವರಿಗೆ ಭೂಮಿಯನ್ನು ನೀಡಿದರೂ ಉಡುಪಿ-ಕುಂದಾಪುರದ ದೊಡ್ಡ ಹಿಡುವಳಿದಾರರು ಭೂಮಿಯನ್ನು ನೀಡಿಲ್ಲ.

ಪಾಳೇಗಾರಿಕೆ ಮತ್ತು ಊಳಿಗ ಮಾನ್ಯ ವ್ಯವಸ್ಥೆಯಿಂದ ಶ್ರಮಿಕ ಕುಟುಂಬ ಮೂಲಕ್ಕೆ ಕೃಷಿ ಸಂಸ್ಕೃತಿ ಬದಲಾಗುತ್ತ ಸಾಗುವಾಗ ಕುಟುಂಬದ ಅರ್ಥವು ಪಲ್ಲಟವಾಗುತ್ತ ಸಾಗಿತು. ಕರಾವಳಿಯಲ್ಲಿ 'ಕುಟುಂಬ'ವೆಂದರೆ ಒಂದು ಮುಷ್ಠಿಯಾಗಿ ಒಗ್ಗಟ್ಟಾಗಿ 'ಹೆಣ್ಣು' ಕೇಂದ್ರ ಸ್ಥಾನದಲ್ಲಿದ್ದು ಕಟ್ಟಿಕೊಂಡ ರಚನಾ ವಿನ್ಯಾಸ. ಮಾತೃ ಮೂಲ, ಮಾತೃ ಸ್ಥಾನೀಯವಿದ್ದ ಕುಟುಂಬವೂ ವಿಘಟನೆಗೊಳ್ಳುತ್ತಿರಲಿಲ್ಲ. ಭೂಮಿಯೂ ಗಡಿರೇಖೆಗಳಿಂದ ಸಂಕುಚಿತಗೊಂಡಿದಿಲ್ಲ. ಆಧುನಿಕತೆ, ಇಂಗ್ಲಿಷ್ ಶಿಕ್ಷಣ, ದುಡಿಮೆಯ ಪರಿಭಾಷೆಗಳಿಂದಾಗಿ ಕುಟುಂಬ ಅರ್ಥದಲ್ಲಿ ಬದಲಾವಣೆಯನ್ನು ಗುರುತಿಸುತ್ತೇವೆ. ಗಂಡ-ಹೆಂಡತಿ ಮಕ್ಕಳು ಮಾತ್ರವಿದ್ದರೆ ಅದೊಂದು ಚಿಕ್ಕ ಚೊಕ್ಕ ಸಂಸಾರವೆಂಬ ಪರಿಭಾಷೆ. ಆದರ್ಶ ಕುಟುಂಬ, ಆದರ್ಶ ದಾಂಪತ್ಯದ ಮೀಮಾಂಸೆಗಳೆಲ್ಲ ಈ ನಂತರದಲ್ಲಿ ಹುಟ್ಟಿಕೊಂಡವು. ಜತೆಯಾಗಿ ದುಡಿಯುವುದು ಮತ್ತು ಬೆಳೆದು ಗಳಿಸಿದ್ದನ್ನು ಜತೆಯಾಗಿ ಸಮನಾಗಿ ಹಂಚಿ ಉಣ್ಣುವ ಮನೋಧರ್ಮ ಬದಲಾಗಿ ಸ್ವಾರ್ಥ ದುರಾಸೆಗಳೇ ಮುನ್ನೆಲೆಗೆ ಬಂದವು. ಅವಿಭಕ್ತತೆಯಿಂದ ವಿಭಕ್ತತೆಗೆ ಸಾಗುವ ಹಂತದಲ್ಲಿ ಸಮಷ್ಠಿಯ ಆಲೋಚನೆಗಳೆಲ್ಲ ಸಂಕುಚಿತತೆಗೆ ವೈಯುಕ್ತಿಕತೆಯೆಡೆಗೆ ಸಾಗಿದ್ದವು. ಈ ಸಾಮಾಜಿಕ ಸಂರಚನೆಯಲ್ಲಿ ಆರ್ಥಿಕತೆಯಲ್ಲಿ, ಅಧಿಕಾರ ಕೇಂದ್ರಗಳಲ್ಲಿ ಬದಲಾವಣೆಗಳು ಆದ ತಕ್ಷಣಕ್ಕೆ ವರ್ಗ ವ್ಯತ್ಯಾಸ ಮತ್ತು ಜಾತಿಯ ಅಸಮಾನತೆಗಳೆಲ್ಲ ಒಮ್ಮಿಂದೊಮ್ಮೆಲೆ ಇನ್ನಿಲ್ಲವೆಂದಾಯಿತು ಎಂದರ್ಥವಲ್ಲ. ಶ್ರೇಣೀಕರಣದ ಸಮಾಜದಲ್ಲಿ ಮೇಲ್ವರ್ಗ ಮತ್ತು ಮೇಲ್ಜಾತಿಯ ಸಮುದಾಯಗಳು ಪರ್ಯಾಯ ದಾರಿಗಳನ್ನು ಅನ್ವೇಷಿಸಿಕೊಂಡರು. ಕೂಡು ಕುಟುಂಬವನ್ನು ತ್ಯಜಿಸಿ ಪಟ್ಟಣಗಳಿಗೆ ಒಂಟಿಯಾಗಿ ಬಸ್ಸು, ರೈಲು, ಹಡಗು ಹತ್ತಿದವರು ಬೇರೆ ಬೇರೆ ಕ್ಷೇತ್ರಗಳಲ್ಲಿ ಗುರುತಿಸಿಕೊಂಡರು. ಕರಾವಳಿಯಲ್ಲಿ ಬ್ಯಾಂಕಿಂಗ್ ಅತ್ಯಂತ ಶೀಘ್ರವಾಗಿ ಅಭಿವೃದ್ಧಿ ಹೊಂದಲು ಕುಟುಂಬದ ಒಳಗೆ ಮತ್ತು ಹೊರಗೆ ನಡೆದ ಹೊರವಲಸೆಯೂ ಕಾರಣವಾಗಿತ್ತು. ಒಂದು ವರ್ಗ ಕೃಷಿಯನ್ನು ತ್ಯಜಿಸಿ ಹೋಟೇಲು ಉದ್ದಿಮೆ, ವ್ಯವಹಾರ, ಬ್ಯಾಂಕಿಂಗ್ ಕಡೆ ಸಾಗಿದರೆ, ಬೇರೆ ಸ್ಥಳಗಳಿಂದ ಕರಾವಳಿಗೆ ವಲಸೆ ಬಂದವರು ಕೃಷಿಯ ಕಡೆಗೂ ಗಮನ ಹರಿಸಿದರು. ಹವ್ಯಕ ಬ್ರಾಹ್ಮಣರು ಸುಳ್ಯ -ಪುತ್ತೂರಿನ ಕಾಡಿನ ಸಮೀಪದ ಗುಡ್ಡಗಳನ್ನು ಬದಲಾಗಿಸಿ ಅಡಿಕೆ ತೋಟ ಬೆಳೆಸಿದರು. ಸಹಜವಾಗಿಯೇ ಸ್ಥಳೀಯರು ಆ ಕಡೆಗೆ ಆಕರ್ಷಿತರಾದರು.

ಒಕ್ಕಲಿಗ ಗೌಡ ಸಮುದಾಯವು ಒಕ್ಕಲುತನವನ್ನಾಗಿ ಅಡಿಕೆ ತೋಟವನ್ನೇ ಮುಂದುವರಿಸಿತು. ಇನ್ನೊಂದೆಡೆ ಕೇರಳದಿಂದ ವಲಸೆ ಬಂದವರು ಇಳಿಜಾರಾದ ಎತ್ತರದ ಗುಡ್ಡಗಳಲ್ಲಿ ರಬ್ಬರ್, ಶುಂಠಿಯಂತಹ ವಾಣಿಜ್ಯ ಬೆಳೆಗಳನ್ನು ಬೆಳೆದರು. ಸ್ಥಳೀಯತೆ, ಪ್ರಾದೇಶಿಕತೆಯೊಂದಿಗೆ ವಲಸಿಗರ ಕುಟುಂಬ ರಚನಾ ವಿನ್ಯಾಸಗಳು ಕರಾವಳಿಗರಲ್ಲಿ ಬಹಳಷ್ಟು ಪ್ರಭಾವವನ್ನು ಮೀರಿ ನವ ಪಿತೃಪ್ರಧಾನತೆಯ ಕುಟುಂಬ ವ್ಯವಸ್ಥೆಯೆಡೆಗೆ ಸಾಗುವುದಕ್ಕೂ ಕಾರಣವಾಯಿತು. ಎಲ್ಲವೂ ಒಂದರ ನಂತರ ಒಂದು ಘಟಿಸಿತು ಎಂದಲ್ಲ. ನಿದಾನವಾಗಿ ತೀರಾ ಸಂಕೀರ್ಣವಾಗಿ ಕರಾವಳಿಯ ಸಾಮುದಾಯಿಕ ಬದುಕಿನಲ್ಲಿ ಇದರ ಪ್ರತಿಬಿಂಬಗಳಾದವು. ಇವುಗಳ ಬಿಂಬಗಳನ್ನು ಕರಾವಳಿಯ ಕಾದಂಬರಿಯ ಲೋಕದ ಒಳಗೂ ಕಾಣಬಹುದು.

ವಿಶುಕುಮಾರ್ ಅವರ 'ಭೂಮಿ' ಕಾದಂಬರಿ ಗಾತ್ರದಲ್ಲಿ ತುಂಬ ಕಿರಿದಾಗಿದ್ದರು ಒಕ್ಕಲು ಮಸೂದೆ ಕಾನೂನು ಕರಾವಳಿಯಲ್ಲಿ ಉಂಟು ಮಾಡಿದ ವ್ಯತ್ಯಯವನ್ನೇ ವಸ್ತುವನ್ನಾಗಿರಿಸಿಕೊಂಡು ರಚನೆಗೊಂಡಿದೆ. ಕಾದಂಬರಿಯು ಒಕ್ಕಲು ಮಸೂದೆ ಕಾನೂನಿನ ವಿವರಣೆಗಳಿಂದ ಆರಂಭಗೊಳ್ಳುತ್ತದೆ. ೧೯೭೪ ರ ಮಾರ್ಚ್ ತಿಂಗಳಿಂದ ಸಾಗುವಳಿ ಭೂಮಿಗಳೆಲ್ಲ ಸರಕಾರ ಸ್ವಾಧೀನ, ಯಾರೂ ಭೂ ಮಾಲೀಕರಿಗೆ ಗೇಣಿ ಸಲ್ಲಿಸುವ ಅಗತ್ಯವಿಲ್ಲ ಎಂಬ ಸುದ್ದಿ ನಿರಕ್ಷರ ಕುಕ್ಷಿಗಳಿಗೂ ಹಬ್ಬಿದ್ದರಿಂದ, ಒಡೆಯರಿಗೆ ಈ ವರ್ಷದಿಂದ ಗೇಣಿ ಸಲ್ಲಿಸಬೇಕೇ ಬೇಡವೇ ಎಂದು ಪಂಜು ಬಹುದಿನಗಳಿಂದ ತಲೆ ಕೆಡಿಸಿಕೊಂಡಿತ್ತು. "ಒಡೆಯರಿಗೆ ಹತ್ತಾರು ಒಕ್ಕಲುಗಳಿದ್ದಾರೆ ಅವರ ಅಸ್ತಿ ಇರುವುದು ಎಲ್ಲೆಲ್ಲೋ. ಬಹಳ ಹತ್ತಿರ ಇರುವ ಒಕ್ಕಲು ಅವನೊಬ್ಬನೇ..... ಇವ ಹತ್ತಿರ ಇರುವುದರಿಂದಲೆ ತೊಂದರೆಗೆ ಬಂದುದು. ಒಡೆಯರ ಮನೆಗೆ ಸರಕಾರಿ ಅಧಿಕಾರಿಗಳು ಯಾರಾದರೂ ಊಟಕ್ಕೆ ಬಂದರೆ ಎಲೆ ತೆಗೆಯಲು ಹೋಗಬೇಕು. ಪಂಜುವಿನ ಹೆಂಡತಿ ಅಥವಾ ಮಗಳು ಆಗಂತುಕನಿಗೆ ಸೀಯಾಳ ತೆಗೆದುಕೊಡಬೇಕೆಂದರು ತೆಂಗಿನ ಮರ ಹತ್ತಲಿಕ್ಕೆ ಬರಬೇಕು. ದಿನನಿತ್ಯ ಬಿಟ್ಟಿ ಕೆಲಸ ಮಾಡಬೇಕಾದರೂ ಪಂಜುವೇ ಬರಬೇಕು. ಇಂಥದರಲ್ಲಿ ಗೇಣಿ ಕೊಡದೆ ತೆಪ್ಪಗಿರುವ ಎಂದರೆ ಅವಕಾಶವೇ ಇಲ್ಲ. ಒಡೆಯರ ಹತ್ತಾರು ಒಕ್ಕಲುಗಳೆಲ್ಲಾ ಗೇಣಿ ಕೊಡಲಿಲ್ಲ ಎಂತಲೇ ಸುದ್ದಿ ಇದೆ". (ವಿಶುಕುಮಾರ್ ೧೯೭೭; ಪು,-೫) ಪಾಳೇಗಾರಿಕೆ ನಡೆಸುತ್ತಿದ್ದ ಧಣಿಗಳು ಶ್ರಮವಹಿಸದೆ ಬಾಳುತ್ತಿದ್ದರು. ಧಣಿ ಮತ್ತು ಒಕ್ಕಲುಗಳ ನಡುವಣ ಸಂಬಂಧವನ್ನು ನಿರೂಪಿಸುತ್ತ ಒಡೆಯರ ಪಾಳೇಗಾರಿಕೆಯ ದರ್ಪ ದಾರ್ಷ್ಟ್ಯಗಳೊಂದಿಗೆ ಒಕ್ಕಲಿನವರ ದಯನೀಯತೆಯನ್ನು ದೈನ್ಯವನ್ನು ನಿರೂಪಿಸುತ್ತಾರೆ. ದುಡಿದದರಲ್ಲಿ ತಾನೂ ಉಣ್ಣಲು, ಅಕ್ಕಿ ಇರಿಸಿಕೊಳ್ಳದೆ ಗೇಣಿ ನೀಡಬೇಕಾದ ಅನಿವಾರ್ಯತೆ ಒಕ್ಕಲಿನವರಿಗಿತ್ತು. 'ಹತ್ತು ಮಾನಿಗೆ ಬಾಕಿ ಇಟ್ಟುಕೊಳ್ಳುವುದು ಏನಂತಾರೋ ನೋಡುವಾ ಧಣಿದ್ದು ಹಾಗ್ಮಾಡಿದರೆ ಇನ್ನು ಇಬ್ಬರಿಗೆ ಗೇಣಿ ಕೊಡಲಿಕ್ಕುಂಟಲ್ಲ. ಮುಂಡೆ ವೆಂಕಮ್ಮನಿಗೆ ಹತ್ತು ಮಾನಿಗೆ, ಮಾಲಿಂಗೇಶ್ವರ ದೇವಸ್ಥಾನದ ಅರ್ಚಕ ಅಡಿಗನಿಗೆ ಹತ್ತು ಮಾನಿಗೆ" (ಅದೇ, ಪುಟ. ೪) "ಬರಿಯ ಗೇಣಿ ಕೊಟ್ಟರೆ ಸಾಲದು ಒಡೆಯರನ್ನು ಕಾಣಲಿಕ್ಕೆ ಬರುವಾಗ ಒಂದೊಂದು ಕೋಳಿಮರಿಯನ್ನೋ. ಬಾಳೆಗೊನೆಯನ್ನು ತರಲೇಬೇಕು ತಾನೇ!" (ಅದೇ, ಪು. ೪) ಪಾಳೇಗಾರಿಕೆಯನ್ನು ಪ್ರಶ್ನಿಸುವ ಅಧಿಕಾರ ಆಳುಗಳಿಗೆ ಯಾರಿಗೂ ಇರಲಿಲ್ಲ. ದುಡಿದ ದುಡಿತಕ್ಕೆ ಒಡೆಯ ಕೊಟ್ಟ ಕೂಲಿಯನ್ನು ಪಡೆಯಬೇಕು. ದುಡಿಮೆ ಮಾತ್ರ ನಿರಂತರವಾಗಿರಬೇಕು. "ನಮ್ಮ ಒಡೆಯರು ಸಂಬಳ ಕೊಡುವುದು ಎಷ್ಟು ಗೊತ್ತೋ? ಹೆಣ್ಣಾಳಿಗೆ ಎರಡು ಪಾವು ಅಕ್ಕಿ, ಗಂಡಾಳಿಗೆ ಮೂರು ಹೊತ್ತು ಊಟ. ನಮ್ಮ ಮನೆ ದನ ಕರು ಹಾಕಿದ್ರೆ ಕರು ಒಡೆಯರಿಗೆ, ಬಾಳೆ ಗೊನೆ ಹಾಕಿದರೆ ಗೊನೆ ಒಡೆಯರಿಗೆ, ನಮ್ಮ ಹೆಣ್ಮಕ್ಕಳೆಲ್ಲ ಒಡೆಯರಿಗೆ..... ನಮ್ಮ ಮಕ್ಕಳು ಎಸ್ ಎಸ್.ಎಲ್.ಸಿ ವರೆಗೆ ಓದಿದರೆ ಒಡೆಯರಿಗೆ ಹೊಟ್ಟೆ ಉರಿ. ನಮ್ಮ ಹೆಣ್ಮಕ್ಕಳು ಚಿನ್ನ ಹಾಕಿದ್ರೆ ಕಣ್ಣು. ನಾವು ವೇಸ್ಟಿ ಉಟ್ಟರೂ ಅಸೂಯೆ. ಶರ್ಟಿಗೆ ಇಸ್ತ್ರಿ ಹಾಕಿದ್ರೆ ಹ್ಞ, ಏನಾ ಇಸ್ತ್ರಿ ಹಾಕಿದ್ದಿ ಅಂತಾರೆ, ಅವರ ಮುಂದೆ ಕೈಲಿ ವಾಚು ಕಟ್ಟಿಕೊಂಡು ನಡಿಯಲಿಕ್ಕೇ ಕೂಡದು. ಸ್ವತಂತ್ರ ದೇಶದಲ್ಲಿ ಸ್ವತಂತ್ರವಾಗಿ ಬದುಕಲಿಕ್ಕಿಲ್ಲ." (ಅದೇ, ಪು.೨೩) ಊಳಿಗ ಮಾನ್ಯತೆಯ ಎಲ್ಲ ಬೇರುಗಳನ್ನು ಹಾಗೆಯೇ ಇರಿಸಿಕೊಂಡು ಪೋಷಿಸಲು ಧಣಿಗಳು ಪ್ರಯತ್ನಿಸಿದರೆ ಒಡೆಯರ ವರ್ತನೆಗೆ ಪ್ರತಿಕ್ರಿಯೆಯಾಗಿ ತಮಗೆ ಸಿಕ್ಕ

ಅವಕಾಶವನ್ನು ಉಪಯೋಗಿಸಿಕೊಳ್ಳಲು ಒಕ್ಕಲು ಮಕ್ಕಳು ಯತ್ನಿಸುತ್ತಾರೆ. ಅಂತಹ ಯತ್ನಕ್ಕೆ ಯಶಸ್ಸು ಸಿಗುವುದೇ ಬದಲಾಗಿ ಪಾಳೆಗಾರಿಕೆಯನ್ನು ಒಡೆಯರು ಮುಂದುವರಿಸುತ್ತಾರೆ. ಧಣಿಗಳ ಒಕ್ಕಲು ಊಳಿಗವನ್ನು ಪಾಳೇಗಾರಿಕೆಯನ್ನು ವಿರೋಧಿಸಿ ಕುಟುಂಬ ಕೇಂದ್ರೀತವಾಗಿ ಒಟ್ಟಾಗುತ್ತಾರೆ. ಧಣಿಗಳೆಲ್ಲ ಒಂದು ಪಕ್ಷವಾದರೆ ಒಕ್ಕಲುಗಳೆಲ್ಲ ಇನ್ನೊಂದು ಪಕ್ಷವಾಗುತ್ತಾರೆ. ರೈತ ಸಂಘವನ್ನು ಕಟ್ಟಿಕೊಂಡು ಪರಸ್ಪರರನ್ನು ಸಂಘಟಿಸಿಕೊಳ್ಳುವ ಮತ್ತು ಜತೆ ಸೇರುವ ಪ್ರಯತ್ನಗಳು ನಡೆದಾಗಲೂ ಅವರನ್ನು ನಾಶಪಡಿಸುವ ಕೆಲಸಗಳೂ ಸಾಗುತ್ತಿರುತ್ತದೆ.

ಹೊಟ್ಟೆ ತಂಪಾಗಿಸಿಕೊಂಡು ಸೌಖ್ಯದಿಂದ ಬಾಳುತ್ತಿದ್ದ ಮೇಲರಿಮೆಯ ಜನರಿಗೆ ಸರಕಾರದ ಕಾನೂನನ್ನು ಅರಗಿಸಿಕೊಳ್ಳುವುದು ಸುಲಭವಾಗಿರಲಿಲ್ಲ. "ಪ್ಲೇಗ್ ಹಬ್ಬಿದ ಹಾಗೆ ಬಂತಪ್ಪ, ಭೂ ಮಸೂದೆ ಕಾನೂನು, ಭೂಮಿಯ ಒಡೆಯನಿಗೆ ಬರಗಾಲ! ಹ್ಞು ಕಲಿಗಾಲ ಕಲಿಗಾಲ! (ಅದೇ, ಪು. ೨೪) ಆರಾಮವಾಗಿ ದುಡಿಯದೆ ಬಾಳಿದವರು ಒಮ್ಮೆಲೆ ಈ ವ್ಯವಸ್ಥೆಗೆ ಒಗ್ಗಿಕೊಳ್ಳುವುದು ಕಷ್ಟವಾಗಿತ್ತು. ತಮ್ಮ ಹಿಂದಿನ ತಲೆಮಾರುಗಳು ಕಟ್ಟಿ ಬೆಳೆಸಿರುವ ಈ ಮನೆ ಮನೆತನ ಆಸ್ತಿ ಸಂಪತ್ತುಗಳ ಒಗ್ಗೂಡಿಕೆಯಿಂದಲೇ ದರ್ಪ ದಾಷ್ಟ್ಯವನ್ನು ಹುಟ್ಟುಹಾಕಿತ್ತು. "ಭಾರಿ ದೊಡ್ಡ ಮನೆ, ಪುರಾತನ ಕಟ್ಟಡ, ಕಡಿಮೆ ಎಂದರೆ ಮುನ್ನೂರು ವರ್ಷಗಳ ಹಿಂದಿನದು. ಸುತ್ತಿನ ಆಕೃತಿ ಕಿರಿದಾದ ಕೋಟೆಯ ಹಾಗಿದೆ. ಈ ಹೊತ್ತು ಯಾರೂ ಇಲ್ಲ. ಒಡೆಯರೂ ಇಲ್ಲ, ಶಾನುಭೋಗರೂ ಇಲ್ಲ. ಕೆಳಗೆ ಕುಳಿತು ಒಡೆಯರು ಕೊಟ್ಟ ಎಲೆ ಅಡಿಕೆ ಜಗಿವ ಒಕ್ಕಲುಗಳೂ ಇಲ್ಲ. ಹಾಗೆ ಹೇಳುವುದಕ್ಕಿಂತಲೂ ಚಾವಡಿ ಗುಡಿಸದೆಯೇ ಬಹಳ ದಿನಗಳಾದವು. (ಅದೇ, ಪುಟ.೮) ಊಳಿಗದ ಪರಮಾವಧಿಯಾಗಿದ್ದ ಈ ಜಮೀನ್ದಾರಿ ಮನೆತನಗಳು ತಮ್ಮಲ್ಲಿರುವ ಭೂಮಿಯ ವಿಸ್ತಾರದ ಬಲದಿಂದಲೇ ಇಂತಹ ದರ್ಪ ದಾಷ್ಟ್ಯವನ್ನು ಹೊಂದಿದ್ದವು.ಪಾಳೇಗಾರಿಕೆಯ ದಬ್ಬಾಳಿಕೆ ಮತ್ತು ಶೋಷಣೆಗಳೇ ತಮ್ಮ ಬದುಕಿನ ಆಸ್ತಿವಾರವೆಂದೇ ನಂಬಿದ್ದರು. ಪಂಜು ಅದನ್ನು ಮೀರುತ್ತಾನೆನ್ನುವಾಗ ಧಣಿಗಳು ಮತ್ತು ಒಕ್ಕಲಿನ ಮಧ್ಯೆ ಸಂಘರ್ಷವೇರ್ಪಡುತ್ತದೆ. ಒಡೆಯನಿಗೆ ನಯ ವಿನಯದಿಂದ ತಲೆಬಾಗಿ ಬಾಳುತ್ತಿದ್ದ ಪಂಜು ಸ್ವಂತಿಕೆ ಮತ್ತು ಸ್ವಾಭಿಮಾನಕ್ಕಾಗಿ ಹೆಣಗಾಡುತ್ತಾನೆ. "ಈಗ ಭೂ ಸುಧಾರಣೆಯ ವಾತಾವರಣವೂ ಒಂದು ಕೋಳಿ ಪಡೆಯ ಅಂಕವೇ"(ಅದೇ, ಪು. ೨೧) ಆಗಿ ಅಹಂಕಾರದ ಅಟ್ಟಹಾಸಕ್ಕೆ ಸಾಕ್ಷಿಯಾಗುತ್ತದೆ. "ನೋಡಿದರೆ ಅಡ್ಡ ಬೀಳುತ್ತಿದ್ದ ಒಕ್ಕಲುಗಳು ಇವತ್ತು ಕರೆದರೂ ಬರುವುದಿಲ್ಲ.... ನಿನ್ನನ್ನುನಾವು ಒಕ್ಕಲಾಗಿ ಇಲ್ಲಿ ಇಟ್ಟುಕೊಂಡಿಲ್ಲ. ಈ ಭೂಮಿ ನಮ್ಮದು. ನಾವು ಸ್ವಂತ ಸಾಗುವಳಿ ಮಾಡುತ್ತಾ ಇದ್ದೇವೆ. ನಿನ್ನನ್ನು ಕೂಲಿ ಕೆಲಸಕ್ಕೆ ಇಷ್ಟು ದಿವಸಕ್ಕೆ ಇಟ್ಟುಕೊಂಡಿದ್ದೆವು. ಈವತ್ತಿನಿಂದ ನೀನು ನಮ್ಮ ಕೂಲಿಯಾಳು ಅಲ್ಲ, ಮನೆ ಖಾಲಿ ಮಾಡು, ನಿನ್ನ ಸಾಮಾನು ಹೊರಗಿಡಿಸು (ಅದೇ, ಪು. ೩೭) ಮನೆಯೊಳಗಿನ ಅಕ್ಕಿ ಮುಡಿಗಳನ್ನು ತನ್ನ ಬಂಟನಿಂದ ಹೊರಗಿಡಿಸಲು ಯತ್ನಿಸಿದ ಒಡೆಯನ ಮಗ ಕಮಲಾಕ್ಷನನ್ನು ವಿರೋಧಿಸಲು ಪಂಜು ಅಸಹಾಯಕನಾದಾಗ ಅವನಂತಹುದೇ ಒಕ್ಕಲುಗಳ ಗುಂಪುಗೂಡಿ ಬಂದು ಪ್ರತಿಭಟಿಸುತ್ತಾರೆ. ಪಾಳೇಗಾರಿಕೆಯ ದಾಷ್ಟ್ಯವನ್ನು ಪ್ರತಿರೋಧಿಸುವ ಅಂಶ ವ್ಯಕ್ತವಾಗುತ್ತದೆ. ವೈಯಕ್ತಿಕವಾಗಿ ತಮ್ಮ ಕುಟುಂಬದ ಬಗೆಗಿರುವ ಕಾಳಜಿಗಳನ್ನು ಗುರುತಿಸಬೇಕಾಗಿತ್ತು. ಒಡೆಯನ ಅಹಂಕಾರ ತಂತ್ರಗಾರಿಕೆಯ ಭಾಗವಾಗಿ ತಾವು ಪ್ರತಿತಂತ್ರ ಹೂಡಲು ಮತ್ತು ದೌರ್ಜನ್ಯವನ್ನು ವಿರೋಧಿಸಲು

ಮುಂದಾಗುತ್ತಾರೆ. "ಯಾವುದೇ ಒಕ್ಕಲಿನ ಮೈಗೆ ಯಾವ ಧಣಿ ಕೈ ಹಾಕಿದರೂ ಅದು ನನ್ನ ಮೈಗೆ ಕೈ ಹಾಕಿದ ಹಾಗೆ ಸರಿ. ಬಂದ ಹಾಗೆ ನೀವು ಹಿಂದೆ ಹೋದರೆ ಸರಿ, ಇಲ್ಲದಿದ್ದರೆ ಇಲ್ಲಿ ರಕ್ತದ ಓಕುಳಿ ಆಗುತ್ತದೆ. ಕಮಲಾಕ್ಷ ತನ್ನ ಹಿಂಬಾಲಕರಿಗೆ ಕೂಗಿದ. ಅವರೆಲ್ಲ ಹೊರಡಲು ಅನುವಾದರು. ವೆಂಕ್ಷ ಅವರಿಗೆ ಅಡ್ಡ ಬಂದು ಇದ್ದ ಗಡಿಗೆ  ಮಡಿಕೆಗಳನ್ನೆಲ್ಲ ಒಡೆದು ಹೋಗ್ತೀರಲ್ಲ, ಒಡೆಯರೇ. ಈ ಅಕ್ಕಿ ಮುಡಿ ವಸ್ತ್ರ ಒಡವೆ ಎಲ್ಲಿತ್ತೋ ಅಲ್ಲೇ ಇಡಿಸಿ, ಒಡೆದ ಮಡಿಕೆ ಚೂರನ್ನೆಲ್ಲ ತೋಡಿಗೆ ಹಾಕಿಸಿ ಎಂದ" (ಅದೇ, ಪು. ೪೨) ಧಣಿಯ ಹಿಂಸೆಗೆ ಪ್ರತಿರೋಧ ತೋರುವ ಸ್ಥೈರ್ಯ ಮತ್ತು ಅದನ್ನು ಆಗು ಮಾಡಿಸುವಲ್ಲಿ ಇರುವ ಶ್ರದ್ಧೆ ಮತ್ತು ಒಗ್ಗಟ್ಟು ಮಹತ್ವದ್ದು. ಪರಿಣಾಮ ಬಡವರ ದುಡಿಮೆಗೆ ದೇವರ ಹೆಸರಿನಲ್ಲಿ ವ್ಯಕ್ತವಾಗುತ್ತಿದ್ದ ಭಯವನ್ನು ನಿವಾರಿಸಿಕೊಳ್ಳಲು ಸಾಧ್ಯವಾಗುತ್ತದೆ. ಪಂಜು ದೇವರ ಬೆನ್ನಿಯ ಜಾಗದ ಗೇಣಿ ಕೊಡದೆ ಇದ್ದಾಗ ಅರ್ಚಕ ಅಡಿಗರು ಒಡೆಯರ ಚಾವಡಿಗೆ ಬಂದು ತನ್ನ ಅಸಹಾಯಕತೆಯನ್ನು ವ್ಯಕ್ತಪಡಿಸುತ್ತಾರೆ. "ಇಷ್ಟು ದಿನ ಮನೆಯಿಂದ ಅಕ್ಕಿ ತಂದು ನೈವೇದ್ಯ ಮಾಡಿ ಪೂಜೆ ಮುಗಿಸಿದ್ದೇನೆ. ಈಗ ನನಗೇ ಅಕ್ಕಿ ಇಲ್ಲ. ಗೇಣಿ ಕೊಡುವವರೂ ಕೊಡಲಿಲ್ಲ. ದೇವಸ್ಥಾನಕ್ಕೆ ಬರಬೇಕಾದ್ದೂ ಬರಲಿಲ್ಲ. ನನ್ನಿಂದ ಇನ್ನು ಪೂಜೆ ಮಾಡುವುದು ಅಸಾಧ್ಯ" (ಅದೇ, ಪು.೪೩) ಎಂದು ನಿರಾಕರಿಸಿದಾಗ ಪಾಳೇಗಾರನಾಗಿದ್ದ ಒಡೆಯನ ಪ್ರತಿಕ್ರಿಯೆ ತೀರಾ ಹುಂಬುತನದಿಂದ ಕೂಡಿದೆ. "ದೇವರು ಊರಿನವರಿಗೆ ಯಾರಿಗೂ ಬೇಡ, ಮತ್ಯಾರಿಗೆ ನನಗೆ ಒಬ್ಬನಿಗೆ ಬೇಕಾದ್ದಾ?" (ಅದೇ, ಪು.೪೩) ದೇವರ ಹೆಸರಿನಲ್ಲೂ ಒಕ್ಕಲುಗಳನ್ನು ದುಡಿಸಲು ಸಾಧ್ಯವಾಗುವುದಿಲ್ಲ. "ಅಡಿಗರೇ ನಿಮಗೆ ಪೂಜೆಗೆ ತೊಂದರೆ ಆದದ್ದು ಅಕ್ಕಿ ಇಲ್ಲದೆ ಅಲ್ವೆ? ಅಕ್ಕಿ ಬರದಿರುವುದು ಒಕ್ಕಲು ಮಸೂದೆ ಕಾನೂನಿಂದಾಗಿ ಅಲ್ವೆ? ಈ ಬೀಗದ ಕೈಗಳನ್ನು ಒಂದು ಕವರಿನಲ್ಲಿ ಹಾಕಿ ರಿಜಿಸ್ಟರ್ಡ್ ಪೋಸ್ಟ್ ಮಾಡಿ ಸರಕಾರಕ್ಕೆ ಕಳುಹಿಸಿಕೊಡಿ ಇಂಥಿಂಥಾ ಕಾರಣಗಳಿಗಾಗಿ ಕಳುಹಿಸ್ತಾ ಇದ್ದೇವೆ ಅಂತಲೂ ಬರೆಯಿರಿ" (ಅದೇ, ಪು. ೪೪) ಒಡೆಯನ ಮಾತುಗಳನ್ನು ಚಾಚು ತಪ್ಪದೆ ಪಾಲಿಸುತ್ತಿದ್ದವರೂ ಅದನ್ನು ವಿರೋಧಿಸುವ ಹಂತಕ್ಕೆ ಬಂದಾಗ ಪಂಜು ಮತ್ತು ಅವನ ಕುಟುಂಬವನ್ನು ಹೆಡೆಮುರಿ ಕಟ್ಟಿ ಬಲಾತ್ಕಾರವಾಗಿ ದೂರದ ಹಳ್ಳಿಗೆ ರಾತ್ರಿಯಲ್ಲಿಯೇ ಕದ್ದೊಯ್ದು  ಬಿಟ್ಟು ಬರುತ್ತಾನೆ. ಒಡೆಯನ ಮಗ ಕಮಲಾಕ್ಷ ಅವರು ಏನೇನೋ ಸಂಕಟಗಳನ್ನು ಎದುರಿಸಿ ಮರಳಿ ಬರುವುದರ ಒಳಗಾಗಿ ಐತನನ್ನು ಪಂಜುವಿನ ಮನೆಯಲ್ಲಿ ತಂದಿರಿಸಿ ಈತ ನಮ್ಮ ಒಕ್ಕಲು ಕೂಲಿಯಾಳು ಎನ್ನುತ್ತಾರೆ. ಸರಕಾರದ ಕಾನೂನನ್ನು ಅದೇ ಕಾನೂನಿಂದಲೇ ಬಂಧಿಸಿ ಅರ್ಹರಿಗೆ ಸಿಗಬೇಕಾದ ಭೂಮಿಯನ್ನು ಕಸಿಯುತ್ತಾರೆ. ದಲಿತರ ರಕ್ಷಣೆಗೆ ಕಾನೂನುಗಳನ್ನು ಮಾಡಿದ ಸರಕಾರದ ನೀತಿಯನ್ನೇ ಅಪಹಾಸ್ಯ ಮಾಡುವಂತಿದೆ ಈ ಘಟನೆ. "ಐತ ತನಗೇನೂ ತಿಳಿದಿಲ್ಲ ಬಡವ ದಲಿತ ನನಗೆ ತೊಂದರೆ ನೀಡಬೇಡಿ ಎಂದಾಗ ನಿನಗೆ ಉಪದ್ರವ ಕೊಡಲಿಕ್ಕೆ ಬಂದದಲ್ಲ. ಅಜ್ಜಯ್ಯ ಹರಿಜನರ ಬಗ್ಗೆ ಸಾಕಷ್ಟು ನಿಗಾ ಇಡಬೇಕು, ನಿಮ್ಮ ಅರ್ಜಿಗಳು ಬಂದ ತಕ್ಷಣ ಕ್ರಮ ಕೈಗೊಳ್ಳಬೇಕಂತ ಸರಕಾರದ ಆಜ್ಞೆ ಇದೆ. ನಿಮ್ಮ ರಕ್ಷಣೆಗಾಗಿಯೇ ಬಂದವರು ಈಗ ನಮ್ಮ ಜೊತೆ ಬಂದು ಸ್ಟೇಟ್‌ಮೆಂಟ್ ಕೊಡಬೇಕು." (ಅದೇ, ಪು. ೫೭)

ಪಂಜುವಿನ ಮನೆಯಲ್ಲಿ ಐತನನ್ನು ತಂದು ಕುಳ್ಳಿರಿಸಿ ಒಕ್ಕಲಿನ ಪಂಜುವನ್ನು ದಿಕ್ಕಿಲ್ಲದವನನ್ನಾಗಿ ಮಾಡಿ, ದಲಿತ ಐತನಿಗೆ ಭೂಮಿಯ ಆಸೆ ತೋರಿಸಿ ಅವರನ್ನು ತಮ್ಮ ಕೈ ವಶ ಮಾಡಿಕೊಂಡುಒಡೆಯರು ಒಂದೇ ಕಲ್ಲಿನಿಂದ ಮೂರು ಹಕ್ಕಿಗಳನ್ನು ಹೊಡೆದು ಉರುಳಿಸುವ ಪ್ರಯತ್ನ ಮಾಡುತ್ತಾರೆ. ಒಕ್ಕಲಾದ ಪಂಜುವನ್ನು ಒಕ್ಕಲೆಬ್ಬಿಸಿ, ಐತನನ್ನು ಊಳಿಗದವನನ್ನಾಗಿ ಮಾಡಿಕೊಂಡು ಭೂಮಿಯನ್ನು ಮರಳಿ ಪಡೆಯುತ್ತಾರೆ. ಪಾಳೇಗಾರಿಕೆ ಊಳಿಗಮಾನ್ಯದಿಂದ ಕುಟುಂಬ ಮೂಲಕ್ಕೆ ಮರಳುವುದು ಅಷ್ಟು ಸರಳವಾಗಿರಲಿಲ್ಲ. ಸಾಮಾಜಿಕ ವ್ಯವಸ್ಥೆಯ ಒಳಗಡೆ ಅಧಿಕಾರಶಾಹಿಗಳು ನಡೆಸುವ ದೌರ್ಜನ್ಯಕ್ಕೆ ಪೂರಕವಾಗಿ ಅಧಿಕಾರ ಕೇಂದ್ರದಲ್ಲಿರುವವರು ತಮ್ಮ ಇಚ್ಛಾಶಕ್ತಿಗೆ ಅನುಗುಣವಾಗಿ ಕಾನೂನು ವ್ಯವಸ್ಥೆಯನ್ನು ಬದಲಾಯಿಸಿಕೊಳ್ಳುವ ರೀತಿಯು ಅಮಾನುಷವಾದುದು. ಹಳ್ಳಿಗಳಲ್ಲಿ ಪಟೇಲ, ಪಂಚಾಯಿತಿ ಅಧ್ಯಕ್ಷ, ಸೆಕ್ರೆಟರಿ ಊರ ಪ್ರಮುಖರು ಎಲ್ಲರೂ ವ್ಯವಸ್ಥೆಯನ್ನು ಬಳಸಿಕೊಂಡು ಮಾಧ್ಯಮಗಳ ಮೂಲಕ ಪ್ರಕಟವಾಗುವ ಹೇಳಿಕೆಗಳಿಗೆ ವ್ಯತಿರಿಕ್ತವಾದ ನಡವಳಿಕೆಗಳು ಗೋಚರಿಸುತ್ತದೆ. ಇಲ್ಲಿ ಬಹು ಮುಖ್ಯವಾಗಿ ಗಮನಿಸಬೇಕಾದ ಅಂಶವೆಂದರೆ ಪಾಳೇಗಾರರ ಪರವಾಗಿ ದುಡ್ಡಿನ ಬಲದಿಂದ ವ್ಯವಸ್ಥೆಯ ಒಂದು ವರ್ಗದ ಜನ ಒಟ್ಟಾದರೆ, ಫಲಾನುಭವಿಗಳಾದ ಬಡ ಗೇಣಿದಾರರು ತಾವೂ ಒಂದಾಗಿ 'ರೈತ ಸಂಘ' ಕಟ್ಟಿಕೊಂಡು ತಮ್ಮ ಐಕತ್ಯೆಯನ್ನು ಒಗ್ಗಟ್ಟನ್ನು ಪ್ರದರ್ಶಿಸುತ್ತಾರೆ. ಪಾಳೇಗಾರಿಕೆಯನ್ನು ವಿರೋಧಿಸುವ ಮೂಲಕ ಕುಟುಂಬ ಮೂಲಕ್ಕೆ ಮರಳುವ ತಮ್ಮ ಪ್ರಯತ್ನವನ್ನು ಕೈ ಬಿಡುವುದಿಲ್ಲ. ವ್ಯವಸ್ಥೆಗಳು ತಮ್ಮ ವಿರುದ್ಧವಾಗಿ ನಿಂತಾಗಲೂ ಆ ವ್ಯವಸ್ಥೆಯ ಮಧ್ಯದಿಂದಲೇ ಪ್ರತಿರೋಧದ ದನಿ ಬರುತ್ತದೆ. ಆಧುನಿಕ ಸವಲತ್ತುಗಳಾದ ಅಂಚೆ ಇಲಾಖೆ,ಟೆಲಿಗ್ರಾಮ್‌ಗಳನ್ನು ಬಳಸಿಕೊಂಡು ವಿಷಯವನ್ನು ಸಂಬಂಧ ಪಟ್ಟವರಿಗೆ ಮುಟ್ಟಿಸುವ ಪ್ರಯತ್ನ ಮಾಡುತ್ತಾರೆ. ಮೊದಲ ಹಂತದ ಪ್ರತಿಫಲನವಿದು.

ಇದಕ್ಕಿಂತ ಭಿನ್ನವಾಗಿ ಪಾಳೇಗಾರರೇ ಒಕ್ಕಲಿನವರಿಗೆ ಭೂಮಿಯನ್ನು ಕೊಟ್ಟು ಸ್ವತಂತ್ರಗೊಳಿಸಿದ ಉಲ್ಲೇಖಗಳೂ ನಮಗೆ ಕರಾವಳಿಯಲ್ಲಿ ಲಭ್ಯವಿದೆ. ಮೊಗಸಾಲೆಯವರ 'ಉಲ್ಲಂಘನೆ' ಕಾದಂಬರಿ ಇಂತಹ ಚಿತ್ರಣವನ್ನು ನೀಡುತ್ತದೆ. "ಸಾಂತೇರ್ ಗುತ್ತಿನಲ್ಲಿ ಏಣೆಲ್ ಬೆಳೆಯ ಕಟಾವು ಮುಗಿಯಿತು. ಸುಗ್ಗಿ ಸಾಗುವಳಿಯ ಚಟುವಟಿಕೆಗಳು ಪ್ರಾರಂಭವಾದವು. ಭೂ ಮಸೂದೆ ಜ್ಯಾರಿಗೊಂಡ ಮೇಲೆ ಗುತ್ತಿನ ಮನೆಯ ಒಕ್ಕಲುಗಳೆಲ್ಲ ಮನೆಯ ಎಲ್ಲಾ ಗುತ್ತಿನ ಸಂಬಂಧವನ್ನು ಕಳಕೊಂಡು ಸ್ವತಂತ್ರರಾಗಿದ್ದರು.... ಮೂಲದಾಳುಗಳು ಬಂದು ಕರೆದ ತತ್‌ಕ್ಷಣ ಮೊದಲಿನ ಹಾಗೆಯೇ ಓಡಿ ಬಂದು ಗುತ್ತಿನ ಅಂಗಳದಲ್ಲಿ ತಲೆಬಾಗಿ ನಿಂತುಕೊಳ್ಳಬಹುದೆಂಬ ನಂಬಿಕೆ ಇನ್ನೂ ಇತ್ತು. ಆದರೆ ಸಂಕಪ್ಪಣ್ಣ ತನ್ನ ಸ್ವಭಾವದ ಹಾಗೆ ಮೃದುವಾದ ಮಾತಿನಿಂದ ಮಾಜಿ ಗೇಣಿದಾರರನ್ನೆಲ್ಲ ಕೂಲಿ ಕೊಟ್ಟೇ ಅಂಗಳಕ್ಕೆ ಕರೆಸುವುರಲ್ಲಿ ಯಶಸ್ವಿಯಾಗಿದ್ದರು. ಸುಗ್ಗಿ ಸಾಗುವಳಿಯನ್ನು ಸಕಾಲದಲ್ಲೇ ಮುಗಿಸಿಯೂ ಇದ್ದರು. ಅಷ್ಟೇ ಅಲ್ಲ ಇನ್ನು ನೀನು ಮೊದಲಿನ ಹಾಗೆ ಕೂಲಿಯಾಳುಗಳನ್ನು ನಡೆಸಿಕೊಳ್ಳಬಾರದು ಅಂಬಕ್ಕೆ ಎಂದು ಅವರನ್ನೆಲ್ಲ ಹೇಗೆ ನೋಡಿಕೊಳ್ಳಬೇಕೆಂದು ಪುಟ್ಟ ಭಾಷಣವನ್ನು ಬಿಗಿದಿದ್ದರು. ಆಗ ಅಂಬಕ್ಕೆ 'ಸರಿ ನೀನು ಹೇಳಿದ ಹಾಗೆ ನಡೆಸಿಕೊಳ್ಳುತ್ತೇನೆ ಮಾರಾಯ! ಆದರೆ ನೋಡು ಹಿಂದೆ, ಈ ಗೇಣಿದಾರರಿಗೆ ನಮಗೆ ಗೇಣಿ ಕೊಡಬೇಕು ಎಂಬ ಭಯ ಇತ್ತು. ಆ ಕಾರಣದಿಂದಲೇ ಅವರು

ಬೆವರು ಸುರಿಸಿ ದುಡಿಯುತ್ತಿದ್ದರು, ಈಗ ಯಾರ ಹಂಗೂ ಅವಕ್ಕಿಲ್ಲ ಮುಂದೆ ಶುದ್ಧ ಸೋಮಾರಿಗಳಾಗುತ್ತಾರೆ ನೋಡು. ಈ ಭೂಮಿ ಈ ತನಕ ಸಮೃದ್ಧಿಯನ್ನು ಅವರಿಗೂ ನಮಗೂ ಕೊಟ್ಟಿತ್ತು. ಇನ್ನು ಹಾಗಲ್ಲ ಈ ಭೂಮಿ ಕೂಡಾ ಬಂಜೆಯಾಗುತ್ತಾಳೆ! ಎಂದಿದ್ದರು. ಸಂಕಪ್ಪ ಹೆಗ್ಡೆಯವರು ಆಗ "ನಾವು ಎಷ್ಟು ಬೆವರು ಸುರಿಸಿ ದುಡಿದಿದ್ದೇವೆ ಇಷ್ಟರ ತನಕ? ಕುಳಿತು ಉಂಡೇ ಗೊತ್ತು ನಮಗೆ! ಮುಂದಿನ ದಿನಗಳಲ್ಲಿ ದುಡಿಯುವವ ಮಾತ್ರ ಉಣ್ಣುವ ಕಾಲ ಬರುತ್ತದೆ. ಅದಕ್ಕೆ ನಾವೂ ಹೊರತಲ್ಲ" ಅಂದಿದ್ದರು. ಎಂತಹ ಹುಚ್ಚ ಈತ? ಗುತ್ತಿನ ಮನೆಯ ಭೂಮಿಯ ಬಹುಭಾಗ ಈಗ ಕೈ ಬಿಟ್ಟು ಹೋಗಿದೆ. ಆದರೂ ಕಿಂಚಿತ್ತು ನೋವಿದ್ದ ಹಾಗೆ ಇಲ್ಲ ಈತನಿಗೆ ಅಷ್ಟೇ ಅಲ್ಲ. ಈ ಕೂಲಿಯಾಳುಗಳನ್ನೆಲ್ಲ ಈ ಸಾಗುವಳಿಯ ಸಮಯ ಗುತ್ತಿನ ಮನೆಯೊಳಗೆ ಕರೆಸಿ ಊಟ ಬೇರೆ ಹಾಕಿಸಿದ್ದಾನೆ. ಅವರೂ ಖುಷಿ ಪಟ್ಟಿದ್ದಾರೆ' (ಮೊಗಸಾಲೆ.ನಾ ೨೦೦೮; ಪು. ೩೨೨) ಪಾಳೇಗಾರಿಕೆಯ ಮೆಟ್ಟಿಲುಗಳು ಕೆಳಗೆ ಕುಸಿಯುತ್ತಿವೆ ಎನ್ನುವ ಅರಿವಿರುವ ಸಂಕಪ್ಪ ಹೆಗ್ಡೆಯವರು ಗಾಂಧೀಜಿಯ ಚಿಂತನೆಗಳಿಂದ ಪ್ರಭಾವಿತರಾಗಿ ನ್ಯಾಯೋಚಿತವಾಗಿ ಅವರಿಗೆ ಸಲ್ಲಬೇಕಾದ ಭೂಮಿಯ ಬಗೆಗಿನ ಕಾಳಜಿ ಇದೆ. ಗುತ್ತಿನ ಗಡಿ ಹಿಡಿದ ಶೀನಪ್ಪ ಹೆಗಡೆಯವರ ಸೋದರಳಿಯನಾದ ಸಂಕಪ್ಪ ಹೆಗಡೆಯ ಉದಾರ ಮನಸ್ಥಿತಿ ಸೋದರಿ ಅಂಬಕ್ಕೆಯಲ್ಲಿಲ್ಲ. 'ಬಳ್ಳಾಲ್ದಿ ಎನ್ನುತ್ತಾ ಅಂಬಕ್ಕೆಯನ್ನು ಸಂಬೋಧಿಸುತ್ತಾ, ಆಕೆಯ ಹಿಂದೆ ಮುಂದೆ ಓಡಾಡುತ್ತಿದ್ದರು. ಅವರಿಗೆಲ್ಲ ಹೀಗೆ ಈಗ ಅಂಬಕ್ಕೆಯ ಹಿಂದೆ ಮುಂದೆ ಓಡಾಡಲು ಬಿಡುವಿಲ್ಲ. ಗುತ್ತಿನ ಮನೆಯ ಬೇರೆ ಕೆಲಸಗಳ ಒತ್ತಡಗಳು ಅವರನ್ನು ಹೈರಾಣಾಗಿಸುತ್ತವೆ. ಇದೆಲ್ಲದಕ್ಕಿಂತ ಹೆಚ್ಚು ಆಕೆಗೆ ನೋವು ಕೊಡುವುದು–ವರುಷಗಳ ಹಿಂದೆ ಗುತ್ತಿನ ಮನೆಯ ಯಜಮಾನಿಕೆಯನ್ನು ಶಿರಸಾ ಒಪ್ಪಿಕೊಂಡಿದ್ದ ಈ ಗೇಣಿದಾರರೆಲ್ಲ ಈಗ ಧಿಢೀರನೆ ಸ್ವತಂತ್ರರಾದದ್ದು, ಹತ್ತಾರು ವರುಷಗಳಿಂದ ಗುತ್ತಿನ ಮನೆಗೂ ತಮಗೂ ಇದ್ದ ಸಂಬಂಧವನ್ನು ಅವರು ಎಷ್ಟು ಸುಲಭವಾಗಿ ಕಡಿದುಕೊಂಡಿದ್ದಾರೆ ಎನ್ನುವುದು! ಧನಿ–ಒಕ್ಕಲು ಸಂಬಂಧ ಎನ್ನುವುದಕ್ಕೆ ಅರ್ಥವೇ ಇಲ್ಲದಂತೆ ಅವರು ಹೊಸ ಬದುಕನ್ನು ಪ್ರಾರಂಭಿಸಿರುವುದು! (ಅದೇ, ಪು.೩೨೩) ತನ್ನ ಒಕ್ಕಲಿನವರ ಬಗೆಗೆ ಗುತ್ತಿನ ಮನೆಯವರಾಗಿಯೂ ಸಂಕಪ್ಪ ಹೆಗ್ಡೆ ಊಳಿಗ ಮಾನ್ಯತೆಯನ್ನು ನಿರಾಕರಿಸಿ ಜನ ಕುಟುಂಬ ಮೂಲಕ್ಕೆ ಮರಳಲು ಸ್ವಂತಿಕೆಯನ್ನು ಕಾಯಲು ಅವಕಾಶ ಮಾಡಿಕೊಡುತ್ತಾರೆ. 'ಉಳುವವನೇ ಹೊಲದೊಡೆಯ' ಎಂಬ ಕಾನೂನಿಗೆ ಬೆಂಗಾವಲಾಗಿ ನಿಲ್ಲುತ್ತಾರೆ. ಸರಕಾರ ಭೂನ್ಯಾಯ ಮಂಡಲಿ ರಚಿಸಿ ಅದಕ್ಕೆ ಅಧ್ಯಕ್ಷರಾಗಬೇಕೆಂದು ಕೋರಿಕೊಂಡಾಗ ನಯವಾಗಿಯೇ ನಿರಾಕರಿಸುತ್ತಾರೆ. ಅದಕ್ಕೆ ಕಾರಣಗಳನ್ನೂ ಅವರೇ ಅನ್ವೇಷಿಸುತ್ತಾರೆ. "ನಿಜವಾಗಿಯೂ ಹತ್ತೈವತ್ತು ವರುಷಗಳಿಂದ ಗೇಣಿದಾರರಾಗಿದ್ದವರಲ್ಲಿ ಯಾವ ದಾಖಲೆ ಇಲ್ಲದವರು ಅನೇಕರು ಈಗಲೂ ಇದ್ದಾರೆ. ಇಂಥವರಿಗೆಲ್ಲ ಈ ಕಾನೂನಿನ ಸುಪಯೋಗ ಪಡೆದುಕೊಳ್ಳುವುದು ಖಂಡಿತ ಕಷ್ಟ. ಆದರೆ ನಾನು ಸಮಿತಿಯಲ್ಲಿದ್ದರೆ ನಿಜವಾಗಿ ಇಂಥ ಗೇಣಿದಾರ ಪರವಾಗಿ ನ್ಯಾಯ ನೀಡಬೇಕಾಗುತ್ತದೆ. ಆದರೆ ಯಾವ ಪುರಾವೆಯೂ ಇಲ್ಲದೇ ಹೇಗೆ ನಾನು ನ್ಯಾಯ ನೀಡುವುದು ಸಾಧ್ಯ? ಎನ್ನುವುದೇ ನನ್ನ ಸಂಕಷ್ಟ ಅಥವಾ ಇದನ್ನೆಲ್ಲ ಮೀರಿ ಗೇಣಿದಾರನ ಪರವಾಗಿ ನಾನು ತೀರ್ಪು ನೀಡಿದೆ ಅಂತಲೇ ಇಟ್ಟುಕೋ, ಆಗ ನಮ್ಮ ಬಂಧುಗಳು ಕಾನೂನನ್ನು ಮೀರಿ ನಮಗೇ ಅನ್ಯಾಯ ಮಾಡಿದ ಅನ್ನುವುದಿಲ್ಲವೇ ನನ್ನನ್ನು? ಎಂದು ತಾವು

ಭೂನ್ಯಾಯ ಮಂಡಲಿಯ ಸದಸ್ಯತ್ವವನ್ನು ನಿರಾಕರಿಸಿದ್ದಕ್ಕೆ ಕಾರಣ ನೀಡಿದರು (ಅದೇ, ಪು.೩೨೯) ಮತ್ತು ತನ್ನ ಇಂತಹ ನಿರ್ಧಾರದ ಹಿಂದಿನ ತಾತ್ವಿಕತೆಯನ್ನು ಅವರು ಅರ್ಥೈಸಿಕೊಂಡಿದ್ದರು. ಸಾಮಾಜಿಕ ನ್ಯಾಯದ ಕಲ್ಪನೆಯ ಬದ್ಧತೆ ಇದ್ದುದರಿಂದಲೇ ಈ ರೀತಿಯ ಚಿಂತನೆ ಇರಲು ಸಾಧ್ಯವಾಗಿತ್ತು. ರಾಷ್ಟ್ರೀಯ ಚಳುವಳಿ, ಕಾನಾಡ್ ಸದಾಶಿವರಾಯರ ಹೋರಟಗಾರರ ಒಡನಾಟದ ಆದರ್ಶಗಳೂ ಅವರಿಗೆ ಮಾದರಿಯಾಗಿದ್ದವು. ಪಾಳೇಗಾರರಾಗಿ ಗುತ್ತಿನ ಯಜಮಾನರಾಗಿ ಬಾಳುವುದಕ್ಕಿಂತಲೂ ಸಾಮಾನ್ಯರ ನಡುವೆ ಬಾಳುವುದೂ ಮುಖ್ಯವಾಗಿತ್ತು. ಈ ಬಗೆಗಿನ ಸ್ಪಷ್ಟತೆ ಅವರ ವಿಚಾರಸರಣಿಯಲ್ಲಿದೆ. "ಇಷ್ಟಕ್ಕೂ ಈ ಭೂ ಮಸೂದೆ, ಈಗ ಇವರು ಇಂದಿರಾಗಾಂಧಿ ಕಾರಣರೆಂದು ಯಾಕೆ ಪ್ರಚಾರ ಪಡಿಸುತ್ತಾರೋ ತಿಳಿಯದು! ಇದು ಗಾಂಧೀಜಿಯ ಗ್ರಾಮ ಸ್ವರಾಜ್ಯದ ಮೂಲ ಕಲ್ಪನೆಗಳಲ್ಲಿ ಒಂದು ಉಳುವವನೇ ಹೊಲದೊಡೆಯ ಅಂದರೆ, ಈಗ ಇವರು ಅಧಿಕಾರ ವಿಕೇಂದ್ರೀಕರಣ ಅನ್ನುತ್ತಾರಲ್ಲ ಅದರ ಮೊದಲ ಹೆಜ್ಜೆ ಇದೇ. ಇದು ನಮಗೆ ಸ್ವಾತಂತ್ರ್ಯ ಸಿಕ್ಕಿದ ಎರಡು ವರುಷಗಳಲ್ಲೇ ಜಾರಿಯಾಗಬೇಕಿತ್ತು. ಮೈಸೂರು ಅರಸರ ಹೈದರಾಬಾದಿನ ನಿಜಾಮರ ಅಧಿಕಾರವನ್ನು ಕಿತ್ತೊಗೆದ ಹಾಗೆ ನಾವೂ ನಮ್ಮ ಜಮೀನ್ದಾರರ ಕೈಯಲ್ಲಿದ್ದ ಭೂಮಿಯನ್ನು ನಿಜವಾಗಿ ಯಾರು ಉತ್ತು ಬಿತ್ತು ಬೆಳೆಯುತ್ತಾನೋ ಅವನಿಗೆ ಆಗಲೇ ಕೊಡಬೇಕಿತ್ತು. ಆದರೆ ಅಂದಿನಿಂದ ಇಂದಿನವರೆಗೂ ಕಾಂಗ್ರೆಸ್ ಪಕ್ಷದಲ್ಲಿರುವವರಲ್ಲಿ ಜಮೀನ್ದಾರಿಕೆಯ ಪಳೆಯುಳಿಕೆಯ ಮನೋಸ್ಥಿತಿಯಲ್ಲೇ ಇದ್ದವರು. ಹಾಗಾಗಿ ಈ ಮಸೂದೆ ತುಂಬ ತಡವಾಗಿ ಬಂತು (ಅದೇ ಪು. ೩೪೬) ಭೂ ಮಸೂದೆ ಜ್ಯಾರಿಯಾಗುವ ಮೊದಲು ಗುತ್ತಿನ ಮನೆಗಳಲ್ಲಿ ಇದ್ದ ಸಂಪತ್ತು ಸಿರಿತನ ಕ್ಷಯಿಸಿದರೂ ಅದನ್ನು ಸಕರಾತ್ಮಕವಾಗಿ ಸ್ವೀಕರಿಸಿ ಒಕ್ಕಲುಗಳ ಪರವಾಗಿ ಕಾರ್ಯ ನಿರ್ವಹಿಸಿದ ಭೂ ಮಾಲೀಕರೂ ಇದ್ದರು.

ಅಳಿಯ ಸಂತಾನ ರೇಜಿಗೆಗಳಿಂದ ಕುಟುಂಬ ಮೂಲಕ್ಕೆ ಮರಳಿದ ಗಂಡು ಮಕ್ಕಳೂ ಇದ್ದಾರೆ. ಇದು ಒಂದರ್ಥದಲ್ಲಿ ಅವಿಭಕ್ತತೆಯಿಂದ ವಿಭಕ್ತತೆಯೆಡೆಗೆ ಸಾಗುವುದಕ್ಕಿದ್ದ ಕಾರಣವೂ ಆಗಿದೆ. ಗುತ್ತಿನ ಮನೆಯ ಯಜಮಾನನ ಪಾಳೆಗಾರಿಕೆ ಅಲ್ಲದೆ ಮಾತೃಮೂಲ ಕುಟುಂಬದ ಹೆಣ್ಣು ಮಕ್ಕಳ ಯಜಮಾನ್ಯದಿಂದಲೂ ರೋಸಿ ಹೋದ ಗಂಡು ಮಕ್ಕಳು ವಿಭಕ್ತರಾಗಿ ತಮ್ಮ ಕುಟುಂಬವನ್ನು ನಿರ್ವಹಣೆ ಮಾಡಿಕೊಂಡು ಸ್ವತಂತ್ರವಾಗಿ ಬಾಳಿದ ಪ್ರಸಂಗಗಳೂ ಇವೆ. ಎಚ್.ನಾಗವೇಣಿ ಅವರ ಕಾದಂಬರಿ 'ಗಾಂಧಿ ಬಂಧ' ಯಲ್ಲಿ ಬರುವ ಒಂದು ಪ್ರಸಂಗದಲ್ಲಿ ಕುಳಾಯಿ ಗುತ್ತು ಮತ್ತು ಪೊಸೋಡಿ ಗುತ್ತಿನ ಕಥೆಯನ್ನು ನಿರೂಪಿಸುತ್ತಾರೆ. ಬಂಟ ಸಮುದಾಯದ ಕುಟುಂಬದ ಗುತ್ತಿನ ಮನೆಯಲ್ಲಿನ ಪಾಳೇಗಾರಿಕೆಯನ್ನು ಅಳಿಯನಾಗಿ ಬಂದವರು ಹೇಗೆ ಪ್ರತಿರೋಧಿಸಿದರು ಎನ್ನುವ ವಿವರಣೆ ಇದೆ. "ಸೂರಕ್ಕೆಯ ತಂದೆ ಕಿಞ್ಞಣ್ಣ ರೈ –ತಾಯಿ ಕುಂಞಕ್ಕೆ ಆಕೆಗೆ ಇಬ್ಬರೇ ಹೆಣ್ಣು ಮಕ್ಕಳು, ಗಂಡು ಸಂತಾನವಿಲ್ಲ. ದೊಡ್ಡವಳು ಸೊನ್ನೆ, ಎರಡನೆಯವಳು ಸೂರಕ್ಕೆ. ಕುಂಞಕ್ಕೆಯ ಅಣ್ಣ ಲೋಕಯ್ಯ ಶೆಟ್ಟಿ ಆ ಗುತ್ತಿನ ಒಡೆಯ 'ಗುತ್ತಿನಾರ್' ಆಗಿದ್ದವರು ಪಂಜುರ್ಲಿ ಭೂತದ ಕೆಟ್ಟ ದಿಟ್ಟಿಯಾಗಿ ಸತ್ತ ನಂತರ ಗುತ್ತಿನ ಗಡಿ ಸಿಕ್ಕಿದ್ದು ಸೊನ್ನೆಯ ಮಗ ಅಳಿಯ ಪಾಂಡು ಶೆಟ್ಟಿಗೆ. ಆ ಮನೆಯಲ್ಲಿ ಸೂರಕ್ಕೆ ಮತ್ತು ಆಕೆಯ ಮಗ ಮಾರಪ್ಪ ಏನೇನೂ ಅಲ್ಲ. ಎಲ್ಲ ಸೊನ್ನೆಯದೇ ಮಾತು. ಮುದ್ದಣ್ಣ ಶೆಟ್ಟಿ ತನ್ನ ಹೆಂಡತಿ ಮಗನನ್ನಾದರೂ ನೋಡಲು ಗುತ್ತಿಗೆ ಬಂದರೆ 'ಬಾರಪ್ಪ ಕೈಕಾಲು ತೊಳಿ.... ಒಂದು

ಲೋಟ ನೀರು ಕುಡಿ' ಎಂದು ಕರೆದು ಆದರಿಸುವವರಿಲ್ಲ. ಆದರಿಸಿ ಕೊಟ್ಟರೆ, ಸೂರಕ್ಕೆ ಕೊಡಬೇಕು. ಆಕೆಗೆ ಕೆಲಸ ಹಚ್ಚಿ ಮೂಲೆ ಹಿಡಿದರೆ ಆಕೆಯೂ ಅಲ್ಲಿಂದ ಏಳುವಂತಿಲ್ಲ. ಹಿಂದೆ ಮುಂದೆ ಆಸ್ತಿಯಿಲ್ಲದ, ಗುತ್ತಿನಾರ್ ಬಿರುದಿಲ್ಲದ ಅಳಿಯನನ್ನು ಅತ್ತೆ ಕುಂಞಕ್ಕೆಯಂತಲೂ ಮೂಸಿ ನೋಡುವುದಿಲ್ಲ. ಸೊನ್ನೆಯ ಮಗಳು ಅಬ್ಬಕ್ಕ ಅಂದರೆ ಪಾಂಡುಶೆಟ್ಟಿ ತಂಗಿಯಂತೂ ಅಹಂಕಾರದ ಮೊಟ್ಟೆ. ಚಿಕ್ಕಪ್ಪನನ್ನು ಕಣ್ಣೆತ್ತಿಯೂ ನೋಡಳು. ಇಂತಾ ಅನಾದರ, ನಿರಾಸಕ್ತಿ, ನಿರ್ಲಕ್ಷ್ಯವನ್ನು ಮುದ್ದಣ್ಣ ಶೆಟ್ಟಿ ಸಹಿಸದಾದರು. ತನ್ನೆದುರೇ ಸೊನ್ನೆಯ ಗಂಡ ಅಜಿಕಾರು ಗುತ್ತಿನ ಗುತ್ತಿನಾರ್ ಸೋಮುಶೆಟ್ಟಿ ಬಂದರೆ ಆತನಿಗೆಂಥಾ ಸ್ವಾಗತ! ಎಂಥಾ ಸತ್ಕಾರ! ಎಂಥಾ ಆದರ– ಅತ್ತೆ ಕುಂಞಕ್ಕೆಯಿಂದ.... ತನ್ನ ಆಸ್ತಿ ಅಂತಸ್ತಿನ ಮದದಿಂದ ಸ್ವತಃ ಸೊನ್ನೆಯೇ ಗಂಡನನ್ನು ಆದರಿಸದಿದ್ದರೂ, ಗುತ್ತಿನ ಆಳುಗಳಾದಿಯಾಗಿ ಮನೆಯವರೆಲ್ಲರೂ ಆತನನ್ನು ವಿಪರೀತ ಗೌರವ ಕಾಳಜಿಯಿಂದ ಸತ್ಕರಿಸುವುದನ್ನು ಮುದ್ದಣ್ಣ ಶೆಟ್ಟಿಯಿಂದ ಸಹಿಸಲಾಗದೆ ಅದನ್ನು ನುಂಗಿಕೊಳ್ಳುವ ಸಾಮರ್ಥ್ಯವೂ ಇಲ್ಲದಂತಾಗಿ ದ್ರೌಪದಿಯ ಗಂಡ ನರಹರಿಯ ತಂದೆ ತಣ್ಣೀರು ಬಾವಿಯ ಶ್ಯಾನುಭೋಗರಿಗೆ ಅಡ್ಡ ಬಿದ್ದು ಬೈಕಂಪಾಡಿಯಲ್ಲಿ ಮೂರು ಮುಡಿ ಗದ್ದೆ ಮತ್ತು ಒಂದೆಕ್ರೆ ತೋಟವನ್ನು ಮೂಲ ಗೇಣಿಗೆ ಪಡೆದುಕೊಂಡು ಹೆಂಡತಿ ಮಗನನ್ನು ಇಲ್ಲಿ ಕರೆತಂದವರು ಮತ್ತೆ ಆ ಗುತ್ತಿಗೆ ಕಾಲಿಟ್ಟಿಲ್ಲ. (ನಾಗವೇಣಿ ಎಚ್,೧೯೯; ಪು.೮೦) ಗಂಡಿನ ಅಹಮಿಕೆಯನ್ನು ಪೋಷಿಸುವ ಸಾಮರ್ಥ್ಯವುಳ್ಳ ಗಂಡು ಮಕ್ಕಳಿಗೆ ಮಾತ್ರ ಇದು ಸಾಧ್ಯ. ಪುರುಷಾಧೀನತೆಯೆಡೆಗೆ ಸಾಗಬೇಕೆಂಬ ಮನೋಧರ್ಮದಿಂದಲೂ ಇಂತಹ ಆಲೋಚನೆಗಳೂ ಹುಟ್ಟಿಕೊಂಡಿವೆ. ಭೂಮಿಯ ಒಡೆತನ ಇಲ್ಲದಿದ್ದಾಗ ಸಿಗದೆ ಇರುವ ಗೌರವ ಒಡೆಯರಾದ ತಕ್ಷಣಕ್ಕೆ ಬದಲಾಗುತ್ತದೆ. ಸ್ವಂತಿಕೆಯನ್ನು ಸ್ವಾಭಿಮಾನವನ್ನು ಉಳಿಸಿಕೊಳ್ಳಲು ಕುಟುಂಬವೊಂದಕ್ಕೆ ಭೂಮಿಯ ಒಡೆತನ ಅನಿವಾರ್ಯ. ಅದಕ್ಕೆ ಜಾತಿ, ವರ್ಗಗಳ ವ್ಯತ್ಯಾಸವಿಲ್ಲ. ಸಾಮಾಜಿಕತೆ ಮತ್ತು ಆರ್ಥಿಕ ಸ್ಥಾನಮಾನಗಳನ್ನು ಗಮನಿಸುವಾಗ ಕುಟುಂಬ ಪ್ರೇಮವೂ ಆ ಹಿನ್ನೆಲೆಯಲ್ಲಿ ಮುಖ್ಯವೆನಿಸುತ್ತದೆ. ಅಸಹಾಯಕರನ್ನು ಬಡವರನ್ನು ತುಳಿಯಲು ಭೂಮಿ ದಾಳವಾದಂತೆ ಅವರನ್ನು ಪೋಷಿಸುವ ರಹದಾರಿಯೂ ಆಗಿದೆ. ಒಡೆತನವನ್ನು ಹೊಂದಿದವರ ಮನೋಧರ್ಮ ಇದಕ್ಕೆ ಸಾಕ್ಷಿಯೂ ಹೌದು. ಸಾಮಾಜಿಕ ಸಂರಚನೆಯ ಭಾಗವಾಗಿ ಬದಲಾಗುತ್ತ ಬಂದ ಈ ಮನೋಧರ್ಮ ಸ್ಥಿತ್ಯಂತರಗಳನ್ನು ಹೊಂದುತ್ತಲೇ ಸಾಗಿದೆ. ಕುಟುಂಬದ ಒಳಗೂ ನಡೆಯುವ ಗಂಡಿನ ಅಹಮಿಕೆಯ ಪಾಳೇಗಾರಿಕೆ ಇಂದಿಗೂ ನಿರಂತರವಾಗಿ ನಡೆಯುತ್ತಲೇ ಇದೆ. ಅದನ್ನು ಪ್ರಶ್ನಿಸುವ ಸಮತೆಯೆಡೆಗೆ ತುಡಿಯುವ ಪ್ರತಿಸ್ಪಂದನಗಳೂ ಈ ಹಿನ್ನೆಲೆಯಲ್ಲಿ ಮುಖ್ಯ. ಈ ಬೆಳವಣಿಗೆಯ ಹಿಂದೆ ಇಂದಿನ ಕಾಲಮಾನದ ಹಲವು ಕಾರಣಗಳನ್ನು ಊಹಿಸಬಹುದಾದರೂ ಸಮಷ್ಟಿಯಿಂದ ವ್ಯಷ್ಟಿಯೆಡೆ ಸಾಗುತ್ತಾ ಹೋಗಿ ವ್ಯಕ್ತಿ ಕೇಂದ್ರಿತವಾಗುವ ಈ ಮನೋಧರ್ಮ ಸಹಜೀವಿಗಳ ಸಾಹಚರ್ಯದ ಪ್ರಶ್ನೆಯನ್ನು ಎತ್ತುತ್ತದೆ. ಮನುಷ್ಯ ಸಂಘಜೀವಿ ಎನ್ನುವ ಪರಿಭಾಷೆಯನ್ನು ಹೊಸ ಅರ್ಥಛಾಯೆಯಲ್ಲಿ ಗುರುತಿಸುವ ವಿಶ್ಲೇಷಿಸುವ ಅರ್ಥ ಸಾಧ್ಯತೆಗಳೂ ಗೋಚರಿಸುತ್ತಿದೆ.

'ಅಳಿದುಳಿದವರು' ಕಾದಂಬರಿಯಲ್ಲಿ ಗುತ್ತಿನ ಆಡಳಿತವನ್ನು ಪ್ರತಿರೋಧಿಸಿ ಗುತ್ತಿನಾರ್‌ನ ಪತ್ನಿ ಕುಸುಮಳ ದಬ್ಬಾಳಿಕೆಯನ್ನು ಸಹಿಸಲಾಗದೆ ಹೆಣ್ಣು ಮಗಳು ರಾಧಾ ಭೂಮಿಯಲ್ಲಿ ಪಾಲು ಪಡೆದು

ಪ್ರತ್ಯೇಕವಾಗುತ್ತಾಳೆ. ಆರಂಭದ ಹಂತದಲ್ಲಿ ಪ್ರತ್ಯೇಕತೆಯನ್ನು ಕಾಯ್ದುಕೊಂಡ ವೀರಪ್ಪ, ವಿಟ್ಟು, ಗೋಪರಿಗಿಂತ ಭಿನ್ನವಾಗಿ ಇವರು ಪ್ರತ್ಯೇಕವಾಗುತ್ತಾರೆ. ಆದರೆ ರಾಧಾ 'ಕುಟುಂಬ ಮೂಲಕ್ಕೆ' ಮರಳಿದರೂ ತನ್ನ ಮಗ ಗಂಗಾಧರನನ್ನು ಬಾಳಿಸಲು ಅವಳಿಂದ ಸಾಧ್ಯವಾಗುವುದಿಲ್ಲ. ತನ್ನ ಯೌವ್ವನ, ವಿದ್ಯೆ, ಭವಿಷ್ಯ ಎಲ್ಲವನ್ನು ಕುಟುಂಬಕ್ಕಾಗಿ ಮೀಸಲಿಟ್ಟು ತನ್ನ ಸೋದರಿಯರ ಒಳಿತನ್ನೇ ಬಯಸಿದ ಗಂಗಯ್ಯನನ್ನೇ ಕುಟುಂಬ ಹೊರದಬ್ಬುತ್ತದೆ. ತಾವಾಗಿಯೇ ಹಕ್ಕಿನಿಂದ ಪಡೆದ ಭೂಮಿಯನ್ನು ಹಾಗೆಯೇ ಉಳಿಸಿಕೊಳ್ಳಲೂ ಸಾಧ್ಯವಾಗುವುದಿಲ್ಲ. ಉಳುಮೆಯಲ್ಲಿ ತಿಳಿಯದ ಗಂಗಯ ಕೃಷಿಕನಾಗಿ ಉಳುಮೆ ಕಲಿತು ಗದ್ದೆ ತೋಟ ಸಾಗುವಳಿ ಮಾಡಿ ಹಗಲು ಇರುಳುಗಳಲ್ಲಿ ದುಡಿದು ಸಂಪಾದಿಸಿದುದನ್ನೆಲ್ಲ ಒಂದಷ್ಟು ಸಾಲ ಮಾಡಿ ಇಬ್ಬರು ಸಹೋದರಿಯರ ಮದುವೆ ಮಾಡುತ್ತಾನೆ. ಶ್ಯಾಮಲ, ವಿಮಲರ ಮದುವೆ ಮಾಡಿದಾಗ ಮಗನನ್ನು ಹೊಗಳಿದ ರಾಧಾ ಅವನ ಸಾಲದ ನೊಗಕ್ಕೆ ತಾವು ಬಾಧ್ಯಸ್ಥರಲ್ಲವೆಂದು ಪರಕೀಯನನ್ನಾಗಿಸುತ್ತಾರೆ. ಗುತ್ತಿನ ಹೆಣ್ಣನ್ನು ಗುತ್ತಿನ ಒಕ್ಕಲು ಮನೆತನದವನಾದ ಮಾಧವನಿಗೆ ಕೊಟ್ಟು ಮದುವೆ ಮಾಡಿ ಅವನ ಸಿರಿವಂತಿಕೆ ಮುಂದೆ ತನ್ನ ಮಗನ ಶ್ರಮ, ದುಡಿಮೆ, ಸಂಕಷ್ಟ, ಸಾಲಗಳು ಪೊಳ್ಳು ಎನಿಸುತ್ತದೆ. ಹೋಟೇಲು ಉದ್ಯಮಿಯಾಗಿ ಗುರುತಿಸಿಕೊಂಡ ಮಾಧವನ ಮನೆತನಕ್ಕಿಂತ ಸಿರಿತನ ಮುನ್ನೆಲೆಗೆ ಬಂದು ಗಂಗಾಧರನಾಗಿದ್ದ ಗುತ್ತಿನ ಹುಡುಗ ಗಂಗಯನಾಗಿ ಭಾವನಿಗೆ ಸೀಯಾಳ ಕೆತ್ತಿಕೊಡುವ ಕೆಳಹಂತಕ್ಕೆ ಬರುತ್ತಾನೆ. ಹಾಗಿದ್ದೂ ಗುತ್ತಿನ ಮನೆ ಮಗನ ಘನತೆ ಕಾಯದ ತಾಯಿ ರಾಧ ಅಳಿಯಂದಿರ ಜತೆ ಸೇರಿ ಗಂಗಯನನ್ನೇ ದೂಷಿಸುತ್ತಾಳೆ. ಭೂಮಿ ತಾಯಿ ಹಿಡಿತದಲ್ಲಿದೆ ದುಡಿಯಲು ತಾನು ಅಧಿಕಾರ ಅವರಿಗೆ ಆದಾಗ ಅಸಹಾಯಕನಾದ ಆತ ಮನೆಬಿಟ್ಟು ದೇಶಾಂತರ ತೆರಳುತ್ತಾನೆ. ಅವಮಾನ, ಅಸಹಾಯಕತೆಯ ವಿಷ್ಣತೆ ಆವರಿಸಿಕೊಂಡ ಗಂಗಯನಿಗೆ ದಿಕ್ಕಿಲ್ಲದಂತಾಗುತ್ತದೆ. ಬದುಕಿಗೆ ಹೊಸ ತಿರುವು ಲಭಿಸಿ ಆತನ ಬದುಕಿನ ದಿಕ್ಕು ಬದಲಾಗಿ ಸುಖಾಂತ್ಯಗೊಳ್ಳುತ್ತದೆ. ಕುಟುಂಬ ಮೂಲಕ್ಕೆ ಹೆಣ್ಣು ಮಗಳಾದ ರಾಧಾಳ ಮನೆಯೊಳಗೇ ಭೂಮಿಯ ಒಡೆತನಕ್ಕಾಗಿ ಅವಳ ಐವರು ಹೆಣ್ಣು ಮಕ್ಕಳಾದ ಶ್ಯಾಮಲ, ವಿಮಲ, ನಯನ, ವಿನಯರು ವಿವಾಹಿತರಾಗಿ ಅವಿವಾಹಿತೆಯಾದ ಯಮುನ ತಾಯಿಯ ಜತೆ ಸೇರಿ ಮತ್ತೆ ಪ್ರತ್ಯೇಕತೆಗಾಗಿ ವಿಭಜನೆಗೊಳ್ಳುತ್ತಾರೆ. ಊರಲ್ಲಿದ್ದ ನಯನ ಮಾಧವ, ವಿಮಲ, ರಾಧಾಕೃಷ್ಣ ಮನೆಯೊಳಗೆ ತಾಯಿಗಿಂತ ಪ್ರತ್ಯೇಕವಾಗಿ ಪ್ರತ್ಯೇಕ ಒಲೆ ಹೂಡುತ್ತಾರೆ. ತಾಯಿ ಮಗಳು ಬೇರೆ ಒಲೆ ಹೂಡಿ ಒಂದು ಒಲೆಯಿದ್ದುದು ಮೂರು ಒಲೆಯಾಗುತ್ತದೆ. ಮುಂಬೈಯ ಹೆಣ್ಣು ಮಕ್ಕಳು ನಯನ, ಮಾಧವ, ಮತ್ತು ವಿನಯ, ಜನಾರ್ಧನರಿಗೆ ತಮ್ಮ ಸಿರಿವಂತಿಕೆಗಾಗಿ ಸ್ಪರ್ಧೆ ಏರ್ಪಟ್ಟು ಪರಸ್ಪರರಲ್ಲಿಯೇ ಅಸಹನೆಗಳು ಬೆಳೆದವು. ತಮ್ಮ ತವರಿನ ಭೂಮಿಯನ್ನು ತಾನು ಸಿರಿವಂತರಾದರೂ ಉಳಿದವರಿಗೆ ಬಿಟ್ಟುಕೊಡದೆ ಬೇರೆಯವರಿಗೆ ಗೇಣಿಗೆ ಕೊಟ್ಟು ಬದುಕಿದರು. ಪಾಳೇಗಾರಿಕೆಯಿಂದ ಕುಟುಂಬ ಮೂಲಕ್ಕೆ ಮರಳಿದರೂ ಕುಟುಂಬವೂ ಏಕತ್ರವಾಗಿ ಉಳಿಯುವುದಿಲ್ಲ. ಕೌಟುಂಬಿಕ ಕ್ಲೇಶಗಳಿಗೆ ಭೂಮಿಯೇ ಮೂಲಕಾರಣವಾಗಿ ಪರಸ್ಪರರ ಮಧ್ಯೆ ಅಡ್ಡ ಗೋಡೆಯಾಗಿ ವಿಘಟಿಸಿ ನಿಲ್ಲಲು ಕಾರಣವಾಗುತ್ತದೆ. ಗುತ್ತಿನ ಒಡೆತನದಲ್ಲಿ ವಿಸ್ತಾರವಾಗಿದ್ದ ಭೂಮಿ ಅಳಿಯ ಸಂತಾನ ಕಟ್ಟಿನ ರೀತಿ ರಿವಾಜುಗಳಂತೆ ಹೆಣ್ಣು ಮಕ್ಕಳು ಹೆಚ್ಚಿನ ಪಾಲನ್ನು ಪಡೆದು ಒಡೆತನಕ್ಕಾಗಿ ಬಡಿದಾಡಿಕೊಳ್ಳುವುದು

ಸಹಜವಾದುದು. ಮೊದಲ ತಲೆಮಾರು ಭೂಮಿಯ ಸಂಪತ್ತಿನಿಂದ ಬಾಳಿದರೆ ಎರಡನೆಯ ತಲೆಮಾರಿಗಾಗುವಾಗ ಆ ಸಂಪತ್ತೂ ಉಳಿದಿರುವುದಿಲ್ಲ. ಸಂಪಾದನೆಯ ದಾರಿಗಳು ಬದಲಾಗಿ ಬದುಕಿನ ನಿರ್ವಹಣೆಯಲ್ಲಿ ಪ್ರವಾಹದೋಪಾದಿಯಲ್ಲಿ ಎಲ್ಲವೂ ಸಾಗಿಬಿಡುತ್ತದೆ. ಭೂಮಿ ಪರಭಾರೆಯಾಗುತ್ತ ಸಾಗಿದಂತೆ ಬಾಂಧವ್ಯಗಳೂ ಸಂಕೀರ್ಣವಾಗುತ್ತ ಹೋಗುತ್ತವೆ.

ಪಾಳೇಗಾರಿಕೆ ಕುಟುಂಬಗಳು ಭೂ ಮಾಲಕತ್ವವನ್ನು ಕಳಕೊಂಡು ಅಳಿದುಳಿದ ತಮ್ಮ ಗದ್ದೆಗಳಲ್ಲಿ ತಾವೇ ಶ್ರಮಿಕರಾದುದು ಒಂದು ಹಂತವಾಗಿದೆ. ಕಾರಂತರ 'ಮರಳಿ ಮಣ್ಣಿಗೆ' ಕಾದಂಬರಿಯಲ್ಲಿ ತನ್ನಲ್ಲಿ ಉಳಲು ಎತ್ತುಗಳೇ ಇಲ್ಲದಾಗ ರಾಮ ಮತ್ತು ನಾಗವೇಣಿಯವರು ಶ್ರಮಿಕ ಕೂಲಿ ಕಾರ್ಮಿಕನಾದ ಒಕ್ಕಲಿನವ ಸೂರನಿಗೆಹೇಳಿ ಅವನ ಕರುಣೆಯಿಂದ ಗದ್ದೆ ಸಾಗುವಳಿ ಮಾಡಿಸುತ್ತಾರೆ. ಒಂದು ಕಾಲಕ್ಕೆ ಪೌರೋಹಿತ್ಯ, ಭೂಮಿಯ ಒಡೆತನದಲ್ಲಿ ಸರಸೋತಿ, ಪಾರೋತಿಯರ ದುಡಿಮೆಯಿಂದ ನೀಡುವವರಾಗಿದ್ದ ರಾಮ ಐತಾಳರ ಕುಟುಂಬ ನೀಡುವ ಸ್ಥಾನದಿಂದ ಪಡೆಯುವ ಸ್ಥಾನಕ್ಕೆ ತಲುಪುತ್ತದೆ. ತಾವೇ ತಮ್ಮ ಗದ್ದೆಗಳಲ್ಲಿ ಕಷ್ಟಪಟ್ಟು ದುಡಿಯಬೇಕಾದ ಅನಿವಾರ್ಯತೆಯೂ ಒದಗುತ್ತದೆ. ಭೂಮಾಲೀಕರಾಗಿದ್ದವರು ಶ್ರಮಿಕ ಕುಟುಂಬವಾದ ಪಲ್ಲಟವೂ ಪ್ರಮುಖವಾಗುತ್ತದೆ. ಗೇಣಿ ನೀಡುತ್ತಾ ಶ್ರಮಿಕ ಕುಟುಂಬವಾಗಿದ್ದವರು ಭೂಮಾಲೀಕರಾದ ಉದಾಹರಣೆಗಳೂ ಇವೆ. ನಾ. ಮೊಗಸಾಲೆಯವರ 'ಉಲ್ಲಂಘನೆ' ಕಾದಂಬರಿಯಲ್ಲಿ ಸಾಂತೇರ್ ಗುತ್ತಿನ ಒಕ್ಕಲಾಗಿದ್ದ ಕರಿಯ ಪೂಜಾರಿಯ ಮಗ ಭೋಜ ಪೂಜಾರಿ ಮುಂಬೈಗೆ ತೆರಳಿ ಸೇಠು ಆಗಿ ತನ್ನ ಕುಟುಂಬದ ಆಸ್ತಿಯನ್ನು ತನ್ನ ಮಾವನ ಹಿಡಿತದಿಂದ ಪಡೆಯಲು ಪ್ರಯತ್ನಿಸುತ್ತಾನೆ. ತನ್ನ ಭಾವನೆಂಟ ಕುಟ್ಟಿಪೂಜಾರಿಯೊಂದಿಗೆ ಕೈ ಕೈ ಮೀಸಲಾಯಿಸುವ ಹಂತಕ್ಕೂ ಇದು ಹೋಗುತ್ತದೆ. ಶ್ರಮಿಕ ಕುಟುಂಬವಾಗಿ ಬಾಳಿದವರೂ ತಮ್ಮಲ್ಲಿ ಹಣದ ಆದಾಯ ಹೆಚ್ಚಿದಾಗ ಪಾಳೇಗಾರಿಕೆಯನ್ನು ವ್ಯಕ್ತಪಡಿಸುತ್ತಾರೆ. ಅಳಿದುಳಿದವರು ಕಾದಂಬರಿಯಲ್ಲಿ ಗುತ್ತಿನ ಪಾಳೇಗಾರಿಕೆಯೇ ಕುಸಿಯುತ್ತ ಕುಟುಂಬದೆಡೆಗೆ ಸಾಗಿದ್ದನ್ನು ಕಾಣುತ್ತೇವೆ. ಗುತ್ತಿನ ಮನೆತನದ ಘನಸ್ತಿಕೆ ಇದ್ದರೂ ಗದ್ದೆಯಲ್ಲಿ ನೇಗಿಲು ಕಟ್ಟಿ ಉಳುವುದು ರಾಧಾಳ ಮಗ ಗಂಗಯನಿಗೆ ಅನಿವಾರ್ಯವಾಗುತ್ತದೆ. ಇಲ್ಲಿ ಎರಡೂ ರೀತಿಯ ಚಲನೆಗಳೂ ನಡೆದಿವೆ. ಪಾಳೇಗಾರರಾಗಿದ್ದವರು ಶ್ರಮಿಕ ಕುಟುಂಬಿಕರಾಗಿ, ಭೂ ಮಾಲಿಕತ್ವವನ್ನು ಕಳೆದುಕೊಂಡು ಶ್ರಮಿಕರಾಗಿದ್ದವರು ಸಿರಿವಂತ ಕುಟುಂಬಗಳೂ ಆದರು. ಭೂಮಾಲೀಕರು ಶ್ರಮಿಕರಾದುದು ವಿರಳ ನಿರೂಪಣೆಗಳಾದರೂ ಸಾಧ್ಯವಾಗಿದೆ. ಶ್ರಮಿಕರಾಗಿದ್ದವರು ಭೂಮಾಲೀಕರಾಗಿ ಕಳೆದುಕೊಂಡ ಕುಟುಂಬಿಕರ ಜಮೀನನ್ನು ಮರಳಿ ಪಡೆದವರೂ ಇದ್ದಾರೆ.

ಸಾಮಾಜಿಕ ಸಂರಚನೆಯಲ್ಲಿ ಕೃಷಿ ಮತ್ತು ಭೂಮಿ ಪ್ರಮುಖ ಪಾತ್ರವಹಿಸುವುದರೊಂದಿಗೆ ಮನುಷ್ಯ ಸಂಬಂಧಗಳ ಒಡನಾಟವೂ ಪ್ರಮುಖವಾಗುತ್ತದೆ. ಮಣ್ಣಿನ ಒಡನಾಟದಿಂದ ಬಾಳುವ ಮನುಷ್ಯರಲ್ಲಿ ಇರುವಂತಹ ಮಾನವೀಯ ಅಂತಃಕರಣ ಮತ್ತು ಹೃದಯವಂತಿಕೆಗಳು ಅದನ್ನು ಬಿಟ್ಟು ತೆರಳಿದವರಲ್ಲಿ ದೂರಾದವರಲ್ಲಿ ಸರಳವಾಗಿ ಕಣ್ಣಿಗೆ ರಾಚುವುದಿಲ್ಲ. ಎಲ್ಲವೂ ಬೂಟಾಟಿಕೆಯ ವ್ಯಾವಹಾರಿಕತೆಯ ಸಂಬಂಧಗಳೇ ಆಗಿ ಮುಂದುವರಿಯುತ್ತದೆ. ಭೂಮಿಯ ಒಡೆಯರಾಗುವುದು ಮನುಷ್ಯನ ವ್ಯಕ್ತಿತ್ವಕ್ಕೆ ಹೆಮ್ಮೆಯೆನಿಸಿದಂತೆ 'ಒಂದು ಹಿಡಿ ಮಣ್ಣಾದರೂ ನನ್ನದು' ಎಂಬ ಭಾವ ಪ್ರಮುಖವಾದುದು. 'ಮಣ್ಣಲ್ಲಿ

ಹುಟ್ಟಿ ಮಣ್ಣಿಗೇ ತೆರಳುವ ದೇಹ'ವೆಂದು ದಾರ್ಶನಿಕವಾಗಿ ನುಡಿದರೂ ಬಾಳಿನಲ್ಲಿ ಅಂತಹ ದಾರ್ಶನಿಕೆಯನ್ನು ಪರಿಪಾಲಿಸುವುದು ಕಡು ಕಷ್ಟ. ಮನುಷ್ಯನ ಅಹಂಕಾರವನ್ನು ಹೆಚ್ಚಿಸಲು ಕಾರಣವಾಗುವ ಭೂಮಿಯ ಒಡೆತನ ಅದು ಇಲ್ಲವಾದಾಗ ದಿವಾಳಿಯೆನಿಸುತ್ತದೆ. ಇಲ್ಲಿ ಉದ್ಧರಿಸಿರುವ ಕಾದಂಬರಿಯ ಭಾಗಗಳ ಮರು ಓದು ಈ ಸೂಕ್ಷ್ಮವನ್ನು ಹಿಡಿದಿಡುತ್ತದೆ. ಬಂಧುತ್ವಕ್ಕೆ ಕಾರಣವಾಗುವ ಭೂಮಿಯೇ ವೈಷ್ಯಮ್ಯಕ್ಕೆ ಆ ಮೂಲಕ ವಿನಾಶಕ್ಕೂ ಕಾರಣವಾಗುತ್ತದೆ. ತನ್ನ ಸಹಜೀವಿಯಾಗಿರುವ ಇನ್ನೊಬ್ಬ ಮನುಷ್ಯನನ್ನು ಅವನ ಜಾತಿ, ಲಿಂಗ, ವರ್ಗಗಳನ್ನು ನೋಡದೆ ಸಮಾನವಾಗಿ ಗೌರವಿಸಲು ಮತ್ತು ಪ್ರಭಾವಿಸಲು ಇದು ಕಾರಣವಾದರೆ ಬಹು ಮುಖ್ಯವಾದ ಅಂಶವೆನಿಸುತ್ತದೆ.

'ಭೂಮಿ' ಇನ್ನೊಬ್ಬನನ್ನು ತುಳಿಯಲು, ಶೋಷಿಸಲು, ಅವಮಾನಿಸಲು ಕಾರಣವಾಗುವ ಬದಲು ಬೆಳೆಸಲು ಪೋಷಿಸಲು ಕಾರಣವಾಗಬೇಕೆಂಬ ಸದಾಶಯ ಪರಂಪರೆಯದು, ಕಾಲಾಂತರದಲ್ಲಿ ನಡೆದ ಎಲ್ಲ ಬೆಳವಣಿಗೆಗಳೂ, ಅಧ್ಯಯನಗಳು, ಅಭಿವೃದ್ಧಿ, ಆರ್ಥಿಕತೆಯ ವ್ಯವಹಾರ, ಶಾಸ್ತ್ರ ಪರಂಪರೆಯ ಚಿಂತನೆಗಳೂ ಆ ಹಿನ್ನೆಲೆಯಲ್ಲಿಯೇ ನಡೆದವು. ಭೂಮಿಯನ್ನು ಕೇಂದೀಕರಿಸಿ ನಡೆದ ಎಲ್ಲಾ ಚರ್ಚೆಗಳಿಗೆ ಕವಲುಗಳಾಗಿ ಎಲ್ಲ ಚಿಂತನೆಗಳನ್ನು ಗ್ರಹಿಸಬಹುದು. ಇಂದಿಗೂ ತಳ ಸಮುದಾಯಗಳಿಗೆ ಸಹಜವಾಗಿ ದಕ್ಕಬೇಕಿದ್ದ ಭೂಮಿಯ ಒಡೆತನ ಪ್ರಶ್ನೆ 'ಯಕ್ಷಪ್ರಶ್ನೆ' ಯಾಗಿಯೇ ಉಳಿದಿವೆ. ಚಳುವಳಿ ಹೋರಾಟಗಳು ಮುಂದುವರಿಯುತ್ತಲೇ ಇವೆ. ಅವಿಭಕ್ತತೆಯಿಂದ ವಿಭಕ್ತರಾಗಿ ಕುಟುಂಬ ಮೂಲಕ್ಕೆ ಮರಳಿರುವ ಎಲ್ಲ ಸಮುದಾಯಗಳಿಗೂ ಇದು ಕಾಡುವ ಪ್ರಶ್ನೆಯೂ ಆಗಿದೆ. ಬರಿಯ ಲೆಕ್ಕಾಚಾರದ ಏರಿಳಿತಗಳಿಗಿಂತಲೂ ಭೂಮಿ ಬರಿಯ ಮಣ್ಣು ಬದುಕಿನ ಹಕ್ಕಾಗಿ ಉಳಿಯದೆ ರಿಯಲ್ ಎಸ್ಟೇಟ್ ಉದ್ದಿಮೆಯಾಗಿ ಪರಿವರ್ತನೆ ಹೊಂದಿದೆ. ಇದನ್ನು ನಿಗ್ರಹಿಸಲು ಸಾಧ್ಯವಾಗುತ್ತಿಲ್ಲ.

**೬.೪. ಮಾತೃ ಮೂಲದಿಂದ ಪಿತೃ ಮೂಲಕ್ಕೆ**

ಕರಾವಳಿಯ ಕೃಷಿ ಸಂಸ್ಕೃತಿ ಪಲ್ಲಟ ಬದುಕಿನ ವಿಕಾಸದೊಂದಿಗೆ ಬದಲಾವಣೆಗೊಳ್ಳುತ್ತಾ ಬಂದಿದೆ. ಕೃಷಿಯ ಅನ್ವೇಷಣೆ, ವಿಸ್ತರಣೆಯ ಕಾಲಕ್ಕೆ ಕೃಷಿಯು ಮಾನವ ಸಮಾಜದ ಮೂಲ ಸಂರಚನೆಯೊಂದಿಗೆ ಬದಲಾಗುತ್ತ ಬಂತು. ಭೂಮಿಯಲ್ಲಿ ಹಾಕಿದ ಬೀಜ ಮೊಳೆತು ಚಿಗುರಿ ಸಸಿಯಾಗಿ, ಹೂ, ಕಾಯಿ, ಹಣ್ಣುಗಳಿಂದ ಹತ್ತು ಹಲವು ಆಗುತ್ತಾ ಸಾಗಿದ ಪರಿ ಅನನ್ಯವಾದುದು. ಭೂಮಿಯ ತತ್ತ್ವ, ಪ್ರಕೃತಿಯ ರಹಸ್ಯಗಳ ಅನ್ವೇಷಣೆಯೊಂದಿಗೆ ಗುರುತಿಸಿ ವಿಶ್ಲೇಷಿಸುವ ಕೆಲಸವೂ ಪ್ರಮುಖವಾದುದು. ಗಂಡಿನ ಶ್ರಮಪೂರ್ಣ ಬದುಕಿಗೆ ಹೆಣ್ಣು ಜತೆಗಾತಿಯಾಗಬೇಕಿತ್ತು. ಭೂಮಿ ಮತ್ತು ಹೆಣ್ಣನ್ನು 'ಉತ್ಪಾದನಾ' ಆಕರವಾಗಿ ಪರಿಭಾವಿಸಿದಾಗ ಪ್ರಾಚೀನರಲ್ಲಿ ದೇಹತತ್ತ್ವದ ಉಗಮವಾಯಿತು. ತಂತ್ರದಿಂದ ಮಂತ್ರಕ್ಕೆ ಸ್ಥಾನಪಲ್ಲಟವಾದುದು ಕಾಲಾಂತರದಲ್ಲಿ ಎನ್ನುವ ನಿಜವನ್ನು ಅರಿಯಬೇಕು. ದೇಹತತ್ತ್ವವನ್ನು ವಿವರಿಸುವ ಭೌತವಾದದ ನಿರೂಪಣೆಗಳು ಸಾಂಖ್ಯ, ಯೋಗಗಳ ಹಂತದಲ್ಲಿ ಸ್ಥಿತ್ಯಂತರಗೊಳ್ಳುತ್ತಾ ಬಂತು. "ಪ್ರಕೃತಿಯ ಅಥವಾ ಭೂಮಿಯೆಂಬ ಸ್ತ್ರೀ ತತ್ತ್ವದ ಉತ್ಪಾದಕತ್ವವನ್ನು ಪ್ರಚೋದಿಸಬಹುದು, ಹೆಚ್ಚಿಸಬಹುದು. ಅದಕ್ಕೆ ಮಾನವ ಸಂತಾನೋತ್ಪತ್ತಿಯ ಅನುಕರಣೆ ಬೇಕು. ಅದಕ್ಕೆ ಪ್ರತಿಯಾಗಿ ಮಾನವ ಫಲವತ್ತತೆಯು ಪ್ರಾಕೃತಿಕ ಫಲವತ್ತತೆಯನ್ನು ಅವಲಂಭಿಸಿದೆ."

(ರಾಮಕೃಷ್ಣ. ಜಿ.(ಅನು) ೨೦೧೧; ಅದೇ, ಪು. ೨೩೨) 'ಬೀಜ ಪ್ರಾಧಾನ್ಯ' ಮತ್ತು 'ಕ್ಷೇತ್ರ ಪ್ರಾಧಾನ್ಯ' ಎನ್ನುವ ಪಾರಿಭಾಷಿಕ ಪದಗಳು ಎರಡು ಆಲೋಚನಾ ಕ್ರಮದ ಚಿಂತನೆಗಳನ್ನು ಮುನ್ನೆಲೆಗೆ ತರುತ್ತದೆ. ಪಶುಪಾಲನೆಯ ಹಂತದಿಂದ ಮುಂದುವರಿದ ಕೃಷಿ ಬದುಕಿಗೆ ನಡೆದ ಸಾಂಸ್ಕೃತಿಕ ಚಲನೆ ಇದಾಗಿದೆ. ಎರಡು ಪ್ರಮುಖ ಧಾರೆಗಳಾಗಿ ಆಹಾರ ಸಂಗ್ರಹಣೆಯ ಬೇಟೆಯಿಂದ ಆರಂಭಗೊಂಡು ಆಹಾರ ಉತ್ಪಾದನೆಯ ಹಂತವಾಗಿ ಪಶುಪಾಲನೆ ಅಭಿವೃದ್ಧಿ ಹೊಂದಿತು. ಮುಂದಿನ ಹಂತದಲ್ಲಿ ಕೃಷಿ ಬದುಕು ವಿಕಾಸಹೊಂದಿ 'ಬೀಜ ಪ್ರಾಧಾನ್ಯ' ಪರಂಪರೆಯ ಪಿತೃ ಪ್ರಧಾನ ಸಂಸ್ಕೃತಿ ವಿಕಾಸಗೊಂಡಿತು. ಬೇಟೆಯ ಹಂತದಿಂದ ಕೃಷಿಯ ಹಂತಕ್ಕೆ ಬದಲಾಗುತ್ತ ಬಂದ ಹಾಗೆ ಭೂಮಿಯ ಪ್ರಾಧಾನ್ಯತೆಯೇ ಪ್ರಮುಖವಾಗಿ ಕಾಣಿಸಿಕೊಂಡಿದೆ. ಒಂದು ಬೀಜ ಸಾವಿರ ಧಾನ್ಯಗಳ ತೆನೆಗೆ ಕಾರಣವಾಗುವುದು ಕ್ಷೇತ್ರ ಪ್ರಾಧಾನ್ಯದ ತತ್ತ್ವ. ಬೀಜಕ್ಕಿಂತ ಕ್ಷೇತ್ರವೇ ಮುಖ್ಯವೆನ್ನುವ ದೇಹ ತತ್ವದ ಮೂಲಕ ಮಾತೃ ಮೂಲ ಸಮುದಾಯದ ತಾತ್ವಿಕತೆಯನ್ನು ಗ್ರಹಿಸಬಹುದು. ಕೃಷಿಯ ಮೂಲ ಹಸಿವಿನ ನಿವಾರಣೆಯ ಮೂಲ, ಉತ್ಪಾದಕ ವರ್ಗದ ಮೂಲವೂ ಹೌದು. ಮನುಷ್ಯ ಸಂಪತ್ತು ಮತ್ತು ಮಾನವ ಸಮಾಜದ ಹೊಟ್ಟೆ ತಂಪಾಗಿಸುವ ಆಹಾರದ ಮೂಲ ಕೃಷಿಯ ಅನ್ವೇಷಣೆಯಿಂದ ತೊಡಗಿ ಕೃಷಿಯ ನಿರ್ವಹಣೆಯವರೆಗಿನ ಜಗತ್ತನ್ನು ಒಳಗೊಂಡು ಕೃಷಿ ಸಂಸ್ಕೃತಿ ವಿಕಾಸವಾಗುತ್ತ ಬಂದಿದೆ. ಈ ಬಗೆಗಿನ ಚಿಂತನೆಯನ್ನು ದೇವಿಪ್ರಸಾದ್ ಚಟ್ಟೋಪಾಧ್ಯಾಯ'ಲೋಕಾಯತ' ಕೃತಿಯಲ್ಲೂ ಉಲ್ಲೇಖ ಮಾಡುತ್ತಾರೆ. 'ನಮ್ಮ ಸಾಂಸ್ಕೃತಿಕ ಇತಿಹಾಸದಲ್ಲಿ ಇನ್ನೊಂದು ಹೊಳೆ ಮಾತೃ ಪ್ರಧಾನವುಳ್ಳ ಸಮಾಜದ್ದು ಅದು ಕೃಷಿ ಆಧಾರಿತ ಸಮಾಜ. ಅಲ್ಲಿ ಸ್ತ್ರೀ ತತ್ವವಾದ 'ಪ್ರಕೃತಿ' ಅಂತಿಮ ಸತ್ಯವಾಗಿ ಅಂಗೀಕರಿಸಲ್ಪಟ್ಟಿತ್ತು. ಅದೇ ಭೌತ ಕಾರಣ ನಿಮಿತ್ತ ಕಾರಣ, ಇದನ್ನು ಮುಖ್ಯವಾಗಿ ಪ್ರತಿನಿಧಿಸಿದ್ದು ತಂತ್ರ ಮತ್ತು ಸಾಂಖ್ಯ. ತಾಂತ್ರಿಕ ಆಚರಣೆಗಳು ಆದಿಮ ಕೃಷಿ ಹಂತದ ವಿಶಿಷ್ಟ ಆಚರಣೆಗಳು ಯೋಗದ ಉಗಮವನ್ನು ಇದರಲ್ಲಿ ಅರಸಬೇಕೇ ವಿನಾ ಭಾವನಾದಿ ಉಪನಿಷತ್ತುಗಳಲ್ಲಿ ಮತ್ತು ಯೋಗ ಸೂತ್ರದಲ್ಲಿ ಅಲ್ಲ. ಏಕೆಂದರೆ ಅವೈದಿಕ ಸಂಪ್ರದಾಯದಲ್ಲಿ ಯೋಗದ ಆಚರಣೆಗಳು ವೈದಿಕ ಸಂಪ್ರದಾಯದಲ್ಲಿದ್ದಂತೆ ಮಾರ್ಪಾಟು ಹೊಂದಲಿಲ್ಲ. ಧೋರಣೆಗಳು ಯತಾಪ್ರಕಾರ ಉಳಿದವು. (ರಾಮಕೃಷ್ಣ.ಜಿ. (ಅನು) ;೨೦೧೧ ಪು. ೨೯೨) ಯಾಕೆಂದರೆ ಆದಿಮ ಆಚರಣೆಗಳನ್ನು ಕೃಷಿಯ ಅನ್ವೇಷಣೆಯ ಹಂತದಲ್ಲಿ ಕಾಣಬಹುದು. ಪ್ರಾಚೀನ ಕೃಷಿಕರಲ್ಲಿ ಈ ಪರಂಪರೆಯ ನಂಬಿಕೆಗಳು ಚಾಲ್ತಿಯಲ್ಲಿದ್ದವು "ಪ್ರಾಚೀನ ಕೃಷಿ ಆರ್ಥಿಕತೆಗೆ ಹೋಲಿಸಿದರೆ ವೇದಕಾಲೀನ ಜನರ ಪಶು ಸಂಗೋಪಣಾ ಆರ್ಥಿಕತೆಯ ಮಾಂತ್ರಿಕ ನಂಬಿಕೆ ಮತ್ತು ಆಚರಣೆಗಳನ್ನು ಅವಲಂಬಿಸಿರಲಿಲ್ಲ. ಉತ್ಪಾದನಾ ವರ್ಗದ ಸೈದ್ಧಾಂತಿಕತೆಯು ಆಳುವ ವರ್ಗದ ಸಿದ್ಧಾಂತವಾಗದಾಗ ಬುಡಕಟ್ಟು ಜೀವನದ ಬಳುವಳಿಯಾಗಿದ್ದ ಅಂಶಗಳು ಕ್ರಮೇಣ ಅವುಗಳ ವಿರುದ್ಧ ಅಂಶಗಳಾಗಿ ಬದಲಾಗಿದ್ದವು."(ಅದೇ ಪು. ೨೯೩) ಜನ ಸಮುದಾಯದ ಆಲೋಚನಾ ಕ್ರಮ ಮತ್ತು ಚಿಂತನೆಯ ಅಡಿಗಲ್ಲಾಗಿದ್ದ ನಂಬಿಕೆ ಮತ್ತು ಆಚರಣೆಗಳು ಜನರ ಅತಿ ಪ್ರಾಚೀನ ಜಾನಪದ ಆಚರಣೆಗಳ ಜೊತೆ ನಿಕಟಸಂಬಂಧವನ್ನು ಮುಂದುವರಿಸಿಕೊಂಡವು. ಅವು 'ಪ್ರಕೃತಿ' ಮತ್ತು 'ಪುರುಷ' ತತ್ವಗಳನ್ನಾಧರಿಸಿದ್ದು ಸಿದ್ಧಾಂತ ಮತ್ತು ಪ್ರಯೋಗಾತ್ಮಕತೆ ಇಲ್ಲದೆ ನಂಬಿಕೆಯಾಗಲಿ ಆಚರಣೆಯಾಗಲೀ ರೂಢಿಗೊಳ್ಳಲು ಸಾಧ್ಯವಿಲ್ಲ. ಸಿದ್ಧಾಂತ ಮತ್ತು ಪ್ರಯೋಗದ ಆದಿಸ್ಥಿತಿಯ

ಸಂಕೀರ್ಣತೆಯೊಂದಿಗೆ ಅದು ಆದಿಮ ಜನಸಮುದಾಯದ ಕೃಷಿ ಪದ್ಧತಿಯಲ್ಲಿನ ಆಚರಣೆಯಾಗಿ ಮುಂದುವರಿದಿದೆ.

ಕರಾವಳಿಯ ಕೃಷಿ ಸಂಸ್ಕೃತಿಯ ಮೂಲಬೇರುಗಳಾಗಿರುವ ನಂಬಿಕೆ ಮತ್ತು ಆಚರಣೆಗಳು ಮಾತೃಮೂಲದ ಆಶಯಗಳನ್ನೇ ಪ್ರತಿಪಾದಿಸುತ್ತದೆ. ಪ್ರಕೃತಿ ಕೇಂದ್ರಿತವಾದ ಸ್ತ್ರೀ ತತ್ತ್ವವನ್ನು ಪ್ರತಿನಿಧೀಕರಿಸುವ ಸೃಷ್ಟಿಯ ಮೂಲಧಾತುವಾಗಿ ಉತ್ಪಾದಕ ವರ್ಗದಲ್ಲಿ ಗುರುತಿಸಿಕೊಂಡಿದೆ. ಉತ್ಪಾದನೆಯ ಹಕ್ಕು ಮತ್ತು ಭೂಮಿಯ ಒಡೆತನದ ಹಕ್ಕು ಹೆಣ್ಣನ್ನು ಕೇಂದ್ರೀಕರಿಸಿ ನಿರೂಪಣೆಗೊಳ್ಳುತ್ತ ಬಾಳುವುದೇ ಮಾತೃಮೂಲದ ಆಶಯವೂ ಆಗಿದೆ. ಮಾತೃ ಮೂಲ, ಮಾತೃ ಪ್ರಧಾನ, ಮಾತೃ ಸ್ಥಾನೀಯ ಈ ಮೂರು ವಿಭಾಗ ಕ್ರಮಗಳ ಕುಟುಂಬ ರಚನೆಯ ವಿನ್ಯಾಸಗಳು ಕರಾವಳಿಯಲ್ಲಿವೆ. ಬಹಳ ತೆಳುವಾದ ಸೂಕ್ಷ್ಮ ಎಳೆಯ ವ್ಯತ್ಯಾಸ ಕ್ರಮದಿಂದ ಈ ವಿಭಾಗ ಕ್ರಮವನ್ನು ಗುರುತಿಸಲಾಗುತ್ತದೆ. ಹೆಣ್ಣಿನಿಂದ ವಂಶ ಮತ್ತು ಭೂಮಿಯ ಒಡೆತನದ ಹಕ್ಕು ಹೆಣ್ಣಿಗೆ ಆದರೆ ಮಾತೃಮೂಲ ಎನಿಸಿಕೊಳ್ಳುತ್ತದೆ. ಮಾತೃಪ್ರಧಾನ ಕುಟುಂಬದ ಕೇಂದ್ರಸ್ಥಾನದಲ್ಲಿ ಆಕೆಯನ್ನಿರಿಸಿ ಹೆಣ್ಣಿನಿಂದ ಕುಟುಂಬ ಮುಂದುವರಿಯುವುದು ಪ್ರಮುಖವಾಗುತ್ತದೆ. ಮಾತೃಸ್ಥಾನೀಯ ವೆನ್ನುವುದು ವಿವಾಹಿತಳಾಗಿ ತನ್ನ ಸಂತತಿಯನ್ನು ಹೆಣ್ಣಿನ ಮೂಲದಿಂದಲೇ ಗುರುತಿಸಿ ತವರಿನಲ್ಲೇ ಭೂಮಿಯ ಒಡೆತನದ ಅಧಿಕಾರವನ್ನು ಹೊಂದಿಯೂ ತನ್ನ ಹುಟ್ಟಿ ಬೆಳೆದ ತವರು ಮನೆಯಲ್ಲಿಯೇ ಸ್ಥಿರವಾಗಿ ನಿಲ್ಲುವವರು ಮಾತೃ ಸ್ಥಾನೀಯರಾಗುತ್ತಾರೆ. ಈ ಮೂರು ಕುಟುಂಬ ವ್ಯವಸ್ಥೆಯಲ್ಲಿ ಹೆಣ್ಣು ಕೇಂದ್ರ ಸ್ಥಾನದಲ್ಲಿ ನಿಲ್ಲುವವರೊಂದಿಗೆ, ಭೂಮಿಯ ಹಕ್ಕನ್ನು ಪಡೆದವಳೂ ಆಗಿರುತ್ತಾಳೆ. ಆದಿಮ ಸಮುದಾಯದ ಬುಡಕಟ್ಟು ಕುಟುಂಬಗಳಲ್ಲಿ ಈ ರೀತಿಯ ಕುಟುಂಬ ಸಂರಚನೆ ಇದೆ. ಭೂಮಿಯ ಒಡೆತನವನ್ನು ಹೊಂದಿ ಅತ್ಯಂತ ಪ್ರಬಲವಾದ ಸಮುದಾಯಗಳಲ್ಲೂ ಈ ಕೌಟುಂಬಿಕ ವ್ಯವಸ್ಥೆ ಇದೆ. ಹೆಣ್ಣಿನ ಸಂತತಿಯ ಹಕ್ಕು ಎನ್ನುವಾಗ ಅದು ಸಂತತಿ ಮತ್ತು ಭೂಮಿ ಎರಡರ ಹಕ್ಕು ಆಗಿದೆ. ಆ ಕಾರಣಕ್ಕಾಗಿ ಸೃಷ್ಟಿಶೀಲ ಗುಣವನ್ನು ಹೊಂದಿದ ಹೆಣ್ಣು ಮತ್ತು ಭೂಮಿಯನ್ನು ಪರಸ್ಪರರಲ್ಲಿ ಸಮೀಕರಿಸಲಾಗಿದೆ. ಹೆಣ್ಣಿನ ಆತ್ಮಾಭಿಮಾನದ ಘನತೆ ಗೌರವವನ್ನು ಕಾಯುವುದರೊಂದಿಗೆ ಅದು ಆಕೆಗೆ ಸಿಗುವ ಅಧಿಕಾರ ಕೇಂದ್ರಗಳು ಅವಳ ಸ್ಥಾನಮಾನಗಳನ್ನು ಗೌರವಿಸುವ ಅಂಶವೂ ಆಗಿದೆ. ಈ ರೀತಿಯ ಕುಟುಂಬ ರಚನೆಯ ವಿನ್ಯಾಸವೂ ನಿಧಾನವಾಗಿ ಪಿತೃಪ್ರಧಾನ ಮೌಲ್ಯಗಳಾಗಿ ಪರಿವರ್ತನೆ ಹೊಂದುತ್ತಾ ಬಂದುದು ಕಾಲಾತೀತವಾದ ಸತ್ಯ. ಕರಾವಳಿಯ ಕುಟುಂಬ ವ್ಯವಸ್ಥೆ ಆ ಕಾರಣಕ್ಕಾಗಿ ಹೇಗೆ ಸ್ಥಿತ್ಯಂತರಗೊಂಡಿತು ಎನ್ನುವ ಸಕಾಲಿಕವಾದ ಚಿಂತನೆಗಳೂ ಇಲ್ಲಿ ಪ್ರಮುಖವೆನಿಸುತ್ತದೆ. ಈ ರೀತಿಯ ಪಲ್ಲಟಕ್ಕೆ ಪ್ರಮುಖ ಕಾರಣವೂ ಕೂಡಾ ಕೃಷಿ ಬದುಕು ಪಲ್ಲಟಗೊಂಡಿರುವುದೂ ಆಗಿದೆ. ಆಯಗಾರಿಕೆಯ ವೃತ್ತಿಗಳು ಕುಲಕಸುಬುಗಳಾಗಿ ಪರಿವರ್ತನೆ ಹೊಂದಿ ಉತ್ಪಾದನಾ ಹಂತದಲ್ಲಿ ಇದ್ದುದು, ಉತ್ಪಾದಕ ವರ್ಗವಾಗಿ ಕೃಷಿ ವಿಸ್ತರಣೆಗೊಂಡಂತೆಲ್ಲ ಪಾಳೇಗಾರಿಕೆ ವ್ಯವಸ್ಥೆ ಬೆಳೆದು ಬಂತು. ಪಾಳೇಗಾರಿಕೆಯಿಂದ ಸಮಾಜದ ಕನಿಷ್ಠ ಘಟಕವಾದ ಕುಟುಂಬ ಮೂಲಕ್ಕೆ ಮರಳುವುದರೊಂದಿಗೆ ಕುಟುಂಬವೂ ಅವಿಭಕ್ತತೆಯಿಂದ ವಿಭಕ್ತತೆಯೆಡೆಗೆ ಸಾಗಿತ್ತು. ಕೌಟುಂಬಿಕ ಸಂರಚನೆಯ ಈ ಪಲ್ಲಟ ಕೃಷಿ ಅನ್ವೇಷಣೆ ಹಂತದ 'ಪ್ರಕೃತಿ' ತತ್ವ ಪ್ರತಿಪಾದನೆಯ ಮಾತೃ ಮೂಲದಿಂದ ಪಿತೃ ಮೂಲಕ್ಕೆ ಪರಿವರ್ತನೆ

ಹೊಂದಿತು. ಕುಟುಂಬ ಸಂರಚನೆಯ ಈ ವ್ಯತ್ಯಾಸವನ್ನು ಸರಳವಾಗಿ ನಿರೂಪಿಸಲ್ಪಡುತ್ತದೆ. ಹೆಣ್ಣಿಗೆ ಅಧಿಕಾರ ಮತ್ತು ಹಕ್ಕನ್ನು ನೀಡುವುದರೊಂದಿಗೆ ಹೆಣ್ಣನ್ನು ಪೂಜನೀಯ ಸ್ಥಾನದಲ್ಲಿರಿಸಿ ಅವಳ ಫಲವಂತಿಕೆಯನ್ನು ವೈಭವೀಕರಿಸಿ ಅರ್ಥೈಸಲು ಸಾಧ್ಯವಾಗಿದೆ.

ಬೇಟೆ ಪಶುಪಾಲನೆ ಮತ್ತು ಕೃಷಿಯ ಈ ಮೂರು ಹಂತದಲ್ಲಿ ಆಹಾರ ಸಂಗ್ರಹಣೆಯ ಬೇಟೆಯ ಹಂತವನ್ನು ತ್ಯಜಿಸಿ ಆಹಾರ ಉತ್ಪಾದನೆಯ ಕೃಷಿಯ ಹಂತಕ್ಕೆ ಬಹಳ ಬೇಗ ಸ್ಥಿತ್ಯಂತರಗೊಂಡರು. ಧಾನ್ಯವನ್ನು ಕೇಂದ್ರೀಕರಿಸಿ ಅವುಗಳನ್ನು ಹತ್ತು ಹಲವಾಗಿಸುವ ಜಾಣ್ಮೆಯನ್ನು ಅರಿತವರು ಹೆಣ್ಣು ಮಕ್ಕಳೇ. ಆಕೆಯ ಆವಿಷ್ಕಾರದಿಂದ ಆರ್ಥಿಕ ಮತ್ತು ಸಾಮಾಜಿಕ ಸ್ಥಾನವು ಉನ್ನತ ಮಟ್ಟಕ್ಕೇರಿತು. ಪ್ರಕೃತಿ ತತ್ವವನ್ನು ಅರ್ಥೈಸಿಕೊಂಡು ಬಾಳಿದ ಹೆಣ್ಣು ಮಕ್ಕಳು ಭೂಮಿಗೆ ತಮ್ಮ ದೇಹವನ್ನು ಸಮೀಕರಿಸಿಕೊಂಡರು. ದೇಹದ ಬದಲಾವಣೆಯಲ್ಲಾಗುವ ಋತು ಚಕ್ರ, ಪ್ರಕೃತಿಯಲ್ಲಿ ಬದಲಾಗುತ್ತಿರುವ ಋತು ಚಕ್ರವನ್ನು ಪರಸ್ಪರ ಸಮೀಕರಿಸಿ ಕಾಲವನ್ನು ಅರ್ಥೈಸಿಕೊಂಡರು. ಈ ತಾತ್ವಿಕತೆಯೇ ಅವರಿಗೆ ಬಹು ದೊಡ್ಡ ದಾರ್ಶನಿಕತೆಯೂ ಆಗಿತ್ತು. ಭೂಮಿಯಲ್ಲಿ ಮಣ್ಣಿನಾಳಕ್ಕೆ ಹಾಕಿದ ಬೀಜ ಮೊಳೆತು ಸಸಿಯಾಗಿ ಬಲಿತು ಫಸಲನ್ನು ನೀಡಿ ಸಂಪತ್ತನ್ನು ಹೆಚ್ಚಿಸುತ್ತದೆ. ಅದೇ ರೀತಿ ಹೆಣ್ಣಿನ ಗರ್ಭಕ್ಕೆ ಪ್ರಧಾನವಾಗುವ ಸಂತತಿಯ ಬೀಜ ಮಾನವ ಸಂಪತ್ತನ್ನು ಹೆಚ್ಚಿಸಲು ದಾರಿಯಾಗುತ್ತದೆ. ಭೂಮಿಯ ಬೆಳೆ ಹೆಚ್ಚಿಸಿದಂತೆ ಮಾನವ ಸಂತತಿಯ ಬೆಳೆಯೂ ಹೆಚ್ಚಬೇಕು. ಧಾನ್ಯಗಳು ಸಂಪತ್ತಿನ ಮೂಲವಾಗಿ ಬೆಳೆದದ್ದು ವೃದ್ಧಿಯಾಗುವಂತೆ, ಆ ಬೆಳೆಯು ಬೆಳೆಯಲು ಶ್ರಮವಹಿಸಿ ದುಡಿಯಲು ಮನುಷ್ಯ ಸಂಪತ್ತು ಬೇಕಲ್ಲವೇ? ಅವೆರಡೂ ಸಮೀಕರಣಗೊಂಡಾಗ ಮಾತ್ರ ಸಂಪತ್ತು ವೃದ್ಧಿಸುತ್ತದೆ. ಹೆಚ್ಚು ಮಕ್ಕಳನ್ನು ಹೆರಬಲ್ಲ ಹೆಣ್ಣು ಮುಖ್ಯವಾದಳು, ಅವಳ ಹುಟ್ಟು ಮತ್ತು ಸಂತತಿ ಯೋಗ್ಯವಾಗಿಸುವ ಅವಳ ಬದುಕಿನ ಕ್ರಮವೂ ಮುಖ್ಯವೆನಿಸಿತು. ಹೆಣ್ಣಿನ ಜನನ ಮತ್ತು ಪ್ರಜನನ ಶಕ್ತಿಯನ್ನು ಶ್ಲಾಘಿಸುವ ಗುಣವೇ ಸಂಪತ್ತೆಂದು ಪರಿಭಾವಿಸಲಾಯಿತು. ಕುಟುಂಬದ ಕೇಂದ್ರದಲ್ಲಿರುವ ಹೆಣ್ಣು ಪ್ರಮುಖ ಸ್ಥಾನವಹಿಸಿದಳು. ಮನೆಯೊಳಗೆ ಮತ್ತು ಹೊರಗೆ ಅವಳಿಗೆ ಘನತೆ ಗೌರವಗಳು ಪ್ರಾಪ್ತಿಯಾದವು. ನದಿ ಮೂಲ, ಋಷಿ ಮೂಲಗಳನ್ನು ಹುಡುಕಬಾರದು ಎಂಬ ಲೋಕ ರೂಢಿಯೂ ಮಾತಿನಂತೆ ಸಂತತಿಯ ಮೂಲವೆನಿಸಿದ್ದು ಮಾತ್ರ ಮುಖ್ಯವಾಯಿತು. ಹೆಚ್ಚು ಮಕ್ಕಳನ್ನು ಹೆತ್ತ ತಾಯಿಗೆ ಹೆಚ್ಚು ವಿಸ್ತಾರವಾದ ಭೂಮಿಯ ಪ್ರಾಪ್ತಿ ಮಾತ್ರವಲ್ಲ ಭೂಮಿಯೇ ಹೆಣ್ಣಿನ ಅಧೀನದಲ್ಲಿತ್ತು. ಭೂಮಿಯ ಹಕ್ಕು ಮತ್ತು ಕುಟುಂಬದ ಯಜಮಾನ್ಯ ಹಕ್ಕು ಆಕೆಗೆ ಲಭಿಸಿ ಘನತೆ ಗೌರವಗಳೂ ಲಭಿಸಿದವು. ಹೆಣ್ಣು ಹುಟ್ಟಲೇ ಬಾರದು ಅಲ್ಲ. ಹೆಣ್ಣು ಹುಟ್ಟಲೇ ಬೇಕಿತ್ತು ಸಂತತಿಯ ಮುಂದುವರಿಕೆಗಾಗಿ ಕೂಡಾ, ಆರಾಧನಾ ಪರಂಪರೆ ಆಚರಣಾ ಪರಂಪರೆಯ ಆಶಯವೂ ಸ್ತ್ರೀ ಮೂಲವನ್ನು ಗುರುತಿಸುವುದೇ ಆಗಿತ್ತು. ಹಾಗಾಗಿ ಹೆಣ್ಣು ಪೂಜಾರ್ಹಳಾಗಿ ದೈವತ್ವದ ಸ್ಥಾನಕ್ಕೆ ಏರಿಸಲ್ಪಟ್ಟಳು. ಸ್ತ್ರೀ ಯೇ ದೈವವಾಗಿ ಪೋಷಿಸುವ ಮತ್ತು ದಮನಿಸುವ ಎರಡೂ ಗುಣವನ್ನು ಅಲ್ಲಿ ಕಾಣಲಾಯಿತು. ವಾಸ್ತವದಲ್ಲಿ ಕುಟುಂಬದಲ್ಲಿ ಪೋಷಿಸುವವಳು ಅವಳೇ, ದಂಡಿಸುವವಳು ಅವಳೇ ಆಗಿದ್ದಳು. ಹಸಿವು ನೀಗುವವಳು ಮತ್ತು ಪ್ರಾಣಹರಣ ಮಾಡುವವಳು ಹೆಣ್ಣೇ ಎಂಬ ನಂಬಿಕೆಯೇ ಅವಳನ್ನು ಕೇಂದ್ರಸ್ಥಾನದಲ್ಲಿರಿಸಿ, ಫಲವಂತಿಕೆಯನ್ನು ಉದಾತ್ತೀಕರಿಸಿ ಪ್ರತಿಬಿಂಬಿಸಲಾಯಿತು. ಹೆಣ್ತನಕ್ಕೆ ಮಾನ್ಯತೆಯನ್ನು

ನೀಡಿ, ಘನತೆ ಗೌರವಗಳಿಂದ ಜೀವನ ಮೌಲ್ಯಗಳನ್ನು ಪ್ರತಿಪಾದಿಸಿದುದು ಸಮುದಾಯಗಳ ಹಿರಿಮೆಯೇ ಆಗಿದೆ.

ಬುಡಕಟ್ಟು ಸಮುದಾಯಗಳಲ್ಲಿ ಸ್ತ್ರೀ ಮೂಲದ ಕುಟುಂಬ ವ್ಯವಸ್ಥೆ ಸಹಜವಾಗಿಯೇ ಇದೆ. ತುಳುವರೂ ಬುಡಕಟ್ಟಿನ ಬೇರುಗಳನ್ನು ಬೆಸೆದುಕೊಂಡು ಒಂದಾಗಿ ಪ್ರತೀಕ ಮುಂದಾಳುವಾಗಿ ಗಂಡನ್ನು ಇರಿಸಿ ಬದುಕು ಹೆಣೆದ ತುಳುವರ ಜೀವನ ಕೃಷಿ ಮೂಲವೇ ಆಗಿತ್ತು.

"ಒಂದು ವಿಧದ ಸಾಮಾಜಿಕ ವ್ಯವಸ್ಥೆಯಲ್ಲಿ ವ್ಯಕ್ತಿಯ ಹಕ್ಕು ತಾಯಿ ಸಂಬಂಧದ ಆಧಾರದ ಮೇಲೆ ನಿರ್ಧಾರವಾಗುತ್ತದೆ. ತಾಯಿಯ ನೆಂಟರು ಮತ್ತು ಸಂಬಂಧಿಗಳೊಂದಿಗಿನ ಆ ವ್ಯಕ್ತಿಯ ಸಂಬಂಧವೂ ಅವನ ಕರ್ತವ್ಯ, ಸವಲತ್ತು, ಕಟ್ಟುಪಾಡು, ಇತ್ಯಾದಿಗಳನ್ನು ನಿರ್ಧರಿಸುತ್ತದೆ. ತಾಯಿ ಹಕ್ಕು ಎಂದಾಗ ಸಂತತಿ, ವಾರಸುದಾರಿಕೆ, ಅಧಿಕಾರ, ವಿವಾಹ ಸಂಬಂಧ ಎಲ್ಲವೂ ಸೇರಿವೆ." (ರಾಮಕೃಷ್ಣ.ಜಿ (ಅನು); ೨೦೧೧, ಪು ೧೭೦) ಯಾಕೆಂದರೆ ತಾಯಿ ಹಕ್ಕು ಮಾನವ ಸಮಾಜದ ಅತಿ ಪ್ರಾಚೀನ ಸ್ವರೂಪವಾಗಿದೆ. ಇದು ಬದಲಾಗಿದ್ದು ಉತ್ಪಾದನಾ ತಂತ್ರದಲ್ಲಿ ಬದಲಾವಣೆಗಳು ಉಂಟಾದಾಗ ಸಾಧ್ಯವಾಯಿತು. ಬೇಟೆಗೆ ಭರ್ಜಿಯನ್ನು ಕಂಡು ಹಿಡಿದ ನಂತರ ಬೇಟೆಯು ಪುರುಷನ ಕೆಲಸವಾಗಿ ಮಹಿಳೆಯು ಆಹಾರ ಸಂಗ್ರಹಣೆಯಲ್ಲಿ ಮುಂದುವರಿದಳು. ಹೆಣ್ಣು ಬಸುರಿಯಾದಾಗ, ಹಾಲುಣಿಸುವಾಗ ಮಹಿಳೆ ಹೊರ ಹೋಗುವುದಕ್ಕೆ ಸ್ವಲ್ಪ ತಡೆ ಉಂಟಾಗುವುದರಿಂದ ಅದು ಅನಿವಾರ್ಯ. ಬೇಟೆಯಿಂದ ಪಶುಸಂಗೋಪನೆ ಆರಂಭಗೊಳ್ಳುತ್ತದೆ. ಪ್ರಾಣಿಯನ್ನು ಕೊಲ್ಲುವ ಬದಲು ತಂದು ಸಾಕಬಹುದು. ಈ ರೀತಿ ಪಶುಸಂಗೋಪನೆ ಎಲ್ಲೆಲ್ಲೂ ಪುರುಷನ ಕೆಲಸವಾಯಿತು. ಆಹಾರ ಸಂಗ್ರಹಣೆಯಿಂದ ಬೀಜಗಳ ಸಂಗ್ರಹ ವಸತಿಯ ಆಸುಪಾಸಿನಲ್ಲಿ ಅದರ ಚೆಲ್ಲುವಿಕೆ, ನಂತರ ಬೆಳೆ ಬೆಳೆಸುವುದು, ಇವು ಮಹಿಳೆಯ ಕೆಲಸವಾಯಿತು. ನೇಗಿಲು ಮತ್ತು ದನ ಬಂದಾಗ ಕೃಷಿಯನ್ನು ಪುರುಷನಿಗೆ ವರ್ಗಾಯಿಸಲಾಯಿತು. ಅಂದರೆ ಗಂಡು– ಹೆಣ್ಣುಗಳ ಸಾಮಾಜಿಕ ಪ್ರಾಮುಖ್ಯತೆ ಬದಲಾಗುತ್ತಿದ್ದಂತೆ ಮೌಲ್ಯಗಳಲ್ಲೂ ಸ್ಥಿತ್ಯಂತರಗಳಾದವು. ಕೃಷಿಯಿಂದ ಆರಂಭಗೊಂಡ ಸಾಮಾಜಿಕ ಸಂರಚನೆಯಲ್ಲಿ ಹೆಣ್ಣು ಕೇಂದ್ರಸ್ಥಾನದಲ್ಲಿದ್ದು ಅವಳ ಮೂಲಕ ಎಲ್ಲ ಅಸ್ಮಿತೆಗಳೂ ಪ್ರಾಮುಖ್ಯ ಪಡಕೊಂಡವು.

ಕೃಷಿ ಅನ್ವೇಷಣೆಯಾಗುವ ಹಂತದಲ್ಲಿ ಮಾತೃಮೂಲವಾಗಿದ್ದ ಕುಟುಂಬ ವ್ಯವಸ್ಥೆ ಕೃಷಿ ವಿಸ್ತರಣೆ, ನಿರ್ವಹಣೆಯಲ್ಲೂ ತನ್ನ ಅಸ್ತಿತ್ವವನ್ನು ಉಳಿಸಿಕೊಂಡಿತ್ತು. ಕೃಷಿ ಬದಲಾವಣೆಯಾಗುತ್ತ, ಕಾಣೆಯಾಗುವ ಹಂತಕ್ಕೆ ಬಂದಾಗ ಕುಟುಂಬ ರಚನೆಯಲ್ಲೂ ವ್ಯತ್ಯಾಸ ಹೊಂದಿತು. ಮಾತೃ ಮೂಲವಾಗಿದ್ದ ಕುಟುಂಬಗಳು ಪಿತೃಮೂಲ ಕುಟುಂಬ ವ್ಯವಸ್ಥೆಯ ಮೌಲ್ಯಗಳಿಗೆ ರೂಪಾಂತರ ಮತ್ತು ವೇಷಾಂತರ ಹೊಂದಿ ಸಾಮಾಜಿಕ ಸಂರಚನೆಯಲ್ಲಾದ ಪಲ್ಲಟಗಳನ್ನು ಗುರುತಿಸಬಹುದು.

ಬೋಳ ಚಿತ್ತರಂಜನ್ ದಾಸ್ ಶೆಟ್ಟಿ 'ಅಳಿದುಳಿದವರು' ಕಾದಂಬರಿಯಲ್ಲಿ ಗಂಗಯನ ಗೆಳೆಯನ ಮಾತುಗಳು ಮಾತೃಮೂಲದಲ್ಲಿ ಗಂಡು ಮೌನಿಯಾದ ಆತನ ಅಸಹಾಯಕತೆಯ ಮಾತುಗಳು ಅಲ್ಲಲ್ಲಿ ದಾಖಲಾಗಿವೆ. ಗುತ್ತಿನ ಮನೆಯಿಂದ ಪ್ರತ್ಯೇಕವಾದ ರಾಧಾ ತನ್ನ ಮಗ, ಗಂಗಯನನ್ನು ನಡೆಸಿಕೊಳ್ಳುವ

ರೀತಿಯೊಂದಿಗೆ ಅವನ ಅಸಹಾಯಕತೆಯು ಅದಕ್ಕೆ ಕಾರಣವಾಗಿತ್ತು. "ಅಳಿಯ ಕಟ್ಟಿನ ಗಂಡುಗಳ ಕುಟುಂಬ ಪ್ರೇಮದ ಗುಟ್ಟು, ತಾಯಿ ತಂಗಿಯಂದಿರ ಹಗೆಯ ಮೂಲವನ್ನು ಶೋಧಿಸಿದೆ, ಅಲ್ಲಿ ಕಂಡದ್ದೇನು ನನ್ನಂಥದೇ ಕಥೆಯ ಗೋಳು" (ಬೋಳ ಚಿತ್ತರಂಜನ್ ದಾಸ್ ಶೆಟ್ಟಿ, ೧೯೯೦; ಪು. ೩೧೮) "ಯಾಕೆಂದರೆ ಅಳಿಯ ಸಂತಾನದ ಗಂಡುಗಳನ್ನು ನರ ಸತ್ತವರನ್ನಾಗಿ ಮಾಡಿದ್ದು ಅಳಿಯ ಕಟ್ಟೆಂಬುದು ಸತ್ಯ" (ಅದೇ, ಪು. ೫೧೯)

ಗಂಡು ಮಗನ ದಯನೀಯ ಸ್ಥಿತಿಯನ್ನು ದೈವದ ಮುಂದೆ ನಿವೇಧಿಸುವ ಪ್ರಸಂಗವೊಂದಿದೆ. "ದೈವವೇ ನಾನು ನಿನ್ನನ್ನು ನಂಬುತ್ತೇನೆ. ನಿನ್ನ ಒಂದು ಎಲೆ ಗಂಧ ಪ್ರಸಾದಕ್ಕಾಗಿ ಹೆಂಡತಿ ಊರಿಂದ ಇಲ್ಲಿಗೆ ಬಂದಿದ್ದೇನೆ. ನನಗೆ ಕುಟುಂಬದ ಆಸ್ತಿ, ಅಂತಸ್ತು ಒಂದೂ ಬೇಡ, ನಿನ್ನ ಒಂದೆಲೆ ಗಂಧ ಬೇಕು. ಉಣಲು ಗಂಜಿ, ಉಡಲು ಬಟ್ಟೆ ಕೊಡದ ಕುಟುಂಬದ ಮಧ್ಯೆ ನಾನು ಬಾಳಲಾರೆ. ನೀನು ಮಾಯಾವಿ ಶಕ್ತಿ ನಿನ್ನ ಮುಂದೆ ಮಾನವರ ಆಟ ನಡೆಯದು. ನೀನು ಎಲ್ಲಾ ತಿಳಿದವನು. ಒಂದೆಲೆ ಗಂಧ ಕೊಟ್ಟು ನನ್ನನ್ನು ಕಾಪಾಡು (ಅದೇ, ಪು. ೪೮೫). ತನ್ನ ಅಸಹಾಯಕತೆಯನ್ನು ವ್ಯಕ್ತ ಪಡಿಸಿದ ಗಂಡು ವಿನಯದಿಂದ ದೈವದ ಮುಂದೆ ಪ್ರಾರ್ಥಿಸುತ್ತಾನೆ. 'ದೈವವೇ ನನ್ನನ್ನು ಕಾಪಾಡು. ನನ್ನ ಕುಟುಂಬದೊಂದಿಗೆ ನಾನಿರಲಾರೆ. ಅವರ ಚಿತ್ರಹಿಂಸೆ ತಾಳಲಾರೆ' (ಅದೇ, ಪು.೪೮೫). ಎಂದು ವಿನಯಪೂರ್ವಕವಾಗಿ ಬೇಡಿಕೊಂಡರೂ ಕುಟುಂಬವನ್ನು ಒಗ್ಗೂಡಿಸುವ ದೈವ ಇದಕ್ಕೆ ಒಪ್ಪಿಕೊಳ್ಳುವುದಿಲ್ಲ. "ದೈವಕ್ಕೂ ಗಂಡು ಮಗನಿಗೂ ವಾದ ಬೆಳೆಯಿತು. ಮಗ ಅಳುತ್ತ ಬೇಡುತ್ತಾ ತಾನು ನೀರಿಡಲಾರೆ ಎನ್ನುತ್ತಾನೆ. ದೈವ ಅಧಿಕಾರದಿಂದ ಹೇಳುತ್ತದೆ ನೀನೇ ನೀರಿಡಬೇಕು, ಇಲ್ಲವಾದರೆ ಬಿಡಲಾರೆ. ದೈವದ ವಾದ ಮುಂದುವರಿಯಿತು. ಗಂಡು ಮಗ ದೈವದ ಮಾತಿಗೆ ಒಪ್ಪುವುದಿಲ್ಲ. ಊರ ಹಿರಿಯರೂ ಮಧ್ಯೆ ನ್ಯಾಯ ಮಾತಾಡಿ ದಣಿದು ಕುಳಿತರು. ಅಷ್ಟರಲ್ಲಿ ಹರಕೆಯ ಕ್ರಮದಂತೆ ಕುಟುಂಬದ ಹೆಂಗಳೆಯರು ದೈವಕ್ಕೆ ಹಾಲು ಕೊಟ್ಟರು. ದೈವ ಹಾಲು ಕುಡಿಯಲು ತನ್ನ ಬಟ್ಟಲು ತುಂಬಿದೊಡನೆ ಕುಡಿಯದೆ ಬಟ್ಟಲನ್ನು ಗಡಗಡನೆ ನಡುಗುವ ಕೈಗಳಿಂದ ಕುಣಿಸುತ್ತ, ಕಾಲ ಗಗ್ಗರದ ಗಣ, ಗಣ, ಗರ, ಗರ, ಗಜ, ಗಜ ಸದ್ದಿನೊಂದಿಗೆ ತನ್ನ ಬೆನ್ನ ಹಿಂದೆ ಕಟ್ಟಿದ ಅಗಾಧ ಗಾತ್ರದ ಅಣಿಯೊಂದಿಗೆ ಅಂಗಾತ ಧರೆಗೆ ಒರಗಿ ಮಲಗಿ ಬಿಟ್ಟಿತು. (ಅದೇ, ಪು. ೪೮೬) ದೈವ ಹಾಲು ಸ್ವೀಕರಿಸದಿದ್ದರೆ ಕುಟುಂಬಕ್ಕೆ ಉಳಿಗಾಲವಿಲ್ಲ ಹಾಲು ನೀಡುವ ಹಕ್ಕು ಹೆಣ್ಣು ಮಕ್ಕಳಿಗಾದರೆ ಹೂ ನೀರು ದೀಪ ಇಡುವ ಹಕ್ಕು ಗಂಡು ಮಕ್ಕಳಿಗೆ, ಹೆಣ್ಣಿನ ಮಾನ್ಯತೆ ಮತ್ತು ಗಂಡಿನ ಅಧಿಕಾರ ಇವೆರಡರ ಮಧ್ಯದ ತಾಕಲಾಟದಲ್ಲಿ ಅಸಹಾಯಕವಾದ ಸಂದರ್ಭ ಈ ಕುಟುಂಬ ವ್ಯವಸ್ಥೆಯಿಂದ ತೊಂದರೆಗೊಳಗಾದ ಗಂಗಯ ಗೆಳೆಯ ಶಾಮನ ಪ್ರತಿಕ್ರಿಯೆ ಮಾತೃ ಮೂಲ ಕುಟುಂಬಗಳೆಲ್ಲ ಪಿತೃ ಮೂಲಕ್ಕೆ ಪರಿವರ್ತಿತವಾದ ಸತ್ಯವನ್ನು ಶೋಧಿಸುತ್ತದೆ. ಅವನ ಪ್ರತಿಕ್ರಿಯೆ ಆಘಾತಕಾರಿಯಾದರೂ ವಾಸ್ತವವನ್ನು ಮೀರುವಂತಹುದು ಅಲ್ಲ. ಆ ಸಂದರ್ಭದಲ್ಲಿ ಶಾಮನ ಪ್ರತಿಕ್ರಿಯೆಯನ್ನು ಗಮನಿಸಬಹುದು. "ಪಂಜುರ್ಲಿ ದೈವವೇ ನಿನಗೆ ಯಾರ ಕೈ ನೀರು ಬೇಕು? ಅಳಿಯ ಸಂತಾನಿಗನ ಕೈ ನೀರು ಬೇಕೇ? ಅವನಿಗೆ ಅವನ ಹೆಂಡತಿ ಮಕ್ಕಳಿಗೆ ಉಣ್ಣಲು ಗಂಜಿ ಕೊಡುವವರು ಯಾರು? ಅವನ ಕುಟುಂಬದೊಳಗೆ ಅವನಿಗೆ ಎಷ್ಟು ಹಕ್ಕಿದೆ? ಮಾವನಿಂದ ಅಳಿಯನಿಗೆ ಎಂದಿದ್ದ ಅಧಿಕಾರ ಹಂಚಿ ಹರಿದು ಹೋದಾಗ ಮನೆ ದೈವವಾದ ನೀನು ಎಲ್ಲಿದ್ದಿ? ಅಂದು ತಾಯಿಯಿಂದ ಮಕ್ಕಳಿಗೆ ಎಂಬ

ಅಧಿಕಾರ ಬದಲಾದಾಗ ನೀನು ನಿನ್ನ ಹಾಲು, ನೀರು ಹರಕೆಯ ಚಿಂತೆ ಮಾಡಬೇಕಿತ್ತು. ಅಳಿದುಳಿದ ಸಂಪತ್ತಿನ ಬಲದಿಂದ ಇನ್ನೂ ನಿನಗೆ ಹಾಲು ನೀರು ಕೊಟ್ಟು ಪೂಜಿಸುತ್ತಾನಲ್ಲ, ನೀನವನಿಗೆ ಏನು ಕೊಟ್ಟಿರುವಿ? ಮಾವನಿಗೆ ಅಳಿಯನಿಂದ, ಅಳಿಯನಿಗೆ ಅವನ ಅಳಿಯನಿಂದ, ಕುಟುಂಬದ ಒದೆ ಕೊಡುತ್ತ ಬಂದಿರುವೆಯಲ್ಲ, ನಿನಗೆ ನೀರು ಬೇಕೇ? ಅಳಿಯ ಸಂತಾನಿಗನ ಮೇಲೆ ಇಷ್ಟೆಲ್ಲಾ ಕಥೆ ಕಾಳಗ ನಡೆದಾಗಲೂ ನೀನು ಬೆಕ್ಕಿನಂತೆ ಕಣ್ಮುಚ್ಚಿ ಹಾಲು ಕುಡಿಯುತ್ತ ಬಂದಿರುವೆಯಲ್ಲ, ಹೇಳು ನಿನ್ನ ಕಾರ್ಣಿಕವೇನು? ಅಳಿಯ ಸಂತಾನದ ಕುಟುಂಬದ ಹಿರಿಯನಿಗೆ ಬಾಯಿಗೆ ನೀರಿಲ್ಲ, ನಿನಗೆ ನೀರು ಬೇಕೇ? ನಿನಗೆ ಹಾಲು, ನೀರು ಇಡುವ ಅಗತ್ಯ ನಮಗಿಲ್ಲ, ಅಳಿಯ ಕಟ್ಟಿನ ಪಾರಂಪರ್ಯ ನಿನಗೆ ತಿಳಿದಿದೆ ಎಂದಾದರೆ ಸರಾಗವಾಗಿ ಎದ್ದು ಸದ್ದಿಲ್ಲದೆ ಹಾಲು ಸ್ವೀಕರಿಸು, ಕಾಲ ಬದಲಾದಂತೆ ನೀನೂ ಬದಲಾಗು, ನೀರಿಟ್ಟವರ ಕೈ ನೀರು ಸ್ವೀಕರಿಸು. ಎದ್ದು ಹಾಲು ಸ್ವೀಕರಿಸು" (ಅದೇ ಪು. ೪೮೭)

ಮಾತೃ ಮೂಲ ಪಿತೃ ಮೂಲದೆಡೆಗೆ ಸ್ಥಿತ್ಯಂತರ ಹೊಂದಲು ಕಾರಣವಾದ ಅಂಶಗಳನ್ನು ದಾಖಲಿಸುವುದರೊಂದಿಗೆ ಪ್ರತೀಕ ಮುಂದಾಳುವಾಗಿ ಇದ್ದ ಗಂಡು ಮಕ್ಕಳು ಮತ್ತು ಹೆಣ್ಣು ಮಕ್ಕಳಲ್ಲಿ ಭೂಮಿಯ ಒಡೆತನ ಮತ್ತು ಅಧಿಕಾರವನ್ನು ಹೊಂದಿಯೂ ಒದಗುವ ಸಂಘರ್ಷ ಮಹತ್ವದ್ದೆನಿಸುತ್ತದೆ.

ಒಂದು ಕಾಲಕ್ಕೆ ಗಂಡು ಮಕ್ಕಳು ಕುಟುಂಬಕ್ಕೆ 'ತಮೆರಿ'ಯಾಗಿ ನಿಂತು ಕುಟುಂಬವನ್ನು ಪೋಷಿಸಬೇಕು ಎಂಬ ಮೌಲ್ಯವಿತ್ತು. ತನ್ನ ವೈಯಕ್ತಿಕ ಆಸೆ ಆಕಾಂಕ್ಷೆಗಳಿಗಿಂತ ಕುಟುಂಬದ ಪೋಷಣೆಯೇ ಮಹತ್ವದಾಗಿತ್ತು. ಆ ವ್ಯವಸ್ಥೆಯನ್ನು ಅರಗಿಸಿಕೊಂಡು ಬಾಳುವವರಿಗೆ ಕಾಲಾಂತರದಲ್ಲಿ ಆದ ಪಲ್ಲಟ ಅರಗಿಸಿಕೊಳ್ಳಲು ಸುಲಭ ಸಾಧ್ಯವಾಗಿರಲಿಲ್ಲ. ಭೂಮಿಯ ಒಡೆತನ ಮತ್ತು ಅಧಿಕಾರಗಳು ಅದಲು ಬದಲಾದಾಗ ಕುಟುಂಬ ವ್ಯವಸ್ಥೆ ಅವಿಭಕ್ತತೆಯಿಂದ ವಿಭಕ್ತತೆಯೆಡೆಗೆ ಸಾಗುತ್ತ ಬಂದುದೂ ಕೂಡಾ ಪ್ರಮುಖ ಕಾರಣವಾಗಿತ್ತು. ಮೌಲ್ಯಗಳ ಪಲ್ಲಟ ಮತ್ತು ಕುಟುಂಬದ ಪರಿಕಲ್ಪನೆಯೂ ಬದಲಾದುದು ಪ್ರಮುಖ ಕಾರಣವಾಗಿತ್ತು.

ಮಾತೃ ಮೂಲದಿಂದ ಪಿತೃ ಮೂಲದೆಡೆಗೆ ಬದಲಾಗುವಾಗ ಗಂಡು ತನ್ನ ಸ್ವಾತಂತ್ರವನ್ನು ಬಯಸಿ ಸ್ವಾಯತ್ತಾವಾದಾಗ ಬಯಸಿದುದು ಒಂದು ಕ್ರಮವಾದರೆ ಹೆಣ್ಣು ಮಕ್ಕಳು ಗಂಡಿನ ಯಜಮಾನ್ಯ ಮತ್ತು ಪ್ರಾಯೋಜನಿಕ ದೃಷ್ಟಿಯನ್ನು ನಿರಾಕರಿಸಿದುದು ಇನ್ನೊಂದು ಕಾರಣವಾಗಿತ್ತು. ತನಗೂ ಭೂಮಿಯಲ್ಲಿ ಒಡೆತನ ದಕ್ಕಬೇಕು ಎಂದು ಬಯಸಿ ಭೂಮಿಯ ಹಂಚಿಕೆಯಲ್ಲಿ ಪಾಲು ಪಡೆದಂತೆ, ಕುಟುಂಬದ ಉಳಿದ ಜವಾಬ್ದಾರಿಗಳಿಂದ ಗಂಡು ಮಕ್ಕಳು ಹೊರಗುಳಿದರು. ಕುಟುಂಬಕ್ಕೆ ಸೇರಿಸಿ ರಚನೆಯಾದ ಭೂತರಾಧನೆ, ನಾಗಾರಾಧನೆ ನಿರ್ವಹಣೆಯ ಖರ್ಚು ವೆಚ್ಚಗಳು ಹೆಣ್ಣು ಮಕ್ಕಳ ಪಾಲಿಗಾದವು. "ಆಸ್ತಿ ಭೂಮಿ ಗಂಡಿಗೆ ಭೂತ, ನಾಗ ಹೆಣ್ಣಿಗೆ" ಎನ್ನುವುದು ರೂಢಿಯ ಮಾತಾಯಿತು. ಗುತ್ತಿನ ಮನೆಗಳಲ್ಲಿ ಎಲ್ಲರೂ ಒಂದು ಮುಷ್ಠಿಯಾಗಿ ಅವಿಭಕ್ತರಾಗಿ ಬಾಳುತ್ತಿದ್ದವರು ವಿಭಕ್ತರಾದರು. ಮದುವೆಯಾಗಿ ಗಂಡನ ಮನೆಗೆ ಬಂದ ಹೆಣ್ಣು ಮರಳಿ ತವರಿಗೆ ತೆರಳುವುದು ಅವಮಾನವೆಂದಾಯ್ತು. ಪರಿಣಾಮ ಗುತ್ತಿನ ಮನೆಗಳಲ್ಲೂ ಮದುವೆಯಾಗಿ ಬಂದ ಹೊರಗಿನ ಹೆಣ್ಣು ಮಕ್ಕಳ ಕಾರುಬಾರುಗಳೇ ಹೆಚ್ಚಾದವು. ವಿಭಕ್ತತೆ ಉಂಟಾಗುವಾಗಲೂ ಅವರು

ಪ್ರತ್ಯೇಕ ಒಲೆ ಹೂಡಿ ಅಖಂಡವಾಗಿದ್ದ ಗುತ್ತಿನ ಮನೆಯನ್ನು ತುಂಡು ತುಂಡಾಗಿಸಿದರು. ಒಂದು ಒಲೆ ಕಾಣೆಯಾಗಿ ಹತ್ತಾರು ಒಲೆ ಹಚ್ಚುವುದಕ್ಕೆ ಸಾಧ್ಯವಾಯಿತು. ಗುತ್ತಿನಿಂದ ಪ್ರತ್ಯೇಕವಾಗಿ ತೆರಳಿದ ಹೆಣ್ಣು ಮಕ್ಕಳೂ ಭೂಮಿಯಲ್ಲಿ ಆಸ್ತಿಯಲ್ಲಿ ಪಾಲು ಪಡೆದರೂ, ತಮ್ಮ ಮನೆಯೊಳಗೆ ಮಕ್ಕಳ ಕಾಲಕ್ಕಾಗುವಾಗ ಇನ್ನಷ್ಟು ಒಲೆಗಳನ್ನು ಹಚ್ಚಿಕೊಂಡು ಪ್ರತ್ಯೇಕವಾದರು. ತಾಯಿ– ಮಕ್ಕಳು (ಹೆಣ್ಣು ಮಕ್ಕಳು ಕೂಡಾ) ಭೂಮಿಗಾಗಿಯೂ ಜತೆಯಾಗಿ ಬಾಳಲು ಸಿದ್ಧರಿರಲಿಲ್ಲ. ಚೂರು ಚೂರಾಗಿ ಹರಿದೆಸೆದ ಹಾಳೆಯಂತೆ ಕುಟುಂಬವೇ ವಿಚ್ಛಿದ್ರಗೊಂಡಿತು. ಈ ಎರಡೂ ಪ್ರಕ್ರಿಯೆಗಳಿಗೆ ಬೋಳ ಚಿತ್ತರಂಜನ ಶೆಟ್ಟಿಯವರ ಕಾದಂಬರಿಯಲ್ಲಿ ವಿವರಣೆಗಳು ಲಭ್ಯವಾಗುತ್ತದೆ.

ಮಾತೃ ಮೂಲ ಸಮುದಾಯಗಳ ಮೌಲ್ಯಕ್ಕಿಂತ ಕೊಟ್ಟ ಹೆಣ್ಣು ಕುಲಕ್ಕೆ ಹೊರಗೆ ಎಂದಿಗೂ ಅಲ್ಲ ಅವಳು ಯಾವಾಗಲೂ ತಾನು ಬಯಸಿದಾಗ ತನ್ನ ತವರಿಗೆ ಮರಳಿ ಬರಬಹುದು. ಅವಳ ಭೂಮಿಯ ಹಕ್ಕು ತವರಿನಲ್ಲೇ ಇದೆ. ಗುತ್ತಿನ ಮನೆಗಳಲ್ಲೇ ಪಿತೃ ಪ್ರಧಾನ ಕುಟುಂಬದ ಮೌಲ್ಯಗಳು ಮೊದಲಡಿ ಇಟ್ಟವು. 'ಅಳಿದುಳಿದವರು' ಕಾದಂಬರಿಯಲ್ಲಿ ಬೈಲಂಗಳ ಗುತ್ತಿನಲ್ಲಿ ಗುತ್ತಿನಾರ್ ಜತ್ತಪ್ಪ ಶೆಟ್ಟರ ಸಹೋದರ ವೀರಪ್ಪ ತನ್ನ ದುಡಿಮೆ ಪ್ರಾಮಾಣಿಕತೆಯಿಂದ ಗುತ್ತನ್ನು ರಕ್ಷಣೆ ಮಾಡುತ್ತ ಗುತ್ತಿಗೆ ಮೂಗುತಿಯಂತೆ ಬೆಳೆಯುತ್ತಿದ್ದನು. ಗೌರಿಯ ಸಹೋದರ ತೌಡ ಶೆಟ್ಟಿ ಗೌರಿಯ ಗಂಡ ಗುತ್ತಿನಾರ್ ಅಲ್ಲ. ಸಾಮಾನ್ಯ ಕೃಷಿಕನಂತೆ ಲಂಗೋಟಿ ಉಟ್ಟು ಕೂಲಿಯಾಳಿನಂತೆ ಭತ್ತದ ಮುಡಿ ಕಟ್ಟುವುದನ್ನು ಕಂಡು ತನ್ನ ತಂಗಿಯನ್ನು ಬಾಳಿಸುವ ಯೋಗ್ಯತೆಯಿಲ್ಲದವನೆಂದು ಮರಳಿ ತವರಿಗೆ ಕರೆತಂದು ಬೇರೆ ಮದುವೆಗೆ ಸಿದ್ಧತೆ ಮಾಡುತ್ತಾರೆ. ಕುಟುಂಬದವರೇ ಆದ ವಿಟ್ಟು– ಗೋಪರು ತೌಡ ಶೆಟ್ಟಿಯ ಬೈ ಹುಲ್ಲಿನ ಮುಟ್ಟೆಗೆ ಬೆಂಕಿ ಹಾಕಿ ಗೌರಿಯನ್ನು ಬೈಲಂಗಳ ಗುತ್ತಿಗೆ ಕರೆತರುತ್ತಾರೆ. ಆಗ ವೀರಪ್ಪ ಗೌರಿಯರನ್ನು ಅವಳ ತವರು ಮನೆಯಾದ ತುಪ್ಪೆ ಗುತ್ತಿಗೆ ಆಸ್ತಿಯ ಹಕ್ಕಿನಂತೆ, ವೀರಪ್ಪನ ಅಂತಸ್ತಿಗಾಗಿ ಪ್ರತ್ಯೇಕ ಗುತ್ತಿನ ಮನೆಯೊಂದನ್ನು ಕಟ್ಟಿಸಿ ಸಮಾನತೆ ತೋರುತ್ತಾರೆ. ತೌಡ ಶೆಟ್ಟಿಹೇಳುವಂತೆ 'ಕಾಂತಾವರದ ಊರಲ್ಲೇ ಬೈಲಂಗಳ ಗುತ್ತಿನ ಭೂಮಿಯೂ ಇರಬೇಕಲ್ಲ? ವೀರಪ್ಪ ಗೌರಿಯರು ಅಲ್ಲಿ ವಾಸ್ತವ್ಯ ಹೂಡಲಿ, ನನ್ನಿಂದೇನೂ ಅಡ್ಡಿ ಇಲ್ಲ, ಭಾವ, ನನ್ನ ಉದ್ದೇಶ ವೀರಪ್ಪನನ್ನು ನಿಮ್ಮಿಂದ ಅಥವಾ ಕುಟುಂಬದಿಂದ ದೂರ ಮಾಡುವುದಲ್ಲ. ನನಗಿರುವವಳು ಒಬ್ಬಳೇ ತಂಗಿ, ಅವಳ ಗಂಡನೂ ಸ್ವತಂತ್ರ ಬಾಳುವೆ ನಡೆಸಬೇಕು ಅವನನ್ನು "ಗುತ್ತಿನಾರ್" ಎಂದೇ ಜನರು ಗುರುತಿಸಬೇಕು. ಅವರಿಗೂ ಒಂದು ಗುತ್ತು ಕಟ್ಟಿಕೊಡಬೇಕೆಂದು ನನ್ನ ಆಶೆ. ನೀವು ನಿಮ್ಮ ತಮ್ಮನ ಏಳಿಗೆಗೆ ತಡೆ ಒಡ್ಡುತ್ತೀರಾ' (ಬೋಳ ಚಿತ್ತರಂಜನ್ ದಾಸ್ ಶೆಟ್ಟಿ ೧೯೯೦, ಪು.೩೪೧) ಗಂಡನ ಅಂತಸ್ತಿನಿಂದ ಹೆಣ್ಣಿನ ಅಂತಸ್ತನ್ನು ಅಳೆಯುವ ಮನೋಧರ್ಮ ಮಾತ್ರವಲ್ಲ, ತನ್ನ ತವರಿನಲ್ಲಿರುವ ಭೂಮಿಯ ಹಕ್ಕಿಗಿಂತ ಗಂಡನ ಮನೆಯ ಭೂಮಿಯ ಹಕ್ಕು ಪಡೆಯುವುದು ಶ್ರೇಷ್ಠವೆಂಬ ಅಂತಸ್ತು ಇಲ್ಲಿದೆ. ಹೆಣ್ಣಿನ ಸ್ವಂತಿಕೆಯನ್ನು ಬದಿಗೊತ್ತಿ ಗಂಡಿನ ಮೂಲಕ ಗುರುತಿಸಿಕೊಳ್ಳುವ ಸಮಾಜದ ಇರಾದೆಯನ್ನು ಅರ್ಥೈಸಿಕೊಳ್ಳಬೇಕು. ಈ ಸಂದರ್ಭದ ಲಾಭವನ್ನು ಉಳಿದ ಬಂಧು ಬಾಂಧವರು ಹೇಗೆ ಪಡಕೊಳ್ಳುತ್ತಾರೆ ಎನ್ನುವುದೂ ಮುಖ್ಯ. ಗುತ್ತಿನಾರ್ ಜತ್ತಪ್ಪ ಶೆಟ್ರ ಹೆಂಡತಿ ಕುಸುಮಳ ಅಣ್ಣನಾಗಪ್ಪ ಶೇನವರು ಆಗಾಗ ಬೈಲಂಗಳ ಗುತ್ತಿಗೆ ಬಂದು ತಂಗಿಯ ಕಿವಿಯೂದುತ್ತಾರೆ.

"ಕುಸುಮಾ, ನಿನ್ನ ಗಂಡನ ದಾನ ಧರ್ಮದ ಗುಣವನ್ನು ನಿಲ್ಲಿಸಲು ಹೇಳು. ಅವರು ಕಂಬಳ, ಕೋಳಿ ಅಂಕವೆಂದು ಮರ್ಯಾದೆಯಿಂದ ಬಾಳುವ ಲಕ್ಷಣ ಕಾಣುವುದಿಲ್ಲ. ನಿನಗೆ ಹದಿಮೂರು ಜನ ಮಕ್ಕಳಿದ್ದಾರೆ, ಒಂಭತ್ತು ಜನ ಗಂಡು ಮಕ್ಕಳಿದ್ದಾರೆ ನಾಲ್ಕು ಜನ ಹೆಣ್ಣು ಮಕ್ಕಳು ಇದ್ದಾರೆ. ನಾಳೆ ನೀನು ಬರೀ ಕೈಯ್ಯಲ್ಲಿ ಕುಬೇರಿಗೆ ಬಂದರೆ ನಿನ್ನ ಮಕ್ಕಳ ಗತಿ ಏನು"? (ಅದೇ, ಪು. ೩೪೨)

ಕುಟುಂಬದ ಹೊರಗಿನ ಹೆಣ್ಣಿಗೆ ಮನೆಯೊಳಗಿನ ಆಡಳಿತ ಗುತ್ತಿನಾರ್‌ನ ಹೆಂಡತಿಯಾಗಿ ಲಭಿಸಿದಾಗ ಅವಳು ಕುಟುಂಬಿಕರನ್ನು ಹೊಟ್ಟೆ ಬಟ್ಟೆಗೆ ಕೊಡದೆ ದುಡಿಸಿದಳು. "ಕುಟುಂಬಿಕರ ಹೊಟ್ಟೆಗೆ ಹೊಡೆದು ಬಚ್ಚಿಟ್ಟ ಗಂಟನ್ನು ಅಣ್ಣ ಶೇನವರು ಬಂದಾಗಲೆಲ್ಲ ತವರಿಗೆ ಕಳುಹಿಸಿ ಕೊಡಲಾರಂಭಿಸಿದಳು." (ಅದೇ, ಪು. ೩೪೩). ಗುತ್ತಿನ ಆಡಳಿತದಲ್ಲಾದ ಪರಿವರ್ತನೆ ಗುತ್ತನ್ನು ವಿನಾಶಕ್ಕೆ ಒಯ್ಯುತ್ತದೆ ಎಂಬುವುದಕ್ಕಾಗಿ ದುರ್ಬಲ ಕವರಿನವರು ವಿಟ್ಟು ಗೋಪ, ವೀರಪ್ಪರನ್ನು ಕರೆಸಿ ದೂರು ಕೊಟ್ಟರು ಪ್ರಯೋಜನವಾಗಲಿಲ್ಲ. ಕುಟುಂಬಿಕರ ಶೋಷಣೆ ಹೆಚ್ಚುತ್ತಾ ಹೋಯಿತು. "ಗುತ್ತಿನಾರ್ ಆತ್ಮೀಯ ಭಾವ ಶೇನವರು ಬೈಲಂಗಳ ಗುತ್ತಿಗೆ ಬಂದಷ್ಟು ಸಲ ಗುತ್ತಿನಾರರ ಕಿವಿಯಲ್ಲಿ ಪಿಸುಗುಡುತ್ತಾರೆ. "ಭಾವ ನಿಮಗೆ ಹದಿಮೂರು ಮಕ್ಕಳು, ನನ್ನ ಕುಟುಂಬವನ್ನು ನಡುದಾರಿಯಲ್ಲಿ ಕೈ ಬಿಡಬೇಡಿ" (ಅದೇ, ಪು. ೩೪೪) ಮಾತ್ರ ಮೂಲ ಕುಟುಂಬದ ಯಜಮಾನನಾಗಿ ತಮೆರಿಯಾಗಿ ನಿಂತ ಗುತ್ತಿನಾರ್‌ರಿಗೆ ಕುಟುಂಬಕ್ಕಿಂತ ತನ್ನ ಸ್ವಂತ ಕರುಳ ಬಳ್ಳಿಗಳಾದ ಮಕ್ಕಳು ಮುಖ್ಯವಾದಾಗ ತೀರಾ ಸ್ವಾರ್ಥಿಗಳಾಗುತ್ತಾರೆ. ಕುಟುಂಬವನ್ನು ಒಳಗೊಳ್ಳುವ ಸಮಗ್ರತೆಯ ನೋಟವಿಲ್ಲದ ಇಂತಹ ಸಣ್ಣ ತನಗಳು ಸ್ವಾರ್ಥ ದುರಾಸೆಗಳಿಗೆ ಮೂಲ ಕಾರಣವಾಗುತ್ತದೆ. ಕುಟುಂಬ ಒಡೆಯಲು ಮಾತ್ರ ಮೂಲದ ಮೌಲ್ಯಗಳು ಹಿಂದಕ್ಕೆ ಸರಿಯಲೂ ಕಾರಣವಾಗುತ್ತದೆ. "ಶಾಮನೇ ಗಂಗಯನಲ್ಲಿ ಅಳಿಯ ಕಟ್ಟಿನ ಗಂಡುಗಳ ಕುಟುಂಬ ಪ್ರೇಮದ ಗುಟ್ಟು, ತಾಯಿ ತಂಗಿಯಂದಿರ ಹಗೆಯ ಮೂಲವನ್ನು ಶೋಧಿಸಿದೆ" (ಅದೇ, ಪು. ೫೧೮). 'ಅಳಿಯ ಸಂತಾನದ ಗಂಡುಗಳನ್ನು ನರ ಸತ್ತವರ ಹಾಗೆ ಮಾಡಿದ್ದು ಅಳಿಯ ಕಟ್ಟೆ ಎಂದು ಸತ್ಯ' (ಅದೇ, ಪು. ೫೪೯) ಕುಟುಂಬದ ಮೇಲಿನ ಪ್ರೇಮ ಯಾಕೆ ಬದಲಾಯಿತು ಎಂದು ಪ್ರಶ್ನಿಸುವ ಗಂಗಯ ಅದರ ಹಿನ್ನೆಲೆಯನ್ನು ವಿವರಿಸುತ್ತಾನೆ. 'ಎಲ್ಲಿ ಹೋದರು ನನ್ನ ಆ ತಂಗಿಯಂದಿರು? ತಾನು ದುಡಿದು ಬಂದಾಗ ಓಡೋಡಿ ಬಂದು ಬಟ್ಟಲು ಇಟ್ಟು ಬಡಿಸುತ್ತಿದ್ದವರು. ತನಗೆ ಹಸಿವಿಲ್ಲ ಎಂದಾಗ ಕಳವಳದ ಕಣ್ಣೀರು ತೋರಿಸುತ್ತಿದ್ದವರು. ಅವರಿಂದು ನನ್ನ ಬಳಿ ಇಲ್ಲವೇ? ಇದ್ದಾರೆ, ಸ್ವಾರ್ಥ ಎಂಬ ಭೂತ ಅವರೊಳಗೆ ಹೊಕ್ಕಿದೆ. ಅವರಿಗಿಂದು ನಾನು ಬೇಡವಾಗಿದ್ದೇನೆ, ನೀನು ದುಡಿದು ಗಳಿಸಿದ ಅನ್ನ ಉಂಡು ಬೆಳೆದವರು ಅಣ್ಣಾ ಊಟ ಮಾಡುತ್ತೀಯಾ? ಮಾಡು ಎಂದು ಹಂಗಿನ ಅನ್ನ ಕೊಡಲು ನೋಡುತ್ತಿದ್ದಾರಲ್ಲ. (ಅದೇ, ಪು. ೫೨೮). ಕುಟುಂಬದ ಒಳಗಿನ ಆತ್ಮೀಯ ಭಾಂದವ್ಯಗಳು ವ್ಯಾವಹಾರಿಕತೆಯೆಡೆಗೆ ತಿರುಗಿ, ದುಡ್ಡಿನ ಲೆಕ್ಕಾಚಾರಗಳು ಸ್ವಾರ್ಥ ದುರಾಸೆಗಳೇ ಮುನ್ನೆಲೆಗೆ ಬರುತ್ತದೆ. ಈ ರೀತಿಯ ಮೌಲ್ಯ ಚಿಂತನೆಗೆ ಮುಖ್ಯ ಕಾರಣ ಕೃಷಿ ಸಂಸ್ಕೃತಿಯಲ್ಲಿ ಆದ ಪಲ್ಲಟವೂ ಮುಖ್ಯ ಕಾರಣವಾಗಿದೆ. ಕುಟುಂಬದ ಚಿಂತನೆಯಲ್ಲಾದ ಪರಿವರ್ತನೆ, ಕುಟುಂಬ ಸ್ವರೂಪದಲ್ಲಾದ ಸ್ಥಿತ್ಯಂತರದೊಂದಿಗೆ ಪಿತೃಪ್ರಧಾನ ಸಂಸ್ಕೃತಿಯ ಮೌಲ್ಯಗಳು ಮುನ್ನೆಲೆಗೆ ಬಂದವು.

ನಾ. ಮೊಗಸಾಲೆಯವರ 'ಉಲ್ಲಂಘನೆ' ಯಲ್ಲಿ ಸಾಂತೇರ್ ಗುತ್ತಿನ ಕರುಳಕುಡಿಗಳಾದ ಪ್ರಜ್ಞಾ ಮತ್ತು ಪ್ರಶಾಂತ್ ನಡೆದುಕೊಳ್ಳುವ ರೀತಿಯಲ್ಲಿ ಅವರ ಆಲೋಚನೆ ಮತ್ತು ನಡವಳಿಕೆಯಲ್ಲಿ ಭಿನ್ನತೆಯನ್ನು ಗಮನಿಸಬಹುದು. ಅಂಬಕ್ಕೆಯ ಮೊಮ್ಮಗಳಾದ ಮುಂಬೈಯಲ್ಲಿ ಹುಟ್ಟಿ ಬೆಳೆದವಳಾಗಿ ವೈದ್ಯಕೀಯ ಸೇವೆಯಲ್ಲಿದ್ದರೂ ಡಾ। ಪ್ರಜ್ಞಾ ಸಾಂತೇರ್ ತನ್ನ ಕುಟುಂಬದ ಮನೆಯ ಮೂಲ ಬೇರುಗಳ ಬಗ್ಗೆ ತಿಳಿಯುತ್ತ ಅದನ್ನು ಉಳಿಸಿಕೊಳ್ಳುವ ಪ್ರಯತ್ನ ಮಾಡುತ್ತಾಳೆ. ಕೃಷಿ ಮತ್ತು ಕೃಷಿ ಭೂಮಿಯ ಬಗೆಗೆ ಅವಳ ಒಲವು ಊರಿನಲ್ಲಿರುವ ಕುಟುಂಬದ ಹಿರಿಯರ ಗುತ್ತಿನ ಮನೆಯನ್ನು ಉಳಿಸಿಕೊಳ್ಳಬೇಕೆಂಬ ತುಡಿತವಿದೆ. ಅದು ಆಕೆಗೆ ಹಣ ತರುವ ಬಹಳಷ್ಟು ಆದಾಯವಿರುವ ಅಸ್ತಿಯಾಗಿ ಗೋಚರವಾಗುವುದಿಲ್ಲ. ಬದಲಾಗಿ ತನ್ನ ಹಿರಿಯರು ಬದುಕಿ ಬಾಳಿದ ಮನೆಯಾಗಿ ಅಭಿಮಾನ, ಹೆಮ್ಮೆ, ಗೌರವಗಳಿಗೆ ಕಾರಣವಾಗುತ್ತದೆ. 'ಭೂಮಿ' ಆಕೆಯ ಪಾಲಿಗೆ ಅಸ್ತಿ, ಸಂಪತ್ತು ಎಂಬ ಪರಿಭಾಷೆಯಿಲ್ಲದೆ ತನ್ನ ನೆಲೆಯನ್ನು ತಿಳಿಯುವ ಪ್ರಯತ್ನ ಮಾತ್ರ ಆಗಿದೆ. ಅಷ್ಟೇ ಅಲ್ಲದೆ ಮಾತೃ ಮೂಲ ಸಮುದಾಯಗಳಲ್ಲಿ ಆಸ್ತಿಯ ಪೂರ್ಣ ಒಡೆತನ ಹೆಣ್ಣಿನ ಹೆಸರಿನಲ್ಲಿರುತ್ತದೆ. ಸಾಂತೇರ್ ಗುತ್ತಿನ ಯಜಮಾನ್ತಿಯಾಗಲಿರುವವರು ಈಗ ಅಂಬಕ್ಕೆಯ ಮಗಳು ಶಾರದಾ ರಮಾನಂದ ದಂಪತಿಯ ಪುತ್ರಿ ಡಾ। ಪ್ರಜ್ಞಾ ಸಾಂತೇರ್ ಸೂಕ್ಷ್ಮ ಸಹಜವಾಗಿಯೇ ಅರ್ಹರು. ಪ್ರಜ್ಞಾ ತನ್ನ ಅಧಿಕಾರದ ಹಕ್ಕಿನಿಂದ ಅದನ್ನು ಸಾಬೀತುಪಡಿಸದೆ ಭೂಮಿ ಮತ್ತು ಕೃಷಿಯ ಮಹತ್ವವನ್ನು ತನಗೆ ಒಡನಾಡಿಯಾಗಿ ಸಿಕ್ಕ ಗೆಳತಿ ಶ್ವೇತಾಳ ಅಣ್ಣ ಶಾಂತಿರಾಜನಿಂದ ಪಡೆದ ಸಲಹೆ ಸೂಚನೆ ತಿಳುವಳಿಕೆಗಳಿಂದ ತಿಳಿಯುತ್ತಾಳೆ. ಮುಂಬೈಯಲ್ಲಿ ಹುಟ್ಟಿ ಬೆಳೆದವಳಾದರೂ ಮರಳಿ ಒಂಭತ್ತು ಕೆರೆ ಗ್ರಾಮಕ್ಕೆ ಕಾಲಿಡುವಾಗ ಆಕೆಗೆ ವೈದ್ಯಕೀಯ ಜಗತ್ತು ಕೂಗಿ ಕರೆದರೂ ದಂತ ವೈದ್ಯಕೀಯ ವಿದ್ಯಾರ್ಥಿಯಾಗಿ ತನ್ನ ಅಸ್ಮಿತೆಯನ್ನು ಕಾಪಿಡುವ ಪ್ರಯತ್ನ ಮಾಡುತ್ತಾಳೆ. ಎಲ್ಲರೂ ಹಳ್ಳಿಯನ್ನು ಬಿಟ್ಟು ಪಟ್ಟಣಕ್ಕೆ ತೆರಳಿದರೆ ಆಕೆ ಪಟ್ಟಣದಿಂದ ಹಳ್ಳಿಗೆ ಮರಳುತ್ತಾಳೆ. ಕೃಷಿ ಜಗತ್ತಿಗೆ ಹಿಂತಿರುಗುವ ಆಕೆ ಶ್ರಮ ಮೂಲ ಸಂಸ್ಕೃತಿಯೆಡೆಗೆ ಸಾಗುತ್ತಾಳೆ. ಭೂಮಿಯ ಒಡೆತನವು ತನಗೆ ದಕ್ಕುವುದೆಂದಲ್ಲಿ ತನ್ನ ಬೇರಿನ ಮೇಲಿನ ವ್ಯಾಮೋಹದಿಂದ ಆಕೆ ಮರಳಿ ಊರಿನೆಡೆಗೆ ಮುಖ ಮಾಡುತ್ತಾಳೆ.

ಸಾಂತೇರ್ ಗುತ್ತಿನ ಕರುಳ ಕುಡಿಯೇ ಆದ ಅಂಬಕ್ಕೆಯ ಮಗ ಸುಂದರನ ಮಗ ಪ್ರಶಾಂತ್ ತನ್ನ ಮೂಲದ ಗುತ್ತಿನ ಮನೆಯನ್ನು ಭೂಮಿಯನ್ನು ನೋಡುವ ದೃಷ್ಟಿಕೋನ ಬೇರೆಯೇ ಆಗಿದೆ. ಪ್ರಜ್ಞಾ ಮತ್ತು ಪ್ರಶಾಂತ್ ಇಂದಿನ ತಲೆಮಾರಿನ ಪ್ರತಿನಿಧಿಗಳಾಗಿ ಇವರಿಬ್ಬರೂ ಪ್ರತಿಕ್ರಿಯಿಸುವ ರೀತಿ ಪರಸ್ಪರ ವಿಭಿನ್ನವಾದುದು. ಪ್ರಜ್ಞಾಳಿಗೆ ಕೃಷಿ ಸಂಸ್ಕೃತಿಯ ಮಹತ್ವ ತನಗೆ ತಿಳಿಯದಿದ್ದರೂ ತನ್ನ ಸಾಹಚರ್ಯಕ್ಕೆ ಸಿಕ್ಕವರ ಸಹವಾಸದಿಂದ ಮರಳಿ ಕೃಷಿಗೆ ಬರಬೇಕಾದ ಮಹತ್ವವನ್ನು ಕಂಡುಕೊಳ್ಳುತ್ತಾಳೆ. ತನ್ನ ಹಿರಿಯರು ಬಾಳಿ ಬದುಕಿದ ಪರಂಪರೆಯ ಬಗೆಗೆ ಒಲವು ಅದರ ಮಹತ್ವವನ್ನು ತಿಳಿಯುತ್ತಾಳೆ. ಗೆಳೆಯ ಶಾಂತಿರಾಜನೂ ಆಧುನಿಕ ಶಿಕ್ಷಣವನ್ನು ಪಡೆದು ಮರಳಿ ಕೃಷಿಗೆ ಮರಳಿರುವುದೂ ಅವಳಿಗೆ ಪ್ರೇರಣೆಯಾಗಿ ಬಿಡುತ್ತದೆ. ಕೈಕಾಲಿಗೆ ಕೆಸರು ತಾಗಬಾರದು, ಶ್ರಮ ಬೇಡ ಎನ್ನದೆ, ದೈಹಿಕ ಶ್ರಮವನ್ನು ನಿರಾಕರಿಸದೆ ಅದರ ಮಹತ್ವವನ್ನು ಅರ್ಥೈಸಿಕೊಳ್ಳುತ್ತಾರೆ. ಅವರಿಬ್ಬರ ನಡುವೆ ನಡೆಯುವ ಚರ್ಚೆ ಕೃಷಿಯ ಅವಶ್ಯಕತೆ ಮತ್ತು ಪರಂಪರೆಯ ಮಹತ್ವವನ್ನು ನಿವಾರಿಸುತ್ತದೆ. ಒಂದೇ ಕುಟುಂಬದ ಕರುಳ ಕುಡಿಗಳಾದರೂ ಪ್ರಶಾಂತ್‌ನ ದೃಷ್ಟಿಕೋನ ಇಂದಿನ

ಬಹುಸಂಖ್ಯಾತರ ದೃಷ್ಟಿಕೋನವೇ ಆಗಿದೆ. ಎಲ್ಲವನ್ನು ಪ್ರಾಯೋಜನಿಕ ದೃಷ್ಟಿಯಿಂದ ನೋಡುವ ಅದರ ಮೌಲ್ಯವನ್ನು ಹಣದ ಮೂಲಕ ಅಳೆಯುತ್ತಾನೆ. ತನ್ನ ಗೆಳೆಯನನ್ನು ಹಳ್ಳಿಗೆ ಕರೆತರುವ ಉದ್ದೇಶವೂ ನೇರವಾದುದಲ್ಲ. ತಾನು ಕೆಲಸ ಮಾಡುವ ಕಂಪೆನಿಯಾದ ಮೆಹ್ತಾ ಎಂಡ್ ಮೆಹ್ತಾದ ಬಾಸ್‌ನ ಮಗನ ಜೊತೆಗೆ ಗುತ್ತಿನ ಮನೆಗೆ ಬರುತ್ತಾನೆ. ಮನೆ ಮಾತ್ರವಲ್ಲ ಹಟ್ಟಿಯನ್ನು ತೋರುತ್ತಾನೆ. 'ಅಂಬಕ್ಕೆಗೆ ಬರಿದಾದ ಈ ಹಟ್ಟಿಯ ಗತ ವೈಭವವನ್ನು ದೂರದ ಊರಿಂದ ಬಂದ ಹುಡುಗನೊಬ್ಬನಿಗೆ ತೋರಿಸುವ ಪರಿಸ್ಥಿತಿ ತನಗೆ ಬಂತಲ್ಲ ಎಂಬ ನೋವು ಆಕೆಯನ್ನು ಕಾಡಿತು" (ನಾ.ಮೊಗಸಾಲೆ ೨೦೦೮, ಪು. ೫೨೫) ಅಂಬಕ್ಕೆಗೆ ವಯಸ್ಸಿನ ಕಾರಣ ಹಟ್ಟಿ ಹತ್ತುವುದು ಕಷ್ಟವಾಗಬಹುದು ಎಂಬ ಮನು ಮೆಹ್ತಾನ ಮಾತಿಗೆ" ಕಷ್ಟಕ್ಕೇನು ಬಂತು? ಅವನಿಗೆ ಏನೇನೆಲ್ಲ ಕೇಳಬೇಕೋ, ಅದನ್ನೆಲ್ಲ ಕೇಳಲಿ! ಇಂಥ ವಿಚಾರಗಳಲ್ಲಿ ನಮ್ಮ ತುಳುನಾಡಿನ ಮಕ್ಕಳಿಗೆ ಇಲ್ಲದ ಉತ್ಸಾಹ ಈ ಹುಡುಗನಿಗೆ ಉಂಟಲ್ಲ.. ಹಟ್ಟಿಯಲ್ಲಿ ದನ, ಎತ್ತು, ಕೋಣಗಳನ್ನು ಕಟ್ಟಿ ಹಾಕುತ್ತಿದ್ದ ರೀತಿ, ಅವುಗಳಿಗೆ ಕೊಡುತ್ತಿದ್ದ ಆಹಾರ, ಹಟ್ಟಿಗೆ ಹಾಕುತ್ತಿದ್ದ ತರಗೆಲೆ ಸೊಪ್ಪು ಇತ್ಯಾದಿಗಳನ್ನೆಲ್ಲ ಆಕೆ ವಿವರಿಸಿ ಹೇಳಿದರು. ಹಿಂದೆ ಈ ಹಟ್ಟಿಯಲ್ಲಿ ಎಷ್ಟು ಕೋಣಗಳಿದ್ದವು, ದನಕರು ಎತ್ತುಗಳಿದ್ದವು ಎಂಬುದರ ಲೆಕ್ಕವನ್ನು ಕೊಟ್ಟರು. ಹಟ್ಟಿಯ ಹಿಂಬದಿಯಲ್ಲಿ ಹಟ್ಟಿಯ ಮಾಡಿಗೆ ನೇತು ಹಾಕಿದ್ದ ನೊಗಗಳನ್ನು ಗೋಡೆಗೆ ಒರಗಿಸಿಟ್ಟಿದ್ದ ನೇಗಿಲುಗಳನ್ನು ಅವುಗಳ ಬಳಿ ಕರೆದೊಯ್ದು ತೋರಿಸಿದರು. ಇವೆಲ್ಲ ಆಗಲೇ ನಿಷ್ಪ್ರಯೋಜಕವಾಗಿದೆ ಎಂದರು. ಇನ್ನು ಹತ್ತು ವರುಷದಲ್ಲಿ ಒಂಭತ್ತುಕೆರೆಯಲ್ಲಿ ಒಂದೇ ಒಂದಾದರೂ ಎತ್ತು ಕೋಣ ನೋಡಲು ಸಿಗುವುದು ಕಷ್ಟವಾದಿತು ಎಂದೂ ಆತಂಕ ವ್ಯಕ್ತಪಡಿಸಿದರು. ಗುತ್ತಿನ ಮನೆಯಲ್ಲಿ ಹಿಂದೆ ಎರಡು ಎಮ್ಮೆಗಳು ಇದ್ದುವು. ಈಗ ಇಡೀ ಗ್ರಾಮದಲ್ಲಿ ಒಂದೇ ಒಂದು ಎಮ್ಮೆ ನೋಡಲು ಸಿಗುವುದೂ ಕಷ್ಟ ಎಂದು ನೊಂದು ನುಡಿದರು." (ಅದೇ, ಪು.೫೨೬) ಸಾಗುವಳಿ ಮಾಡಲಾಗದ ಕೃಷಿಕರ ಅಸಹಾಯಕತೆಯನ್ನು ಕೈಗಾರಿಕೆಯನ್ನು ನಡೆಸುವ ಬಂಡವಾಳಶಾಹಿ ಕಂಪೆನಿ ಮಾಲೀಕರು ನಗದೀಕರಿಸಿಕೊಳ್ಳಲು ಯತ್ನಿಸುವ ಪ್ರಶಾಂತ್ ಈ ಪ್ರಯತ್ನಕ್ಕೆ ಮಧ್ಯೆ ಸೇತುವೆಯಾಗುತ್ತಾನೆ. ಮನು ಮೆಹ್ತಾನ ತಂದೆ ಅಶೋಕ ಮೆಹ್ತಾನನ್ನು ಮನೆಗೆ ಕರೆಸಿ ತನ್ನ ಜಮೀನನ್ನೆಲ್ಲಾ ತೋರಿಸುತ್ತಾರೆ. ಉದ್ಯಮಿಯಾದ ಆತ ಉದ್ಯಮಶೀಲತೆಯ ದೃಷ್ಟಿಯಿಂದ ಭೂಮಿಯನ್ನು ನೋಡುತ್ತಾನೆ ಹೊರತು ಪ್ರೀತಿ ಗೌರವದಿಂದಲ್ಲ. ನಿಮ್ಮ ಮನೆ, ನಿಮ್ಮ ಜಮೀನು ಎಲ್ಲ ನನಗೆ ತುಂಬ ಇಷ್ಟವಾಗಿದೆ. ಅವೆಲ್ಲವನ್ನು ನಮ್ಮ ಕಂಪೆನಿಗೆ ನಾವು ಪಡಕೊಳ್ಳುವುದು ಖಂಡಿತ. ಸಂತೋಷದ ವಿಷಯವೇ ಆದರೆ ಈ ಭೂಮಿಗೆ ಸಂಬಂಧಿಸಿದ ಎಲ್ಲ ದಾಖಲೆಗಳನ್ನು ಅದಕ್ಕೆ ಯಾರ್ಯಾರು ಹಕ್ಕುದಾರರಿದ್ದಾರೋ ಅವರೆಲ್ಲರ ಒಪ್ಪಿಗೆಯನ್ನು ಮತ್ತು ಅವರ ಪವರ್ ಆಪ್ ಅಟಾರ್ನಿಯನ್ನು ನೀವು ಆದಷ್ಟು ಬೇಗ ರೆಡಿ ಮಾಡಿಕೊಡಬೇಕು ಎಂದು ಆದೇಶಿಸಿದರು. 'ಸರಿ ಸಾರ್' ಎಂದು ಪ್ರಶಾಂತ್ ನಗುತ್ತಾ ಒಪ್ಪಿಗೆ ಸೂಚಿಸಿ ಎದ್ದ (ಅದೇ, ಪು. ೫೩೭) ತನ್ನ ಹಿರಿಯರ ಮನೆಯನ್ನು ಬಿಕರಿಗಿಡುವುದರ ಜತೆಗೆ ಅದರಿಂದ ತನ್ನ ವೃತ್ತಿ ಜೀವನಕ್ಕೆ ಏನು ಲಾಭವಾದಿತು ಎಂಬ ಸ್ವಾರ್ಥ ಮಾತ್ರ ಅವನಲ್ಲಿ ಹುದುಗಿರುತ್ತದೆ. ನಗರೀಕರಣದ ಬಹಳ ಮುಖ್ಯ ಗುಣವಾದ ಈ ಸ್ವಭಾವ ಎಲ್ಲವೂ ತನಗಾಗಿ ಮತ್ತು ತನಗೊಬ್ಬನಿಗಾಗಿ ಎಂದೇ ಯೋಚಿಸುವಂತೆ ಪ್ರೇರೇಪಿಸುತ್ತದೆ. ಮಾತೃ ಮೂಲ ವ್ಯವಸ್ಥೆಯ ಒಳಗಡೆ

ಭೂಮಿಯ ಒಡೆತನ ಪೂರಾ ಹೆಣ್ಣಿನದ್ದು. ಗಂಡಿಗೆ ಏನಿದ್ದರೂ ಒಂದು ಅಶನಾರ್ಥದ ಸಣ್ಣ ಪಾಲು ಮಾತ್ರ. ಅದನ್ನು ಕುಟುಂಬದ ಹೆಣ್ಣು ಮಕ್ಕಳಿಗೇ ಬಿಟ್ಟು ಕೊಟ್ಟ ಉದಾಹರಣೆಗಳಿವೆ. ಇಲ್ಲಿ ಹಾಗಾಗಲ್ಲ ಭೂಮಿಯ ಒಡೆತನದಲ್ಲಿ ತನ್ನ ಹಕ್ಕನ್ನು ಸ್ಥಾಪಿಸಿದವರೊಂದಿಗೆ ಎಲ್ಲವೂ ತನಗೊಬ್ಬನಿಗೇ ದಕ್ಕಬಹುದೆಂಬ ಸಣ್ಣ ಮನಸ್ಸಿನ ಆಲೋಚನೆಯಿದೆ. ಮಾತೃ ಮೂಲ ಪರಂಪರೆ ಪಿತೃ ಮೂಲದೆಡೆಗೆ ಪರಿವರ್ತನೆ ಹೊಂದುವಾಗ ಬರಿಯ ಕುಟುಂಬ ರಚನಾ ವಿನ್ಯಾಸ ಮಾತ್ರವಲ್ಲ, ಹೆಣ್ತನದ ಆಳ್ವಿಕೆಯ ಚಿಂತನೆಯ ಮೌಲ್ಯಗಳೂ ಹಿನ್ನೆಲೆಗೆ ಸರಿದು, ಗಂಡಿನ ನಿರ್ಧಾರವೇ ಪ್ರಮುಖವೆನಿಸುತ್ತದೆ. ಕುಟುಂಬದ ವಿನ್ಯಾಸದ ಒಳಗೂ ಹೆಣ್ಣು ಹೊರಗಿನವಳಾಗಿ ನವ ಪಿತೃಪ್ರಧಾನತೆಯೇ ರಾರಾಜಿಸಲು ಆರಂಭವಾಗುತ್ತದೆ. ಆಕೆಯ ಜ್ಞಾನ, ಜಾಣ್ಮೆ, ಕೌಶಲ್ಯಗಳು ಯಾವುವೂ ಪ್ರಮುಖವಾಗುವುದಿಲ್ಲ. ಹೆರುವುದಷ್ಟೇ ಆಕೆಯ ಕಾಯಕವಾಗಿ ಅದೂ ಪ್ರಾಮುಖ್ಯತೆಯನ್ನು ಪಡೆದುಕೊಳ್ಳುವುದಿಲ್ಲ. ಇದಕ್ಕೆ ಮುಖ್ಯ ಕಾರಣ ಕೃಷಿ ಕಾಣೆಯಾಗುತ್ತ ಬಂದುದೂ ಪ್ರಮುಖ ಕಾರಣ. ಒಂದು ಕಾಲಕ್ಕೆ ವಿಸ್ತಾರವಾದ ಭೂಮಿಯನ್ನು ಹೊಂದಿದ ಮನೆತನಗಳು ತುಂಬಾ ಜನರನ್ನು ಹೊಂದಿದ್ದು ಅದನ್ನು ಸಾಗುವಳಿ ಮಾಡಲು ಬಹಳಷ್ಟು ಸಂಖ್ಯೆಯ ಮಾನವ ಬಲವೂ ಬೇಕಿತ್ತು. ಅಲ್ಲಿ ಮಕ್ಕಳನ್ನು ಹೆರುವ ಹೆಣ್ಣಿಗೆ ಮಾನ್ಯತೆ ಸಿಕ್ಕಿದ್ದು ಮಾತ್ರವಲ್ಲ ಸೃಷ್ಟಿ ತತ್ವದ ರಹಸ್ಯವೂ ಅರಗಿಸಿಕೊಳ್ಳಲು ಸಹಾಯಕವಾಯಿತು. ಯಾವಾಗ ಕುಟುಂಬಗಳು ಅವಿಭಕ್ತಗೊಂಡು ತುಂಬು ಕುಟುಂಬಗಳಲ್ಲಿ ಒಬ್ಬರೋ, ಇಬ್ಬರೋ ಇರುವುದು ಮಾತ್ರ ಮುಖ್ಯವಾಯಿತೋ ಭೂಮಿಯೂ ಕೃಷಿ ಚಟುವಟಿಕೆಯಿಲ್ಲದೆ ಹಡಿಲು ಬಿದ್ದು ಬಿತ್ತುವ ಭೂಮಿ ತನ್ನ ಫಲವಂತಿಕೆಯನ್ನು ಕಳಕೊಂಡಂತೆ ಹೆಣ್ಣು ತನ್ನ ಫಲವಂತಿಕೆಯನ್ನು ಕಳಕೊಂಡಳು. ಅಲ್ಲಿ ಸಂತಾನಹರಣ ಶಸ್ತ್ರ ಚಿಕಿತ್ಸೆಯೂ ಹೆಣ್ಣಿಗಲ್ಲದೆ ಗಂಡಿಗಲ್ಲ. ಪಿತೃಪ್ರಧಾನತೆಯ ಮೌಲ್ಯಗಳೂ ವಿಜೃಂಭಿಸಲ್ಪಟ್ಟು ಅದೇ ಆದರ್ಶಗಳಾದವು. ನೆಲ ಮೂಲದ ಸತ್ಯಗಳೆಲ್ಲ ನಿಧಾನವಾಗಿ ಮರೆಗೆ ಸಂದವು. ಸಾಂತೇರ್ ಗುತ್ತಿನಲ್ಲೂ ಪ್ರಶಾಂತ ಭೂಮಿಯನ್ನು ಪ್ರಾಯೋಜನಿಕ ದೃಷ್ಟಿಯಿಂದ ನೋಡಿದ ರೀತಿ ಪ್ರಮುಖವೆನಿಸುತ್ತದೆ. ಭೂಮಿಯ ಬಗೆಗೆ, ಮಣ್ಣಿನ ಬಗೆಗಿನ ಪ್ರೀತಿಗಿಂತ ವ್ಯಾವಹಾರಿಕತೆಯೇ ಮುನ್ನೆಲೆಗೆ ಬರುತ್ತದೆ. "ಈಗ ನೋಡಿದರೆ ಅವರು ಇನ್ನೂ ಪಕ್ಕನೆ ಸಾಯುವ ಹಾಗೆ ಇಲ್ಲ ಅತ್ತೆ! ಅವರು ಸಾಯುವವರೆಗೂ ಆ ಮನೆ, ಜಮೀನು ಎಲ್ಲ ಮಾರಲು ಅವರು ಖಂಡಿತ ಒಪ್ಪಿಗೆ ಕೊಡುವುದಿಲ್ಲ ಅನಿಸುತ್ತದೆ ನನಗೆ. ಇನ್ನು ನೀವೇನಾದರೂ ಬಲಾತ್ಕರಿಸಿದರೆ ಒಪ್ಪಿಗೆ ಕೊಡಲೂಬಹುದು! ಎಂದ ಮಾರಾಯ್ತಿ!" ಎಂದಳು ಶಾರದಾ. (ಅದೇ, ಪು. ೫೪೨) ಮತ್ತು ಮುಂದುವರಿದು"ಅವರು ಒಂದು ತಿಂಗಳ ಒಳಗೆ ನಮ್ಮ ಜಮೀನಿನ ರೆಕಾರ್ಡ್ ಆಫ್ ರೈಟ್ಸ್ ಎಲ್ಲ ತಂದೊಪ್ಪಿಸಲು ಹೇಳಿದ್ದಾರೆ ನಮ್ಮ ಬಾಸ್ ಓ.ಕೆ ಸಾರ್ ಎಂದು ಒಪ್ಪಿಸಿದ್ದೇನೆ ನಾನು. ಈಗ ಆಗುವುದಿಲ್ಲ ಎಂದು ಹೇಗೆ ಹೇಳಲಿ ಅತ್ತೆ? ಎಂದು ನನ್ನನ್ನೆ ಆರೋಪಿಯ ಸ್ಥಾನದಲ್ಲಿ ನಿಲ್ಲಿಸಿದ" (ಅದೇ, ಪು. ೫೪೨) ಅದೇ ಮನೆಯ ಹೆಣ್ಣು ಮಗುವಾದ ಪ್ರಜ್ಞಾಳಿಗೆ "ತನ್ನ ಗುತ್ತಿನ ಮನೆಯನ್ನು ಉಳಿಸಿಕೊಳ್ಳಲೆಂದು ಕನಸು ಕಾಣುತ್ತಿದ್ದುದನ್ನು, ಅದು ಅವರದ್ದಷ್ಟೇ ಅಲ್ಲ ತನ್ನದು ಕೂಡಾ ಎಂದು ತನ್ನ ಕಣ್ಣುಗಳಲ್ಲೂ ತುಂಬಿಕೊಳ್ಳಬೇಕೆಂದು ಆಕೆ ಬಗೆದಿದ್ದಳು." (ಅದೇ, ಪು. ೫೪೬). ಕುಟುಂಬ ವ್ಯವಸ್ಥೆಯ ಸ್ಥಿತ್ಯಂತರಕ್ಕಿಂತ ಅದನ್ನು ಗ್ರಹಿಸಿದ ರೀತಿ ಮುಖ್ಯವಾದುದು.

ಪ್ರಶಾಂತನ ನಡೆ ಕುಟುಂಬದ ಒಳಗಡೆ ಉಂಟಾದ ಸ್ಥಿತ್ಯಂತರಗಳನ್ನು ನಿರೂಪಿಸುವಂತೆ, ಆಗುತ್ತಿರುವ ಬದಲಾವಣೆಗಳಿಗೆ ಪ್ರತಿಕ್ರಿಯೆ ಇದೆ. "ರಮಾನಂದನಿಗೆ ಭಾವ ಸುಂದರನ ಮಗ ಪ್ರಶಾಂತ ಸಾಂತೇರು ಗುತ್ತಿನ ಭೂಮಿಯಲ್ಲಿ ಪಾಲು ಕೇಳಲು ಮುಂದಾದ ವಿಚಾರ ತಿಳಿದಿತ್ತು. ಒಂದು ರಾತ್ರೆ ಶಾರದಾ ಆತನಿಗೆ 'ನೋಡಿ ಸುಂದರನ ಮಗ ತುಂಬ ಮುಗ್ಧ ಒಳ್ಳೆಯವ ಅಂದುಕೊಂಡಿದ್ದೆ ನಾನು. ಈಗ ನೋಡಿದರೆ ನಮ್ಮ ಗುತ್ತಿನ ಮನೆಯಲ್ಲಿ ಸರಿಯಾದ ಪಾಲು ಸಿಗಬೇಕು ಎನ್ನುವ ಹಾಗೆ ವ್ಯವಹಾರಿಸುತ್ತಿದ್ದಾನಂತೆ ಗೊತ್ತುಂಟೇನು ನಿಮಗೆ" ಎಂದಿದ್ದಳು ಶಾರದೆ. ನಮ್ಮ ಸಮಾಜದಲ್ಲೂ ಮಾತೃ ಪ್ರಧಾನ ಸಂಪ್ರದಾಯವನ್ನು ಯಾರು ಪಾಲಿಸುತ್ತಾರೆ ಹೇಳಿ? ಎಲ್ಲ ಕುಟುಂಬಗಳೂ ಈಗ ತಾವಾಯಿತು ತಮ್ಮ ಹೆಂಡತಿ ಮಕ್ಕಳಾಯಿತು ಎಂಬ ಸ್ಥಿತಿಯನ್ನು ಒಪ್ಪಿಕೊಂಡಿರುವಾಗ ನಮ್ಮ ಸಮಾಜವೂ ಬದಲಾದದ್ದರಲ್ಲಿ ತಪ್ಪಿಲ್ಲ. ಅಲ್ಲದೆ ನಮ್ಮ ಸಮಾಜದ ಹಿರಿಯರೇ ಈ ಮಾತೃಪ್ರಧಾನ ವ್ಯವಸ್ಥೆಯ ದೋಷಗಳನ್ನೆಲ್ಲ ಸರಕಾರದ ಗಮನಕ್ಕೆ ತಂದು ಗಂಡಿಗೂ ಹಿರಿಯರ ಭೂಮಿಯಲ್ಲಿ ಹೆಣ್ಣಿಗೆ ಇರುವಷ್ಟೇ ಹಕ್ಕು ಇರಬೇಕು ಎಂಬ ಬದಲಾವಣೆಯ ಕಾನೂನು ಜ್ಯಾರಿಗೊಳಿಸಲು ಕಾರಣರಾಗಿದ್ದಾರೆ ಎನ್ನುವುದು ನಿನಗೂ ಗೊತ್ತು. ಈ ಆಧಾರದಲ್ಲಿ ಈಗ ಪ್ರಶಾಂತ ಸಾಂತೇರು ಗುತ್ತಿನ ಭೂಮಿಯಲ್ಲಿ ಹಕ್ಕು ಸ್ಥಾಪನೆಗೆ ಹೊರಟರೆ ತಪ್ಪಿಲ್ಲ ಅನಿಸುತ್ತದೆ ನನಗೆ! ಎಂದಿದ್ದ. ಗುತ್ತಿನ ಹೆಣ್ಮಕ್ಕಳ ಮನೋಸ್ಥಿತಿ ಅಷ್ಟು ಫಕ್ಕನೆ ಬದಲಾಗುವುದಿಲ್ಲರೀ, ನಿಮಗೆ ಅರ್ಥ ಆಗುವಂಥದ್ದಲ್ಲ (ಅದೇ, ಪು. ೫೭೪) ಎಂದಿದ್ದಳು ಶಾರದೆ. ಈ ಸಂಭಾಷಣೆ ಪತಿ ಪತ್ನಿಯರ ನಡುವಿನದಾದರೂ ಒಟ್ಟು ಬದಲಾಗುತ್ತಿರುವ ಕೌಟುಂಬಿಕ ವ್ಯವಸ್ಥೆಯ ಸೂಕ್ಷ್ಮ ಎಳೆಗಳೂ ದಕ್ಕುತ್ತವೆ.

ಕೃಷಿ ಜಗತ್ತಿನ ಪಲ್ಲಟಗಳಿಂದ ಒಳಿತು ಕೆಡುಕುಗಳೆರಡೂ ಸಂಭವಿಸಿದೆ, ಅವಿಭಕ್ತ ಕುಟುಂಬಗಳು ವಿಭಕ್ತವಾಗುವುದರೊಂದಿಗೆ ಕೃಷಿ ಜಗತ್ತಿನಲ್ಲೂ ಹೊಸ ಸ್ಥಿತ್ಯಂತರಗಳಾದವು. ಮಾನವ ಶ್ರಮವನ್ನೇ ಬಯಸಿ ನಡೆಸುತ್ತಿದ್ದ ಕೃಷಿ ಕಾರ್ಯ ಚಟುವಟಿಕೆಗಳೂ ಬೆವರ ಮೂಲದಿಂದ ಯಂತ್ರ ಮೂಲಕ್ಕೆ ಬಂತು. ಗದ್ದೆಗಳಲ್ಲಿ ಬೆವರು ಸುರಿಸಿ ದುಡಿಯುವ ಯುವಕರು ಇಲ್ಲವಾಗಿ ಕೆಲಸದ ಆಳುಗಳಿಗೆ ಕಂಟ್ರಾಕ್ಟರುದಾರರನ್ನು ಅವಲಂಭಿಸಿ ಕೃಷಿ ಮಾಡಬೇಕಾದ ಅನಿವಾರ್ಯತೆಯೂ ಉಂಟಾಗಿದೆ. ಕೃಷಿ ಚಟುವಟಿಕೆಯ ಲೆಕ್ಕಚಾರಗಳಲ್ಲೂ ಪ್ರಮುಖ ಕೃಷಿ ಕುಟುಂಬಗಳಲ್ಲೇ ಕೃಷಿಗಾಗಿ ಮಾಡಿದ ಖರ್ಚು ಅದರಿಂದ ಲಭಿಸುವ ಉತ್ಪತ್ತಿಗಿಂತ ಹೆಚ್ಚು ಎಂಬ ಲೆಕ್ಕಾಚಾರಗಳೇ ಮುನ್ನೆಲೆಗೆ ಬಂದವು. ಬದುಕಿನ ಭಾಗ ಅಸ್ತಿತ್ವದ ಸ್ವರೂಪವಾಗಿ ಅಸ್ಮಿತೆಯ ಭಾಗವಾಗಿ ಇದ್ದುದು ಕೃಷಿ ಎಂದರೆ ರಗಳೆಯ ಪರಿಪಾಟಲು ಆಗಿದೆ. ಹೆಣ್ಣೆಂದರೂ ಜವಾಬ್ದಾರಿಯ ಮಣಭಾರವಾಗಿ ಪರಿವರ್ತನೆಯಾಗಿದೆ. ಮನುಷ್ಯನನ್ನು ಪ್ರಕೃತಿಯ ಒಂದು ಭಾಗವಾಗಿ ಸ್ವೀಕರಿಸಿ ಮುನ್ನಡೆಸಿದಾಗ ಮಾನವರು ಅದನ್ನು ಬಳಸಿಕೊಂಡ ರೀತಿಯ ಮಿತಿಗಳನ್ನು ಗಮನಿಸಬಹುದು. ಒಟ್ಟು ಜನರ ಜೀವನ ಕ್ರಮ ಮತ್ತು ಜೀವನ ಧಾರೆಯ ಚಿಂತನೆಗಳು ಪಾರಂಪರಿಕ ಮೌಲ್ಯಗಳ ಮುಖವಾಣಿಯಾಗಿ ಪ್ರಕಟಗೊಂಡಿದೆ.

**೭.೫ ಬರಿದಾದ ಅನ್ನದ ಬಟ್ಟಲು**

ಕರ್ನಾಟಕದ ಕರಾವಳಿ ಅತ್ಯಂತ ವಿಸ್ತಾರವಾದ ಕಡಲ ತೀರವನ್ನು ಫಲವತ್ತಾದ ಮಣ್ಣನ್ನು ಹೊಂದಿದೆ. ಭೌಗೋಳಿಕವಾಗಿ ಎತ್ತರವಾದ ಬೆಟ್ಟಗುಡ್ಡದ ಸಾಲು ಅದಕ್ಕೆ ತಾಗಿಕೊಂಡಿರುವ ಬಯಲು ಅತಿ ವಿಶಿಷ್ಟವಾದ

ಕೃಷಿ ಯೋಗ್ಯ ಭೂಮಿಯಿಂದ ನಿತ್ಯವೂ ಪ್ರಯೋಗಶೀಲವಾಗಿದೆ. ಕೃಷಿಯನ್ನು ಅನ್ವೇಷಣೆ ಮಾಡುತ್ತ ಗುಡ್ಡಗಳಲ್ಲಿ ಕುಮೆರಿ ಕೃಷಿಯನ್ನು ಮಾಡುತ್ತ ಆಹಾರದ ಮೂಲವನ್ನು ಹುಡುಕಿ ಕೃಷಿಯನ್ನು ವಿಸ್ತರಿಸುತ್ತ ಬರಲಾಯಿತು. ವಿಸ್ತರಣೆಗೊಂಡ ಕೃಷಿ ಅದೇ ಸ್ವರೂಪದಲ್ಲಿ ಉಳಿದು ಬರಲಿಲ್ಲ. ಆಹಾರದ ಬೆಳೆ ವಾಣಿಜ್ಯ ಬೆಳೆಯಾಗಿ ಪರಿವರ್ತನೆ ಹೊಂದಿದಂತೆಲ್ಲ ಕೃಷಿಯ ಸ್ವರೂಪವು ಬದಲಾಯಿತು. ಆಹಾರದ ಮೂಲದುಡ್ಡಿನ ಮೂಲವಾಗಿ ಬದಲಾದಾಗ ಬೆಳೆಗಳೂ ಬದಲಾಗುತ್ತ ಸಾಗಿದವು. ಪರಿಣಾಮ ರೈತರು ತಾವು ಬೆಳೆಯುವ ಬೆಳೆಗಳಲ್ಲೂ ಬದಲಾವಣೆಯನ್ನು ತಂದರು.

ಕರಾವಳಿಯ ಆಹಾರ ಕ್ರಮವನ್ನು ಗಮನಿಸಿದರೆ ಅತಿ ವಿಶಿಷ್ಟವಾಗಿ ಭತ್ತವನ್ನು ಬೇಯಿಸಿ ಮಾಡುವ 'ಕುಚ್ಚಿಲಕ್ಕಿ ಅನ್ನ' ಮತ್ತು ಮೇಲೋಗರಗಳು ವೈಶಿಷ್ಟ್ಯತೆಯನ್ನು ಹೊಂದಿವೆ. ಆಹಾರದ ಅಗತ್ಯತೆಗಾಗಿ ಬೆಳೆಯುತ್ತಿದ್ದ ಭತ್ತದ ಬೆಳೆ, ಸತ್ಯದ ಬೆಳೆ ಎಂದೇ ಗುರುತಿಸಿಕೊಂಡಿದೆ. ಕುಮೆರಿ ಕೃಷಿಯಲ್ಲಿ ಬೆಳೆಯುತ್ತಿದ್ದ ಭತ್ತ, ಮಜಲು ಮತ್ತು ಬೈಲುಗದ್ದೆಗಳಲ್ಲಿ ಬೆಳೆಯುತ್ತಿದ್ದುದೂ ಭತ್ತವನ್ನೇ. ವಿಸ್ತಾರವಾದ ಗದ್ದೆಗಳಲ್ಲಿ ಫಲವತ್ತಾದ ಭೂಮಿಯನ್ನು ಕೃಷಿ ಯೋಗ್ಯವಾಗಿಸಿ ಆಹಾರದ ಸ್ವಾವಲಂಬನೆಯನ್ನು ಹೊಂದುವ ಪ್ರಯತ್ನಗಳು ನಡೆದವು. ಕುಚ್ಚಿಲಕ್ಕಿಗಾಗಿಯೇ ಇರುವ ಭತ್ತದ ತಳಿಗಳನ್ನು ಅನ್ವೇಷಿಸಿ ಬೆಳೆದು ಅನ್ನಕ್ಕೆ ಪೂರಕವಾದ ತರಕಾರಿ ಗೆಡ್ಡೆ ಗೆಣಸುಗಳನ್ನು ಬೆಳೆದರು. ಅನ್ನದ ಮೂಲದಿಂದ ಪರಿವರ್ತಿತವಾದ ಬೆಳೆಗಳು ಕ್ರಮೇಣ ಕೈಗಾರಿಕೆಯ ಕಚ್ಚಾವಸ್ತುಗಳಾಗಿಯೇ ಪರಿವರ್ತನೆ ಹೊಂದಿತು. ಕೃಷಿಗೆ ಪೂರಕವಾದ ಉಪ ಕಸುಬುಗಳ ಕೈಗಾರಿಕೆಗಳು ಆರಂಭದಲ್ಲಿ ಕಾಣಿಸಿಕೊಂಡರೆ ಎರಡನೆಯ ಹಂತದಲ್ಲಿ ಕೃಷಿಯನ್ನೇ ನಾಶ ಮಾಡುವಂತಹ ಕೈಗಾರಿಕೆಗಳು ಹುಟ್ಟಿಕೊಂಡವು. ಮೂರನೆಯ ಹಂತಕ್ಕಾಗುವಾಗ ಕೃಷಿಗೆ ಪರ್ಯಾಯವಾಗಿ ಕೈಗಾರಿಕೆಗಳು ಸೃಷ್ಟಿಯಾದವು. 'ದುಡಿಮೆ' ಯ ಸ್ವರೂಪವೇ ಬದಲಾದುದು ಮತ್ತು ದುಡಿಯುವುದು ಕೇವಲ ಉಣ್ಣುವುದಕ್ಕಾಗಿ ಅಲ್ಲ ಎಂಬ ಎಚ್ಚರದ ನಡೆಯೂ ಈ ಹಂತದಲ್ಲಿ ಕಾಣಿಸಿಕೊಂಡಿದೆ. ಮೊದಲ ಬಾರಿಗೆ ಭೂಮಿಯನ್ನು ಚದರ ಅಡಿಗಳಲ್ಲಿ ಅಳತೆ ಮಾಡಿದವರು ಇಲ್ಲಿಗೆ ಬಂದ ಮಿಶನರಿಗಳು ಬೀಜ ಬಿತ್ತನೆಯಿಂದ ಅರಿವಾಗುತ್ತಿದ್ದ ಭೂಮಿಯ ವಿಸ್ತಾರ ಅಳೆಯಲು ಬಳಸಿದ ಸಂಕಲೆಯ ಕೊಳಿಕೆಯಿಂದ ಮಣ್ಣಿನ ಗುಣಮಟ್ಟವನ್ನು ತಿಳಿಯಲು ಪ್ರಯತ್ನಿಸಲಾಗುತ್ತಿತ್ತು. ಒಣ ಭೂಮಿ ಮತ್ತು ನೀರಿನ ಹರಿವು ಇರುವ ಭೂಮಿಗಳು ಬೇರೆ ಬೇರೆ ಹೆಸರಿನಿಂದ ಗುರುತಿಸಲಾಗುತ್ತಿತ್ತು. ಖುಷ್ಕಿ, ತರಿ, ಖದೀಂ ಎಂದು ಭೂಮಿಯನ್ನು ಮೊದಲ ಬಾರಿಗೆ, ಮಿಷನರಿಗಳು ಗುರುತಿಸಿ ಹೆಸರಿಸಿದರು. ನಮ್ಮ ಪೂರ್ವಜರು ಅದಕ್ಕಿಂತಲೂ ಪೂರ್ವದಲ್ಲಿ ಭೂಮಿಯನ್ನು ಮಣ್ಣಿನ ಗುಣವನ್ನು ಗುರುತಿಸಲು ಬೆಟ್ಟು, ಮಜಲು, ಬೈಲು ಎಂದು ಗುರುತಿಸಿದರು. ತುಂಬಾ ಮಳೆನೀರು, ನೀರು ನಿಲ್ಲುವ ಪ್ರದೇಶಗಳು ಬೈಲುಗದ್ದೆಗಳಾದರೆ ನೀರನ್ನು ಹಾಯಿಸಿ ನೀರಿನ ಹರವು ಇರುವ ಗದ್ದೆಗಳು ಮಜಲು ಗದ್ದೆಗಳು ಮಳೆನೀರನ್ನು ಆಶ್ರಯಿಸಿ ಮತ್ತು ಒಂದಿಷ್ಟು ನೀರಿನ ಹರವನ್ನು ಗಮನಿಸಿ ಕೃಷಿ ಮಾಡುವ ಭೂಮಿ ಬೆಟ್ಟು ಗದ್ದೆಯದರೆ ಕೇವಲ ಮಳೆಯನ್ನೇ ಆಶ್ರಯಿಸಿ ಸಾಗುವಳಿ ಮಾಡುವ ಗದ್ದೆಗಳು 'ಬಾನಬೆಟ್ಟು' ಗದ್ದೆಗಳು ಮಣ್ಣಿನ ಫಲವಂತಿಕೆಯನ್ನು ತಿಳಿಸುವುದರೊಂದಿಗೆ ಮಣ್ಣಿನ ಗುಣಮಟ್ಟವನ್ನು ಫಸಲಿನ ಪ್ರಮಾಣವನ್ನು ಅರಿಯಬಹುದು. ಗುಡ್ಡವನ್ನು ಅಗೆದು ಗದ್ದೆಯನ್ನಾಗಿ ಮಾಡುತ್ತ ಆಹಾರದ ಉತ್ಪಾದನೆಯನ್ನು ಹೆಚ್ಚಿಸುತ್ತಾ

ಬಂದವರು, ಉಣ್ಣುವ ಅನ್ನಕ್ಕಿಂತ ವ್ಯವಹರಿಸುವ ಕಾಸು ಹೆಚ್ಚು ಮಹತ್ವದ್ದು ಎಂದು ತಿಳಿದರು. ಗದ್ದೆಯ ಬದುವನ್ನು ಗಟ್ಟಿಗೊಳಿಸಿದಷ್ಟು ಗದ್ದೆ ಮಣ್ಣಿನ ಸಾರ ಹೆಚ್ಚುತ್ತದೆ ಎಂದು ನಂಬಿದವರು. ಗದ್ದೆಯ ಬದಿಯಲ್ಲಿ ರಸ್ತೆಯೊಂದು ಹಾದು ಹೋದರೆ ಮಣ್ಣಿನ ಬೆಲೆ ಹೆಚ್ಚಾಗುತ್ತದೆ ಎಂಬ ದೃಢವಾದ ನಂಬಿಕೆ ಉಳಿಯಿತು. ಬೆಳೆ ಬೆಳೆಯುವುದಕ್ಕಿಂತ ಭೂಮಿಯ ಬೆಲೆ ಹೆಚ್ಚಾಗಬೇಕು ಎನ್ನುವ ಭ್ರಮೆಯ ಮಧ್ಯೆ ವಾಸ್ತವದ ಸತ್ಯವನ್ನು ಮರೆತು ಹಳ್ಳಿಗೆ ನುಗ್ಗಿದ 'ಹಿಟಾಚಿ' ಕೇವಲ ರಸ್ತೆಯನ್ನು ಅಗಲಗೊಳಿಸಿದ್ದಲ್ಲ, ಬದುಕಿನ ಸ್ವರೂಪ ಮೌಲ್ಯಗಳೇ ಅದಲು ಬದಲುಗಳಾದವು ರಸ್ತೆಯಿಂದ ಸಿಕ್ಕ ಸವಲತ್ತು ಮತ್ತು ಸೌಲಭ್ಯ ಆಹಾರದ ಸ್ವಾವಲಂಬನೆಯನ್ನು ಹೆಚ್ಚಿಸುವುದಕ್ಕಿಂತ ಪರಾವಲಂಬಿಗಳಾಗಿಯೇ ಪರಿವರ್ತಿಸಿತು.

ಭೂಮಿಯ ಲಭ್ಯತೆ ಮತ್ತು ಬೆಳೆಯ ಬೇಕಾದ ಬೆಳೆಗಳು ಹಾಗೂ ಅವಶ್ಯವಿರುವ ಆಹಾರದಿಂದ ಕೃಷಿಯಲ್ಲೇ ಪ್ರಯೋಗಶೀಲತೆಗಳೂ ನಡೆದವು. ಇಳುವರಿಯನ್ನು ಹೆಚ್ಚು ಪಡೆಯಬೇಕೆಂಬ ಇರಾದೆಯಿಂದ ಬೆಳೆ ಬೆಳೆಯುವ ಕ್ರಮ, ಮಣ್ಣಿನ ಪರೀಕ್ಷೆ, ರಾಸಾಯನಿಕಗಳ ಬಳಕೆ, ತಳಿಗಳ ಅಭಿವೃದ್ಧಿ. ಕಡಿಮೆ ನೀರಾವರಿಯನ್ನು ಬಳಸಿಕೊಂಡು ಬೆಳೆಯಲಾಗುವ ಬೆಳೆಗಳು ಹೀಗೆ ಕೃಷಿರಂಗವೇ ಒಂದು ಉದ್ದಿಮೆಯಾಗಿಯೂ ಪರಿವರ್ತನೆ ಹೊಂದಿತು. 'ವೈಜ್ಞಾನಿಕ ಕೃಷಿ' ಎಂಬ ಪರಿಭಾಷಿಕತೆ ಮುನ್ನೆಲೆಗೆ ಬಂದಿತು. ಸಾಂಪ್ರದಾಯಿಕವಾಗಿ ಬೆಳೆ ಮತ್ತು ಬೆಳೆಗಳ ನಿರ್ವಹಣೆಯ ಬಗೆಗಿನ ಸಾಮಾನ್ಯ ಕೃಷಿಕರ ತಿಳುವಳಿಕೆಗಳು ಜ್ಞಾನಗಳಾಗಿ ಗುರುತಿಸಲಾಗದೆ ಹಿನ್ನೆಲೆಗೆ ಸರಿದವು. ಕೃಷಿಯನ್ನು ಲಾಭ ತರುವಂತೆ ಹೇಗೆ ಬೆಳೆಸಬಹುದು ಎಂಬುದು ಪ್ರಶ್ನೆಯಾಗಿತ್ತು. ಕೃಷಿ ಕ್ಷೇತ್ರ ಅಧ್ಯಯನದ ಸಂಶೋಧನೆಯ ವಿಭಾಗವಾಗುವುದರೊಂದಿಗೆ ಹೆಚ್ಚು ಹೂಡಿಕೆ ಮಾಡಲಾಗುವ ಮತ್ತು ಉದ್ದಿಮೆ ಕ್ಷೇತ್ರದಲ್ಲಾಗುವ ಬಂಡವಾಳವನ್ನು ಪರಿವರ್ತನೆಗೊಳಿಸಲು ಬಂಡವಾಳಶಾಹಿಗಳಿಗೆ ಒಂದು ಮಾಧ್ಯಮವೂ ಆಯಿತು. ಆದಾಯ ತೆರಿಗೆಗಳನ್ನು ಬಚ್ಚಿಡುವ ಅಡಗುತಾಣಗಳಾಗಿ ಕೃಷಿ ಭೂಮಿಗಳು ರೆಸಾರ್ಟ್‌ಗಳಾಗಿ ವಿಹಾರಕ್ಷೇತ್ರಗಳಾಗಿ ಗುರುತಿಸಿಕೊಂಡಿತು. ಅಲ್ಲಿ ಬೆಳೆಯುವ ಬೆಳೆ ಫಸಲು ಯಾವುದೂ ಮುಖ್ಯವಾಗದೆ ಮೋಜಿನ ತಾಣಗಳಾಗಿ ಗದ್ದೆ ಬಯಲುಗಳು ಪರಿವರ್ತನೆ ಹೊಂದಿದವು. ಬೆಳೆಯುವ ಬೆಳೆಗಳ ಬಗೆಗಾಗಲಿ ಫಸಲಿನ ಕುರಿತಾಗಲೀ ಬೆಳೆ ನಿರ್ವಹಣೆಯ ಬಗೆಗಾಗಲೇ ಅರಿತುಕೊಳ್ಳುವುದಕ್ಕಿಂತ ಭೂಮಿಯನ್ನು ಪರ್ಯಾಯವಾಗಿ ಬಳಸಬೇಕಾದ ದಾರಿಗಳು ಮುಖ್ಯವೆನಿಸಿದವು.

ವಾಣಿಜ್ಯದ ಉದ್ದೇಶಕ್ಕೆ ಭೂಮಿ ಬಳಕೆಯಾದಾಗ ಅಲ್ಲಿಯ ಫಲವಂತಿಕೆಯಾಗಲೀ ಮಣ್ಣಿನ ಸಾರ, ನೀರಿನ ಹರಿವು. ವೈವಿಧ್ಯತೆ ಮುಖ್ಯವಾಗುವುದಕ್ಕಿಂತ ಮಣ್ಣು ದುಡ್ಡಾಗಿ ನಗದಿಕರಣಗೊಳ್ಳುವ ಲಭ್ಯತೆಯೇ ಪ್ರಮುಖವಾಯಿತು. ಪರಿಣಾಮ ಹೆಚ್ಚು ಲಾಭ ತರುವ ಬೆಳೆಗಳನ್ನು ಬೆಳೆದರು. ಎಲ್ಲ ಕಡೆಯೂ ಭತ್ತವೇ ಇದ್ದಾಗ, ಗದ್ದೆ ಹೋಗಿ ತೋಟ ಬಂದು ಅಡಿಕೆಯಂತಹ ವಾಣಿಜ್ಯ ಬೆಳೆ ಬೆಳೆದು ಅಡಿಕೆ ಮರಕ್ಕೆ ಹಬ್ಬಿಸಲು ಕರಿಮೆಣಸಿನ ಬಳ್ಳಿಯೂ ಮುಖ್ಯ ಬೆಳೆಯಾಯಿತು. ಅಡಿಕೆ ಗಿಡಕ್ಕೆ ನೆರಳಾಗಿ ಬೆಳೆದ ಕೊಕ್ಕೋ ಗಿಡಗಳೂ ಉಪ ಉತ್ಪನ್ನಗಳದವು. ಅದರೊಂದಿಗೆ ವೆನಿಲ್ಲಾ ಬಾಳೆಗಳೂ ಬಂದವು. ಕಂಗಿನೊಂದಿಗೆ ಬೆಳೆದ ತೆಂಗೂ ಹೆಚ್ಚು ಲಾಭದಾಯಕ ಎನಿಸಿತು. ಒಂದು ಕಾಲಕ್ಕೆ ಹೊಟ್ಟೆ ತುಂಬಾ ಉಣ್ಣುತ್ತಿದ್ದ ಗಂಜಿಗೆ ರುಚಿಯಾಗಲು ಒಂದಿಷ್ಟು ಉಪ್ಪು ಸಾಕಿತ್ತು. ಈಗ ಬರೀ ಉಪ್ಪಿನಿಂದ ಉಣ್ಣುವ ಗಂಜಿಗಿಂತ ನೆಂಜಿಕೊಳ್ಳಲು ಬಳಸುವ ತೆಂಗು

ಮೇಲೋಗರವಾಗಿ ಬಳಕೆಯಾಗುತ್ತ ಪ್ರಮುಖ ಬೆಳೆಯಾಯಿತು. ಮನುಷ್ಯನ ಅವಶ್ಯಕತೆ ಮತ್ತು 'ಬಾಯಿರುಚಿ'ಗಾಗಿ ಬೆಳೆದ ಬೆಳೆ ವಾಣಿಜ್ಯ ಬೆಳೆಯಾಗುವುದರೊಂದಿಗೆ ಕರಾವಳಿಯ ಅನನ್ಯತೆಯಾಗಿಯೂ ಗುರುತಿಸಿಕೊಂಡಿತು. ಬೀಸುವ ತೆಂಗಿನ ಗರಿಗಳ ಸಾಲು ಕರಾವಳಿಯ ಸೊಬಗನ್ನು ಹೆಚ್ಚಿಸುವುದರೊಂದಿಗೆ ಉಪ ಉತ್ಪನ್ನಗಳನ್ನು ಆಹಾರವಾಗಿಯೂ ಬಳಸಲಾಯಿತು. ತಮಗೆ ಬೇಕಾಗುವ ಆಹಾರದ ಲಭ್ಯತೆಯಲ್ಲಿ ಸ್ವಾವಲಂಬನೆಯನ್ನು ಹೊಂದುವುದು ಕೃಷಿ ವಿಸ್ತರಣೆಯ ಮೂಲ ಉದ್ದೇಶವಾಗಿತ್ತು. ಆಹಾರ ಸಂಗ್ರಹಣೆಯಿಂದ ಉತ್ಪಾದನೆಯ ಹಂತದಲ್ಲಿ ಆದ ದೀರ್ಘ ಪಲ್ಲಟಗಳ ಆಚೆಗೆ ಆಹಾರ ಸಂಸ್ಕರಣೆಯೂ ಮುಖ್ಯವಾಗಿತ್ತು. ಇಂದು ಇದ್ದುದನ್ನು ನಾಳೆಗೆ ತೆಗೆದಿರಿಸುವ ಕಾಲ, ದೇಶಗಳ ಆಚೆಗೆ ಪರಿಷ್ಕರಿಸುವ ಕೆಲಸವೂ ನಡೆಯುತ್ತಿತ್ತು. ಇದಕ್ಕೆ ಅನುಗುಣವಾಗಿ ಕರಾವಳಿಯಲ್ಲಿ ಆಹಾರದ ಬೆಳೆಗಳನ್ನು ಬೆಳೆಯುವುದು ಹೆಚ್ಚಾಗಬೇಕಿತ್ತು. ಕಾಡು ಕಡಿದು ನಾಡು ಮಾಡಿದ್ದಲ್ಲದೆ, ಕಾಡಲ್ಲೇ ಬೆಳೆಯುವ ಕುಮೆರಿ ಕೃಷಿಯನ್ನು ಬೆಳೆಯುತ್ತಾ ತಮ್ಮ ಅಗತ್ಯಕ್ಕೆ ಅನುಗುಣವಾಗಿ ಭತ್ತವನ್ನು ಬೆಳೆದರು. ಕರಾವಳಿಗೆ ವಿಶಿಷ್ಟವಾದ ಕೆಲವು ತಳಿಗಳನ್ನು ಪೋಷಿಸುವುದರ ಮೂಲಕ ಭತ್ತದ ಬೆಳೆಯಲ್ಲಿ ಅನನ್ಯತೆಯನ್ನು ಗುರುತಿಸಲಾಗಿತ್ತು. ಹಾಗಿದ್ದರೂ ಪ್ರಾದೇಶಿಕವಾಗಿ ಬೆಳೆಯುವ ಫಸಲುಗಳು ಹೆಚ್ಚಾಗುವುದರ ವ್ಯತಿರಿಕ್ತವಾಗಿ ಭತ್ತದ ಬೆಳೆ ಕ್ಷೀಣಿಸುತ್ತಾ ಬಂತು.

ಕೃಷಿಯನ್ನು ಮಾಡಲು ಯುವ ಪೀಳಿಗೆ ಮುಂದಾಗದೆ ಇದ್ದು, ನಗರೀಕರಣದ ಆಧುನಿಕ ಸವಲತ್ತಿನ ಬದುಕುಗಳಿಗೆ ಮಾರು ಹೋದುದು ಒಂದಂಶವಾದರೆ, ದುಡಿಮೆಯ ಪರಿಭಾಷೆಯೇ ಬದಲಾದುದು ಇನ್ನೊಂದು ಕಾರಣ. ಹೆಚ್ಚಿದ ನಗರೀಕರಣದಿಂದ ನಗರಕ್ಕೆ ವಲಸೆ ಬರುವವರ ಸಂಖ್ಯೆ ಹೆಚ್ಚಿತು. ನಾಲ್ಕಕ್ಷರ ಓದಲು ಬರೆಯಲು ಬಂದವರು ಗದ್ದೆಗಿಳಿಯುವುದೇ ಅವಮಾನವೆಂದು ಗ್ರಹಿಸಿದರು. ಸುಶಿಕ್ಷಿತ ಸಮಾಜದಲ್ಲಿ ತಂದೆ ತಾಯಿಗಳು ಆರಿಸಿಕೊಂಡ ವೃತ್ತಿಯನ್ನು ಮಕ್ಕಳು ಮುಂದುವರಿಸಿದಂತೆ ವೈದ್ಯರ ಮಕ್ಕಳು ವೈದ್ಯರು, ವಕೀಲರ ಮಕ್ಕಳು ವಕೀಲರು, ಶಿಕ್ಷಕರ ಮಕ್ಕಳು ಶಿಕ್ಷಕರು ಆದಂತೆ ಕೃಷಿಕರ ಮಕ್ಕಳು ಕೃಷಿಕರು ಆಗಲಿಲ್ಲ. ಕೆಸರು ತುಳಿದು ಹಸಿರು ಬೆಳೆಯುವ ಇಚ್ಛೆಯಾಗಲೀ, ಆಸಕ್ತಿಯಾಗಲೀ ಬೆಳೆಯದೆ ಇರಲು ಪ್ರಮುಖ ಕಾರಣ ಕೃಷಿಯಿಂದ ಲಾಭವಿಲ್ಲ, ಪ್ರಯೋಜನವಿಲ್ಲ ಎಲ್ಲವನ್ನು ದುಡ್ಡು ಕಾಸಿನ ಹಣದ ಲೆಕ್ಕಾಚಾರದಲ್ಲೇ ಅಳತೆ ಮಾಡಿದ್ದಲ್ಲದೆ, ಬದುಕಿನ ಮೌಲ್ಯಗಳಿಂದ ದೂರ ಉಳಿದು ಅವೇ ವಿಚಾರಗಳ ಬಗೆಗೆ ಚಿಂತಿಸಲಿಲ್ಲ. ಪರಿಸರ ಕಾಳಜಿಯ ಮಾತುಗಳಂತೂ ದೂರವೇ ಉಳಿಯಿತು. ಪಾರಂಪರಿಕವಾದ ಕೃಷಿ ಸಂಸ್ಕೃತಿಯ ಜ್ಞಾನ ತನ್ನ ಪ್ರಾಮುಖ್ಯತೆಯನ್ನು ಕಳಕೊಂಡು, ಎಲ್ಲವನ್ನು ಕಾಸು ಕೊಟ್ಟು ಖರೀದಿಸಬಹದು ಎಂಬ ಉಢಾಪೆಯ ಮನೋಧರ್ಮವೂ ಬೆಳೆಯಿತು. ಆಹಾರವನ್ನು ಬೆಳೆದು ಸ್ವಾವಲಂಬಿಗಳಾಗುವುದಕ್ಕಿಂತ ಅಗತ್ಯಕ್ಕೆ ತಕ್ಕಷ್ಟು ಅಂಗಡಿಯಿಂದ ಕೊಂಡು ತರುವುದು ಹೆಚ್ಚು ಸುಖವೆನಿಸಿತು. ತಂದ ಅಕ್ಕಿಯನ್ನು ಉಣ್ಣಲು ಆದೀತೇ ಎಂಬ ಪ್ರಶ್ನೆಯನ್ನು ಕೇಳಿಕೊಳ್ಳಲಿಲ್ಲ ಪರಿಣಾಮ ಆಹಾರದ ಧಾನ್ಯಗಳ ಬೇಡಿಕೆ ಹೆಚ್ಚಿದಂತೆಲ್ಲ ಪೂರೈಕೆ ಸಕಾಲಿಕವಾಗದೆ ವಿಳಂಬವಾಗುತ್ತಿತ್ತು. ದಿನನಿತ್ಯ ಅವಶ್ಯಕತೆಯ ಆಹಾರ ಸಾಮಾಗ್ರಿಗಳ ಬೆಲೆಗಳು ಗಗನಕ್ಕೇರಿದವು. ಆಹಾರದಲ್ಲಿ ಕಲಬೆರಕೆ ಹೆಚ್ಚಾಯಿತು. ರಾಸಾಯನಿಕ ಬಳಕೆ ಮಾಡಿ ದವಸ ಧಾನ್ಯಗಳನ್ನು ದೀರ್ಘಕಾಲದವರೆಗೆ ಸಂರಕ್ಷಿಸಿ ಇಡುತ್ತಿದ್ದುದರಿಂದ ಅಕ್ಕಿಯಲ್ಲಿ ಬೇಳೆಯಲ್ಲಿ ಹುಳ ಬೀಳಲಿಲ್ಲ. ಬೆಳೆದ ಹಣ್ಣು ಹಂಪಲು ತರಕಾರಿಗಳು

ದೀರ್ಘಕಾಲದವರೆಗೆ ಕೊಳೆಯದೆ ಉಳಿದವು. ಧಾನ್ಯಗಳಲ್ಲಿ ಸೇರಿಕೊಂಡ ರಾಸಾಯನಿಕ ನೇರ ದೇಹವನ್ನು ಸೇರಿ ಅಲ್ಲೂ ಕರಗದೆ ಇದ್ದುದರಿಂದ ಹೊಸ ಹೊಸ ರೋಗಗಳು ಕಾಣಿಸಿಕೊಂಡವು. ಉಣ್ಣುವ ಅನ್ನದ ಬಟ್ಟಲಿನಲ್ಲಿ ವಿಷ ಕಾಣಿಸಿತು.

ಆಹಾರದ ಬೇಡಿಕೆಗೆ ಅನುಗುಣವಾಗಿ ಪೂರೈಕೆ ನಡೆಸುವುದು ಅವಶ್ಯವಿತ್ತು. ಅತಿ ಕಡಿಮೆ ಸ್ಥಳದಲ್ಲಿ ಅತಿ ಹೆಚ್ಚು ಉತ್ಪಾದನೆ ಹೇಗೆ ಮಾಡಬಹುದು ಎನ್ನುವುದಕ್ಕೆ ಹೊಸ ತಳಿಗಳ ಅನ್ವೇಷಣೆಯಾಗಿ ಸಂಶೋಧನೆಗಳೂ ಬೆಳೆದವು. ಪಾರಂಪರಿಕವಾದ ಭತ್ತದ ತಳಿಗಳ ಬದಲಿಗೆ ಕುಲಾಂತರಿ ತಳಿಗಳ ಪ್ರವೇಶವಾಯಿತು. ಎಣೆಲು ಬೆಳೆಯಲ್ಲಿ ನೀರು ನಿಲ್ಲುವ ಬೈಲು ಗದ್ದೆಗಳಲ್ಲಿ ಪೈರು ಅಡ್ಡಕ್ಕೆ ಬೀಳದಿರುವ ಫಲಿತ ಬಲಿತ ಪೈರಿನ ಭತ್ತ ನೀರಲ್ಲಿ ಮೊಳಕೆಯೊಡೆಯದೆ ಇರುವುದರಿಂದ ಗಿಡ ತಳಿಗಳನ್ನು ಹುಡುಕಲು ತೊಡಗಿದರು. ಅತಿ ಕಡಿಮೆ ನೀರಿಗೆ ಹೆಚ್ಚು ಫಸಲು ಪಡೆಯಲು ಸಾಧ್ಯವಾಗುವ ಬೆಳೆ ಯಾವುದು ಎಂಬ ಶೋಧಗಳೂ ಹುಟ್ಟಿಕೊಂಡವು. ಹೊಸ ಅನ್ವೇಷಣೆಗಳೊಂದಿಗೆ ಹುಡುಕಾಡಿದ ತಳಿಗಳನ್ನು ಪೋಷಿಸಲು ಕೃಷಿ ವಿಜ್ಞಾನಿಗಳು ರಾಸಾಯನಿಕಗಳನ್ನು ಬಳಸುವಂತೆ ಸಲಹೆ ನೀಡಿದರು. ಸ್ವತಂತ್ರ ಭಾರತದ ಆರಂಭದ ಕೃಷಿ ಯೋಜನೆಗಳು ಉತ್ಪಾದನೆಯನ್ನು ಹೇಗಾದರೂ ಹೆಚ್ಚಿಸಬೇಕು ಎಂಬ ವಿಚಾರಕ್ಕೆ ಒತ್ತು ನೀಡದುದರಿಂದ ರಾಸಾಯನಿಕಗಳ ಬಳಕೆ ದಿನದಿಂದ ದಿನಕ್ಕೆ ಹೆಚ್ಚಾಯಿತು. ರಂಜಕ, ಗಂಧಕ, ಪೋಟಾಶಿಯಂ ರಾಸಾಯನಿಕಗಳನ್ನು ಮಣ್ಣಿಗೆ ಸೇರಿಸುತ್ತಾ ಬಂದುದರಿಂದ ಭೂಮಿ ಎಲ್ಲವನ್ನು ತನ್ನಲ್ಲಿ ಜೀರ್ಣಿಸಿಕೊಳ್ಳಲು ಸಾಧ್ಯವಾಗಲಿಲ್ಲ. ಭತ್ತಕ್ಕೆ ಬಿದ್ದ ಬೆಂಕಿ ರೋಗಕ್ಕೆ ಸಿಂಪಡಿಸಿದ ಔಷಧಿಗಳೂ ಮಣ್ಣಿನಲ್ಲಿ ಕರಗದೆ ಹೋದ ದಾರುಣತೆಯೇ ಹೆಚ್ಚಾಯಿತು. ವಿಘಟನೆಗೊಳ್ಳದೆ ಉಳಿದ ರಾಸಾಯನಿಕಗಳಿಂದ ಭೂಮಿಯ ಕ್ಷಾರ ಗುಣ ನಾಶವಾಗಿ ಫಲವಂತಿಕೆಯನ್ನು ಕಳಕೊಳ್ಳುವಂತಾಯಿತು. ಅತಿಯಾದ ರಾಸಾಯನಿಕಗಳ ಬಳಕೆ, ಬೆಳೆಗಳ ಫಸಲನ್ನು ಹೆಚ್ಚಿಸದಿದ್ದರೂ ಭೂಮಿ ಬಂಜರಾಯಿತು. ಪ್ರಾಕೃತಿಕವಾಗಿ ನಡೆಯುವ ಮಣ್ಣಿನ ಸವಕಳಿಗಿಂತ ವಿಭಿನ್ನವಾಗಿ ಬಹಳ ಬೇಗನೇ ಉತ್ಪತ್ತಿಯನ್ನು ಹೆಚ್ಚಿಸಿ ಆಹಾರದಲ್ಲಿ ಸ್ವಾವಲಂಬನೆಯನ್ನು ಹೊಂದಬೇಕೆಂಬ ಮನೋಧರ್ಮ ಪ್ರಕೃತಿಯ ಸಹಜ ತತ್ವವನ್ನು ನಾಶ ಮಾಡುವುದಕ್ಕೂ ಕಾರಣವಾಯಿತು. ಉತ್ಪಾದನೆಯನ್ನು ಹೆಚ್ಚಿಸಬೇಕೆಂಬ ಅತಿಯಾದ ಒತ್ತಡವನ್ನು ಭೂಮಿ ತಾಳಿಕೊಳ್ಳುವುದಕ್ಕಿಂತ ಪ್ರಕೃತಿ ನಾಶದ ಅಂಶಗಳೇ ಹೆಚ್ಚಾದವು. ಬಯಲು ಸೀಮೆಯಲಿ ವಿಸ್ತಾರವಾದ ಗದ್ದೆಗಳಿದ್ದ 'ಭತ್ತದ ಕಣಜ' ಗಳೆಂದೇ ಗುರುತಿಸಲ್ಪಟ್ಟಿದ್ದರೂ ಕರಾವಳಿಯ ಬತ್ತದ ಕಣಜವಾಗಿ ಗುರುತಿಸಿಕೊಂಡುದಲ್ಲ. ಎತ್ತರ, ತಗ್ಗು, ಬೈಲುಗದ್ದೆಗಳು ತಮಗೆ ಅವಶ್ಯವಾಗುವಂತೆ ಬಳಸಿಕೊಂಡು ಮಳೆ ನೀರನ್ನು ಆಶ್ರಯಿಸಿ ಬೆಳೆವ ಬೆಳೆಗಳು ಫಸಲನ್ನು ಪಡೆಯುವುದರೊಂದಿಗೆ ತಳಿಗಳು, ಋತುಮಾನಕ್ಕೆ ಅನುಗುಣವಾಗಿ ವ್ಯತ್ಯಾಸವಾಗುತ್ತಿತ್ತು. ವಾಸ್ತವದಲ್ಲಿ ಕರಾವಳಿಯಲ್ಲಿ ಉಳಿದ ಪ್ರದೇಶಗಳಿಗಿಂತ ಭಿನ್ನವಾಗಿ ಮೂರು ಬೆಳೆಗಳನ್ನು ಬೆಳೆದರೂ ಉತ್ಪತ್ತಿ ಹೆಚ್ಚುತ್ತದೆ ಎನ್ನಲು ಸಾಧ್ಯವಿಲ್ಲ. ಎಣೆಲು, ಸುಗ್ಗಿ. ಕೊಳಕೆ ಬೆಳೆಗಳಿಗೆ ಒಂದು ಬೆಳೆಗೆ ಬೆಳೆಸುವ ತಳಿ ಇನ್ನೊಂದು ಬೆಳೆಗೆ ಬಳಕೆ ಮಾಡಲು ಸಾಧ್ಯವಾಗುತ್ತಿಲ್ಲ. ತಳಿಯ ವೈವಿಧ್ಯತೆ, ಬೆಳೆ ಬೆಳೆಯುವ ಕ್ರಮದ ವಿಭಿನ್ನತೆ ಸೂಕ್ಷ್ಮ ಗ್ರಹಿಕೆಯ

ಎಚ್ಚರಿಕೆಯಿಂದ ಕೃಷಿ ಭೂಮಿಯನ್ನು ವಿಸ್ತರಿಸುತ್ತಾ ಆಹಾರದ ಸ್ವಾವಲಂಬನೆಯನ್ನು ನಡೆಸುವ ಮೂಲಕ ಅನ್ನದ ಬಟ್ಟಲನ್ನು ತುಂಬುವ ಪ್ರಯತ್ನ ನಡೆಸುತ್ತಾ ಬಂದರು.

ಮಿಶನರಿಗಳು ವ್ಯಾಪಾರಕ್ಕಾಗಿ ಇಲ್ಲಿ ಬಂದರು ಎಂಬ ಸರಳ ನಿರೂಪಣೆಯ ಗ್ರಹಿಕೆಗಳು ಆಚೆಗೂ ತಮ್ಮ ಬದಲಾವಣೆಗಳಲ್ಲಿ, ದಾಖಲಾತಿಯ ಬರಹಗಳಲಲ್ಲಿ ಕೃಷಿ ಜಗತ್ತನ್ನು ದಾಖಲಿಸಿದ್ದಾರೆ. ವ್ಯವಸಾಯ ಪಂಚಾಂಗದಲ್ಲಿ ಮಳೆ ಬೆಳೆಗಳ ಬಗೆಗೆ ಆಗಿನ ಜನ ಸಾಮಾನ್ಯರ ವಿವರಣೆ ನಿರೂಪಣೆಗಳನ್ನು ದಾಖಲಿಸಿದ್ದಾರೆ. ಪಾರಂಪರಿಕವಾದ ಭತ್ತದ ತಳಿಗಳ ಬಗೆಗೂ ಉಲ್ಲೇಖ ಮಾಡಿದ್ದಾರೆ. ಮಳೆಯ ವಿವರಣೆಯ ಮೂಲಕ ಬೆಳೆಯ ಗ್ರಹಿಕೆಯನ್ನು ಮಂಡಿಸಿದ್ದಾರೆ. ಜೆ.ಸ್ಟರ್ ಬುಕ್ ಎಂಬ ಮಿಶನರಿಯು 'ಸೌತ್ ಕೆನರಾ ಮ್ಯಾನ್ಯುವಲ್ ೧೮೯೪) ಎಂಬ ಕೃತಿಯಲ್ಲಿ ದ. ಕನ್ನಡದ ಒಟ್ಟು ಭೂಮಿಯ ವಿಸ್ತಾರವನ್ನು ೨,೪೯೭, ೨೬೦ ಎಕರೆ ಎಂದು ಅಂದಾಜಿಸಿ ಅಳತೆ ಮಾಡಿದ್ದಾರೆ. ಇದರಲ್ಲಿರುವ ಸರಕಾರಿ ಜಮೀನು ೨,೪೮೫,೧೬೨ ಎಕರೆ ಪ್ರದೇಶವು ಸರಕಾರಿ ಭೂಮಿಯಾಗಿದ್ದು ೧೨,೧೧೮ ಎಕರೆ ಭೂಮಿಯು ಹಿಡುವಳಿಯಾಗಿ ಬಳಕೆಗೆ ಅರ್ಹವೆನಿಸುತ್ತಿತ್ತು.

ಈ ಭೂಮಿಯ ವಿಸ್ತರಣೆಯು ಅಲ್ಲಿಗೆ ಅಷ್ಟಕ್ಕೆ ಉಳಿಯಲಿಲ್ಲ. ಕೃಷಿ ಯೋಗ್ಯ ಜಮೀನುಗಳನ್ನೆಲ್ಲ ಬೆಳೆ ಬೆಳೆದದ್ದಲ್ಲದೆ, ಭೂಮಿಯನ್ನು ಮತ್ತಷ್ಟು ವಿಸ್ತರಿಸುತ್ತ ಫಸಲುಗಳನ್ನು ಪಡೆಯಲು ಪ್ರಯತ್ನಿಸುತ್ತಿದ್ದರು. ಅನ್ನದ ಅನ್ವೇಷಣೆ ಮತ್ತು ಹುಡುಕಾಟಗಳ ಮಧ್ಯೆ ಉತ್ಪಾದನೆಯನ್ನು ಹೆಚ್ಚಿಸುವ ಪ್ರಯತ್ನಗಳು ನಿರಂತರವಾಗಿ ನಡೆದವು. ಒಂದು ಅಂಕಿ ಅಂಶದ ಪ್ರಕಾರ ೧೯೯೮-೯೯ ರಲ್ಲಿ ಉಡುಪಿ ಜಿಲ್ಲೆಯಲ್ಲಿ ಇದ್ದ ಕೃಷಿ ಭೂಮಿ ಪ್ರದೇಶ ೧,೪೫,೮೯೩ ಹೆಕ್ಟೇರ್ ಆಗಿತ್ತು. ೨೦೧೨ ರಲ್ಲಿ ಈ ಪ್ರದೇಶವು ಕೃಷಿ ಯೋಗ್ಯ ಭೂಮಿ ಎನಿಸಿಕೊಂಡಿದ್ದು ೧.೧೪.೫೭೨ ಹೆಕ್ಟೇರ್ ಭೂಮಿ. ಒಟ್ಟು ಹದಿಮೂರು ವರ್ಷಗಳಲ್ಲಿ ೩೧,೩೭೧ ಹೆಕ್ಟೇರ್ ಭೂಮಿ ಕೃಷಿ ಕಾಣೆಯಾಗಿವೆ. ಇದಕ್ಕೆ ಕಾರಣಗಳು ನೂರಾರು ಇದ್ದ  ಭೂಮಿಯನ್ನು ಬಳಸಿಕೊಳ್ಳದೆ ಇದ್ದು ಹಡೀಲು ಹಾಕಿದಲ್ಲದೆ  ಗದ್ದೆ ಕೆಲಸ ಮಾಡಿ ಬರುವ ಆದಾಯಕ್ಕಿಂತ ಮಿಗಿಲಾದ ಆದಾಯ ಬೇರೆ ವೃತ್ತಿಗಳಿಂದ ಬರುತ್ತಿತ್ತು. ಆದಾಯ ಉತ್ಪತ್ತಿಯೇ ಮುಖ್ಯವಾಯಿತಲ್ಲದೆ  ಆಹಾರದ ಸ್ವಾವಲಂಬನೆಯಲ್ಲ. ಸಾಂಪ್ರದಾಯಿಕವಾಗಿ ಸಹಜವಾಗಿ ನಡೆದ ಕೃಷಿ ಪಲ್ಲಟದೊಂದಿಗೆ ಆರ್ಥಿಕ, ಸಾಮಾಜಿಕ ಕಾರಣಗಳೂ ಮುಖ್ಯವಾದವು. ಹಳ್ಳಿಗಳು ವಯಸ್ಕರ ತಾಣಗಳಾಗಿ ಯುವಕರು ನಗರಕ್ಕೆ ವಲಸೆ ಹೋಗಿ ಸಣ್ಣ ಪುಟ್ಟ ಉದ್ಯೋಗಗಳಿಂದ ಹೊಟ್ಟೆ ಹೊರೆಸಿಕೊಳ್ಳುವುದು ಪ್ರಮುಖವಾಯಿತು. ಅನ್ನಕ್ಕಾಗಿ ಗದ್ದೆಗೇ ಮುಖ ಮಾಡಬೇಕಿಲ್ಲ. ದುಡ್ಡು ಕೊಟ್ಟರೆ ಅನ್ನವು ಲಭ್ಯವಾಗಬಹುದೆಂದು ಮಾತ್ರವಲ್ಲ ಅನ್ನವನ್ನು ದಾನ ಮಾಡಬೇಕೆಂದವರೆಲ್ಲ ಮಾರಾಟಕ್ಕಿಟ್ಟ ಸಂಗತಿ ಬಹಳ ದೊಡ್ಡ ಕೃಷಿ ಸಂಸ್ಕೃತಿಯ ಪಲ್ಲಟವಾಯಿತು. ಗದ್ದೆಯಲ್ಲಿ ದುಡಿದರೆ ಮಾತ್ರ ಹೊಟ್ಟೆ ತುಂಬಬೇಕಾಗಿಲ್ಲ, ಪಟ್ಟಣಗಳಲ್ಲಿ ಅಂಗಡಿ ಬೀದಿಗಳಲ್ಲಿ ದುಡಿದರೂ ಅನ್ನವನ್ನು ಪಡೆಯಲು ದುಡ್ಡಿನ ಸ್ವರೂಪದಲ್ಲಿ ಪಡೆಯಬಹುದೆಂಬ ಇರಾದೆಯೂ ಹುಟ್ಟಿಕೊಂಡಿತು. ಹೀಗೆ ಅನ್ನದ ಪ್ರಶ್ನೆ ವ್ಯವಹಾರದ ಸರಕಾಗಿ ಮಾರ್ಪಾಟು ಹೊಂದುತ್ತ ತೆರಳಿ ಮುಷ್ಟಿ ಅಕ್ಕಿಯನ್ನು ನೀಡುತ್ತಿದ್ದವರೆಲ್ಲ ಕಾಸಿನ ವ್ಯವಹಾರದಿಂದ ತಮ್ಮ ವ್ಯವಹಾರವನ್ನು ಕುದುರಿಸಿಕೊಂಡರು, ಬೆಳೆಯುವ ಬೆಳೆಯ ಪ್ರಮಾಣಗಳು ಕ್ಷೀಣಿಸಿ ಉತ್ಪತ್ತಿಗಳು ಕಡಿಮೆಯಾಗಿ ಕರಾವಳಿಯ ಅನ್ನದ ಬಟ್ಟಲು ಖಾಲಿಯಾಗುತ್ತ ಬಂತು. ಇಲ್ಲಿಯ ದಿನ ನಿತ್ಯದ

ವ್ಯವಹಾರದ ದಿನ ನಿರ್ವಹಣೆಯ ಆಹಾರಕ್ಕಾಗಿಯೂ ಪರರನ್ನು ಅವಲಂಬಿಸಬೇಕಾದ ಅನಿವಾರ್ಯತೆ ಒದಗಿತು.

ಮಿಷನರಿಗಳು ಆರಂಭಿಸಿದ ಕೈಗಾರಿಕೆಗಳು ಆರಂಭದಲ್ಲಿ ಯಂತ್ರ ನಾಗರಿಕತೆಯ ಉಗಮಕ್ಕೆ ಕಾರಣವಾಯಿತು. ವಸಾಹತುಶಾಹಿ ಆಡಳಿತ, ಯುರೋಪ್‌ನ ಕೈಗಾರಿಕಾ ಕ್ರಾಂತಿ, ಕಚ್ಚಾ ವಸ್ತುವಾಗಿಬಳಸಿಕೊಂಡು ಸಿದ್ಧವಸ್ತುಗಳನ್ನಾಗಿ ತಯಾರಿಸಿದ ಯಾಂತ್ರೀಕರಣದ ಪ್ರಕ್ರಿಯೆ ಕಾರ್ಖಾನೆಗಳು ಉಗಮಿಸಲು ಕಾರಣವಾಯಿತು. ಕರಾವಳಿಯ ಭೌಗೋಳಿಕತೆಯೇ ಕಾರ್ಖಾನೆಗಳ ಹುಟ್ಟಿಗೆ ಕಾರಣವಾದಂತೆ ಕೃಷಿ ಭೂಮಿ ನಾಶವಾಗಲು ಪ್ರಮುಖ ಸಾಧನವಾಯಿತು. ನದಿ ಬದಿಯ ಭೂಮಿಗಳಲ್ಲಿ ನಾಗರಿಕತೆಯು ಹುಟ್ಟಿಕೊಂಡವು ಎಂದು ಚರಿತ್ರೆಯನ್ನು ಉಲ್ಲೇಖಿಸುತ್ತೇವೆ. ನಾಗರಿಕತೆಯು ನವ ನಾಗರಿಕತೆಯೆಡೆಗೆ ಸಾಗಿದಂತೆಲ್ಲ ಕೃಷಿ ನಾಶವಾಗುತ್ತ ಕಾಡು ಮತ್ತು ಕಡಲಿನ ಸಾಮೀಪ್ಯದಿಂದ ಸಂಚಾರ ಸಾಧನಗಳು ಹೆಚ್ಚು ಅಭಿವೃದ್ಧಿ ಹೊಂದಿದವು. ಜಲ ಮಾರ್ಗ, ವಾಯು ಮಾರ್ಗ, ನೆಲ ಮಾರ್ಗಗಳನ್ನು ವಿಸ್ತರಣೆಗೊಂಡು ಸಂಚಾರ ಸಾಧನಗಳು ಸಂಪರ್ಕವನ್ನು ಹೆಚ್ಚು ಹತ್ತಿರಕ್ಕೆ ತಂದವು. ಕೈಗಾರಿಕೆಗಳ ಅಭಿವೃದ್ಧಿಗೆ ಸಾರಿಗೆಯೂ ಒಂದು ಪ್ರಮುಖ ಕಾರಣ. ಈ ಎಲ್ಲಾ ಸವಲತ್ತುಗಳನ್ನು ಹೊಂದಿದ ಕರಾವಳಿಯಲ್ಲಿ ಕೈಗಾರಿಕೆಗಳು ಒಂದೊಂದಾಗಿ ಅಡಿ ಇಟ್ಟವು. ನದಿ ಬದಿಯ ಭೂಮಿಗಳಲ್ಲಿ ಮೊದಲಿಗೆ ಹೆಂಚಿನ ಕಾರ್ಖಾನೆಗಳು, ನಂತರದಲ್ಲಿ ಗೇರು ಬೀಜದ ಕಾರ್ಖಾನೆಗಳೂ ಹುಟ್ಟಿಕೊಂಡವು. ಕ್ರಮೇಣದಲ್ಲಿ ಹುಟ್ಟಿಕೊಂಡ ಬಟ್ಟೆಯ ಗಿರಣಿಗಳು ಬೀಡಿ ಉದ್ದಿಮೆ ದುಡಿಮೆಯ ಪರಿಭಾಷೆಯನ್ನೇ ಬದಲಾಯಿಸಿತು. ದುಡಿಯುವುದೆಂದರೆ ಗದ್ದೆಯಲ್ಲಿ ದುಡಿಯುವುದು ಎಂಬ ಪೂರ್ವ ಗ್ರಹಿಕೆಗಳನ್ನು ದಾಟಿ ದುಡಿಯುವುದು ಕೇವಲ ದುಡ್ಡಿಗಾಗಿ ಅಲ್ಲ ಅನ್ನಕ್ಕಾಗಿ ಎಂಬ ವಿಚಾರ ಹಿನ್ನೆಲೆಗೆ ಸರಿಯಿತು. ಎಲ್ಲವನ್ನೂ ಕಾಸು ಕೊಟ್ಟು ಖರೀದಿಸಬಹುದು ಎಂಬ ಮನೋಭಾವ ಸೃಷ್ಟಿಯಾಯಿತು. ನಿಧಾನವಾಗಿ ಕರಾವಳಿಯಲ್ಲಿ ಹುಟ್ಟಿಕೊಂಡ ಹೊಸ ಹೊಸ ಉದ್ದಿಮೆಗಳು ಕೃಷಿ ಭೂಮಿಯನ್ನು ಕಬಳಿಸಿತು. ಮಂಗಳೂರಿನಲ್ಲಿ ಸ್ವಾತಂತ್ರ್ಯಾ ನಂತರದ ದಿನಗಳ ಪಂಚವಾರ್ಷಿಕ ಯೋಜನಾ ದಿನಗಳಲ್ಲಿ ಕೃಷಿಗೆ ಒತ್ತು ಕೊಟ್ಟರೂ ಕೈಗಾರಿಕೆಗಳೂ ಪ್ರಾಮುಖ್ಯತೆ ಪಡಕೊಂಡವು. ಕೃತಕ ಬಂದರಿನ ಸ್ಥಾಪನೆಯಿಂದ ವ್ಯಾಪಾರ ವೃದ್ಧಿಯಾಯಿತು. ರೈಲು ಮಾರ್ಗ, ವಿಮಾನ ನಿಲ್ದಾಣಗಳ ಸ್ಥಾಪನೆಯ ಕಾರ್ಖಾನೆಯ ಸಂಖ್ಯೆ ಹೆಚ್ಚಲು ಕಾರಣವಾಯಿತು. ನವ ಮಂಗಳೂರು ಬಂದರು ಎಂ.ಸಿ.ಎಫ್ ಕಾರ್ಖಾನೆ, ಕುದುರೆ ಮುಖ ಕಂಪೆನಿಗಳ ಜತೆಗೆ ೩,೪೦೦ ಸಾವಿರಾರು ಎಕರೆ ಭೂಮಿಯನ್ನು ಕಬಳಿಸಿತು. ನಿಧಾನವಾಗಿ ಕಾಲಿಟ್ಟ ಬಿ.ಎ.ಎಸ್.ಎಫ್, ನಾಗಾರ್ಜುನ, ಸುಜ್ಲಾನ್, ನಂತಹ ಕಂಪೆನಿಗಳು ಇಲ್ಲಿಯ ನೆಲ ಜಲವನ್ನು ನಾಶ ಮಾಡುವುದರೊಂದಿಗೆ ಕೃಷಿ ಮಾಡುವ ಗದ್ದೆಗಳೆಲ್ಲಾ ಒತ್ತುವರಿಯಾದವು. ಕೃಷಿ ಭೂಮಿ ಸಾವಿರಾರು ಎಕರೆಗಳಲ್ಲಿ ಕೈಗಾರಿಕೆಯಾಗಿ ರೂಪಾಂತರ ಹೊಂದಿತು. ಮಂಗಳೂರಿನಲ್ಲಿ ಆರಂಭಗೊಂಡ ವಿಶೇಷ ಆರ್ಥಿಕ ವಲಯದಿಂದ ಕಾರ್ಖಾನೆಗಳ ದಂಡೇ ಕರಾವಳಿಗೆ ಆಗಮಿಸಲು ಸಾವಿರಾರು ಎಕರೆ ಕೃಷಿ ಭೂಮಿ ಒತ್ತುವರಿಯಾಯಿತು. ಇತ್ತೀಚಿಗಿನ ಅಂಕಿ ಅಂಶಗಳಂತೆ ಕರಾವಳಿಯಲ್ಲಿ ಕೃಷಿ ಕಾಣೆಯಾದ ಭೂಮಿಯ ವಿಸ್ತಾರ ಅತಿ ಹೆಚ್ಚಿನದು. ಆರು ವರ್ಷಗಳ ಹಿಂದೆ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ೩೪ ಸಾವಿರ ಹೆಕ್ಟೇರ್‌ಗೆ ಭತ್ತ

ಬೆಳೆಯಲಾಗುತ್ತಿತ್ತು. ೨೦೧೬-೧೭ ರ ಸಾಲಿನಲ್ಲಿ ಇದು ೨೮,೫೪೦ ಹೆಕ್ಟೇರ್‌ಗೆ ಕುಸಿದಿದೆ. ೨೦೧೦-೧೧ ರಲ್ಲಿ ಮಂಗಳೂರು ತಾಲ್ಲೂಕಿನಲ್ಲಿ ೧೨,೧೦೦, ಬಂಟ್ವಾಳದಲ್ಲಿ ೯,೫೦೦, ಬೆಳ್ತಂಗಡಿಯಲ್ಲಿ ೮,೫೦೦, ಪುತ್ತೂರಿನಲ್ಲಿ ೩,೪೦೦, ಸುಳ್ಯದಲ್ಲಿ ೫೦೦ ಹೆಕ್ಟೇರ್ ಪ್ರದೇಶದಲ್ಲಿ ಮುಂಗಾರಿನಲ್ಲಿ ಭತ್ತ ಬೆಳೆಯಲಾಗುತ್ತಿತ್ತು. ೨೦೧೬-೧೭ ನೇ ಸಾಲಿನಲ್ಲಿ ಮಂಗಳೂರು ತಾಲ್ಲೂಕಿನಲ್ಲಿ ೮,೯೦೦, ಬಂಟ್ವಾಳದಲ್ಲಿ ೮,೮೦೦, ಬೆಳ್ತಂಗಡಿಯಲ್ಲಿ ೭,೭೦೦, ಪುತ್ತೂರಿನಲ್ಲಿ ೨,೫೦೦, ಸುಳ್ಯದಲ್ಲಿ ೪೯೦ ಹೆಕ್ಟೇರ್ ಪ್ರದೇಶದಲ್ಲಿ ಭತ್ತ ಬೆಳೆಯಲಾಗಿದೆ. ೨೦೧೭-೧೮ ನೇ ಸಾಲಿನಲ್ಲಿ ೨೮ ಸಾವಿರ ಹೆಕ್ಟೇರ್‌ನಲ್ಲಿ ಭತ್ತದ ಬಿತ್ತನೆ ಗುರಿ ಹೊಂದಲಾಯಿತು. ಇದರಿಂದಾಗಿ ಜಿಲ್ಲೆಯಲ್ಲಿ ಆರು ವರ್ಷಗಳಲ್ಲಿ ಭತ್ತ ಬೆಳೆಯುವ ಪ್ರದೇಶದಲ್ಲಿ ಸುಮಾರು ಆರು ಸಾವಿರ ಹೆಕ್ಟೇರ್‌ನಷ್ಟು ಕಡಿಮೆಯಾಗಿದೆ. (ಪ್ರಜಾವಾಣಿ ದಿನ ಪತ್ರಿಕೆ ಜೂನ್ ೨೮, ೨೦೧೭, ಕರಾವಳಿ ಪ್ರಕಟಣೆ).

ಬೇರೆ ಬೇರೆ ಕಾರಣಗಳಿಗಾಗಿ ಕಾಣೆಯಾಗಿರುವ ಭತ್ತದ ಗದ್ದೆಗಳನ್ನು ಸುದ್ದಿಯಾಗಿ ಓದುವುದು ಸುಲಭ. ಕರಾವಳಿಯ ಅನ್ನದ ಬಟ್ಟಲು ಬರಿದಾಗುತ್ತಿರುವುದರಿಂದ ಸಹಜವಾಗಿಯೇ ಪ್ರಾಕೃತಿಕ ವೈಪರೀತ್ಯಗಳೊಂದಿಗೆ ಬದುಕು ನಿತ್ಯ ಹೋರಾಟವೇ ಆಗಿದೆ. "ತುಪ್ಪ ಅಶನ ಉಂಬಲೆ ತುಳುನಾಡಿ ಗೋಯಿಕ್ಕು' ಎಂಬ ರೂಢಿಯ ಮಾತು ಸುಳ್ಳಾಗಲು ಆರಂಭವಾಗಿದೆ. ಕಾಂಕ್ರಿಟ್ ಕಾಡು ಕಟ್ಟಲು ಬರುವ ಉತ್ತರ. ಕರ್ನಾಟಕದ ವಲಸೆ ಕಾರ್ಮಿಕರಲ್ಲದೆ, ಉತ್ತರ ಭಾರತದಿಂದಲೂ ಗುತ್ತಿಗೆ ಕಾರ್ಮಿಕರಾಗಿ ವಲಸೆ ಬರುತ್ತಿರುವವರ ಸಂಖ್ಯೆ ದಿನದಿಂದ ದಿನಕ್ಕೆ ಹೆಚ್ಚುತ್ತಿದೆ. ಅತಿ ವೇಗವಾಗಿ ಬೆಳೆಯುತ್ತಿರುವ ಮಂಗಳೂರು ನಗರ ತನ್ನ ಕಬಂಧ ಬಾಹುಗಳನ್ನು ಉದ್ದಕ್ಕೂ ಚಾಚುತ್ತಿದೆ. ನಗರ ಬೆಳೆದಂತೆಲ್ಲಾ ಕೃಷಿ ಭೂಮಿ ಒತ್ತುವರಿಯಾಗುತ್ತಿದೆ. ಕಾರ್ಖಾನೆಗಳಿಗಂತೂ ಪ್ರಾಕೃತಿಕ ಸಂಪತ್ತುಗಳನ್ನು ನಿರಂತರವಾಗಿ ಲೂಟಿ ಮಾಡುತ್ತಲೇ ಇವೆ. ಕರಾವಳಿ ಎಲ್ಲ ಬದಲಾವಣೆ ಹೊಸತನಗಳಿಗೆ ತನ್ನನ್ನು ಒಡ್ಡಿಕೊಳ್ಳಲು, ಇದು ಕೈಗಾರಿಕಾ ಪ್ರದೇಶಗಳಾಗಿ ಪರಿವರ್ತನೆ ಹೊಂದುವಾಗಲೂ ಅಂತಹ ಪ್ರತಿಭಟನೆಗಳನ್ನು ಏನನ್ನೂ ವಿರೋಧಗಳನ್ನು ಗುರುತಿಸಲು ಸಾಧ್ಯವಾಗಿಲ್ಲ. ಪರಿಣಾಮ ದಿನದಿಂದ ದಿನಕ್ಕೆ ಕೃಷಿ ಭೂಮಿ ನಾಶವಾಗುತ್ತ ಬಂತು. ಕೃಷಿ ಕಾಣೆಯಾಗುತ್ತ ಬರುತ್ತಿರುವ ಈ ವರ್ತಮಾನದ ಬಿಕ್ಕಟ್ಟಿಗೆ ಕರಾವಳಿ ಆಹಾರಕ್ಕಾಗಿ ಪರಾವಲಂಬಿಯಾಗುತ್ತಿದೆ. ಮರಳಿ ಮಣ್ಣಿಗೆ ಬರಬೇಕಾದ ಅವಶ್ಯಕತೆ ಜರೂರತ್ತು ಇದ್ದರೂ ಐಟಿ ಬಿಟಿ ಕಂಪೆನಿಗಳಲ್ಲಿ ದುಡಿಯಲು ಮಕ್ಕಳನ್ನು ಸಿದ್ಧ ಮಾಡುವ ಭರದಲ್ಲಿ ಮಣ್ಣಿನ ಸಾರವನ್ನು ಸತ್ವವನ್ನು ಮರೆತು ಬಿಟ್ಟೆವು. ಕರಾವಳಿಯ ಮಕ್ಕಳು ಆರಂಭದ ದಿನಗಳಲ್ಲಿ ಶಿಕ್ಷಣ ಪಡೆದು ಮುಂಬೈಗೆ ತೆರಳಿ, ಸ್ವಾವಲಂಬಿಗಳಾದರೆ, ಎರಡನೆಯ ಹಂತದಲ್ಲಿ ಅರಬ್ ದೇಶಗಳಿಗೆ ವಲಸೆ ಹೋದರು. ಅನ್ನ ಅರಸುತ್ತಾ ಕರಾವಳಿ ಮಂದಿ ತೆರಳಿದ್ದು ಒಂದು ವಿಧವಾದರೆ ತಮ್ಮ ತುತ್ತಿನ ಚೀಲ ಹುಡುಕುತ್ತಾ ಕರಾವಳಿಗೆ ವಲಸೆ ಬಂದವರಲ್ಲಿ ಉತ್ತರ ಕರ್ನಾಟಕ ಮತ್ತು ಉತ್ತರ ಭಾರತದವರು ವಲಸೆ ಬಂದರು. ಅವರ ಆಹಾರ ಕ್ರಮದಲ್ಲಿ ವ್ಯತ್ಯಾಸವಿದ್ದರೂ, ಕಟ್ಟಿದ ಕಾಂಕ್ರಿಟ್ ಕಾಡುಗಳ ಕಟ್ಟಡಗಳಿಂದ ಕೃಷಿ ಭೂಮಿ ನಾಶವಾಗುತ್ತ ಬಂತು, ಕರಾವಳಿಯ ಆಹಾರದ ಸ್ವಾವಲಂಬನೆ ಕ್ಷೀಣಿಸುತ್ತಾ ಅನ್ನದ ಬಟ್ಟಲು ಬರಿದಾಗುತ್ತಾ ಬಂತು.

ತಲೆಮಾರುಗಳ ಕತೆಯನ್ನು ಅತ್ಯಂತ ದೀರ್ಘವಾಗಿ ಹೇಳುತ್ತಾ ಸುಮಾರು ನೂರು ವರ್ಷದ ತುಳುನಾಡಿನ ಸಾಮಾಜಿಕ ಬದುಕಿನ ದಾಖಲಾತಿಯೊಂದಿಗೆ ಸಮುದಾಯಗಳ ಏಳು ಬೀಳಿನ ನಡೆಯನ್ನು ನಿರೂಪಿಸುತ್ತ ಸಾಗಿದ ಕಾದಂಬರಿ ನಾ.ಮೊಗಸಾಲೆಯವರ 'ಉಲ್ಲಂಘನೆ' ಈ ಕಾದಂಬರಿಯನ್ನು ಓದುವಾಗ ತಟ್ಟನೆ ಮನಸ್ಸಿಗೆ ಬರುವ ವಿಷಯವೆಂದರೆ ಅವರು 'ಕತೆ ಹೇಳುವ' ಕನ್ನಡದ ಸಂಪ್ರದಾಯದಲ್ಲಿ ನಿಂತೇ ಕೃತಿ ರಚಿಸಿರುವುದು ಪೀಳಿಗೆಗಳ ಕತೆ ಹೇಳುವಾಗ  ಕಾದಂಬರಿಗೆ ದಕ್ಕುವ ಹರಹು ಅಗಾಧವಾದದ್ದು ಮತ್ತು ಹಾಗೆಯೇ ಪಾತ್ರ ವೈವಿಧ್ಯವೂ ಬಹು ಪಾರ್ಶ್ವ ಉಳ್ಳದ್ದು. ಮೊಗಸಾಲೆಯವರ ಕಾದಂಬರಿಗೆ ಆರಿಸಿಕೊಂಡ ವಸ್ತು ಬಂಟರ ಜಮೀನು ದಾರಿ ಪದ್ಧತಿ ಮತ್ತು ಸ್ವಾತಂತ್ರ್ಯ ಪೂರ್ವ ಕಾಲದಲ್ಲಿ ಅವರು ಬದುಕಿದ ರೀತಿಗೆ ಸಂಬಂಧಿಸಿದ್ದಾಗಿದೆ. ಸ್ವಾತಂತ್ರ್ಯಾ ನಂತರದ ದಿನಗಳಲ್ಲಿ ಸಮುದಾಯದ ಬದಲಾದ ಸಾಮಾಜಿಕ ಸ್ಥಿತಿಗತಿಗಳು ಸಮಾಜ ಶಾಸ್ತ್ರೀಯ ನೆಲೆಯಲ್ಲೂ ಮುಖ್ಯವಾದುದು. ಮಾತ್ರ ಮೂಲದ ವ್ಯವಸ್ಥೆಯು ಹೊರಗಿನ ವ್ಯವಸ್ಥೆಯಾದ ಹೊರಜಗತ್ತಿನ ವೇಗ ದ ಬದಲಾವಣೆಯೊಂದಿಗೆ ಸಾಮಾಜಿಕ ವ್ಯವಸ್ಥೆಯಲ್ಲೂ ಸ್ಥಿತ್ಯಂತರವನ್ನು ತರುತ್ತದೆ. ವಸಾಹತುಶಾಹಿ ಆಡಳಿತ ಮತ್ತು ಅದರಿಂದಾದ ಪಲ್ಲಟಗಳು, ಸ್ವಾತಂತ್ರ್ಯಾ ನಂತರದಲ್ಲಿ ಸಾಮಾಜಿಕ ನ್ಯಾಯಕ್ಕಾಗಿ ನಡೆದ ಭೂ ಸುಧಾರಣಾ ಚಳುವಳಿ ಒಟ್ಟು ಸಾಮುದಾಯಿಕ ಬದುಕಿನಲ್ಲಿ ಆದಬದಲಾವಣೆಗಳನ್ನು ದಾಖಲುಗೊಳಿಸುತ್ತದೆ. ಸಮುದಾಯವೊಂದು ಅಧಿಕಾರ ಕೇಂದ್ರದಲ್ಲಿದ್ದು ಈ ಸ್ಥಿತ್ಯಂತರಗಳಿಗೆ ಸಕರಾತ್ಮಕವಾಗಿ ಹಾಗೂ ನಕರಾತ್ಮಕವಾಗಿ ಹೇಗೆ ಪ್ರತಿಕ್ರಿಯೆಸುತ್ತದೆ ಎನ್ನುವುದು ಮುಖ್ಯವಾಗುತ್ತದೆ. ಸಾಮಾಜಿಕ ಮುಕ್ತತೆ ಸಮುದಾಯಗಳ ನಡುವೆ ಹುಟ್ಟು ಹಾಕುವ ಸಂಘರ್ಷ ಮತ್ತು ಅನಿವಾರ್ಯವಾಗಿ ಬೇರೆ ಆದಾಯಗಳ ಮೂಲಕ್ಕಾಗಿ ನಡೆಯುವ ವಲಸೆಯೂ ಮುಖ್ಯವಾಗುತ್ತದೆ. ಅನಪೇಕ್ಷಿತವಾದ ಇನ್ನಿತರ ಕಾರ್ಯ ಚಟುವಟಿಕೆಗಳು ಹುಟ್ಟಿಕೊಳ್ಳಲೂ ಕಾರಣವಾಗುತ್ತದೆ. ಕೃಷಿ ಬದುಕು ಸ್ಥಿತ್ಯಂತರಗೊಂಡಂತೆಲ್ಲ ಬದಲಾದ ಸಾಮಾಜಿಕ ಬದುಕಿನ ಏಳು–ಬೀಳುಗಳನ್ನು, ಹುಟ್ಟಿಕೊಂಡ ಹೊಸ ಸವಾಲುಗಳನ್ನು ಸಾಮಾಜಿಕ ಪಿಡುಗುಗಳನ್ನು ದಾಖಲಾಗುತ್ತ ನಿರೂಪಣೆಗೊಳ್ಳುತ್ತ ಹೋಗಿದೆ.

ಕೃಷಿ ಸಂಸ್ಕೃತಿ ಪಲ್ಲಟದ ಕೊನೆಯ ಹಂತವಾಗಿ ಕೃಷಿ ಕಾಣೆಯಾಗುತ್ತ ಬಂದಂತೆ ಭೂಮಿ ಬಂಜರಾದಂತೆ ಬದುಕೂ ಬಂಜರಾಯಿತು. "ಮಂಗಳೂರು ಈಗ ಸ್ಪೆಶಲ್ ಇಕೊನೋಮಿಕ್ಸ್ ಜೋನ್ ಆಗಿದೆ ಎಂಬುದು ನಿನಗೂ ಗೊತ್ತಲ್ಲ?' ಅಲ್ಲಿ ಅಂದರೆ ಮಂಗಳೂರಿನ ಸುತ್ತಮುತ್ತ ಎಸ್. ಇ.ಝಡ್ ಯೋಜನೆಗೆ ಭೂಮಿ ಸ್ವಾಧೀನಪಡಿಸುವ ಪ್ರಕ್ರಿಯೆ ಪ್ರಾರಂಭವಾಗಿದೆಯಂತೆ. ಮಂಗಳೂರಿನ ಸುತ್ತಮುತ್ತಲಿನ ಪಣಂಬೂರು, ಗಂಜಿಮಠ ಮೊದಲಾದ ಕಡೆ  ಭೂ ಸ್ವಾಧೀನ ಪ್ರಕ್ರಿಯೆ ಜೋರಾಗಿ ಪ್ರಾರಂಭವಾಗಿ, ಇನ್ಫೋಸಿಸ್, ವಿಪ್ರೊ, ಟಾಟಾ ಕನ್ಸಲ್ಟೆನ್ಸಿಯಂಥ ಕಂಪೆನಿಗಳು ಪಾದಾರ್ಪಣೆ ಮಾಡುತ್ತಿರುವುದು ಪತ್ರಿಕೆಗಳಲ್ಲೂ ಬಂದಿದೆಯಂತೆ. ಈಗ ನಮ್ಮ ಕೊಣಾಜೆ ಪ್ರದೇಶದ ಕಡೆಗೂ ಎಲ್ಲಾ ಕಂಪೆನಿಗಳು ಕಣ್ಣು ಹಾಕಿವೆಯಂತೆ. ನಮ್ಮ ಎಂ.ಆರ್.ಪಿ.ಎಲ್. ನಂಥ ಇನ್ನೊಂದು ಪಿ.ಸಿ.ಪಿ.ಆರ್ ಎನ್ನುವ ಸಂಸ್ಥೆಯೂ ಕೊಣಾಜೆ, ಕುರ್ನಾಡು, ಬಾಳೆಪುಣಿ, ಒಂಭತ್ತುಕೆರೆ ಮೊದಲಾದ ಪ್ರದೇಶಗಳಲ್ಲಿ ತಲೆ ಎತ್ತುವ ಸಂಭವ ಇದೆ ಎಂಬ ಸುದ್ದಿ ಇದೆಯಂತೆ. ಇದಕ್ಕಾಗಿಯೇ ನಮ್ಮ ಪ್ರಶಾಂತನ ಬಾಸ್ ಮೆಹ್ತಾ ಕೂಡಾ ತಮ್ಮ ಐಟಿ ಪಾರ್ಕ್ ನ್ನು ಅಲ್ಲಿ ಪ್ರಾರಂಭಿಸುವ ಉತ್ಸಾಹದಲ್ಲಿದ್ದಾರಂತೆ

ಅಷ್ಟೆ ಅಲ್ಲ ಮೆಹ್ತಾ ಇನ್‌ವೆಸ್ಟ್‌ಮೆಂಟ್ ಎಂಡ್ ಡೆವಲಪ್ಸ್ ಎಂಬ ಸಂಸ್ಥೆಯನ್ನು ಅವರು ಹುಟ್ಟು ಹಾಕಿ, ಕೈಗಾರಿಕಾ ಅಭಿವೃದ್ಧಿ ಮಂಡಲಿ ಭೂಸ್ವಾಧೀನ ಪಡಿಸಿಕೊಳ್ಳುವ ಮುಂಚೆಯೇ ನಮ್ಮ ಒಂಭತ್ತು ಕೆರೆಯಲ್ಲಿ ಎಷ್ಟು ಜಮೀನು ಸಿಗುತ್ತದೋ ಅಷ್ಟನ್ನೂ ಕ್ರಯಕ್ಕೆ ಪಡೆದುಕೊಂಡು, ಆಮೇಲೆ ಕೈಗಾರಿಕಾ ಅಭಿವೃದ್ಧಿ ಮಂಡಲಿಗೋ ಅಥವಾ ಖಾಸಗಿ ಕಂಪೆನಗಳಿಗೋ ಮಾರುವ ಯೋಜನೆ ಹಾಕಿಕೊಂಡಿದ್ದಾರಂತೆ...". (ಮೊಗಸಾಲೆ.ನಾ ೨೦೦೮;ಪು. ೫೪೦) ಪ್ರಜ್ಞಾಳಿಗೆ ತಾಯಿ ಶಾರದಾ ವಿಚಾರಗಳನ್ನು ಅರುಹುತ್ತಾ ಸೋದರ ಮಾವ ಸುಂದರನ ಮಗನಾದ ಪ್ರಶಾಂತ ಆಗಾಗ ಸಾಂತೇರ್ ಗುತ್ತಿಗೆ ತೆರಳಿರುವ ಸಂಗತಿಯನ್ನು ತಿಳಿಸುತ್ತಾಳೆ. ಅಜ್ಜಿಯನ್ನು ನೋಡಲು ಊರಿನ ಮೇಲಿನ ಅಭಿಮಾನದಿಂದ ಎಂದು ಭಾವಿಸಿದ್ದರೆ ತಪ್ಪು ಆತ ತನ್ನ ಬಾಸ್ ಅಶೋಕ್ ಮೆಹ್ತಾನಿಗೆ ಸಹಾಯ ಮಾಡಿಕೊಡುವ ದುರುದ್ದೇಶದಿಂದ ಎಂಬ ಸತ್ಯ ಆಕೆಗೆ ತಿಳಿಯುತ್ತದೆ. 'ನಮ್ಮ ಗುತ್ತಿನ ಮನೆಯೂ ಸೇರಿದಂತೆ ನಮ್ಮ ಹಿರಿಯರ ಜಮೀನನನ್ನೆಲ್ಲ ಈ ಎಸ್.ಇ.ಝಡ್ ಯೋಜನೆ ಜ್ಯಾರಿಯಾಗುವ ಮೊದಲೆ ತನ್ನ ಬಾಸ್‌ಗೆ ತೆಗೆದುಕೊಳ್ಳಲು ಅನುಕೂಲ ಮಾಡಿಕೊಡುವುದಕ್ಕಂತೆ ಅಷ್ಟೇ ಅಲ್ಲ ನಮ್ಮ ಹಿಂದಿನ ಗೇಣಿದಾರರೆಲ್ಲ ಇದ್ದಾರಲ್ಲ ಒಕ್ಕಲುಗಳಾಗಿ, ಅವಕ್ಕೆಲ್ಲ ಈಗ ಭೂಮಿಯ ಹುಚ್ಚು ಬಿಟ್ಟಿದೆ. ಅವರೆಲ್ಲ ಭೂನ್ಯಾಯ ಮಂಡಲಿಯಿಂದ ತಮಗೆ ಬಂದ ಹೊಲಗಳನ್ನು ವಿಕ್ರಯಿಸಲು ತುದಿಗಾಲಲ್ಲಿ ನಿಂತಿದ್ದಾರಂತೆ. ಅಂಥವರ ಭೂಮಿಯನ್ನೆಲ್ಲ ಮಧ್ಯವರ್ತಿಗಳನ್ನು ಹಿಡಿದು ಎಷ್ಟು ಸಾಧ್ಯವುಂಟೋ ಅಷ್ಟು ಕಡಿಮೆ ಕ್ರಯದಲ್ಲಿ ಇವನೇ ಕೊಂಡುಕೊಂಡು ತನ್ನ ಬಾಸ್‌ಗೆ ಕೊಡಿಸಲು ಹೊರಟಿದ್ದಾನಂತೆ (ಅದೇ, ಪು. ೫೪೦) "ಅದಕ್ಕೆ ಅವನು ಒಂದು ತಿಂಗಳ ಒಳಗೆ ನಮ್ಮ ಜಮೀನಿನ ರೆಕಾರ್ಡ್, ರೆಕರ್ಡ್ ಆಪ್ ರೈಟ್ಸ್ ಎಲ್ಲ ತಂದೊಪ್ಪಿಸಲು ಹೇಳಿದ್ದಾರೆ. ಬಾಸ್, ಓ.ಕೆ ಸರ್ ಎಂದು ಒಪ್ಪಿದ್ದೇನೆ ನಾನು. ಈಗ ಆಗುವುದಿಲ್ಲ ಎಂದು ಹೇಗೆ ಹೇಳಲಿ ಅತ್ತೆ? ಎಂದು ನನ್ನನ್ನೇ ಆರೋಪಿಯ ಸ್ಥಾನದಲ್ಲಿ ನಿಲ್ಲಿಸಿದ" (ಅದೇ, ಪು. ೫೪೨). ಕೃಷಿ ಕುಟುಂಬದ ಒಳಗಿನ ಯುವಕರು ಕೃಷಿ ಜಗತ್ತನ್ನು ನಿರಾಕರಿಸಿದ್ದು ಮಾತ್ರವಲ್ಲ, ಅದನ್ನು ಮಾರಾಟಕ್ಕಿಟ್ಟು ಭೂಮಿಯನ್ನು ದುಡ್ಡಿನ ಬೆಲೆಯಲ್ಲಿ ಅಳೆಯಲು ಸಿದ್ಧತೆ ಮಾಡಿಕೊಂಡರು. ಕೃಷಿ ಭೂಮಿಯ ಬಗೆಗೆ ಒಲವು ಅಭಿಮಾನ ಪ್ರೀತಿಗಳು ಹುಟ್ಟಲಿಲ್ಲ. ಆಧುನಿಕ ಶಿಕ್ಷಣ ಬಾಂಧವ್ಯಗಳನ್ನು ವಿಘಟಿಸಿದುದಲ್ಲದೆ ಸಾಮಾಜಿಕ ಬದುಕಿನ ಬಗೆಗೆ ಮರು ಯೋಚಿಸುವಂತೆ ಮಾಡಿತು. ಪ್ರಜ್ಞಾಳ ಗೆಳೆತಿ ಶ್ವೇತಾಳ ಅಣ್ಣ ಶಾಂತಿರಾಜ ಮಾತ್ರ ತಾನು ಓದಿದ ಓದಿಗಿಂತ ಭಿನ್ನವಾಗಿ ಕೃಷಿಯನ್ನು ಮುಂದುವರಿಸಬೇಕು ಎಂಬ ಅರ್ಥದ ಮಾತುಗಳನ್ನು ಆಡುತ್ತಾನೆ. ವಿದ್ಯೆ ಕಲಿತವರು ಕೃಷಿಯನ್ನು ಸಹಜ ಕೃಷಿಯಾಗಿ ನೋಡದೆ ಒಂದು ಉದ್ಯಮವಾಗಿ ಹೇಗೆ ಬೆಳೆಸಬೇಕು ಎಂದು ಅರ್ಥೈಸುತ್ತಾರೆ. ಅಂಬಕ್ಕೆ ಸಹಜವಾಗಿಯೇ ಲೋಕದ ಜನರ ಮಾತುಗಳನ್ನು ಅನುಭವದಿಂದ ನುಡಿಯುತ್ತಾರೆ. 'ಇಲ್ಲಿ ಯಾರಿಗೂ ಕೃಷಿಯೂ ಬೇಡ, ಭೂಮಿಯೂ ಬೇಡ' ಎಂದು ನಿಟ್ಟುಸಿರು ಬಿಟ್ಟರು. ಕೃಷಿಕರೆಲ್ಲ ಸಾಲ ತೀರಿಸಲಾಗದೆ ಘಟ್ಟದ ಮೇಲೆ ಸಾಯುತ್ತಿದ್ದಾರಂತಲ್ಲ! (ಅದೇ, ಪು. ೫೬೦) ವರ್ತಮಾನದ ಸತ್ಯಗಳನ್ನು ನಿರೂಪಿಸುವ ಕೃಷಿಯ ಬಿಕ್ಕಟ್ಟುಗಳನ್ನು ವಿಶ್ಲೇಷಿಸುವ ಮೂಲಕ ಕೃಷಿ, ಯಾಕೆ ಹಿನ್ನೆಡೆಯಾಗಿದೆ ಎಂಬ ಕಾರಣಗಳನ್ನು ಹುಡುಕುತ್ತಾರೆ. ಪರಂಪರೆಯಲ್ಲಿ ಇದ್ದ ಕೃಷಿಯ ಒಲವನ್ನು ಸ್ಪಷ್ಟವಾಗಿ ನಿರೂಪಿಸುತ್ತಾರೆ. 'ನಾವು ಒಕ್ಕಲಿಗರು ಅಂದರೆ ಕೃಷಿ ಕಾರ್ಯ ಮಾಡುವವರು ಅಂತ ಅರ್ಥ, ಒಕ್ಕಲಿಗರ ಮನೆ ಮುಂದೆ ಒಂದು

ಬೈ ಹುಲ್ಲಿನ ಮುಟ್ಟೆ, ಮನೆಯೊಳಗೆ ಒಂದು ಭತ್ತದ ತುಪ್ಪೆ ಹಟ್ಟಿಯಲ್ಲಿ ಕನಿಷ್ಠ ಎರಡು ಜೊತೆಯಾದರೂ ಎತ್ತು ಕೋಣಗಳು ಬೇಕೇ ಬೇಕು ಎಂಬ ಕಾಲ ಇತ್ತು. ಇಲ್ಲವಾದರೆ ನಮಗೆ ಜಾತಿಯೇ ಇಲ್ಲ ಎನ್ನುವಷ್ಟು ಅಗೌರವ ಆ ಕಾಲದಲ್ಲಿ ಇತ್ತು. ಹುಡುಗಿ ಕೊಡಬೇಕಾದರೆ ಎಲ್ಲರೂ ಕೇಳುತ್ತಿದ್ದುದು ಅದನ್ನೇ. ಅಷ್ಟೇ ಅಲ್ಲ ವರನ ಮನೆಗೆ ಹುಡುಗಿಯ ಕಡೆಯವರು ಬಂದಾಗ ಹಟ್ಟಿಯಲ್ಲಿ ಎತ್ತು ಕೋಣಗಳು ಎಂದೂ ನೋಡದೆ ಹೋಗುವ ಪದ್ಧತಿಯೇ ಇರಲಿಲ್ಲ!" ಎಂದು ಹೇಳಿದ್ದರು. 'ಅವನಂಥ ಒಬ್ಬ ಹುಡುಗನೂ ಈ ಗುತ್ತಿನಲ್ಲಿ ಹುಟ್ಟಲಿಲ್ಲ, ಆ ಜುಮಾದಿಗನೇ ಅದು ಇಷ್ಟ ಇಲ್ಲ ಅಂತ ಕಾಣುತ್ತದೆ.! ಎಂದಿದ್ದರು. (ಅದೇ ಪು ೫೬೦) ಯುವ ಸಮುದಾಯ ಗದ್ದೆ ಸಾಗುವಳಿಯಿಂದ ದೂರ ಉಳಿದುದು ಮಾತ್ರವಲ್ಲ, ಹಳ್ಳಿಯ ಬದುಕಿನಿಂದಲೂ ಹಿಮ್ಮೆಟ್ಟಿದುದು ಅಪಾಯದ ಮುನ್ಸೂಚನೆ ಎಂಬ ಸತ್ಯವೂ ಅರಿವಾಗುತ್ತದೆ. ಭೂಮಿ ತನ್ನ ಮಣ್ಣಿನ ಗುಣದಿಂದ ಬೆಲೆ ಬಾಳುವುದಕ್ಕಿಂತ ಹೆಚ್ಚಾಗಿ ಇರುವ ಪ್ರದೇಶ, ಬಳಸುವ ಅವಶ್ಯಕತೆಗಳಿಂದ ಪ್ರಾಮುಖ್ಯತೆ ಪಡೆಯುತ್ತದೆ. ಅಂಬಕ್ಕೆಯ ಮೊಮ್ಮಗಳು ಪ್ರಜ್ಞಾ ತಾನು ಹಳ್ಳಿಯಲ್ಲಿಯೇ ವೈದ್ಯಳಾಗಿ ಕೆಲಸ ನಿರ್ವಹಿಸುವೆ ಎಂದಾಗ ಮನೆಗೆ ಬಂದ ವಸಂತಿ ಟೀಚರ್ ಮೆಚ್ಚುಗೆ ವ್ಯಕ್ತಪಡಿಸುತ್ತಾರೆ. ಗುತ್ತಿನ ದೂರದ ನೆಂಟ ಶಂಭುಶೆಟ್ಟಿ ಹಳ್ಳಿಯೇ ತನ್ನ ಅಸ್ತಿತ್ವ ಕಳಕೊಳ್ಳುತ್ತದೆ ಎನ್ನುತ್ತಾನೆ. 'ಇನ್ನು ಒಂಭತ್ತುಕೆರೆಯೂ ಹಳ್ಳಿಯಾಗಿ ಉಳಿಯುವುದಿಲ್ಲ ಮೇಡಂ ಇದನ್ನು ಸ್ಪೆಶಲ್ ಇಕೊನೊಮಿಕ್ಸ್ ಝೋನ್‌ಗೆ (ವಿಶೇಷ ಆರ್ಥಿಕ ವಲಯ) ಸೇರಿಸಿ ನೋಟಿಫಿಕೇಶನ್ ಆಗಿದೆ ಎನ್ನುವ ಸುದ್ದಿ ಉಂಟು ಊರಲ್ಲಿ. ಅಲ್ಲದೆ ಕೆಲವರೆಲ್ಲ ಈಗಾಗಲೇ ಇಲ್ಲಿನ ಜಮೀನನ್ನು ಕೊಂಡುಕೊಳ್ಳಲು ಅಸಕ್ತಿ ತೋರಿಸುತ್ತಿದ್ದಾರೆ.' ಎಂದ (ಅದೇ ಪು ೫೬೧) ಜಮೀನು ಆಹಾರದ ಮೂಲವಾಗುವುದಕ್ಕಿಂತ ದುಡ್ಡಿನ ಮೂಲವಾಗುತ್ತಿದೆ. "ಕೃಷಿ ಕೆಲಸಕ್ಕೆ ಕೂಲಿ ಕಾರ್ಮಿಕರ ಕೊರತೆ ಇದೆ ಎಂದು ತಾನೇ ಈಗ ಯಾರಿಗೂ ಭೂಮಿ ಬೇಡ ಅಂತ ಆದದ್ದು !.... ಈ ಎಸ್.ಇ.ಝಡ್ ನವರ ದಾಳಿಯನ್ನು ಎದುರಿಸುವುದು ಕಷ್ಟ (ಅದೇ ಪು ೫೭೩) ಬದಲಾಗುತ್ತಿರುವ ಆರ್ಥಿಕತೆಯ ಚಟುವಟಿಕೆಗಳು ಸಾಮಾಜಿಕ ಬದುಕಿನಲ್ಲೂ ಪ್ರಭಾವ ಬೀರುತ್ತದೆ. ತೆರಿಗೆ ರಹಿತವಾದ ವಿಶೇಷ ಆರ್ಥಿಕ ವಲಯ ಕೈಗಾರಿಕೆಗಳಿಗೆ ಉತ್ತೇಜನ ನೀಡುವುದಾದರೂ ಕೃಷಿಯೇ ಕೈಗಾರಿಕೆಯಾಗಿ ಪರಿವರ್ತನೆ ಹೊಂದಿಲ್ಲ. ಕೃಷಿಗೆ ಪೂರಕವಾಗಿದ್ದ ಕಸುಬುದಾರಿಕೆಗಳೆಲ್ಲ ಉದ್ಯಮವಾಗಿ ಪರಿವರ್ತನೆ ಹೊಂದಿದರೆ ಕೃಷಿಯು ಬದುಕಿನ ಜೀವನಾಡಿಯಾಗದೆ ಉದ್ಯಮವಾಗುತ್ತದೆ. ರಸಗೊಬ್ಬರ, ಕೀಟನಾಶಕ ಮಾತ್ರವಲ್ಲ, ತಳಿಯೂ ವ್ಯಾಪಾರದ ಸರಕಾಗಿ ಪರಿವರ್ತನೆ ಹೊಂದದ ಹಾಗೆ ಕಾಯಬೇಕಾದ ಎಚ್ಚರವಿದೆ. ಕರಾವಳಿ ನಿತ್ಯವೂ ಪ್ರಯೋಗಶೀಲವಾಗುತ್ತ 'ಬೆನ್ನಿ' 'ಬೇರ ' ವಾಗಿ ಪರಿವರ್ತನೆ ಹೊಂದಿ ಸಮುದಾಯಗಳ ಮಧ್ಯದ ಸಂಘರ್ಷಗಳಿಂದ ಕೋಮುವಾದಕ್ಕೂ ಮುನ್ನುಡಿ ಬರೆಯಿತು.

ಅಧ್ಯಾಯ ೭

# ತುಳು ಸಾಹಿತ್ಯಾಭಿವ್ಯಕ್ತಿಯ ನೆಲೆಗಳು

ದ್ರಾವಿಡ ಭಾಷೆಗಳಲ್ಲಿ ಪ್ರಾಚೀನ ಭಾಷೆಯಾದ ತುಳು ಕರಾವಳಿ ಕರ್ನಾಟಕದ ಉದ್ದಗಲಕ್ಕೂ ಮಾತೃ ಭಾಷೆಯಾಗಿ ಗುರುತಿಸಿಕೊಂಡಿದೆ. ಅವಿಭಜಿತ ದಕ್ಷಿಣ ಕನ್ನಡ ಜಿಲ್ಲೆ ಮತ್ತು ಈಗ ಕೇರಳಕ್ಕೆ ಸೇರಿಕೊಂಡಿರುವ ಕಾಸರಗೋಡು ಜಿಲ್ಲೆಯಲ್ಲಿ ಪ್ರಧಾನ ಆಡು ಭಾಷೆಯಾದ ತುಳು ದ್ರಾವಿಡ ಭಾಷಾ ಕುಟುಂಬದಲ್ಲಿ ಪ್ರಾಚೀನ ಮತ್ತು ಪ್ರಧಾನ ಭಾಷೆಯಾಗಿದೆ. ಬಹ ಜನರ ಮನೆ ಮಾತು ತುಳುವಲ್ಲದೆ, ಸಾರ್ವಜನಿಕ ಬದುಕಿನಲ್ಲಿ ವ್ಯವಹಾರದ ಭಾಷೆಯಾಗಿಯೂ ಗುರುತಿಸಿಕೊಂಡಿದೆ. ಕರಾವಳಿ ಕರ್ನಾಟಕದಲ್ಲಿ ಕೇವಲ ತುಳು ಮಾತ್ರವಲ್ಲದೆ ಇನ್ನಿತರ ಭಾಷೆಗಳೂ ಚಾಲ್ತಿಯಲ್ಲಿವೆ. ಬಹುಭಾಷಿಕ ಪರಿಸರದ ಅತಿ ವಿಶಿಷ್ಟ ಪ್ರದೇಶವಾದ ಕರಾವಳಿಯಲ್ಲಿ ಬಹುಜನರ ಆಡು ನುಡಿಯಾಗಿಯೂ ಪ್ರಚಲಿತವಾಗಿದೆ. ಬೇರೆ ಬೇರೆ ಸಮುದಾಯಗಳ ಜನರು ತಮ್ಮ ಅನನ್ಯತೆಯ ಭಾಷೆಯಾಗಿ ಬ್ಯಾರಿ, ಕೊಂಕಣಿ, ಕುಡುಬಿ, ಹವಿಗನ್ನಡ, ಕೊರಗ ಭಾಷೆಗಳೂ ಚಾಲ್ತಿಯಲ್ಲಿವೆ. ಇಲ್ಲಿ ಹೆಸರಿಸದ ಭಾಷೆಗಳೂ ಸಂವಹನದ ಮಾಧ್ಯಮವಾಗಿ ಬಳಕೆಯಾಗಿದೆ.

ಈಗಾಗಲೇ ತುಳು ಭಾಷೆಯ ಬಗ್ಗೆ ವ್ಯಾಕರಣಶಾಸ್ತ್ರಜ್ಞರು, ಭಾಷಾ ವಿಜ್ಞಾನದ ಹಿನ್ನೆಲೆಯಲ್ಲೂ ತುಳು ಚೆನ್ನಾಗಿ ಬೆಳೆದ ಭಾಷೆ ಹಾಗೂ ಅತ್ಯಂತ ವೈಜ್ಞಾನಿಕ ಭಾಷೆ ಎಂದು ಗುರುತಿಸಿದ್ದಾರೆ. ತುಳು ಸಾಹಿತ್ಯವನ್ನು ಗಂಭೀರವಾಗಿ ಅಧ್ಯಯನ ಮಾಡುತ್ತ ಸಾಗಿದಂತೆ, ಸುಮಾರು ಎರಡು ಸಾವಿರ ವರ್ಷಗಳ ಪ್ರಾಚೀನತೆ ಇದೆಯೆಂದು ಊಹಿಸಲಾಗಿದೆ. ತುಳುವಿನಲ್ಲಿ ಶಿಷ್ಟ ಸಾಹಿತ್ಯಕ್ಕಿಂತ ಮೌಖಿಕ ಪರಂಪರೆಯ ಜನಪದ ಸಾಹಿತ್ಯ ಹೇರಳವಾಗಿದೆ. ಸಂಧಿ, ಕಬಿತೆ, ಉರಲ್, ಹಾಡುಗಳು ಮದಿಪು, ಕತೆ, ಗಾದೆ ಒಗಟು ಐತಿಹ್ಯ , ಪುರಾಣ, ನುಡಿಗಟ್ಟು ಇಂತಹ ಬಹುಪ್ರಕಾರಗಳ ಮೌಖಿಕ ಸಾಹಿತ್ಯ ತುಳುವಿನಲ್ಲಿ ಶ್ರೀಮಂತವಾಗಿದೆ. ತುಳುವಿನಲ್ಲಿ ಅಕ್ಷರ ರೂಪದ ಲಿಖಿತ ಸಾಹಿತ್ಯ ನಿರ್ಮಾಣವಾದದ್ದು ೧೯ ಶತಮಾನದ ಉತ್ತರಾರ್ಧದಲ್ಲಿ. ಜರ್ಮನ್ ಮಿಶನರಿಗಳು ಮಂಗಳೂರಿಗೆ ಬಂದು ಒಂದು ಮುದ್ರಣ ಮತ್ತು ಪ್ರಕಾಶನದ ಕೆಲಸವನ್ನು ಆರಂಭ ಮಾಡಿದ ಬಳಿಕ ಅವರು ಬೈಬಲ್ ಮತ್ತು ಸುವಾರ್ತೆಗಳ ತುಳು ಅನುವಾದಗಳನ್ನು ಮಾಡಿ ಪ್ರಕಟಣೆಗಳನ್ನು ಹೊರತಂದರು. ಶಾಲಾ ಮಕ್ಕಳಿಗಾಗಿ ತುಳು ಪಠ್ಯ ಪುಸ್ತಕವನ್ನು ಪ್ರಕಟಿಸಿದರು. ರೆವೆರೆಂಡ್ .ಎ. ಮ್ಯಾನರಸ್ 'ತುಳು ನಿಘಂಟುಗಳು' ಮತ್ತು ತುಳು ಪಾಡ್ದನಗಳ ಸಂಗ್ರಹ, ರೆವೆರೆಂಡ್, ಜೆ. ಬ್ರಿಗೆಲ್‌ನ 'ತುಳು ವ್ಯಾಕರಣ' ಗ್ರಂಥಗಳಂತಹ ವಿದ್ವತ್ತಿನ ಪ್ರಕಟಣೆಗಳು ಬೆಳಕಿಗೆ ಬಂದವು. ಮುಂದೆ ಇಪ್ಪತ್ತನೇ ಶತಮಾನದ ಆರಂಭದಲ್ಲಿ ರಾಷ್ಟ್ರೀಯ ಚಳುವಳಿಯ ಹಿನ್ನೆಲೆಯಲ್ಲಿ ತುಳುನಾಡಿನಲ್ಲಿ ತುಳು ಭಾಷೆಗಳ ಸಾಹಿತ್ಯದ ಬಗ್ಗೆ ಹೊಸ ಎಚ್ಚರ ಕಾಣಿಸಿಕೊಂಡಿತು. ಪಣಿಯಾಡಿ ಶ್ರೀನಿವಾಸ ಉಪಾಧ್ಯಾಯರು ಉಡುಪಿಯಲ್ಲಿ "ತುಳುವ ಸಾಹಿತ್ಯ ಮಾಲೆ" ಎನ್ನುವ ಪ್ರಕಾಶನ ಸಂಸ್ಥೆಯನ್ನು ಹುಟ್ಟು ಹಾಕಿ ಅನೇಕ ಹಿರಿಯ ಲೇಖಕರ ತುಳು ಕೃತಿಗಳು ನಿರ್ಮಾಣವಾಗಿ ಪ್ರಕಟವಾಗಲು ಕಾರಣರಾದರು.

ಅಮ್ಮುಂಜೆ ಗುತ್ತು ಶೀನಪ್ಪ ಹೆಗಡೆ, ನಾರಾಯಣ ಕಿಲ್ಲೆ, ಬಡಕ ಬೈಲು ಪರಮೇಶ್ವರಯ್ಯ, ಸತ್ಯ ಮಿತ್ರ ಬಂಗೇರ, ಮಾಧವ ತಿಂಗಳಾಯ ಮುಂತಾದವರು ಆಧುನಿಕ ತುಳು ಸಾಹಿತ್ಯದ ರೂವಾರಿಗಳಾಗಿ ತುಳು ಸಾಹಿತ್ಯದ ಭಿನ್ನ ಪ್ರಕಾರಗಳ ಸೃಷ್ಟಿಗೆ ಕಾರಣರಾದರು. ತುಳು ನಾಟಕ ಸಾಹಿತ್ಯ ನಿರ್ಮಾಣ ಹಾಗೂ ರಂಗಭೂಮಿ ಚಟುವಟಿಕೆಗಳು ತುಳುವನ್ನು ಜನಸಾಮಾನ್ಯರ ಬಳಿಗೆ ಒಯ್ದವು. ತುಳುವಿನಲ್ಲಿ ಯಕ್ಷಗಾನ

ಪ್ರಸಂಗಗಳ ನಿರ್ಮಾಣ ಮತ್ತು ಪ್ರದರ್ಶನಗಳು ಗ್ರಾಮೀಣ ಪ್ರದೇಶದಲ್ಲಿ ತುಳುವಿಗೆ ಶಕ್ತಿ ಮತ್ತು ಅನನ್ಯತೆಯನ್ನು ತಂದುಕೊಟ್ಟವು. ಮಂಗಳೂರು ವಿಶ್ವವಿದ್ಯಾನಿಲಯ, ಉಡುಪಿಯ ರಾಷ್ಟ್ರಕವಿ ಗೋವಿಂದ ಪೈ ಸಂಶೋಧನಾ ಕೇಂದ್ರ, ತುಳು ಸಾಹಿತ್ಯ ಅಕಾಡೆಮಿ, ತುಳು ಕೂಟದಂತಹ ಅನೇಕ ಸಂಘ ಸಂಸ್ಥೆಗಳು ನಾಡಿನ ಹೊರಗೆ ಮತ್ತು ಒಳಗೆ ತುಳು ಭಾಷೆ ಮತ್ತು ಸಾಹಿತ್ಯದ ಪ್ರಸರಣಕ್ಕೆ ಒತ್ತಾಸೆಯನ್ನು ನೀಡಿದವು. ಸೃಜನಶೀಲ ಬರಹಗಳಲ್ಲದೆ ಸೃಜನೇತರವಾಗಿ ತುಳು ಭಾಷೆ ಸಾಹಿತ್ಯ ಸಂಸ್ಕೃತಿಯ ಅಧ್ಯಯನ ಗ್ರಂಥಗಳು ಅತಿ ಹೆಚ್ಚಿನ ಸಂಖ್ಯೆಯಲ್ಲಿ ರಚನೆಗೊಂಡವು.

ಎರಡು ಸಾವಿರ ವರ್ಷಗಳ ಚರಿತ್ರೆ ಇದ್ದರೂ, ಭಾಷಿಕ ರಚನೆಯ ನಿಖರತೆ, ಪದಕೋಶದ ಸಮೃದ್ಧಿ, ಪ್ರಾಚೀನತೆಯ ನೆಲೆಯಲ್ಲಿ ತುಳುಭಾಷೆ ಕನ್ನಡ ತೆಲುಗು ಮಲೆಯಾಳಿಗಳಿಗೆ ಎರಡನೆಯದಲ್ಲ. ಕೆಲವೊಂದು ಚಾರಿತ್ರಿಕ ಕಾರಣಗಳಿಗಾಗಿ ತನ್ನದೇ ಆದ ಲಿಪಿ ಇದ್ದಾಗಲೂ ಬಳಕೆಯ ಕೊರತೆಯಿಂದಾಗಿ ದೊಡ್ಡ ಪ್ರಮಾಣದ ಲಿಖಿತ ಸಾಹಿತ್ಯ ರಚನೆಯಾಗಿದ್ದಿಲ್ಲ. ತುಳು ನಾಡನ್ನು ಚಾರಿತ್ರಿಕವಾಗಿ ಗಮನಿಸಿದಾಗಲೂ ಭೈರ, ಚೌಟ. ಬಂಗ, ಅಜಿಲರಂತಹ ಅರಸರು ತುಳುವರಾದರೂ ತಮ್ಮ ಸಾರ್ವಭೌಮರನ್ನು ಮೆಚ್ಚಿಸುವ ಸಲುವಾಗಿ ಶಾಸನಗಳನ್ನು ಕನ್ನಡದಲ್ಲೇ ಬರೆಯಿಸಿದರು. ತಮ್ಮ ಆಸ್ಥಾನದಲ್ಲಿ ಕನ್ನಡ ಕವಿಗಳನ್ನೇ ಬೆಂಬಲಿಸಿ ಕಾವ್ಯ ಬರೆಸಿದರು. ಶೈಕ್ಷಣಿಕವಾಗಿ ಅಕ್ಷರ ಪ್ರಪಂಚದಲ್ಲಿ ದಾಖಲಾದವರು ಕನ್ನಡವನ್ನೇ ಕಲಿತುದರಿಂದ ಮತ್ತು ಹಿರಿಯ ತುಳುವರು ಅಕ್ಷರ ಸಾಹಿತ್ಯದ ಕೊರತೆಯ ಫಲವಾಗಿ ತುಳುವರು ತಮ್ಮ ಸೃಜನಶೀಲ ಪ್ರತಿಭೆಯನ್ನು ಮೌಖಿಕ ರೂಪದಲ್ಲೇ ಬೆಳೆಸಿಕೊಂಡು ಬಂದರು. ತುಳುವಿನ ಮೌಖಿಕ ಪರಂಪರೆ ಜಗತ್ತಿನ ಯಾವುದೇ ಸಮೃದ್ಧ ಭಾಷೆಗೆ ಎರಡನೆಯದಲ್ಲ ಎಂಬುದಾಗಿ ವಿದ್ವಾಂಸರು ಅಭಿಪ್ರಾಯಪಟ್ಟಿರುವುದು ಗಮನಿಸತಕ್ಕ ಅಂಶ. ಇತ್ತೀಚಿನ ದಿನಗಳಲ್ಲಿ ವಿಷ್ಣುತುಂಗನ 'ತುಳು ಭಗವತೋ', ಅರುಣಾಬ್ಜ ಕವಿಯ 'ಮಹಾಭಾರತ' 'ಕಾವೇರಿ' ಮುಂತಾದ ಲಿಖಿತ ಕಾವ್ಯಗಳು ದೊರೆತುದರ ಫಲವಾಗಿ ತುಳುಸಾಹಿತ್ಯ ಪರಂಪರೆಯನ್ನು ಮರು ನಿರ್ವಚಿಸುವ ಮತ್ತು ಭಾಷಿಕ ರಚನೆಯ ಚಾರಿತ್ರಿಕ ಬೆಳವಣಿಗೆಯನ್ನು ಗುರುತಿಸುವ ಪ್ರಯತ್ನಗಳು ಸಾಗಿವೆ.

ಪ್ರಾಚೀನ ಮತ್ತು ಅರ್ವಾಚೀನಗಳನ್ನು ಜತೆಗೆ ಬೆಸೆದು ವರ್ತಮಾನದ ಚಿಂತನೆಗಳನ್ನು ಅರ್ಥೈಸುವ ಮತ್ತು ಸಾಂಸ್ಕೃತಿಕ ಅನನ್ಯತೆಯನ್ನು ಮರು ರೂಪಿಸಿಕೊಳ್ಳುವ ಅರ್ಥದಲ್ಲಿ ಸಂಶೋಧನೆ, ಅಧ್ಯಯನಗಳ ಜತೆ ಜತೆಗೆ ಸೃಜನಶೀಲ ಬರಹಗಳು ಮರು ನಿರೂಪಣೆಗೊಂಡವು. ಹತ್ತೊಂಬತ್ತನೆ ಶತಮಾನದ ಪೂರ್ವಾರ್ದದ ಸಾಹಿತ್ಯ ಚಳುವಳಿಯ ನಂತರದಲ್ಲಿ ವಿವಿಧ ಪ್ರಕಾರಗಳಲ್ಲಿ ಕಾದಂಬರಿಯಂತಹ ಪ್ರಕಾರ ಹುಟ್ಟಿ ಬೆಳೆಯಲು ಕಾರಣವಾಯಿತು. ಇದಕ್ಕೆ ಕಾರಣ ರಾಷ್ಟ್ರೀಯ ಚಳುವಳಿ ಒಂದು ನೆಪವಾದರೂ ಬ್ರಿಟಿಷರು ನಮ್ಮನ್ನು ಆಳಿದ ನಂತರದಲ್ಲಿ ಸಾಹಿತ್ಯ ಸಂಸ್ಕೃತಿಯ ಹಿನ್ನೆಲೆಯಲ್ಲಿ ನಡೆದ ಚಿಂತನೆಯ ಪ್ರಭಾವ ಮತ್ತು ಪರಿಣಾಮವನ್ನು ಅಲ್ಲಗೆಳೆಯಲಾಗದು. ಈ ದೇಶದಲ್ಲಿ ಸಾಹಿತ್ಯದ ಹೊಸ ಪರಿಕಲ್ಪನೆ ಮತ್ತು ಪ್ರಕಾರಗಳೂ ರೂಪು ಪಡೆದ ಕ್ರಮ, ಅಧಿಕಾರ ರಾಜಕಾರಣ, ಚರಿತ್ರೆ ಇಂತಹ ಕೆಲವು ಸಂಗತಿಗಳು ಸೇರಿ ಇರುತ್ತವೆ. ಯುರೋಪಿನ ದೇಶಗಳು ಬೇರೆ ಪ್ರದೇಶದ ಸೀಮೆ ಭಾಷೆಗಳನ್ನು ತಮ್ಮ ಅದೀನಕ್ಕೆ ಒಳಪಡಿಸಿದ್ದು ಬರಿಯ ರಾಜಕೀಯಕ್ಕೆ ಸೇರಿದ ಪ್ರಶ್ನೆಯಾಗಿ ಮಾತ್ರ ಉಳಿಯದೆ, ತತ್ವಶಾಸ್ತ್ರ, ಮಾನವಶಾಸ್ತ್ರ, ಭಾಷಾ ಶಾಸ್ತ್ರ, ಸಾಹಿತ್ಯದ ಮೇಲಿನ ವ್ಯಾಖ್ಯಾನ

ಮತ್ತು ಪ್ರತಿವ್ಯಾಖ್ಯಾನದವರೆಗೆ ಈ ಪ್ರಶ್ನೆ ಮುಂದುವರಿಯುತ್ತದೆ. ರಾಜಕಾರಣ ಎನ್ನುವುದು ಈ ಎಲ್ಲ ಕ್ಷೇತ್ರಗಳ ಮೇಲೆ ಆಳವಾದ ಪ್ರಭಾವ ಬೀರುತ್ತದೆ ಮಾತ್ರವಲ್ಲ ಅವು ರೂಪ ಪಡೆಯಲು ಕಾರಣವಾಗುತ್ತದೆ. ಹಾಗಾಗಿ ಸಾಹಿತ್ಯದ ವಿಶ್ಲೇಷಣೆ ಮಾಡುವ ಕ್ರಮ ಕೊನೆಯಲ್ಲಿ ಸಂಸ್ಕೃತಿಯ ವಿಶ್ಲೇಷಣೆಯೂ ಆಗಿದೆ.

ಯುರೋಪಿನ ವಸಾಹತು ಶಾಹೀ ಆಡಳಿತ, ಹಾಗೆಯೇ ಮೆಟ್ರೋ ಪಾಲಿಟನ್ ಸಂಸ್ಕೃತಿಗಳು ಮೇಲುಗೈ ಪಡೆಯುತ್ತಿರುವ ಸಂದರ್ಭದಲ್ಲಿ ಈ ನಾಡಿನಲ್ಲಿ ಎಂತಹ ಆಲೋಚನಾ ಕ್ರಮ, ವ್ಯಕ್ತಿತ್ವಗಳನ್ನು ರೂಪಿಸಿವೆ ಎನ್ನುವುದನ್ನು ನಾವು ತಿಳಿಯಬೇಕಿದೆ. ರಾಜಕಾರಣದ ಸಂಕೀರ್ಣ ಗಾತ್ರದಲ್ಲಿ ಬೇರು ಬಿಟ್ಟ ಸಾಂಸ್ಕೃತಿಕ ಪ್ರಶ್ನೆಯನ್ನು ಕೇವಲ ಸಾಹಿತ್ಯ– ಸೌಂದರ್ಯ–ಮೀಮಾಂಸೆಯ ಪರಿಶುದ್ಧ ಪರಿಧಿಯ ಮಿತಿಯಲ್ಲಿ ಚರ್ಚೆ ಮಾಡುವುದು ಕಷ್ಟದ ಕೆಲಸ. ಹತ್ತೊಂಬತ್ತನೇ ಶತಮಾನದ ಈಚೆಗೆ ಆಧುನಿಕ ಪ್ರಕ್ರಿಯೆಗಳಿಗೆ ಒಳಗಾಗುತ್ತಿರುವ ಎಲ್ಲಾ ದೇಶ ಭಾಷೆಗಳಲ್ಲಿ ಕಂಡು ಬರುವ ಸಾಮಾನ್ಯ ಅಂಶ ಪ್ರಾದೇಶಿಕ ಸಾಹಿತ್ಯ ರಾಷ್ಟ್ರ ಸಾಹಿತ್ಯವಾಗಿ, ವಿಶ್ವ ಸಾಹಿತ್ಯವಾಗಿ ಅರಳಬೇಕು ಎಂದು ಹೇಳುವ ನೆಲೆಯಲ್ಲಿ ಈ ಭಾಷಾ ಸಾಹಿತ್ಯದ ಪ್ರಯತ್ನಗಳು ನಡೆಯುತ್ತ ಇವೆ. ಹತ್ತೊಂಬತ್ತನೆ ಶತಮಾನದ ಕೊನೆಯ ದಶಕದಲ್ಲಿ ರೂಪ ಪಡೆದು ಈಗ ಸ್ವಾತಂತ್ರ್ಯ ನಂತರದ ಕಾಲಘಟ್ಟಗಳಲ್ಲಿ ಭಾಷಾ ಸಮುದಾಯಗಳು ಒಡಲು ಹೊಕ್ಕು ಕುಳಿತ ಪ್ರಗತಿಯ ಅರ್ಥ ವ್ಯಾಪ್ತಿಗಳನ್ನು ನಾವು ತಿಳಿದುಕೊಳ್ಳಬೇಕಿದೆ.

ಹತ್ತೊಂಬತ್ತು ಇಪ್ಪತ್ತನೆ ಶತಮಾನದ ಹೊಸ ಭಾರತೀಯ ವಿದ್ಯಾವಂತನ ಸಂವೇದನೆ ರೂಪು ಪಡೆದದ್ದು ಉದಾರವಾದೀ ಮಾನವತಾವಾದದಿಂದ ಎಂಬ ಹೇಳಿಕೆ ಇಂದಿಗೆ ತುಂಬಾ ಹಳೆಯ ಮಾತು. ಪಶ್ಚಿಮದ ಮಾನವತಾವಾದಕ್ಕೆ ಮನುಷ್ಯನೇ ಎಲ್ಲಾ ಅರ್ಥ ಕ್ರಿಯೆಗಳ ಚರಿತ್ರೆಯ ಮೂಲ ಪರಿಕಲ್ಪನೆಗಳು ಮನುಷ್ಯನ ಅನುಭವದ ಫಲ. ಅನುಭವವೇ ತಿಳುವಳಿಕೆಯ ಮೂಲವೂ ಹೌದು. ಯಾವುದೇ ವ್ಯಕ್ತಿಯಲ್ಲಿ ವಿಶ್ವ ಚೈತನ್ಯ ಎನ್ನುವುದು ಉಂಟೆಂದೂ, ಅನುಭವದ ಒರೆತದ ಕಲ್ಲಿಗೆ ವರೆಸುವಾಗ ಅನುಭವ ಬೆಳಗುವುದೆಂದೂ ಮಾನವತಾವಾದ ಯೋಚಿಸುತ್ತದೆ. ಯಾವ ಅನುಭವ, ಎಂತಹ ಅನುಭವ, ಯಾರ ಅನುಭವ, ಯಾವ ಕಾಲದ ಅನುಭವ ಈ ಎಲ್ಲಾ ಪ್ರಶ್ನೆಗಳು ಮರೆಮಾಚಿ ಅನುಭವ ಎನ್ನುವುದು ಚರಿತ್ರೆಯನ್ನು ಮೀರಿದ್ದು ಎನ್ನುವುದು ಭಾರತೀಯ ಇಂಗ್ಲೀಷ್ ವಿದ್ಯಾವಂತ ವರ್ಗದ ಸಾಮಾನ್ಯವಾದ ತಿಳುವಳಿಕೆಯಾಗಿ ಬಿಡುತ್ತವೆ. ಈ ಕಾಲದಲ್ಲಿ ಭಾರತಕ್ಕೆ ಬಂದ ಮಾನವತಾವಾದದಿಂದ ಪ್ರಗತಿ, ವಿಕಾಸ ಎನ್ನುವುದು ಮಾನವತಾವಾದೀ ಪರಿಭಾಷೆಯಿಂದ ನಾವು ಪಡೆದ ಪರಿಕಲ್ಪನೆಗಳು, ಹಾಗಾಗಿ ಪಶ್ಚಿಮದ ವೈಚಾರಿಕತೆಯಿಂದ ಮೂಡುವ ಪ್ರಗತಿಯ ಮಾತುಗಳು ದೇಸೀ ಭಾಷೆಯನ್ನು ಬಳಸುವಾಗ ನಮಗೆ ವಿಶೇಷವಾದ ಎಚ್ಚರ, ಸೂಕ್ಷ್ಮತೆಯನ್ನು ಗಳಿಸಿಕೊಳ್ಳಬೇಕಾಗುತ್ತದೆ. ಸಾಮಾನ್ಯವಾಗಿ ಕರ್ನಾಟಕದಲ್ಲಿ ಆಧುನಿಕ ಸಾಹಿತ್ಯದ ಪರಿಕಲ್ಪನೆ ಮೀಮಾಂಸೆಗಳು ಹುಟ್ಟಿಕೊಂಡಿದ್ದು ಅನುಭವವಾದೀ ಮಾದರಿಯನ್ನು ಆಶ್ರಯಿಸಿದೆ. ಸಾಹಿತ್ಯ ಎಂದರೆ ಅನುಭವದ ಅಭಿವ್ಯಕ್ತಿ ಎನ್ನುವುದು ಕನ್ನಡದ ತುಳುವಿನ ಮಾತ್ರವಲ್ಲ, ಲೋಕದ ದೇಶ ಭಾಷೆಗಳ ಸಾಮಾನ್ಯವಾದ ತಿಳುವಳಿಕೆ ಈ ಸಾಮಾನ್ಯ ಗ್ರಹಿಕೆಯು ತಾತ್ವಿಕವಾಗಿ ಪ್ರತಿಭಾವಂತರಾದ ಹಾಗೆಯೇ ಅದೃಷ್ಟಶಾಲಿಗಳಾದ ಲೇಖಕರು ತಿಳಿದುಕೊಂಡ ವಸ್ತು, ಅವರ ಅನುಭವದ ಗ್ರಹಿಕೆಗೆ ಸರಿಯಾಗಿ ಸಾಹಿತ್ಯದಲ್ಲಿ ಕಾಣಸಿಗುತ್ತದೆ. ಅದರೊಂದಿಗೆ

ಸಾಹಿತ್ಯ ವಾಸ್ತವವನ್ನು ಪ್ರತಿಫಲಿಸುತ್ತದೆ ಎನ್ನುವುದನ್ನು ನಂಬುವಂತಿದೆ. ಸಾಹಿತ್ಯ ಬದುಕಿನ ಪ್ರತಿಬಿಂಬ ಎನ್ನುವ ಮಾತು ಪ್ರಸಿದ್ಧವಾಗುವುದು ಅ ಸನ್ನಿವೇಶದಿಂದಲೇ.

ಈ ಅನುಭವವಾದಿ ನಿಲುವು ಸಾಹಿತ್ಯದ ಸಾಂಸ್ಕೃತಿಕ ಚಾರಿತ್ರಿಕ ಆಶಯಗಳನ್ನು ತಿಳಿದುಕೊಳ್ಳದೆ ಬದಲಾಗಿ ಸಾಹಿತ್ಯ ಚರಿತ್ರೆಯನ್ನು ಮೀರಿ ಆದರ್ಶವಾದಿ ಪರಿಭಾಷೆಯಲ್ಲಿ ಅದು ಸಾಹಿತ್ಯದ ರಸಸ್ವಾದದಲ್ಲಿ ಮುಳುಗುತ್ತದೆ. ಹೀಗೆ ನಿರ್ದಿಷ್ಟ ಚಾರಿತ್ರಿಕ ಸಂದರ್ಭವೊಂದರಲ್ಲಿ ಕಾಣಬರುವ ಸಾಹಿತ್ಯ ಕೃತಿಯನ್ನು ಆ ನಿರ್ದಿಷ್ಟತೆಯಿಂದ ಮೇಲೆ ಏರಿಸಿ ಎಲ್ಲ ಕಾಲಕ್ಕೂ ಒಪ್ಪುವ ಮತ್ತು ಎಲ್ಲಾ ಕಡೆಯೂ ಇರುವ ಕೃತಿ ಎನ್ನುವಂತೆ ವಿಶ್ಲೇಷಣೆ ಆಗುತ್ತದೆ.

ನಿಜವಾಗಿಯೂ ಸಾಹಿತ್ಯವು ಚಾರಿತ್ರಿಕವಾಗಿ ನಮಗೆ ಒದಗುವ ಬರಹದ ಸನ್ನಿವೇಶ, ಕಾವ್ಯಾಕೃತಿ– ಚರಿತ್ರೆ– ಐಡಿಯಾಲಜಿಗಳನ್ನು ಬೇರೆ ಬೇರೆ ಸ್ವತಂತ್ರ ಘಟಕಗಳು ಎನ್ನುವಂತೆ ನೋಡುವುದು ಆದರ್ಶವಾದೀ ತಿಳುವಳಿಕೆ. ಒಂದು ನಿರ್ದಿಷ್ಟ ಕಾಲದ ಚರಿತ್ರೆಯ ನೆಯ್ಗೆ ಆದ ಸಾಹಿತ್ಯ ಪಠ್ಯವೊಂದನ್ನು ಬರಹದ ಸನ್ನಿವೇಶ ಒದಗಿಸುವ ಚರಿತ್ರೆಯ ಬೇರೆ ಕ್ರಿಯಾ ಸನ್ನಿವೇಶಗಳೊಂದಿಗೆ ಒಟ್ಟಿಗೆ ಸಂಬಂಧ ಪಡೆದಿದೆ ಎನ್ನುವುದನ್ನು ನಾವು ತಿಳಿದುಕೊಂಡು ವಿವರಿಸಬೇಕಾಗುತ್ತದೆ. ಈ ಮಜಲಿನಲ್ಲಿ ವಿಮರ್ಶೆ ತನ್ನ ಪಠ್ಯಕೇಂದ್ರಿತ ಪರಿಧಿಯ ಸಂಸ್ಕೃತಿಯ ವಿಮರ್ಶೆಯಾಗಿಯೂ ವಿಸ್ತರಿಸಿಕೊಳ್ಳಬೇಕಾಗುತ್ತದೆ.

ಭಾರತದಂತಹ ವಸಾಹತುಶಾಹಿ ದೇಶಗಳು ಎದುರಿಸುತ್ತಿರುವ ದೊಡ್ಡ ಸಮಸ್ಯೆ ಎಂದರೆ ವಸಾಹತು ವಿಚಾರ ಸರಣಿಯಿಂದ ಹೊರಗೆ ಬರುವಂತಹುದು. ಸಾಹಿತ್ಯ ಸಂಸ್ಕೃತಿ ವಿಶಿಷ್ಟ ಸನ್ನಿವೇಶದಲ್ಲಿ ಮೂಡಿ ಬರುವ ಆದರ್ಶವಾದಿ ಅನುಭವವಾದಿ ಮಾದರಿಗೆ ಅಂತಹ ಚೈತನ್ಯ ಶಕ್ತಿಯೇ ಇಲ್ಲ. ಅನುಭವವನ್ನು ಚರಿತ್ರೆಯಿಂದ ಬೇರೆ ಮಾಡುವ ಪೂರ್ವಗ್ರಹೀತವೇ ಇಂತಹ ತಿಳುವಳಿಕೆಗೆ ವಿರೋಧಿಯಾಗಿದೆ. ಹಾಗಾಗಿಯೇ ಅದರ ಪರಿಭಾಷೆ ವಿಶ್ವಾತ್ಮಕವಾಗಿದೆ.

ಇಂತಹ ತಿಳುವಳಿಕೆ ಭಾರತೀಯ ವಿದ್ಯಾವಂತರಲ್ಲಿ ಒಂದೇ ರೀತಿಯ ತಿಳುವಳಿಕೆಯಾಗಿ ಇರಲು ಕಾರಣಗಳು ವಸಾಹತೀಕರಣದ ಚರಿತ್ರೆಯಲ್ಲಿಯೇ ಇದೆ. ವಿಕ್ಟೋರಿಯನ್ ಯುಗದ ಸಂವೇದನೆಗಳು ಭಾರತಕ್ಕೆ ಬಂದು ತಲೆಯ ಮೇಲೆ ಕುಳಿತದ್ದು ಹತ್ತೊಂಬತ್ತು ಇಪ್ಪತ್ತನೇ ಶತಮಾನದಲ್ಲಿ. ಭಾರತೀಯರನ್ನು ತನ್ನ ಹಿಡಿತದಲ್ಲಿ ಕುಳ್ಳಿರಿಸುವುದೇ ಬ್ರಿಟಿಷ್ ವಿದ್ಯಾಭ್ಯಾಸ ಕ್ರಮದ ಮೂಲ ಉದ್ದೇಶಗಳಲ್ಲಿ ಒಂದು. ವಿಶಾಲವಾದ ಬೇರೆ ಬೇರೆ ರೂಪದ ಪರಂಪರೆಗಳಿಂದ ದೇಶವನ್ನು ಅಂಕೆಗೆ ತರಲು ಅದನ್ನು ಒಂದೇ ರೂಪದ ಜೀವನ ಕ್ರಮದ ಎರಕದ ಅಗತ್ಯ ಮೊದಲಿನದು. ಅಭಿರುಚಿ, ಮಾತು, ಆಲೋಚನಾಕ್ರಮಗಳಿಂದ 'ಇಂಗ್ಲೀಷರು' ಆಗಿರುವ ಭಾರತೀಯ ವಿದ್ಯಾವಂತ ವರ್ಗವನ್ನು ಹುಟ್ಟು ಹಾಕುವುದೇ ಮೆಕಾಲೆಯ ಉದ್ದೇಶವಾಗಿತ್ತು.

ಕಲೋನಿಯಲ್ ಆಳ್ವಿಕೆಯ ಮೂಲಬೇರು ಬಿಟ್ಟ ಬಗೆಯನ್ನು ಮೆಕಾಲೆಯ ಆಶಯದಿಂದ ನಾವು ತಿಳಿಯಬಹುದು. ಆಳುವವರು ರಾಜ್ಯಯಂತ್ರವನ್ನು ಬಳಸಿಯೆ ತಮ್ಮ ಪ್ರಭಾವವನ್ನು ಹೊಂದಬೇಕಾಗಿ ಇಲ್ಲ.

ನಾಗರಿಕಾ ಸಮಾಜದಲ್ಲಿ ಐಡಿಯಾಜಿಕಲ್ ಸಾಹಿತ್ಯ, ಪಠ್ಯ, ಭಾಷೆ ಆಕೃತಿಗಳನ್ನು ಉಂಟು ಮಾಡಿ ಆಂಗ್ಲ ಅಧಿಪತ್ಯವನ್ನು ತಾವೇ ಬಯಸುವ ಒಪ್ಪಿಕೊಳ್ಳುವ ಒಂದು ವರ್ಗದ ಸ್ವರೂಪವನ್ನಾಗಿ ಹುಟ್ಟು ಹಾಕುತ್ತದೆ.

ಜೇಮ್ಸ್ ಮಿಲ್‌ನ ಬ್ರಿಟಿಷ್ ಇಂಡಿಯದ ಚರಿತ್ರೆಯನ್ನು ನೋಡಿದರೆ ಈ ಅಂಶ ಸ್ಪಷ್ಟವಾಗುತ್ತದೆ. ವಸಾಹತುಶಾಹೀ ಚರಿತ್ರೆಯ ಗುಣವೇ ಅದು. ಅಳ್ವಿಕೆಗೆ ಒಳಗಾದ ಜನರ ಚಾರಿತ್ರ್ಯವನ್ನು ಕೀಳಾಗಿ ಪರಿಬಾವಿಸುವುದೇ ಪರಮ ಉದ್ದೇಶ ಎನ್ನುವಂತೆ ಮಿಲ್‌ನ ಕೃತಿ ಗಟ್ಟಿಯಾಗಿ ಹೇಳುತ್ತದೆ. ಮನುಷ್ಯನ ಸ್ವಭಾವ ವರ್ಣನೆಗೆ ಹೆಚ್ಚಿನ ಭಾಗವನ್ನು ಬಳಸುತ್ತ ಹಾಗೆಯೇ ಶ್ರಮವನ್ನು ವಹಿಸುತ್ತ ಅಪ್ರಾಮಾಣಿಕ, ಸುಳ್ಳುಗಾರ, ವಿಶ್ವಾಸಘಾತಕ, ಸ್ವಾರ್ಥಿ, ಲಂಚಕೋರ ಎನ್ನುವ ವಿಶೇಷಗಳನ್ನು ಬಳಸಿ ಗುರುತಿಸುತ್ತಾರೆ. ಈ ಸಂದರ್ಭದಲ್ಲಿ ಕ್ರೈಸ್ತ ಮಿಶನರಿಗಳ ಶೈಕ್ಷಣಿಕ ಕಾರ್ಯಕ್ರಮಗಳು ಈ ಕಾಲಘಟ್ಟದಲ್ಲಿ ಭಾರತದ ಉದ್ದಗಲಕ್ಕೂ ನಡೆಯುತ್ತಿತ್ತು ಎನ್ನುವುದನ್ನು ನಾವು ಗಮನಿಸಬೇಕು. ಅಧ್ಯಾಪಕರಾಗಿ, ಸಂಶೋಧಕರಾಗಿ ಭಾಷಾ ಶಾಸ್ತ್ರಜ್ಞರಾಗಿ, ಅನುವಾದಕರಾಗಿ ಜಾನಪದ ಶಾಸ್ತ್ರ, ಚರಿತ್ರೆ, ಕಾವ್ಯಗಳ ಸಂಗ್ರಾಹಕರಾಗಿ ಅವರು ದುಡಿದರು. ದುಡಿಮೆ, ದಕ್ಷತೆ, ಪ್ರಾಪಂಚಿಕ ದೃಷ್ಟಿಕೋನ, ವಿಚಾರಶೀಲತೆ, ಆಧುನಿಕ ವ್ಯಕ್ತಿಗಳ ಗುಣ ಲಕ್ಷಣ ಆಗಿರಬೇಕೆಂದು ಇವರು ಗ್ರಹಿಸಿದ್ದರು. ಇದೆಲ್ಲದರ ಒಟ್ಟು ಫಲವೆಂದರೆ ಪಶ್ಚಿಮದ ವೈಚಾರಿಕತೆಯನ್ನು ಹೊಂದಿದ ಹೊಸ ವಿದ್ಯಾವಂತ ವರ್ಗದ ಉದಯ, ದೇಸೀ ವೈವಿಧ್ಯಗಳನ್ನು ನಾಶ ಮಾಡಿ ಒಂದೇ ರೂಪದ ಸಮಾಜವೊಂದರ ಒಂದೇ ರೀತಿಯ ಸ್ಥಿತಿ ನಿರ್ಮಾಣ ಮಾಡುವುದೇ ಈ ವೈಚಾರಿಕತೆಯ ಒಡಲೊಳಗಿನ ತರ್ಕ ಮತ್ತು ಉದ್ದೇಶ.

ಭಾರತೀಯ ಕಾದಂಬರಿಗಳ ಉಗಮ ಇರುವುದೇ ಈ ಬಗೆಯ ವಸಾಹತು ಪರಿಣಾಮಕ್ಕೆ ಸಿಲುಕಿಕೊಂಡು ಭಾರತೀಯ ವಿದ್ಯಾವಂತ ವರ್ಗದ ಒಡಲಾಳದ ದನಿಯಾಗಿ, ಅವರ ನಂಬಿಕೆಗಳು, ಕನಸುಗಳು, ಅಗತ್ಯಗಳು, ದ್ವಂದ್ವಗಳು, ಅಂತರಾಳದ ತೊಳಲಾಟಗಳೇ ಹೆಚ್ಚಿನ ಭಾರತೀಯ ಭಾಷೆಗಳ ಕಾದಂಬರಿಯ ಮೂಲಭೂತವಾದ ದರ್ಶನಕ್ಕೆ ರೂಪು ಕೊಟ್ಟಾಗಿದೆ. ಮಧ್ಯಮ ವರ್ಗದ ಸಾಹಿತ್ಯವಾಗಿ ರೂಪು ಪಡೆದ ಆಧುನಿಕ ಸಾಹಿತ್ಯದಲ್ಲಿ ಒಂದು ಬಗೆಯ ವಿಶ್ವಸ್ಥ ಅನುಭವಗಳನ್ನು ನಾವು ಕಾಣಬಹುದು. ಇದಕ್ಕೆ ಕಾರಣವಾಗಿದ್ದುದು ಆ ಕಾಲದ ಸಂದರ್ಭ ಮತ್ತು ಸನ್ನಿವೇಶವೂ ಆಗಿತ್ತು.

ಈಗ ತುಳು ಸಾಹಿತ್ಯ ರೂಪ ಪಡೆಯುವ ಹೊತ್ತಿನಲ್ಲೂ ಈ ಪ್ರಶ್ನೆಗಳು ನಮಗೆ ಮುಖ್ಯವಾಗುತ್ತದೆ. ತುಳು ಸಾಹಿತ್ಯಿಕ ವಾತಾವರಣವನ್ನು ಪ್ರಭಾವಿಸುವ ಸಮುದಾಯದ ವೈಚಾರಿಕ ಆಕೃತಿಗಳನ್ನು ಚರ್ಚೆ ಮಾಡುವುದೂ ಇಲ್ಲಿ ಮುಖ್ಯವಾಗಿತ್ತದೆ. ಯಾಕೆಂದರೆ ವಸಾಹತುವಿನ ನಂತರದ ಈ ಸನ್ನಿವೇಶದಲ್ಲಿ ಕಲೋನಿಯಲ್ ವಿಚಾರ ಸರಣಿಯಿಂದ ಹೊರ ಬಂದು ನಮ್ಮ ಸಂಸ್ಕೃತಿ ವಿಶಿಷ್ಟ ಚಿಂತನೆಗಳಿಂದ ಗ್ರಹಿಸಬೇಕಾಗುತ್ತದೆ.ಹಾಗಾದರೆ ಮಾತ್ರ ಇಂದು ಏರುಪೇರಾಗಿರುವ ಸರಿ ರೂಪ ಅಲ್ಲದಿದ್ದರೂ ವಿಷಮ ಸಂಬಂಧ ಒಂದರ ಅಸಮಾನ ಚಿತ್ರವನ್ನು ನಾವು ಬದಲು ಮಾಡಬಹುದು, ಇಲ್ಲವಾದರೆ ಮೆಟ್ರೋಪಾಲಿಟನ್ ಸಾಹಿತ್ಯ ಸಂಸ್ಕೃತಿಯನ್ನು ಈ ಹಿಂದೆಯೇ ಕಂಡ ಸಾಹಿತ್ಯ ಯುಗವನ್ನು ನೋಡಿದ ಭಾಷಾ ಸಮುದಾಯಗಳು ಮೆಟ್ರೋಪಾಲಿಟನ್ ಸಂಸ್ಕೃತಿಯೂ ಸೇರಿ ಈ ಎಲ್ಲಾ ಭಾಷಾ ಸಮುದಾಯಗಳ ಬೆನ್ನು ಹತ್ತಿಯೇ ತುಳು ಸಂಸ್ಕೃತಿಯೂ ನಡೆಯಬೇಕಾಗುತ್ತದೆ. ಹಾಗಾಗಿ ಒಂದು ಬಗೆಯ ಸ್ವ ವಿಮರ್ಶೆ ಈ ಹೊತ್ತು ನಮಗೆ ಅಗತ್ಯ.

ಯಾಕೆಂದರೆ ಈಗ ಕಾಣುತ್ತಿರುವ ವಸಾಹತು ದೇಶಗಳಲ್ಲಿ ಒಂದು ಬಗೆಯ ವೈರುಧ್ಯದ ತರ್ಕವನ್ನು ಅನುಸರಿಸಿ ಅವರ ಹಿಡಿತದಲ್ಲಿರುವ ಪ್ರಾಚೀನ ಚರಿತ್ರೆಯನ್ನೇ ಕೆದಕುವ ವಸಾಹತು ಚರಿತ್ರೆ ಅದನ್ನು ವಿಕಾರಗೊಳಿಸಿ ನಾಶಮಾಡುತ್ತದೆ. ತುಳು ಕಾದಂಬರಿಗಳಿಗೆ ಈ ಮಾತು ಹೆಚ್ಚು ಪ್ರಸ್ತುತ.

ಈವರೆಗೆ ಚರ್ಚಿಸಿರುವಂತೆ ದೇಸೀ ಕಾದಂಬರಿಗಳು ರೂಪು ಪಡೆದದ್ದು, ವಸಾಹತೀಕರಣ ನಿರ್ದಿಷ್ಟವಾದ ಫಲ ಎನ್ನುವಂತಿದೆ. ಹಾಗಾಗಿ ವಸಾಹತೀಕರಣ, ದೇಸೀ ಆಧುನೀಕರಣ ಹಾಗೆಯೇ ಕಾದಂಬರಿಯ ಬೆಳವಣಿಗೆಯಲ್ಲಿ ಒಂದು ಬಗೆಯ ತರ್ಕವೂ ಇದೆ. ಹತ್ತೊಂಬತ್ತನೇ ಶತಮಾನದಲ್ಲಿ ಆಂಗ್ಲ ವಿದ್ಯಾಭ್ಯಾಸದ ಮೊದಲ ಫಸಲನ್ನು ಪಡೆದುದು ವೈದಿಕ ಸಮುದಾಯ ಎನ್ನುವುದನ್ನು ಮರೆಯಲಾಗದು. ಒಂದು ಕಡೆಯಲ್ಲಿ ವೇದಾಂತ ಮೌಲ್ಯವ್ಯವಸ್ಥೆ, ಇನ್ನೊಂದು ನೆಲೆಯಲ್ಲಿ ಪಶ್ಚಿಮದ ಶಿಕ್ಷಣ ಕ್ರಮದಿಂದ ಪಡೆದ ಉದಾರವಾದೀ ನಿಲುವು ಈ ಎರಡರ ಧೋರಣಾತ್ಮಕ ನಿಲುವನ್ನು ವಿದ್ಯಾವಂತ ವರ್ಗದ ವೈಚಾರಿಕ ಆಕೃತಿಗಳೇ ಕಾಣಬಹುದು.

ಪಶ್ಚಿಮದ ವಿದ್ಯಾಭ್ಯಾಸದ ಫಲವಾಗಿಯೇ ರಾಷ್ಟ್ರೀಯತೆಯೂ ಪರಿಕಲ್ಪನಾತ್ಮಕವಾಗಿ ಸೃಷ್ಟಿಯಾಯಿತು. ಈ ಪ್ರತಿಷ್ಠಿತ ಧೀಮಂತ ವರ್ಗವು ಭಾರತದ ಉಳಿದ ಪರಂಪರೆಯಿಂದ ತನ್ನನ್ನು ತಾನು ಪ್ರತ್ಯೇಕಿಸಿ ಪಶ್ಚಿಮದ ಜಗತ್ತಿನೊಂದಿಗೆ ಸರಿತೂಗಿಸಿಕೊಳ್ಳಲು ಸೇರಿಸಲು ಸಾಧ್ಯವಾಗದ ಸ್ಥಿತಿಯಲ್ಲಿ ರಾಷ್ಟ್ರೀಯತೆಯ ಹುಟ್ಟಿನ ಸತ್ಯವಡಗಿದೆ. ಅಲ್ಲದೆ ಬೇರೆ ಬೇರೆ ಪ್ರಾದೇಶಿಕ ಸಮುದಾಯಗಳ ಸಂವೇದನೆ ಹೊಸ ಬದಲಾವಣೆಗೆ ಮನಸ್ಸು ಒಡ್ಡಿಕೊಂಡಾಗ ರೂಪು ಪಡೆದ ರಾಷ್ಟ್ರೀಯ ಸಂವೇದನೆಯ ರೂಪವಿದು. ದೇಸೀ ವಿದ್ಯಾವಂತ ವರ್ಗದ ಈ ರಾಷ್ಟ್ರೀಯ ಸಂವೇದನೆ ತನಗೊಂದು ಸಾಂಸ್ಕೃತಿಕ ವ್ಯಕ್ತಿತ್ವವನ್ನು ಸಾಮಾಜಿಕ ಸಮ ಬಿಂಬವನ್ನು ಪಡೆಯಲು ಮಾಡಿದ ಯತ್ನವನ್ನು ೧೯-೨೦ನೇ ಶತಮಾನದ ಬೇರೆ ಬೇರೆ ರಾಜಕೀಯ ಸಾಮಾಜಿಕ ಸಾಂಸ್ಥಿಕ ಯತ್ನಗಳನ್ನು ನಾವು ಕಾಣಬಹುದು. ಕಾದಂಬರಿಯು ಈ ವರ್ಗದ ಸಾಮಾಜಿಕ ಸಾಹಿತ್ಯಿಕ ಅಗತ್ಯವಾಗಿ ರೂಪು ಪಡೆದ ಆಧುನಿಕ ಸಾಹಿತ್ಯ ಪ್ರಕಾರ. ಈ ವಿದ್ಯಾವಂತ ವರ್ಗದ ಜೀವನ ದರ್ಶನವೇ ಕಾದಂಬರಿಯ ಮೂಲಭೂತ ತಾತ್ವಿಕ ದರ್ಶನವಾಗಿದೆ.

ಭಾರತೀಯ ವಿದ್ಯಾವಂತ ವರ್ಗದ ಸೃಷ್ಟಿಯಾದ ಕಾದಂಬರಿಯಲ್ಲಿ ಒಂದು ನಾಡಿನ ಸಾಂಸ್ಕೃತಿಕ ತುಡಿತವನ್ನು ನಾವು ಕಾಣಬಹುದು ಆಳುವ ಹಾಗೂ ಆಳಿಸಿಕೊಳ್ಳುವ ಸಂಸ್ಕೃತಿಗಳೂ ಮುಖಾಮುಖಿಯಾದಾಗ ಗ್ರಹಿಸಿದ ದೇಸೀ ವಿದ್ಯಾವಂತ ವರ್ಗದ ಜೀವನ ದರ್ಶನವು ಇಲ್ಲಿದೆ. ಇದರ ತಾರ್ಕಿಕ ಪರಿಣಾಮವನ್ನು ನಾವು ಕಾದಂಬರಿಯ ಆಕೃತಿಯಲ್ಲೂ ಕಾಣಬಹುದು. ಕನ್ನಡ ಕಾದಂಬರಿಗಳ ಬೆಳವಣಿಗೆಯಲ್ಲಿ ಮೊದಲು ಕಾಣುವುದು ಒಂದು ಬಗೆಯ ಕಾದಂಬರಿಯ ಅಸಾಧ್ಯತೆ. ಆ ನಂತರದ ಕಥನ ಕ್ರಮಗಳ ನಡುವಿನ ಒಂದು ಸ್ಥಿತಿ ವಿಶೇಷವಾಗಿ ಐತಿಹಾಸಿಕ ರಮ್ಯ ಕಥನಗಳು ಕಾಣಿಸುತ್ತವೆ. ಅದರ ನಂತರ ಸಾಮಾಜಿಕ ಕಾದಂಬರಿಗಳ ಪ್ರಯತ್ನವಿದೆ. ಲೇಖಕರು ತಾವು ನಿರೂಪಿಸಿದ ವೈಚಾರಿಕತೆಗೆ ಅನುಗುಣವಾಗಿ ಸುಧಾರಣಾವಾದಿ, ಪುನರುತ್ಥಾನವಾದಿ, ಸಾಂಪ್ರದಾಯಿಕ ಎನ್ನುವ ಮೂರು ಮಾದರಿಯ ದಾರೆಗಳನ್ನು ಗುರುತಿಸಬಹುದು. ಒಟ್ಟು ಭಾರತೀಯ ಕಾದಂಬರಿಗೆ ಅನ್ವಯವಾಗುವ ಮಾತಿದು.

ಭಾರತೀಯ ಭಾಷೆಗಳಲ್ಲಿ ಕಾದಂಬರಿಗಳು ಹೆಚ್ಚು ಕಡಿಮೆ ಒಂದೇ ಕಾಲಘಟ್ಟದಲ್ಲಿ ಕಂಡು ಬಂದರೂ ಪ್ರಾದೇಶಿಕ ವೈಶಿಷ್ಟ್ಯತೆಗೆ ಅನುಗುಣವಾಗಿ ವ್ಯತ್ಯಾಸಗಳೂ ಇದೆ. ಬಂಗಾಲಿ, ಮರಾಠಿ, ಮತ್ತು ಕನ್ನಡದಲ್ಲಿ ಏಕಕಾಲದಲ್ಲಿ ಕಾದಂಬರಿಗಳ ರಚನೆಯಾಯಿತು. ತುಳುವಿನಲ್ಲಿ ತುಂಬಾ ತಡವಾಗಿ ಕಾದಂಬರಿಯ ರಚನೆಯಾಗಿದೆ. ರಾಷ್ಟ್ರೀಯ ಚಳುವಳಿಯ ಪ್ರಭಾವದಿಂದ ಹುಟ್ಟಿಕೊಂಡ ಭಾಷಿಕ ಚಳುವಳಿಯಲ್ಲಿ ಮೊದಲ ತುಳು ಕಾದಂಬರಿ ರಚನೆಯಾಯಿತು. ೧೯೨೧ರಲ್ಲಿ ಬರೆದು ೧೯೩೬ರಲ್ಲಿ 'ಸತೀ ಕಮಲೆ' ಪ್ರಕಟವಾಯಿತು. ಎನ್.ಎಸ್ ಕಿಲ್ಲೆಯವರ 'ಮಿತ್ಯ ನಾರಾಯಣ ಕತೆ'ಪ್ರಕಟಗೊಂಡಿತು. ಆ ನಂತರ ೧೯೮೩ ರ ವರೆಗೂ ಒಂದೇ ಒಂದು ತುಳು ಕಾದಂಬರಿ ಪ್ರಕಟವಾಗಿಲ್ಲ. ೮೩–೮೪ರಲ್ಲಿ ಅನುವಾದಗೊಂಡ ಎರಡು ತುಳು ಕಾದಂಬರಿಗಳು ಪ್ರಕಟವಾಯಿತು. ಈ ಎರಡೂ ಕಾದಂಬರಿಗಳನ್ನು ಕೆದಂಬಾಡಿ ಜತ್ತಪ್ಪ ರೈ ಯವರು ಕನ್ನಡದಿಂದ ತುಳುವಿಗೆ ಅನುವಾದಿಸಿದರು. ಶಿವರಾಮ ಕಾರಂತರ "ಚೋಮನ ದುಡಿ" ಮತ್ತು ನಿರಂಜನರ "ಚಿರಸ್ಮರಣೆ" ಕಾದಂಬರಿಯನ್ನು ಅನುವಾದಿಸಿದ್ದಾರೆ. ಆರಂಭದ ದಿನಗಳಲ್ಲಿ ಆಧುನಿಕ ಸಾಹಿತ್ಯದ ಪರಂಪರೆ ತುಳು ಭಾಷೆಯಲ್ಲಿ ಅಷ್ಟು ಸಮೃದ್ಧವಾಗಿ ರಚನೆಯಾಗದಿದ್ದರೂ, ನಂತರದಲ್ಲಿ ಸಿಕ್ಕ ಬೆಂಬಲ ಪ್ರೋತ್ಸಾಹಗಳಿಂದ ೧೯೯೦ರ ದಶಕದಿಂದೀಚೆಗೆ ಬಹಳಷ್ಟು ಕೃತಿಗಳು ರಚನೆಗೊಂಡಿವೆ.

ತುಳುವಿನ ಎಲ್ಲಾ ಕಾದಂಬರಿಗಳನ್ನು ವಿಶ್ಲೇಷಣೆಗೆ ಇಲ್ಲಿ ಆಯ್ದುಕೊಂಡಿಲ್ಲ. ಮಂದಾರ ಕೇಶವ ಭಟ್ಟರ 'ಮಂದರಾ ರಾಮಾಯಣ' ಮಹತ್ವದ ಕೃತಿಯೂ ಆಗಿ ಮಹಾ ಕಾವ್ಯವಾಗಿ ರಚನೆಗೊಂಡಿದೆ. ಆಕರವಾಗಿ ಮಂದಾರ ರಾಮಾಯಣದಂತಕೃತಿಯನ್ನು ವಿಶ್ಲೇಷಣೆಗೆ ಆಯ್ಕೆ ಮಾಡಿಕೊಳ್ಳಗಿದೆ. ಜಾನಕಿ ಎಂ ಬ್ರಹ್ಮಾವರ ಅವರ 'ಕುದುರುದ ಕೇದಗೆ', 'ಕಪ್ಪುಗಿಡಿ', 'ಯುಗ ಮಗ್ರ್ನಗ' ದಂತಹ ಕಾದಂಬರಿಗಳು ಕೃಷಿ ಜಗತ್ತನ್ನು ನಿರೂಪಿಸುತ್ತಿವೆ. ಡಿ.ಕೆ ಚೌಟರ 'ಮಿತ್ತಬೈಲ್ ಯಮುನಕ್ಕೆ' ಕರಾವಳಿಯ ಬದುಕು ಬದಲಾದ ಬಗೆಯ ನೂರು ವರ್ಷದ ಕತೆಯನ್ನು ಹೇಳುತ್ತದೆ. ಜಯಮ್ಮ ಚೆಟ್ಟಿಮಾಡ ಅವರ 'ಪರಬಾಳ್‌ತ ಪರಿಪಾಳೆಳ್', ಕೆ. ಮಹಾಲಿಂಗ ಭಟ್ ಅವರ 'ನಾಣಜ್ಜೆರ್ ಸುದೆ ತಿರ್ಗಾಯೆರ್' ಕೃಷಿ ಜಗತ್ತು ಬದಲಾದ ಪರಿಯನ್ನು ನಿರೂಪಿಸುತ್ತದೆ. ಇವಲ್ಲದೆ ಹಲವಾರು ಬರಹಗಾರರು ತುಳು ಕಾದಂಬರಿಗಳನ್ನು ಬರೆದಿದ್ದಾರೆ. ಇಲ್ಲಿ ಎಲ್ಲವನ್ನು ಅವಗಾಹನೆಗೆ ಆಯ್ದುಕೊಂಡಿಲ್ಲ. ಕಾರಣವಿಷ್ಟೇ ಕೃಷಿ ಜಗತ್ತು ದಾಖಲಾದ ಬರಹಗಳನ್ನಷ್ಟೇ ಇಲ್ಲಿ ಮುಖ್ಯ ಆಕರವಾಗಿ ಗಮನಿಸಲಾಗಿದೆ. ಉಡುಪಿಯ ತುಳು ಕೂಟ ಕಾದಂಬರಿಗಾಗಿಯೇ ಎಸ್ ಯು ಪಣಿಯಾಡಿ ಪ್ರಶಸ್ತಿ ನೀಡುತ್ತಿದೆ. ಪರಿಣಾಮ ತುಳು ಕಾದಂಬರಿಗಳ ಬರವಣಿಗೆಗೆ ಬೆಂಬಲ ಪ್ರೋತ್ಸಾಹ ಲಭಿಸಿದಂತಾಗಿದೆ. ತುಳು ಸಾಹಿತ್ಯ ಅಕಾಡೆಮಿಯು ನೀಡುವ ವಾರ್ಷಿಕ ಪುಸ್ತಕ ಬಹುಮಾನದಲ್ಲಿ ಕಾದಂಬರಿಯ ಪುಸ್ತಕ ಬಹುಮಾನದ ಒಂದು ಭಾಗವಾಗಿ ಬರಹಗಾರರಿಗೆ ಆಶಾದೀವಿಗೆಯಾಗಿದೆ. ಪರಿಕಲ್ಪನಾತ್ಮಕ ಚರ್ಚೆಗಳ ಹಿನ್ನೆಲೆಯಲ್ಲಿ ಕೃತಿ ವಿಶ್ಲೇಷಣೆ ನಡೆಸಲಾಗಿದೆ.

ಚೋಮನದುಡಿ ತುಳುವಿಗೆ ಅನುವಾದಗೊಳ್ಳುವಾಗ ತನ್ನ ಮೂಲ ಹೆಸರನ್ನು ಹಾಗೆ ಉಳಿಸಿಕೊಂಡಿದ್ದರೆ, ಚಿರಸ್ಮರಣೆ'ಮದಪ್ಪಂದಿ ನೆಂಪು' ಎಂಬ ಹೆಸರಲ್ಲಿ ಅನುವಾದಗೊಂಡಿದೆ. ಈ ಎರಡೂ ಕೃತಿಗಳನ್ನು ಇಲ್ಲಿ ಅಧ್ಯಯನಕ್ಕೆ ಆಯ್ಕೆ ಮಾಡಿಕೊಂಡಲ್ಲ ಚೋಮನದುಡಿ ಕಾದಂಬರಿ ಈ ಹಿಂದಿನ ಅಧ್ಯಾಯ

ಐದರಲ್ಲಿ ವಿಶ್ಲೇಷಣೆಗೆ ಆಯ್ಕೆ ಮಾಡಿಕೊಳ್ಳಲಾಗಿದೆ. ಚಿರಸ್ಮರಣೆ ರೈತ ಚಳುವಳಿಯ ವಿಷಯ ವಸ್ತುವನ್ನೊಳಗೊಂಡಿದ್ದು ಕೃಷಿ ಪಲ್ಲಟದ ಬಗೆಗಿನ ಚರ್ಚೆ ಮತ್ತು ವಿಶ್ಲೇಷಣೆಯನ್ನು ಆ ಕೃತಿಯ ಹಿನ್ನೆಲೆಯಲ್ಲಿ ನಡೆಸಿಲ್ಲ. ರೈತರ ಹೋರಾಟದ ಕತೆಯೇ ಆದರೂ ಪಲ್ಲಟದ ಸ್ವರೂಪವನ್ನು ಅಲ್ಲಿ ಗುರುತಿಸುವುದು ತ್ರಾಸದಾಯಕ, ಪರಿಕಲ್ಪನಾತ್ಮಕ ಚರ್ಚೆಗಳ ಆಚೆಗೆ ಈ ಚರ್ಚೆಯನ್ನು ಮುಂದೊಯ್ಯುವ ಹಿನ್ನೆಲೆಯಲ್ಲಿ ಇಲ್ಲಿ ಗಮನಿಸಿಲ್ಲ. ಕೃಷಿ ಸಂಸ್ಕೃತಿಯ ಪಲ್ಲಟವನ್ನು ತುಳು ಸಾಹಿತ್ಯವು ಅಭಿವ್ಯಕ್ತಿ ಪಡಿಸಿದ ಬಗೆಯನ್ನು ಒಟ್ಟು ನಾಲ್ಕು ನೆಲೆಗಳಲ್ಲಿ ಗುರುತಿಸಬಹುದಾಗಿದೆ.

**೭.೧ ತುಳುನಾಡಿನ ನೆಲ ಮೂಲ ಸಂಸ್ಕೃತಿ**

"ಸಂಸ್ಕೃತಿಯ ಉತ್ಪತ್ತಿ, ಸಂರಕ್ಷಣೆ ಮತ್ತು ಸಂಕ್ರಮಣವು ಭಾಷೆಯ ಮೂಲಕ ನಡೆಯುತ್ತದೆ. ಭಾಷೆಯು ಸಂಸ್ಕೃತಿಯ ಒಂದು ಪ್ರಭಾವಿ ಅಂಗ. ಭಾಷೆಯ ಹೊರತು ಸಂಸ್ಕೃತಿಯ ನಿರ್ಮಾಣವೂ ಆಗುವುದಿಲ್ಲ. ಸಂಕ್ರಮಣವಂತೂ ಅಸಾಧ್ಯದ ಮಾತು".(ಚಂದ್ರಹಾಸ ಪೋಕಳೆ; (ಅನು)೨೦೧೬ ಪುರ್ಟ) ಭಾಷೆಯ ಅಭಿವ್ಯಕ್ತಿ ಸ್ವರೂಪದಿಂದ ನಿರೂಪಗೊಳ್ಳುವ ಸಾಹಿತ್ಯ ಕೃತಿಗಳು ವ್ಯಕ್ತಪಡಿಸುವ ಚಿಂತನಾಕ್ರಮಗಳು ಅಧ್ಯಯನ ಇಲ್ಲಿ ಮುಖ್ಯವೆನಿಸುತ್ತದೆ. ತುಳುವಿನ ಕಾದಂಬರಿಗಳೊಂದಿಗೆ, 'ಮಂದಾರ ರಾಮಾಯಣ' ದಂತಹ ಕೃತಿಯೂ ಇಲ್ಲಿ ವಿಶ್ಲೇಷಣೆಗೊಳಪಡುತ್ತದೆ. ಸಂಸ್ಕೃತಿ ಎನ್ನುವ ಪದವು ಹಲವು ಚಾರಿತ್ರಿಕ ಘಟ್ಟಗಳನ್ನು ದಾಟಿಕೊಂಡು 'ಸಮುದಾಯಗಳ ಸಮಗ್ರ ಜೀವನ ವಿಧಾನ' ಎಂಬ ಮಾನವಶಾಸ್ತ್ರೀಯ ಅರ್ಥದಲ್ಲಿ ನಿಂತಂತಿವೆ. ಈ ಅರ್ಥಗಳನ್ನು ನಿರೂಪಿಸುವ ಕೃತಿಯ ವಿವರಣೆಗಳನ್ನು ದಾಖಲುಗೊಳಿಸುತ್ತ ತುಳುವರ ನೆಲ ಮೂಲದ ಸತ್ಯಗಳನ್ನು ಹುಡುಕುವ ಅಧ್ಯಯನ ಇದಾಗಿದೆ.

ಕರಾವಳಿಯ ವೈಶಿಷ್ಟ್ಯವಿರುವುದೇ ನೆಲದ ಬೇರುಗಳನ್ನು ಅರಗಿಸಿಕೊಳ್ಳುವುದರಲ್ಲಿ. ಶ್ರಮ ಸಂಸ್ಕೃತಿಯ ಮೂಲದ ಬದುಕು ಕಟ್ಟಿದ ತುಳುವರಲ್ಲಿ ಪ್ರಾಚೀನ ಪ್ರಾಕ್ ಸಂಸ್ಕೃತಿಯ ಲಕ್ಷಣಗಳು ಇವೆ. ಸಂಸ್ಕೃತಿ ವಿಕಾಸದ ಹೆಜ್ಜೆಗಳಲ್ಲಿ ಎರಡು ಕವಲುಗಳಾಗಿ ವಿಕಾಸಗೊಂಡದನ್ನು ಈಗಾಗಲೇ ಗುರುತಿಸಿದ್ದಾರೆ. ಮಾತೃಪ್ರಧಾನ ಮತ್ತು ಪಿತೃಪ್ರಧಾನ ಎಂಬ ಎರಡು ಕುಟುಂಬ ವ್ಯವಸ್ಥೆಯ ಒಳಗಡೆ ಸಂಸ್ಕೃತಿ ವಿಕಾಸದ ಹೆಜ್ಜೆ ಗುರುತುಗಳಿವೆ. ಮಾತೃ ಪ್ರಧಾನ ಸಂಸ್ಕೃತಿಯಲ್ಲಿ ಆಹಾರದ ಮೂಲವಾಗಿ ಬೇಟೆಯಾಡುತ್ತಿದ್ದವರೇ ಕೃಷಿಯನ್ನು ಅನ್ವೇಷಿಸಿದ್ದು ಎರಡನೆಯ ಹಂತವಾದರೆ ಆದಿಮ ಕೃಷಿಯ ನಂತರದಲ್ಲಿ ಕೃಷಿ ವಿಸ್ತರಣೆಗಾಗಿ ಪಶುಪಾಲನೆ ನಡೆಸುತ್ತಾ ಕೊನೆಯ ಹಂತದಲ್ಲಿ ಪಶುಗಳ ನೆರವಿನಿಂದ ಕೃಷಿ ಮಾಡುತ್ತಿದ್ದರು. ಪಿತೃಪ್ರಧಾನ ಕುಟುಂಬ ವ್ಯವಸ್ಥೆಯ ವಿಕಾಸದಲ್ಲಿ ಉಪಕರಣಗಳ ಬಳಸಿ ಬೇಟೆಯಾಡುತ್ತ ಆಹಾರವನ್ನು ಅನ್ವೇಷಿಸಿದವರು ಪಶುಪಾಲನೆಯೊಂದಿಗೆ ಕೃಷಿಯೆಡೆಗೆ ಗಮನ ಕೇಂದ್ರೀಕರಿಸಿದರು. ಇದರ ಮುಂದಿನ ಹಂತವಾಗಿ ಕೃಷಿ ವಿಸ್ತರಣೆಗೊಂಡಿತು. ಈ ಎರಡು ಕವಲುಗಳು ಎರಡು ರೀತಿಯ ಕುಟುಂಬ ವ್ಯವಸ್ಥೆಯನ್ನು ಕಟ್ಟಿ ಬೆಳೆಸಿತು. ಒಂದು ಕಾಳಿನಿಂದ ನೂರು ಧಾನ್ಯವನ್ನು ಬೆಳೆಯುವ ಮಾತೃಪ್ರಧಾನ ಕುಟುಂಬ ವ್ಯವಸ್ಥೆಯೂ, ಒಂದು ಹೋರಿಯಿಂದ ನೂರು ಹಸುಗಳಿಗೆ ಸಂತಾನ ಪ್ರಾಪ್ತಿಯಾಗುವಾಗ ಹೋರಿ ಕೇಂದ್ರಿತವಾದ ಪಿತೃಪ್ರಧಾನ ಕುಟುಂಬ ವ್ಯವಸ್ಥೆಯೂ ಚಾಲ್ತಿಯಲ್ಲಿತ್ತು. ಕರಾವಳಿಯಲ್ಲಿ ಮಾತೃದೇವತೆಗಳ ಆರಾಧನೆಯನ್ನು ಒಳಗೊಂಡ ಮಾತೃಪ್ರಧಾನ ಕುಟುಂಬ ವ್ಯವಸ್ಥೆಯಲ್ಲಿಯ

ಹೆಣ್ಣಿನ ಮೂಲದಿಂದ ಕುಟುಂಬವನ್ನು ಗುರುತಿಸುವ ಮಾತೃಮೂಲ ಕುಟುಂಬ ವ್ಯವಸ್ಥೆಯಿದೆ. ಹೆಣ್ಣಿನಿಂದ ವಂಶ ಮತ್ತು ಭೂಮಿಯ ಒಡೆತನವೂಗುರುತಿಸಲ್ಪಡುತ್ತಿತ್ತು. ಕುಟುಂಬದ ಮನೆತನಗಳು ಹೆಣ್ಣಿನ ಮೂಲಕ ಗುರುತಿಸಲ್ಪಡುತ್ತಿದ್ದುದು ಮಾತ್ರವಲ್ಲ ಕುಟುಂಬದ ನಿಜವಾದ ಯಜಮಾನಿ ಹೆಣ್ಣೇ ಆಗಿದ್ದಳು. ಗಂಡು ಪ್ರತೀಕ ಮಂದಾಳುವಾಗಿ ಹೆಣ್ಣಿನ ಹೊಣೆಗಾರಿಕೆಯ ಜವಾಬ್ದಾರಿಯನ್ನು ನಿರ್ವಹಿಸುತ್ತಿದ್ದರು ಹೆಣ್ಣಿಗೆ 'ತಮರಿ' ಯಾಗುತ್ತಿದ್ದವರು ಆಕೆಯ ಕುಟುಂಬದಲ್ಲಿಯೇ ಹುಟ್ಟಿದ ಸೋದರ ಮಾವ, ಮಾವ-ಅಳಿಯಂದಿರಲ್ಲದೆ ಅವಳ ಗಂಡ ಅಲ್ಲ ಸ್ತ್ರೀ ಕೇಂದ್ರಿತವಾದ ಕುಟುಂಬ ವ್ಯವಸ್ಥೆಯಲ್ಲಿ ಆದಿ ಆಲಡೆ- ಮೂಲ ತಾನಗಳು ಹೆಣ್ಣಿನ ಮೂಲಕವೇ ಗುರುತಿಸಲ್ಪಡುತ್ತವೆ.

"ಅಲೆಮಾರಿ ಸಮೂಹಗಳು ತಮಗಾಗಿ ಮತ್ತು ತಮ್ಮೊಂದಿಗಿದ್ದ ಸಾಕು ಪ್ರಾಣಿಗಳ ಆಹಾರಕ್ಕಾಗಿ ಒಂದು ಪ್ರದೇಶದಿಂದ ಮತ್ತೊಂದು ಪ್ರದೇಶಕ್ಕೆ ಅಲೆಯುತ್ತಿದ್ದುದು ನಿಂತ ಮೇಲೆ ಗ್ರಾಮ ಸಮುದಾಯಗಳು ಉಗಮಗೊಂಡವು. ಪ್ರಪಂಚದ ಎಲ್ಲಾ ಕಡೆ ಇಂತಹ ಸಮುದಾಯಗಳು ನೀರಿನಾಶ್ರಯವಿರುವಲ್ಲಿಯೇ ನೆಲೆಯಾದವು. "ಉತ್ತ ತುಂಡು ಭೂಮಿ ಮಾನವನ ಕಾಲುಗಳನ್ನು ಕಟ್ಟಿ ಹಾಕಿತು" ಎನ್ನುತ್ತಾರೆ. ಸಮಾಜಶಾಸ್ತ್ರಜ್ಞ ಟೆನ್ನೀಸ್ ಹಾಗೂ ಮಂಫೋರ್ಡರು ಇದಕ್ಕೆ ಕಾರಣ ನೀರಿನಾಶ್ರಯದಲ್ಲಿ ಕಂಡ ಫಲವತ್ತಾದ ಭೂಮಿ ಅದು ಭತ್ತದ ವ್ಯವಸಾಯಕ್ಕೆ ಯೋಗ್ಯವಾಗಿಯೂ ಇತ್ತು. ಕೃಷಿ ಲೋಕವು ಆತನ ಅಲೆಮಾರಿ ಜೀವನವನ್ನು ಅಂತ್ಯಗೊಳಿಸಿತು. ತುಳುನಾಡಿನ ಅನೇಕ ದೈವ ಪಾಡ್ದನಗಳು 'ಅತಿಕಾರೆ' ಭತ್ತವನ್ನು ಗಟ್ಟದ ಮೇಲಿನಿಂದ ತಂದು ವ್ಯವಸಾಯ ಆರಂಭಿಸಿದ ಬಗ್ಗೆ ಹೇಳುವುದೂ ಸಮಾಜಶಾಸ್ತ್ರಜ್ಞರ ವಾದಕ್ಕೆ ಪುಷ್ಠಿ ನೀಡುತ್ತದೆ. ಇಲ್ಲಿಯ ಮೂಲತಾನ ಆದಿ ಆಲಡೆಗಳ ಕಾಡುಗಳನ್ನು ಮಾಡಿದಾಗಲೂ ನಾಗಕ್ಷೇತ್ರಗಳ ಕಾಡನ್ನು ವ್ಯವಸಾಯ ಗದ್ದೆಗಳ ಮಧ್ಯೆ ಉಳಿಸಿಕೊಂಡಿದ್ದರು. ಮೂಲತಾನಗಳು ಕೆಲವು ಕಡೆ ಅವು ಭತ್ತದ ಗದ್ದೆಗಳಿಗೆ ಹೊಂದಿಕೊಂಡಂತೆ ಇರುವ ಕಾಡು, ಮಲೆಗಳಾಗಿರುತ್ತವೆ. ಈ ಕಾಡುಗಳನ್ನು ಕಡಿಯಬಾರದು ಎಂಬ ನಿಷೇಧ ಇದೆ. ಅದರ ರೆಂಬೆಗೂ ಕತ್ತಿ ತಾಗಿಸಬಾರದು." (ಇಂದಿರಾ ಹೆಗ್ಗಡೆ, ೨೦೧೨; ಪು. ೨೨೪)

ಕೃಷಿಯ ಆರಂಭ ಹಂತದ ಸಾಕ್ಷಿಪ್ರಜ್ಞೆಗಳನ್ನು ಇಂದಿಗೂ ತಮ್ಮ ಆರಾಧನಾ ಪರಂಪರೆಯಲ್ಲಿ ಉಳಿಸಿಕೊಂಡು ಕೃಷಿಯನ್ನು ವಿಸ್ತರಿಸುತ್ತ ಬದುಕು ಕಟ್ಟಿದವರು ತುಳುವರು. ಕೃಷಿ ಉಗಮವಾದ ಸಂದರ್ಭ ಸ್ಥಳಗಳ ಜತೆಗೆ ಸಾಮೂಹಿಕ ದುಡಿಮೆಯ ಪ್ರತೀಕವಾಗಿ ಇಂದಿಗೂ ಕರಾವಳಿಯಲ್ಲಿ ಕಂಬಳಗಳನ್ನು ಆಚರಿಸಲಾಗುತ್ತದೆ. ಸಾಮೂಹಿಕ ಶ್ರಮ ಮತ್ತು ಬಂದ ಬೆಳೆ ದೇವರ ಬೆಳೆ, ಎಂಬ ನಂಬಿಕೆ ಇಂದಿಗೂ ಕರಾವಳಿಯಲ್ಲಿದೆ. ಕಾಡಿನ ನಡುವೆ ವ್ಯವಸಾಯ ಭೂಮಿಯನ್ನು ಆಯ್ದುಕೊಂಡ ಮಾನವರು ಕಾಡಿನ ಕ್ರೂರ ಮೃಗಗಳಿಂದ ಒದಗಬಹುದಾದ ಎಲ್ಲಾ ರೀತಿಯ ಅಪಾಯಗಳನ್ನು ಎದುರಿಸಲು ಸಜ್ಜಾಗಿ ಇರಬೇಕಿತ್ತು. ವ್ಯವಸಾಯದ ಪೂರ್ವದಲ್ಲಿ ಇದ್ದ ಸಹಜೀವನ ಇಲ್ಲೂ ಕೆಲವು ಕಾಲ ಮುಂದುವರಿಯಿತು. ಸಮೂಹ ಪದ್ಧತಿಯ ವ್ಯವಸಾಯಕ್ಕೆ ತುಳುನಾಡಿನ ಕಂಬುಲ ಒಂದು ಉತ್ತಮ ಉದಾಹರಣೆ. ಈ ವಿಸ್ತಾರ ಗದ್ದೆಗಳು ಇರುವುದು ಮೂಲತಾನದ ಆದಿ ಆಲಡೆಯ ಕಂಬಳ ಗದ್ದೆಗಳಲ್ಲಿ. ಸುಮಾರು ಹತ್ತು ಎಕ್ರೆಗಿಂತಲೂ ವಿಶಾಲವಾಗಿ ಈಗಲೂ ಇದೆ. ಕಾಲಕ್ರಮೇಣದಲ್ಲಿ ನಡೆದ ಆರ್ಥಿಕ, ರಾಜಕೀಯ, ಸಾಮಾಜಿಕ, ಸಾಂಸ್ಕೃತಿಕ

ಬದಲಾವಣೆಗಳು ಸಾಮೂಹಿಕ ಒಡೆತನವನ್ನು ಮುರಿದು ಸ್ವಂತ ಒಡೆತನ ,ಕುಟುಂಬ ಒಡೆತನವನ್ನು ತಂದಿತು. ಇದು ತುಳುವರ ಜನಜೀವನದಲ್ಲಿ ಮಹತ್ತರ ಬದಲಾವಣೆಗಳನ್ನು ತಂದಿರಬೇಕು.

"ಮಾನವನ ಇತಿಹಾಸದಲ್ಲಿ ಜರುಗಿದ ಒಂದು ವಿಪರ್ಯಾಸದ ಸಂಗತಿ ಎಂದರೆ ಜಮೀನಿನ ಖಾಸಗಿ ಒಡೆತನವೂ ಕುಲಗೋತ್ರಗಳ ಕೇಂದ್ರ ಬಿಂದುವಾದ ಹಿರಿಯನಿಂದಲೇ ಆರಂಭವಾಯಿತು. ಜಗತ್ತು ಕಂಡ ಮೊತ್ತ ಮೊದಲ ಜಮೀನುದಾರನೆಂದರೆ ಗ್ರಾಮದ ಹಿರಿಯ ಮುಖ್ಯಸ್ಥ ಎನ್ನುತ್ತಾರೆ. ಸಮಾಜಶಾಸ್ತ್ರಜ್ಞರು." (ಅದೇ, ಪು.೨೨೯) ಭೂಮಿಯ ಒಡೆತನದೊಂದಿಗೆ ಹಂಚುವಿಕೆಯ ಕ್ರಮಗಳೆಲ್ಲವೂ ಆರಾಧನಾ ಪರಂಪರೆಯ ಭಾಗಗಳಾಗಿ ದಾಖಲಾಗಿವೆ. ಕರಾವಳಿಯ ಕೃಷಿ ಪರಂಪರೆ ಭೂಮಿಯ ಒಡೆತನವನ್ನು ಗಮನಿಸುತ್ತಲೇ ಅಲ್ಲಿರುವ ಗ್ರಾಮ ಜೀವನವನ್ನು ಮೇಲ್ನೋಟಕ್ಕೆ ಕಂಡಾಗಲೂ ಅಲ್ಲಿ ಗುಂಪು ಮನೆಗಳಿಲ್ಲ. ಇಲ್ಲಿ ಇರುವುದು ಚದುರಿದ ಮನೆಗಳು, ಮಾನವ ಗ್ರಾಮ ವಾಸದ ಎರಡನೆಯ ಹಂತವೆಂದು ಈಗಾಗಲೇ ಅಧ್ಯಯನಕಾರರು ಗುರುತಿಸುತ್ತಾರೆ. ಸಾಮೂಹಿಕ ದುಡಿಮೆ, ಸಾಮೂಹಿಕ ಒಡೆತನ, ಸಾಮೂಹಿಕ ಕೃಷಿಯ ಪರಂಪರೆಯನ್ನು ಒಳಗೊಂಡ ಕರಾವಳಿಯ ಆದಿ ಆಲಡೆಗಳು ಕೃಷಿಯನ್ನು ವಿಸ್ತರಣೆ ಮಾಡಲು ಪಟ್ಟ ಪ್ರಯತ್ನ ನಿರ್ವಹಣೆಗಾಗಿ ಬಳಸಿದ ಜಾಣ್ಮೆಯನ್ನು ಗುರುತಿಸುತ್ತದೆ. ಮಾತೃವಂಶೀಯ ಕುಟುಂಬ ವ್ಯವಸ್ಥೆಯಲ್ಲಿ ಭೂಮಿಯ ಒಡತಿಯಾಗಿದ್ದವಳು ಕುಟುಂಬದ ಹಿರಿಯ ಹೆಣ್ಣುಮಗಳು. ಆ ಹೊಣೆಗಾರಿಕೆಯನ್ನು ನಿರ್ವಹಿಸುವವನು ಗಂಡು ಯಜಮಾನ, ಒಡೆಯ, ಅರಸು, ಎಂದು ಗುರುತಿಸಲ್ಪಡುತ್ತಾನೆ. ಭೂಮಿ ಹೆಣ್ಣಿನ ಹೆಸರಲ್ಲೇ ಇದ್ದುದರಿಂದ ಕುಟುಂಬದ ಕವಲುಗಳಾಗಿ ಬೇರೆ ಬೇರೆ ಕುಟುಂಬಗಳಿಂದ ಬಂದ, ಬೇರೆ ಬೇರೆ ಕುಟುಂಬಗಳಿಗೆ ಕೊಟ್ಟ ಹೆಣ್ಣು ಮಕ್ಕಳಿದ್ದರೂ ಸಂಸಾರದ ನಿರ್ವಹಣೆಗಾಗಿ ಆಸ್ತಿ ಭೂಮಿಗಳು ಎಲ್ಲಿಯೂ ಹರಿದು ಹಂಚಿ ಹೋದ ಸಾಪೇಕ್ಷ ವಿವರಣೆಗಳಿಲ್ಲ.

ಇಂತಹ ಅವಿಭಕ್ತ ಕುಟುಂಬದ ಸಂರಚನೆಗಳೆಲ್ಲ ಕಾಲಾಂತರದಲ್ಲಿ ಸ್ಥಿತ್ಯಂತರಗೊಂಡುದು ಕೃಷಿ ಜಗತ್ತು ಬದಲಾವಣೆಯನ್ನು ಹೊಂದಿದುದೂ ಕೂಡಾ ಬಹಳ ಮುಖ್ಯವಾದ ಅಂಶ. ಕೃಷಿ ಬದಲಾಗುತ್ತ ಬಂದುದು ಮಾತ್ರವಲ್ಲ ಕರಾವಳಿಯಲ್ಲಿ ಜನರ ಅನ್ನದ ಮೂಲವನ್ನು ಹುಡುಕಾಡಬೇಕಾದ ಅವಶ್ಯಕತೆಯೂ ಇದೆ. ಈ ಎಲ್ಲ ಸೂಕ್ಷ್ಮಗಳನ್ನು ತುಳುವಿನ ಕಾದಂಬರಿಗಳು ನಿರೂಪಿಸಿವೆ.

ಜಯಮ್ಮ ಚೆಟ್ಟಿಮಾಡ ಅವರ 'ಪರಬಾಳ್‌ತ ಪರಿಪಾಳೆಳ್' ತುಳು ಕಾದಂಬರಿ ತುಳು ಸಾಹಿತ್ಯ ಲೋಕಕ್ಕೆ ಅನನ್ಯತೆಯ ಕೊಡುಗೆ. ನೆಲ ಸಂಸ್ಕೃತಿಯೊಂದಿಗೆ ತುಳುವ ಹೆಣ್ಣು ಮಗಳೊಬ್ಬಳು ಬದುಕು ಕಟ್ಟಿದ ಕಾಡು ನಾಡಿನ ಕತೆಯೊಂದಿಗೆ ಸ್ತ್ರೀ ಸಂಕಥನವೇ ಆಗಿದೆ. ಮಾತೃ ಮೂಲ ಪರಂಪರೆಯ ಹೆಣ್ಣುಮಗಳ ಧೀ ಶಕ್ತಿಯೊಂದಿಗೆ ಪ್ರಕಟಗೊಂಡ ದಲಿತ ಸಂವೇದನೆಯೂ ಆಗಿದೆ. ದಲಿತರ ಚೈತನ್ಯವಾದ ಜೀವ ಜಗತ್ತನ್ನು ಪರಿಚಯಿಸುವ ಶ್ರಮ ಸಂಸ್ಕೃತಿಯ ದಾಖಲಾತಿಯೊಂದಿಗೆ, ಹಸಿವಿಗಾಗಿ ನಡೆಸಿದ ಹೋರಾಟ, ಹೆಣಗಾಟಗಳೂ ಇಲ್ಲಿವೆ. 'ತುಳು ಸಂಸ್ಕೃತಿ' ಎಂದರೆ ಉಳ್ಳವರ ಬದುಕಿನ ನಿರೂಪಣೆಯಲ್ಲ. ಇಲ್ಲದವರ ಬದುಕಿನ ಸಾಂಗತ್ಯತೆಯನ್ನು ಸಾರುತ್ತದೆ. ಈ ಕೃತಿ ದಲಿತ ಜಗತ್ತೊಂದನ್ನು ಅನಾವರಣಗೊಳಿಸುವಾಗ ಹೆಣ್ಣು ಮಗಳೊಬ್ಬಳ ಪ್ರಜ್ಞೆಯ ಆಳದಲ್ಲಿ ಹುಟ್ಟುವ ಚಿಂತನೆಗಳು, ಸ್ಥಿತ್ಯಂತರಗಳು, ಹೆಣ್ತನದ ಪ್ರತಿಪಾದನೆಗಳೊಂದಿಗೆ

ದಲಿತ ಸ್ತ್ರೀ ಸಂಕಥನವೇ ಆಗಿದೆ. ಗಂಡಿಗೆ ಸರಿಸಮನಾಗಿ ದುಡಿಯುತ್ತ ಕಾಡು–ನಾಡುಗಳ ಮಧ್ಯದ ಅಂತರವನ್ನು ಅರ್ಥೈಸುತ್ತ ಎದೆಗಾರಿಕೆಯಿಂದ ಬದುಕಿದ ಹೆಣ್ಣು ಮಗಳೊಬ್ಬಳ ಬದುಕಿನ ಕತೆ ಸೃಜನಶೀಲ ಕಾದಂಬರಿಯಾಗುವಲ್ಲಿ ಕೃತಿಯ ಅನನ್ಯತೆ ಇದೆ. ಎಲ್ಲಕ್ಕಿಂತ ಹೆಚ್ಚು ಇದುವರೆಗೂ ತುಳು ಕನ್ನಡಗಳಿಗೆ ಪರಿಚಯವಾಗದೆ ಇದ್ದ ದಲಿತ ಲೋಕದೊಳಗೆ ದಲಿತ ಸಂಸ್ಕೃತಿಯ ಭಾಷೆ, ಕೂಡುಕಟ್ಟು, ಆಚಾರ ವಿಚಾರಗಳು ತುಳುನಾಡಿನ ನೆಲಮೂಲದ ಸೆಲೆಯನ್ನು ಮೊಗೆ ಮೊಗೆದು ಕೊಡುತ್ತದೆ. ನೂರು ವರ್ಷದ ಕತೆಯನ್ನು ಹೆಣೆಯುತ್ತ ಬದಲಾಗುತ್ತ ಬಂದ ತುಳುನಾಡಿನ ಸಾಮಾಜಿಕ, ಆರ್ಥಿಕ ಬದುಕಿನ ವಸಾಹತು ಪೂರ್ವ ಮತ್ತು ವಸಾಹತೋತ್ತರ ಬದುಕು ದಾಖಲಾಗಿವೆ.

ಕಾದಂಬರಿ ದಲಿತ ಹೆಣ್ಣು ಮಗಳಾದ ಮಾಚುವನ್ನು ಕೇಂದ್ರವಾಗಿಟ್ಟುಕೊಂಡು ಅವಳ ಸಂಸಾರದ ನೋವುಗಳೊಂದಿಗೆ ಹಸಿವು ನೀಗಿಸಲು ದಲಿತ ಸಮುದಾಯ ನಡೆಸುತ್ತ ಬಂದ ಪಡಿಪಾಟಲುಗಳನ್ನು ವಿವರಿಸುತ್ತದೆ. “ಆ ಕಾಲೊಟು ತಿರ್ತ್ ಜಾತಿತಗ್ಳೆಗ್ ಆಣ್ಜೊಳೆಗಾವಡ್ ಪೊಣ್ಜೋಳೆಗಾವಡ್ ಮೈ ಮುಚ್ಚುನಾತ್ ಕುಂಟು ಇದ್ದಿ... ಕೋಡೆತ ಮುರಾಣಿತ ಬುರು ಬರುಂದು ನುರೆ ಬರ್ಪಿನ ಹಣಿನ, ಹಾಳಾಯಿನ, ಕಜ್ಜು, ಮಿಜಿ ಮಿಜಿಂದ್ ಪುರಿ ಆಯಿನ. ಉಪ್ಪಡ್ ಕೊರ್ಪೆ ತೇರ್, ಅಗ್ಳೆ ಲೆಕ್ಕೋಟು ಕರ್ವ ತಿಳ್ ನರಮಾನಿಳೇ ಅತ್ತ್ (ಜಯಮ್ಮ ಚೆಟ್ಟಿಮಾಡ ೨೦೧೩; ಪುಟ; ೭)(ಕೊನೆ ಟಿಪ್ಪಣಿ–೧) ಹಸಿವಿಗಾಗಿ ಹೆಣಗಾಡುತ್ತಿದ್ದವರು ಕಾಡಿನ ಬದಿಯಲ್ಲಿದ್ದರೆ ಕಾಡಿನ ಬೇಟೆ, ನೀರ ಬದಿಯಲ್ಲಿದ್ದರೆ ನೀರಿನ ಬೇಟೆಯಿಂದ ಹೊಟ್ಟೆ ಹೊರೆದುಕೊಳ್ಳುವ ವಿವರಣೆಗಳಿವೆ. ಮನೆ ತುಂಬಾ ಇದ್ದ ಮಕ್ಕಳಿಗಾಗಿ ಒಡೆಯರ ಮನೆಗಳಿಂದ ಉಳಿದ, ಹಳಸಿದ ಅನ್ನ ಸಾರು ತಿಂದು ಹೇಗೋ ಜೀವನ ಸಾಗಿಸುತ್ತಿದ್ದರು.“ನೆಟ್ಟ ಮದ್ಯಾನೋ ಆವೋಂದು ಬನ್ನಗ ಸೂರಪ್ಪೆ ಗೌಡ್ರೆ ಇಲ್ಲಡೆತ್ತ್ ಒಣಸ್ ಕೊಂಡ್ರುನ ಮಾಚುನ ಕಾಯಾಮು ಬೇಲೆ.... ಮಣ್ಣ್ತ ರಡ್ಡ್ ಮರಾಯಿಳೆನ್ ಎಳ್ಯ ಅರಿಯೆತ ಮಿತ್ತ್ ಒಂಜೆನ್ ಮಿತ್ತ್ ಒಂಜೆನ್ ದೀಡ್ತ್ ಒಂಜಿ ಕೀಜಿತ ತಟ್ಟೆನ್ ಮುಚ್ಚಿತ್ ಈತ್ ಅಟ್ಟಣೆಡ್ ಪಿದಾಡ್ಯಳ್ ಪಂಟ ಅವು ಗಂಜಿ ಕೊಂಡ್ರ್ಯರನೇ ಎಳ್ಯಗ್ಳೆ ಇಂಬಳ್ ಏಪೊ ಗಂಜಿ ದೆತ್ತೊಣು ಬರ್ಪಾಳ್‌ಂದ್ ಕಾತೋಣು ಇಪ್ಪುವೇರ್. (ಅದೇ, ಪು; ೧೩) (ಕೊನೆ ಟಿಪ್ಪಣಿ ೨) ಹಸಿವಿಗಾಗಿ ಪಡುವ ದೈನ್ಯ ಅನಿವಾರ್ಯತೆಗಳ ಮಧ್ಯೆಯೂ ಕಳ್ಳು ಕುಡಿದು ದುಡಿ ಬಾರಿಸುತ್ತ ಕುಣಿಯುವ ಪರಂಪರೆಗೆ ಸೇರಿ ಹೋಗಿ ಬದುಕಿನ ಬವಣೆಯನ್ನು ಮರೆಯುವ ಅಲ್ಪ ತೃಪ್ತರಿವರು.

“ಗಂಜಿ ದೆತ್ತೊಣ್ತು ಬನ್ನಗ ಚೇರ್ ಗಂಜಿಗ್ ಕಾದೊಣ್ತು ಸಾದಿ ತೂವೊಣ್ತು ಇಪ್ಪುವೆರ್. ಬಾಕಿಲ್‌ಟೇ ಉಂತಿ ಅಬ, ಅಳೆನ ಹೆರೆಡ್ಡೆ ಬಿಸಳ್ ದೆತ್ತ್‌ತ್ ಒನಸ್ ಮಳ್ಪುವಳ್. ದುಂಬೆ ದಿಡಿ ಕರಕ್ ರಡ್ಡ್ ಬಿಸಳೆ ಗಂಜಿನ್ ಹೊರಿಪ್ಪುವಾಳ್. ಬುಕ್ಕೊ ಆಯಿನ ಸುತ್ತ ಇಪ್ಪು ಏಳ್, ಏಳು ಪಲ್ಲೊಯ ಗದ್ದೊಗೂಗು ಹಿಪ್ಪಿತ ಕೈಲೆಟ್, ಬಳಸ್ವಾಲ್, ಕಳಲಗೆ ಮೂಜಿ ಕೈಲ್, ಮಾಯ್ಲುಗ್ ರಡ್ಡ್ ಬಾಕಿತಳೆಗ್ ಒಂಜೊಂಜೇ ಕೈಲ್, ಒರಿನ ಸೆಳಿಗೆ ಬೇತೆ ನೀರ್ ಮಯ್ತ್‌ದ್ ಬೋಡಾಯಿನಗ್ಳೆಗೆ ಮಯ್ಪುವಾಲ್. ಒಂಜೊಂಜೆ ಕೈಲ್ ಬಳಸ್‌ನ್ ಪಲ್ಲೊಯಿ ಗದ್ದೊಗೊಟುಲ ಒಂತೆ ಎಚ್ಚ ಇತ್ತೆನೆನ್ ನಾರು, ಕಡಮೆ ಇತ್ತ್‌ನೆನ್ ಆಬ ದೆತ್ತೊಣ್ಬೆರ್, ಕಳಲ್ ಆಯನ ಪಾಲೆಡ್ತ್ ಒಂಜಿ ಪುಂಡಿ ದಾಸು ನಾಯಿಗ್ ದೆತ್ತ್ ದೀಡುನ ಕೆರ್ಮೊ (ಅದೇ, ಪುಟ ೧೪)(ಕೊನೆ ಟಿಪ್ಪಣಿ ೩)

ತಮ್ಮ ಹಸಿವಿನ ಮೂಲಕ್ಕಾಗಿ ಉಳ್ಳವರ ಮನೆಯಂಗಳಕ್ಕೆ ಅವಲಂಬಿತರಾದವರ ದೈನ್ಯ ದಯನೀಯತೆ ಮರೆಯಲಾಗಿದ್ದು ಹಾಗಿದ್ದೂ ಹಸಿವಿನ ದರ್ದಿಗಾಗಿ ದಲಿತರು ಬರಿಯ ಕೈಯ್ಯೊಡ್ಡುವ ಪರಂಪರೆಯಾಗಿರದೆ ಹೊಸದರ ಅನ್ವೇಷಣೆಯಲ್ಲಿ ಹಸಿವಿನ ಪರಿಹಾರೋಪಾಯಗಳು ಇದ್ದವು. ಕೃಷಿ ಜಗತ್ತಿನ ಹುಡುಕಾಟವೇ ಇದಕ್ಕಿಂತ ಭಿನ್ನವಾಗಿ ಹೊಸ ಹಾದಿಗಳ ಶೋಧಗಳಿಗೆ ಕಾರಣವಾಯ್ತು. ಕಾಡು ಮತ್ತು ನಾಡಿನ ಮಧ್ಯದ ಹೋರಾಟದಲ್ಲಿ ಸಹಜ ಕೃಷಿಯಾಗಿ ಕುಮೆರಿ ಬೆಳೆಯನ್ನು ಬೆಳೆಯುತ್ತಿದ್ದರು. ಮಾಚುವಿನ ತಂದೆ ತಾಯಿಗಳಾದ ಕಳಲ ಮತ್ತು ಮಾಯ್ಲು ತಮ್ಮ ಮಕ್ಕಳ ಹೊಟ್ಟೆ ತುಂಬಿಸಲೆಂದೇ ಕುಮೆರಿ ಬೆಳೆಯನ್ನು ಬೆಳೆದರು. "ಬಂಜಿಗ್ ಗಂಜಿ ಇದ್ಯಾಂತಿ ಕತೆ. ಅಂಚಾತ್ ಬದ್ಕ್ಯೆರೆ ಬೇತೆ ಬೇತೆ ಸಾದಿ ನಾಡೊನ್ತು ಇತ್ತೆರ್, ಅಯಿಟ್ ಒಂಜಿ ಬುಳೆ ಕುಮೆರಿ ಬುಳೆಪ್ಪಾಪುನವು. ಸುಳ್ಯತಂಚಿ ಊರುಟು ಊರುಗು ತಾಗೋಣೇ ಪೂಮಲೆ, ಬಂಟಮಾಲೆ ಕೀಲಾರ್ ಮಲೆ, ನಿಡ್ಯೆ ಮಲೆ ನೀರ್ಮಲೆಂದ್ ಮಲ್ಲ ಮಲ್ಲ ಕಾಡಿಪ್ಪಿ ಮಲೆಕ್ಕ್ಳ್ ಪುದಾರ್ ಇದ್ಯಾಂದಿ ಎಳ್ಯ ಎಳ್ಯ ಕಾಡ್‌ಳೆಗ್ ಲೆಕ್ಕೊನೇ ಇದ್ದಿ. ಇಂಚಿನ ಕಾಡ್‌ಳೆ ನಡು ನಡುಟು ಒಂಜೊಂಜಿ ಕಡೆಟ್ಟ್ ಮಲ್ಲ ಮಲ್ಲ ಮರ ಇದ್ದಾತಿನ ಕಾಲಿ ಜಾಗೆಲ ಇಪ್ಪುಂಡು. ಅಳ್ವತ ಅಡಿಕಾಡ್ ಕಡ್ತ್ತ್ ಉಣ್ಣಾಗ್ತ್ ಸೂಕೊರ್ತ್, ತಟ್ಟೆ ಮಾಳ್ತ್ ಅಳ್ಳೆ ಕುಮೆರಿ ಬುಳೆ ಬುಳೆಪಾವೊಣ್ತು ಇತ್ತೆರ್. (ಅದೇ ಪು ೨೧)(ಕೊನೆ ಟಿಪ್ಪಣಿ ೪). ಕಾಡಿಂದ ನಾಡಿಗೆ ಬಂದು ಕೃಷಿ ಅನ್ವೇಷಣೆಗೊಳಿಸಿದ ಆರಂಭದ ಹಂತವಿದು. ಚಾರಿತ್ರಿಕವಾಗಿ ಉಲ್ಲೇಖಿಸಲ್ಪಡುವ ಕುಮೆರಿ ಕೃಷಿ ಇಂದಿಗೂ ಚಾಲ್ತಿಯಲ್ಲಿದೆ. ಮತ್ತು ಇದನ್ನು ನಡೆಸಿದವರು ದಲಿತ ಸಮುದಾಯಗಳೇ ಎಂಬ ಸತ್ಯವೂ ಅರಿಯುವುದು ಮುಖ್ಯ. ವಾರ್ಷಿಕವಾಗಿ ಸ್ಥಳಾಂತರಗೊಳ್ಳುವ ಮತ್ತು ಜೀವನಾವಶ್ಯಕವೆಲ್ಲವನ್ನು ಬೆಳೆಯುವ ಈ ವ್ಯವಸಾಯ ಕ್ರಮ ವ್ಯವಹಾರಿಕ ದೃಷ್ಟಿಯದಲ್ಲ.

"ಅಂಚ ಕಳಲೆಲ ಐನಾಜಿ ದಟಿಗೆತಗ್ಳೆಲಾ ಒಟ್ಟು ಸೇರೊಣ್ತು ವರ್ಸೊ ವರ್ಸೊಗು ಕುಮೆರಿ ಬುಳೆ ಮಾಳೆಗಾ ಇತ್ತೆರ್. ನಿರ್ಮಲೆತ ಒಂಜಿ ಪುಡೆಟ್ ಮುಗ್ಳ್ ಇತ್ತ್‌ಂಡ ನಾನೊಂಜಿ ಪುಡೆ ಜಾಗೆ. ಅಳ್ಳ್ ಮುಗ್‌ಳ್ ಅಗ್ಳಗ್ಳೆ ತಾಕತ್ತ್‌ಗ್ ಸರಿಯಾತ್ ಒಂಜಿ ಮುಡಿ, ರಡ್ಡ್ ಮುಡಿ, ಅರ್ದೊ ಮುಡೀದ್ ಏತ್ ಆಪುಂಡೋ ಆತ್ ಜಾಗೆತ ಕಾಡ್, ಕಡ್ತ್ತ್ ಉಣ್ಣ ಬುಕ್ಕೊ ಐಕೆ ಸೂ ಕೊರ್ತ್ತೆ ತಟ್ಟ್ ಮಾಳ್ತ್ತ್ ಹದೊ ಮಳೊಣ್ತು, ಬೇಸೊ ಪತ್ತ್, ಪದಿನೈನ್ ಉಳಯಿ ಬೀಜ ಬಿತ್ತೊಣ್ತಿ ಇತ್ತೆರ್. ಅತೊರ್ತುಗು ರಡಗಡಗ ಮೂಜಿ ಬರ್ಸಲಾ ಬರ್ಪೆತ್‌ಂಡಗ. ಬಿತ್ತುನ ಮಾಂತ ಸಮಾನೇ ಬಿತ್ತ್ ಓಲುಂಡು? ,ಮುಗಳೆನ ಬೇಲೆತ ಅಂದಾಜಿ ಮಳ್ತೊಣ್ತು ಇತ್ತಿ ಆ ಊರುತ ಸೌಕಾರೆ, ಅಂಗಡಿ ದೋಡೊಣ್ತಿನ ಬೇರತ ಬ್ಯಾರಿ ಮುಗ್ಳೆಗ್ ಸಂತೆ ಸಾಮಾನ್ ಕೊರ್ಪಿ ಅಂಗಡಿತಾಯೆ, ಬಾರಿ ಬೆರಿಸಾಯೊ ಮಾಳ್ಪಿಲೆಕೊ ಬೀಜನ್ ಬೋಡಾಂಟ ಯೇನೆ ಕೇರಳಡ್ತ್ ಕೊಂಡತ್ ಕೊರ್ಪೆ ಆಂಟ ಕುಮೇರಿ ಬಾರೆನ್ ಮಾತ್ರಾ ಪೂರಾ ಎಂಕೇ ಕೊರೊಡುಂದೇ ಪಣ್ಪೆತೆ. 'ಮುಗ್ಳೆಗ್ ಗೆತಿ ಇದ್ದಿ ಆಯಗ್ ಮತಿ' ಇದ್ದೀಂದೆ ಪಣ್ಪಿ ಗಾದೆತ ಲೆಕೊ ಅಗ್ಯೆ. ನಮೋ ದೈವೋ ದೇಬೆರೆಗ್‌ಂದ್ ಐನೆನ್ ಮುಡಿ ಬಾರ್ ಬುಡುತು ಬಾಕಿತೆನ್ ದೆತ್ತೊಣನನ್ತು ಪೋವೊಳೀಂದ್ ಒತ್ತೊಣ್ತು ಇತ್ತೆರ್" (ಅದೇ, ಪು ; ೨೧) (ಕೊನೆ ಟಿಪ್ಪಣಿ ೫) ಆಹಾರ ಮತ್ತು ವ್ಯವಹಾರದ ಜಾಣ್ಮೆಯಿಂದ ಜೀವನ ನಿರ್ವಹಿಸುತ್ತಿದ್ದ ಅವರಿಗೆ ಭತ್ತವನ್ನಷ್ಟೇ ಬೆಳೆದರೆ ಅದರಿಂದ ಪೂರ್ಣವಾಗಿ ನಿಶ್ಚಿಂತರಾಗಿರಲು ಸಾಧ್ಯವಿರಲಿಲ್ಲ. ಹಸಿವನ್ನು ತಣಿಸುವುದಕ್ಕೆ

ದುಡಿದು ದಣಿಯುವುದಕ್ಕೆ ಜತೆಯಾಗಿ ಪರ್ಯಾಯ ಬೆಳೆ, ಉಪ ಬೆಳೆಗಳನ್ನು ಬೆಳೆಸುತ್ತಿದ್ದರು. ತಮ್ಮ ಜೀವನ ಕ್ರಮದ ಧರ್ಮವನ್ನು ಉಳಿಸಿಕೊಳ್ಳುತ್ತಿದ್ದರು." ಕುಮೇರಿ ಮಾಳ್ಪುನಾಗ್ಳ್ ಬಜಿ ಬಾರೇ ಬಿತ್ತ್‌ಂಟ ಅವು ಬ್ಯಾರಿಗೇ ಸಮೋ, ಐಕಾತ್ ಅಯಿನ ಒಟ್ಟುಗು ರಾಗಿ, ಸಾಮೆ, ಜೋಳೊನ್, ಬುಕ್ಕೊ ಸುತ್ತೊ ಇತ್ತಿ ಮರಕ್ಕ್‌ಳೆಗ್ ಬಳ್ಳ್ ಆಪುನ ಮಾಂತ  ಬಗೆತ ಬಿತ್ತ್ ಬಿತ್ಯೆರೆ ಉಂಡು. ತಟ್ಪ್ ಮಾಳ್ಪುನಾಗನೇ ಕಾಡ್ ಕಡ್ತ್‌ತ್, ಬಜಾವು ಪೊತ್ತಾತ್ ಮಳ್ತ್‌ನ ಸೂಟ್ ಮಣ್ಣ್ ಎಂಚಾಟಲ ಅಳ್ಳೇ ಉಂಡೆ. ಪಾಡಿ ಬಿತ್ತ್ ಕೊಡಿತ್ತ್‌ತ್ ಮಿತ್ತ್ ಮರ ಏರ್ತ್ ಬಂಬಲ್ ಬಂಬಲಾತ್ ಮರನೇ ಬಳ್ಳೆಳೆಗ್ ಪುದೆವೊಣ್ತುಂಡೋ ಪಣ್ಪಿ ಲಕೊ ಲಕ ಲಕ ಓಜುನ ಬಳ್ಳೆಳ್ ಪೊರ್ಲು ಊವೋಡು! ಇರೆ ಇರೆಗ್‌ಲಾ ಪೂ, ಮುಡಿ, ಕಾಯಿಂದ್, ಬುಳೆಯಿನಗ್ಗೆ ಬಂಜಿ ದಿಂಜಿಲೆಕೊ ನೇಲೋಣ್ತು, ಗಾಳಿಗ್ ಒಚ್ಚೋಣ್ತು ಇಪ್ಪುನೆನ್ ಉಪ್ಪುನೆನ್ ಕಣ್ಣ್‌ಗ್ ದಿಂಜಿತಿ ಪೊರ್ಲುತ ನೋಟೋ! ಏರಾಂಟಲ ಕಣ್ಣ್ ಮುಟ್ಪಾವೆರ್‌ಂದ್ ಮಣ್ಣ್‌ತ ಕರಕ್ಕ್ ಚುಣ್ಣೊತ ಬೊಟ್ಟು ಪಾಡ್ತ್ ಮರೊಕ್ಕು ತೂಕ್‌ವೆರ್.

ಕುಮೆರಿ ಬಿತ್ತುನೆಗ್‌ಲಾ ಒಂಜಿ ಕೆರ್ಮೊ ಉಂಡು. ಬಾರ್‌ತೊಟ್ಟುಗು ರಾಗಿ, ಜೋಳ, ಸಾಮೆನ್ ಬಾರ್‌ತ ಅರ್ದದಾತ್ ಸೇರ್ಸಾವೊಣೊಡು. ಪಂಟ ಬಾರ್ ಒಂಜಿ ಸೇರಾಂಟ ಅವು ಮೂಜಿ ಸೇರ್ತ್ ಅರ್ದೊಸೇರ್ . ಈ ಲೆಕ್ಕೊಟು ಬೋಡಾಯಿನ ಬಿತ್ತ್‌ಳೆನ್ ದುಂಬೇ ಕಲತ್ತ್‌ತ್ ದೀಡೊಣೊಡು. ಬಿತ್ತುನಾಯೆ ಆಯನ ಬಂಜಿಗ್ ಸುತ್ತೋಣ್ಣ ಮುಟ್ಟೆಟ್, ಕಲತ್ತ್‌ತ್ ದಂಜಾದೀಡಿ ಬಿತ್ತ್‌ಳೆನ್ ದಿಂಜಾವೊಣು ಕುಮೆರಿ ಕಂಡೊಡು ಕೈ ಬೀಜ್‌ತ್ ಬಿರ್ಯೊಡು. ಬಿತ್ತುನಾಯಗ್ ಕೈ ಚಳಕೊ ಇತ್ತ್‌ಂಡ ಅವು ಒಂಜಿ ಹದೊಟ್ಟು ಪದೆರ್ತ್ತೆ ಬೂರುಂಡು. ಆಯನ ಪಿರವುಟೇ ಮೂಜಿ ನಾಲ್ ಜನ ಬೇಲೆತಗಳ್ ಪರ್ಮಾವು ಕತ್ತಿಟ್ ಮಣ್ಣ್‌ನ್ ಪದರೋಣ್ತು ಪೋಪೋ. ಬೀಜೋ ಕೊಡಿತ್ತ್‌ತ್ ಆನಗ ಮಂದ ಮಂದ ದೈ ಇತ್ತಿನಾಳ್ತೆಡ್ತ್ ದೆತ್ತ್‌ತ್ ತೆಳ್ಪು ಇತ್ತಿನಾರೆಗ್ ನಡ್ವೆ (ಅದೇ, ಪುಟ; ೨೧--೨೨) (ಕೊನೆ ಟಿಪ್ಪಣಿ ೬ )

ಕೃಷಿಯ ಆರಂಭದ ಹಂತದಲ್ಲಿ ಸಹಜ ಸಾವಯವ ಎಂದು ಉರು ಹೊಡೆಯುವ ಈ ಸಂದರ್ಭದಲ್ಲಿ ಕೃಷಿ ಸಂಪತ್ತನ್ನು  ಬೆಳೆಸಿದ  ಕ್ರಮ ವಿಶಿಷ್ಟವಾದುದು. ಬೀಜ ಬಿತ್ತನೆಯಿಂದ ಕಟಾವಿನವರೆಗೆ ಬೆಳೆ ಬೆಳೆದು ಫಸಲು ಪಡೆಯುವುದು ಸುಲಭವಲ್ಲ. ಕಾಡಿನ ಪ್ರಾಣಿಗಳ ನಡುವೆ ಅವುಗಳೊಂದಿಗೆ ಸೆಣಸುತ್ತಾ ಫಸಲು ಪಡೆಯುತ್ತಾರೆ. ಅಟ್ಟಣಿಗೆಗಳಲ್ಲಿ ಕುಳಿತು ಬೆಳೆಯನ್ನು ಕಾಯುವ ಕಾಯಕವೂ ಸುಲಭವಾದುದು ಅಲ್ಲ. ಬೆಳೆಯನ್ನು ರಕ್ಷಿಸಲು 'ಮಾಟ ಮೂಲಿಗೆ ಮಾಡುವ ಕ್ರಮವೂ ಇತ್ತು.

"ಬೀಜ ಕೊಡಿಪ್ಯೆರ ಪುರ್ಸೊತು ಇದ್ದಿ. ಕಾಡ್ ಪಂಜಿಳ್, ಮಂಗೆರ್ ಕಾಡ್ ಎಲಕ್ಕೆ ಕಾಡ್ ಪೆರ್ಗುಡೆಳ್ –ಕಾಡ್ ಪೂರಾ ನಮೊನೇ. ನಿಗ್ಗೆ ದಾಯೆ ಬತ್ತಾರ್‌ಂದ್ ಕೇಣ್ಪಿಲೆಕೊ ಸಾಲ್‌ಸಾಲ್ ಗಟ್ಪೊಣ್ತು ಇರ್ಲ್ ಪಗೆಲ್‌ಂದ್ ಇದ್ಯಾಂತೆ ಬರ್ಯೆರೆ ಸುರು ಮಾಳ್ಪೊ. ಬುಲೆಯಿನಾವು ಒರಿಯೊಡಾಂಟ ನಮೊ ಮೂಳೆ ಇಪ್ಪೊಡುಂದು ಮಾಡಂಗೋಲು  ಮಳ್ತೊಣ್ತು ಕುಮೇರಿ ಮಾಳ್ತ್‌ನಗ್ಳ್ ಅಳ್ಳೇ ಇಪ್ಯೆರ ಸುರು ಮಳ್ಪುವೆರ ಇರ್ಲ್ ಪಗೆಲ್‌ಂದ್ ಇದ್ದಿ, ಪಾರ ಉಂತ್ವೆರ್. (ಅದೇ ಪು ೨೨)(ಕೊನೆ ಟಿಪ್ಪಣಿ ೭)ಕಾಡು ಪ್ರಾಣಿಗಳಿಂದ ಬೆಳೆಯನ್ನು ರಕ್ಷಿಸಲು ಬೆಂಕಿ ಹಾಕುತ್ತಾ, ದುಡಿ ಬಡಿಯುತ್ತ ಶಬ್ದ ಮಾಡುತ್ತ  ಇಲ್ಲಿ ನಾವು ಮನುಷ್ಯರು ಇದ್ದೇವೆ ಎಂಬ

ಸಂದೇಶ ರವಾನೆಯಾಗುತ್ತದೆ. ಕುಮೆರಿಯಲ್ಲಿ ಫಸಲು ಬಂದಾಗ ಬೆಳೆದ ಬೆಳೆಯನ್ನು ಅಲ್ಲಿಯೇ ಒಕ್ಕಣೆ ಮಾಡುತ್ತಾರೆ.

"ಕುಮೆರಿಟ್ ದುಂಬು ಬಾಕಿತ್ ಕೆಯಿ ಕೊಯ್ಪುನ, ಬಾಕಿತೆನ್ ಬುಕ್ಕೊ ಬಾರೆತ ಕೆಯಿ ಬುಳೆಪುನನೆ ಅಡ್ಡ ಬುರುಂಡು. ರಾಗಿ ಜೋಳ ಸಾಮೆತ ದಂಟ್ ಗಟ್ಟಿ ಅವು ಅಡ್ಡ ಬೂರುನ ಕಡಮೆ. ಅಂಚಾತ್ ಬಾರ್‍ತ ಬೇಲೆ ಒತ್ತರೆ ಆಯಿ ಬುಕ್ಕೊ ಬಾಕಿತೆನ್ ಕೊಯ್ಯರ ಸುರು ಮಾಲ್ಪುವೆರ್. ಅಯಿನ್ ಕೊಯಿತ್ ಅಂಚಂಚನೇ ಗೋಣಿಟ್ ದಿಂಜಾತ್ ದಟಿಗೆಗ್ ದೆತ್ತೊಣ್ತು ಪೋತು ಅಲ್ಲೆ ದಂಟ್‍ಡ್ ಬುಡ್ಪಾತ್ ಉಣ್ಣಾಗ್ಗ ಸರಿ ಮಾಲ್ತೊಣ್ಬೆರ್. ಮರಕ್ಕೆ ಬರ್ತಾಯಿನ ಕುಂಬುಡೋ, ಕೆಂಬುಡೆ, ಸುರೆ, ಒಡ್ಡು ಸ್ವತೆ, ಗರ್ಬಿಜೋ ಪೂರಾ ಬುಲೆಯಿ ಲೆಕೊನೆ ದೆತ್ತೊಣ್ತು ಪೋತು ದೀಡಿದ್ತೇರ್. ಒಡೂಕೆಗ್ ಕುಮೆರಿ ಬುಡುತು ಪೋನಾಗ ಬಳ್ಳೊಲೆಟ್ಟ್ ಇತ್ತಿ ಲತ್ತ್ ಚೋರೊದುಟ್ಟುಗು ಬಳೆಯಿನೆನ್‍ಲಾ ದೆತ್ತೊಣ್ತು ಪೋಪೆತೆರ್ (ಅದೇ, ಪುಟ; ೨೩)(ಕೊನೆ ಟಿಪ್ಪಣಿ ೮) ಮುಂದಿನ ವರ್ಷಕ್ಕೆ ಸಾಗುವಳಿಗೆ ಬೇರೆ ಸ್ಥಳದ ಹುಡುಕಾಟವಿರುತ್ತದೆ. ಸುಸ್ಥಿರವಲ್ಲದ ಕೃಷಿಯಲ್ಲಿ ಬಂದ ಉತ್ಪಾದನೆಯಲ್ಲಿ ದಿನನಿತ್ಯದ ಅವಶ್ಯಕತೆಗೆ ಬಳಸಿಕೊಳ್ಳುವ ಜಾಣ್ಮೆ ಅವರಿಗೆ ತಿಳಿದಿತ್ತು. ಕೃಷಿ ಅನ್ವೇಷಣೆಯ ಹಂತದಲ್ಲಿ ತಮ್ಮ ಅವಶ್ಯಕತೆಗಳಿಗೆ ಅನುಗುಣವಾಗಿ ಬೇರೆ ಬೇರೆ ಧಾನ್ಯಗಳನ್ನು ಬೆಳೆಯುತ್ತ ಒಕ್ಕಣೆ ಮಾಡುತ್ತ ಸಂಗ್ರಹಿಸಿ ಬಳಸುತ್ತಿದ್ದರು. ಒಂದು ಪ್ರದೇಶದಿಂದ ಇನ್ನೊಂದು ಪ್ರದೇಶಕ್ಕೆ ಒಂದೇ ಸಮುದಾಯದ ಒಳಗೂ ಕೃಷಿಯ ನಿರ್ವಹಣೆಯ ಸ್ವರೂಪಗಳಲ್ಲಿ ಭಿನ್ನತೆಗಳಿವೆ.

"ಮಾಚುನ ಅಮ್ಮನಗ್ಳಳ್ಳ್ ಮಾಳ್ತುಣ್ತಿ ಲೆಕೊ ಮೂಳುಲಾ ಕುಮೇರಿ ಮಾಳ್ಪೆತೆರ್. ಮೂಳು ರಾಗಿ, ಸಾಮೆ, ಜೋಳ ತೊಟ್ಟುಗು ಮೂಜಿ ನಮೂನೆತ ಬಾರ್ ಬುಳೆಪಾವೊನ್ತು ಇತ್ತೆರ್. ಒಣಸ್‍ಗ್ ಬಜಿಲ್‍ಗ್ ಬುಕ್ಕೊ ಪೊರಿಕ್ಕೆಂದ್ ಬೇತೆ ಬೇತೆನೇ ಬಿತ್ತ್ ಪಾಡ್ಪೆತೆರ್. ಬಜಿಲ್ ಬುಕ್ಕೊ ಪೊರಿಗ್ ಒಂತೆ ಒಂತೆ ಬಿತ್ತುನ ಎಲುಂಬನಗಳಳ್ಳು ಬೂತೊತ ಚಾಕಿರಿಗ್ ಇಲ್ಲಡೆತ್ ಬಾರ್‍ತ ಬಜಿಲೇ ಆವೊಡು. ಬೂತೊಳೆಗ್ ಬಳಸುನ ದುಂಬತ ದಿನೊತಾನಿ ರಡ್ಡ್ ಸೇರ್ ಎಣಿಲ್ತ ಬಾರೆನ್ ದಿಕ್ಕೆಲ್‍ಟ್ ದೀಡಿ ಬೆಚ್ಚ ನೀರ್‍ಗ್ ಪಾಡ್ತ್ ಆಯಿನ ಜೋತ ಬಣ್ಣೊ ಬೇತೆ ಆಪುನೇಟ ಪಂಟ ಪದ್ರಾಡ್ ಗಂಟೆ ಬೊದಲ್ಯರ ಬುಡ್ಪೆರ್. ಬುಕ್ಕೊ ಅಯಿಕ್ ಚೌಳಿನೀರ್ ಮಯ್ಪುವೆರ್. ಮನತ್ತಾನಿ ಬೊಳ್ಪುಗು ಆಯಿನ್ ನೀರ್‍ಡ್ತ್ ದೆತ್ತ್‍ತ್ ಮಣ್ಣ್‍ತ ಓಡುಟು ಪೊರ್ಲು ಪೊತ್ತುವೆರ್. ಅಪಗ ಬಾರ್ ಕೆಂಪಾತ್ ಉರುಂಟು ಆಪುಂಡು. ಆಯಿನ್ ಬೆಚ್ಚ ಬೆಚ್ಚ ಇಪ್ಪುನಾಗನೇ ಮರತ್ತ ನರಕ್ಕುಳಿಡ್ ಪಾಡ್ತ್ ರಡ್ಡ್ ಜನೊ ಎಡಿಪ್ಪೊಡು ಒರೊತ ಉಮಿ ಪೋಯಿ ಬುಕ್ಕೊ ನಾಣೊಂಜಿ ಗುರಿಟ್ಟ್ ಬೂತೊಗು ಬಳಸುನ ಬಾರೆನ್ ಸೂತಿಕೊತ ಪೊಣ್ ಜೋಳು ಎಡಿಪ್ಪುನ ಬುಡಿ, ಮುಟ್ಯಾರಲಾ ಬಲ್ಲಿ. (ಅದೇ ಪುಟ ೭) (ಕೊನೆ ಟಿಪ್ಪಣಿ ೯)ಮಾಡುವ ಬೇಸಾಯ ಮತ್ತು ಆರಾಧನಾ ಕ್ರಮದೊಳಗೆ ಬಳಸಿಕೊಳ್ಳುವ ರೀತಿಯಿಂದ ಬೆಳೆಯ ವೈಶಿಷ್ಟ್ಯಪೂರ್ಣವಾಗಿ ಬಳಸುವುದರಿಂದ ಬಳಕೆಯ ವೈವಿಧ್ಯವೂ ಹೆಚ್ಚುತ್ತ ಹೋಗುತ್ತದೆ.

ಬದುಕಿನ ಭಾಗವಾಗಿಯೂ ಇದ್ದ ಕೃಷಿಯಲ್ಲಿ ವಿವಾಹದ ಸಂದರ್ಭದ ರೀತಿ ರಿವಾಜುಗಳು ಭತ್ತದ ಬೆಳೆಯೊಂದಿಗೆ ಬೆಸೆದಿತ್ತು. ಗಂಡು ಹೆಣ್ಣು ಕೂಡಿ ಕಟ್ಟಿದ ಸಂಸಾರದಲ್ಲಿ ಸಂಬಂಧಗಳನ್ನು ಬೆಸೆಯಲು ಸಾಂಕೇತಿಕವಾಗಿ ಭತ್ತ ಅಳೆಯುವ ಪದ್ಧತಿ ಚಾಲ್ತಿಯಲ್ಲಿದೆ.

"ಅಂಚಾಟ ನಮೊ ಜಾತಿ ಕಟ್ಟ್‌ಟ್ ಲೆಕ್ಕೊತ ಬಾರ್ ಕೊಂಡ್ರುನಾಂದ್ ಉಂಡೆ ಏಪೊಗು ಲೆಕ್ಕೊತ ಬಾರ್ ಕೊಂಡ್ರೊಳಿ" (ಅದೇ, ಪುಟ; ೫೬)(ಕೊನೆ ಟಿಪ್ಪಣಿ) ೧೦ ಭತ್ತ ತರುವುದು ಮದುವೆ ನಿಶ್ಚಿತಾರ್ಥ ಮಾಡುವುದು ಎಂಬ ರೂಢಿಯ ಮಾತಿದೆ. ಆಹಾರದ ಮೂಲವಾದ ಭತ್ತವನ್ನು ತರುವ ಮೂಲಕ ಜೀವ ಧಾತುವಾದ ಧಾನ್ಯದ ವಿನಿಮಯವಾಗುತ್ತದೆ. ಗಂಡು ಹೆಣ್ಣಿನ ಸಂಬಂಧಗಳನ್ನು ನಿರ್ಧರಿಸುವುದು ಮತ್ತು ಅದಕ್ಕೆ ಸಾಕ್ಷಿಯಾಗಿ ಭತ್ತವನ್ನೇ ಇರಿಸಲಾಗಿದೆ. "ಕುಳ್ಳುತು ಪಾತೆರ್ತ್, ಆಣ್ಣ್‌ಗ್ಗೆಗ್ ಪೊಣ್ಣು, ಆಣ್ ಪೊದು ಆವುದಾಂಟ ಆಣ ಕೊಡೊತಗ್ಗೆ ಬಾರ್ ಅಳಪ್ಪಿಯರ ಪಂಟ ನಿಚ್ಚಯೊಗು ಬರ್ಪುನ ಕೇರ್ಮೊ ಅಂಚ ಬನ್ನಾಗ ಬಾರ್ ಆಂಟ ಐನ್ ಮುಡಿ, ಅರಿ ಆಂಟ ರಡ್ಡರೆ ಮುಡಿ ಕೊಂಡ್ರೊಡು. ಒಂಜಿ ಮುಡಿ ಆಂಟಲಾ, ಮದಿಮಾಯೆ ಅಣೇ ಉಂಬೋಣ್ತು ಬರೋಡು. ಪೊಣ್ಣ ಇಲ್ಲಡೆಟ್ ಮೂಜಿ ಸೇರಾಂಡಲಾ ಅಳಪ್ಪೋಡು" (ಅದೇ, ಪು.೫೭) (ಕೊನೆ ಟಿಪ್ಪಣಿ ೧೧.) ಧಾನ್ಯ ಒಂದು ಹತ್ತಾಗಿ ಹಲವು ತೆನೆಗಳಾಗಿ ನೂರಾರು ಸಾವಿರಾರು ಧಾನ್ಯಗಳಾಗಿ ವೃದ್ಧಿಯಾದಂತೆ ಮನುಷ್ಯನಿಗೆ ತನ್ನ ಸಂತತಿಯೂ ವೃದ್ಧಿಯಾಗಬೇಕೆಂಬ ಆಶಯ ಇಲ್ಲಿದೆ. ನೆಲದ ಪಿಸುಮಾತುಗಳನ್ನು ತಮ್ಮ ಆಚರಣೆಗಳಲ್ಲಿ ಅಳವಡಿಸಿಕೊಳ್ಳುವ ಮೂಲಕ ಸಂತತಿ ಮತ್ತು ಸಂಪತ್ತಿನ ಆಶಯಗಳನ್ನು ಪ್ರಕಟಪಡಿಸುತ್ತಾರೆ. ಆಹಾರದ ಚರಿತ್ರೆಯಲ್ಲಿ ಮನುಷ್ಯನ ಇತಿಹಾಸ ಇರುವಂತೆ ಕೃಷಿ ಚಟುವಟಿಕೆಯ ಸ್ಥಿತ್ಯಂತರಗಳಿಲ್ಲಿ ಕೃಷಿಯ ಚರಿತ್ರೆಯೂ ಇದೆ. ಇವೆಲ್ಲವೂ ಸಂಕೀರ್ಣಗೊಂಡು ವಿಶಿಷ್ಟವಾಗಿ ಆಚರಣೆ ಆರಾಧನೆಗಳಾಗಿ ಪಾಲು ಪಡೆದಿದೆ. ಅಲ್ಲಿ ಬರುವ ಪಾರಿಭಾಷಿಕ ಪದಗಳು, ಆಚರಣೆ ಆರಾಧನೆಯ ವಿಧಿಗಳು ಸಾಂಕೇತಿಕವಾಗಿ ಕೃಷಿ ಜಗತ್ತಿನ ಕತೆಯನ್ನೇ ಹೇಳುತ್ತದೆ.

ಕೃಷಿ ಕೂಲಿ ಕಾರ್ಮಿಕರಾಗಿ ದುಡಿಯುವ ಮಂದಿಯ ಇತಿಹಾಸದ ನೋವು ಪ್ರಮುಖವಾದುದು. ಅವರಿಗೆ ಸಿಗುವ ಕೂಲಿ ಹಾಗೂ ಅವರು ದುಡಿಯುವ ದುಡಿಮೆ ಪ್ರಾದೇಶಿಕವಾಗಿ ವಿಭಿನ್ನವಾಗಿ ಆಚರಣೆಯಲ್ಲಿರುವ ಸಂಪ್ರದಾಯಗಳು ಕೃಷಿ ಪರಂಪರೆಯ ವಿಭಿನ್ನ ಮುಖಗಳನ್ನು ಪರಿಚಯಿಸುತ್ತದೆ.

"ದಿಂಜೋ ಕಂಡೊ ಇತ್ತನಗಳಳ್ಳೆ ಕೊಯ್ಪುನ ಪಂಟ ಕೊಯ್ಪುನಗ್‌ಳೆಗ್ ಒಂಜಿ ಪರ್ಬೊನೇ. ಪಾತೆರೊಣ್ತು, ಸೆಳೆತೊನ್ತು, ಪಾಡ್ದನ ಪಂಡೊಣ್ತು ಕೊಯ್ಪುನ ಒಂಜಿ ರಡ್ಡ್‌ಂದ್ ಪೊಲಿ ಲೆಪ್ಪುನಗ ಅವು ಒಂಜಿ ದೇಬೆರೆನ ಪೂಜೆನೇ. ಬೇಲೆನೇ ಆತ್ತ್‌ಂಟಲಾ ಅಯಿಟೊಂಜಿ ಗಮ್ಮತ್ ಇತ್ತ್‌ಂಡ್. ಪಡಿಮಣೆಗ್ಡ್ (ಆನೆ) ಗ್ ಹಾಕ್‌ತ್ ಪಡಿಮಣೆಗ್ ಮುಟ್ಟುನಾತ್ ಬಾರ್ ಆನಾಗ, ಪಡಿಮಣೆತ ಜಾಗೆ ಪಗರಿಯರ ಉಂಡು. ಏತ್ ಪಗರೇರೊ ಕೊಯ್ಪುನಗ್‌ಳೆಗ್ ಆತ್ ಕುಸಿ ಅಗ್ಗೆಗ್‌ಲಾ ಕೂಲಿತ ಪಾಲ್ ಜಾಸ್ತಿ ಆಪುಂಡುಂದ್ ಪಡಿಮಣೆಟ್ ಹಾಕ್‌ತ್ ಎಡ್ಡೆ ಬಾರ್‌ನೇ ಪೊಟ್ಟುನು ಬೇತೆ ಮಾಲ್ತ್‌ತ್. ರಾಸಿ ಮಾಲ್ತ್ ಬುಕ್ಕೊ ಅಳಪ್ಪುನ ಪತ್ತ್ ಕಳಸೆ ಅಳತ್‌ತ್ ಆಯಿ ಬುಕ್ಕೊ ಒಂಜಿ ಕಳಸೆ ಬೇತೆ ಪಾಡ್ಪೆರ್. ಅವು ಕೆಲಸ ತಗ್ಲೆ ಪಾಲ್ ಕೊಯ್ಲುಗು ಹಿಕ್ಕುನ ಈ ಬಾರ್‌ನೇ ಕೊಯ್ಲು ಬಾರ್‌ಂದ್ ಪಣ್ಪೇರ್. ಪತ್ತ್ ಪತ್ತಾತ್ ಅಳತೆ ಮಾಳ್ತ್‌ತ್, ಒರಿನ ಬಾರ್‌ನ್ ಅಳಪುನಾಯೆ ರಾಸಿ ಮಾಳ್ತ್‌ತ್ ತನ್ನ ರಡ್ಡ್ ಮೊರಂಪುಡ್ತ್ ಪತ್ತ್‌ತ್ ಬಿರೆಳ್ ಮುಟ್ಟ ಕೈಳೆನ್ ರಾಸಿತ ಉಳಾಯಿ ಪಾಡ್ದ್, ಆಯಿಟ್ ಏತೆ ದೆಪ್ಪಿಯರ ಆಪುಂಡೋ ಆತೆನ್ ಅಳ್ತ್‌ಡ್ತ್ ಒರೊಕ್ಕೆ ರಟ್ಟಾಪೆ. ಅವು ಒಂಜಿ ತಡ್ಪೆಗ್ ಬೂರುಂಡು. ಅಂಚೆನೆ ರಡ್ಡ್ ಸರ್ತಿ ಮಾಳ್ಪುವೆ. ಆಯನ ಮಲ್ಲ ಕೈಡ್ತ್ ಏತೋ ಬಾರ್ ತಡ್ಪೆಗ್ ಬೂರುಂಡು.

ಬುಕ್ಕೊ ಅಯಿನ್ ಬೇಲೆತಗಳೆಗ್ ಪಟ್ಟುವೆರ್. ಇಂದೆಕ್ಕೆ ಅಡಿಮಣೆ ಪೊಲಿ ಅತ್ತ್ಂಟ ನೆತ್ತೆರ್ದ ಕೂಲಿಂದ್ ಪಣ್ಪೇರ್ (ಅದೇ, ಪುಟ. ೮೪-೮೫) (ಕೊನೆ ಟಿಪ್ಪಣಿ ೧೨)

ದುಡಿಮೆಯನ್ನು ಮಾಡುವ ಕೃಷಿಕನಿಗೂ ಇರುವ ಮಹತ್ವವನ್ನು ವಿವರಿಸುವದರೊಂದಿಗೆ ಶ್ರಮದ ಮಹತ್ವವನ್ನು ತಿಳಿಸುತ್ತದೆ. ಪ್ರತಿಯಾಗಿ ಪಡೆಯುವ ಫಸಲು ಮತ್ತು ನಡೆಸುವ ಆಚರಣೆಯಿಂದ ಬೆಳೆಯ ಧಾನ್ಯದ ಪ್ರಾಮುಖ್ಯವನ್ನು ಪಡೆಯುತ್ತದೆ. ಬೆಳೆ ಬೆಳೆದವನಿಗೂ ಅದು ಲಭಿಸಬೇಕು ಎಂಬ ಆಶಯ ಇಲ್ಲಿಯದು. ದುಡಿಯುವವರು ಮತ್ತು ದುಡಿಸಿಕೊಳ್ಳುವವರ ನಡುವೆ ಎಲ್ಲವೂ ಉಳ್ಳವರ ಪಾಲಾಗದೆ ಬೆವರ ಹನಿಗೂ ಮಹತ್ವವಿದೆ ಎನ್ನುವುದನ್ನು ಸಾರಿ ಹೇಳಲು ಸಾಧ್ಯವಾಗಿದೆ. ದುಡಿಯುವವರು ದುಡಿಯದೆ ಇದ್ದರೆ ಬೆಳೆಯ ಫಸಲನ್ನು ಪಡೆಯಲು ಸಾಧ್ಯವಿಲ್ಲ. ದುಡಿಮೆಯ ಗೌರವವನ್ನು ಹೆಚ್ಚಿಸದೆ ಇದ್ದರೆ ಬಂದ ಇಳುವರಿಗೆ ನ್ಯಾಯ ಒದಗಿಸಿದಂತೆ ಆಗುವುದಿಲ್ಲ. ಒಂದು ಕಾಲದ ಮೌಲ್ಯವಾಗಿ ಕೃಷಿ ಸಂಸ್ಕೃತಿಯಲ್ಲಿ ದಾಖಲಾಗಿದೆ. ವಿಸ್ತಾರವಾದ ಭೂಮಿಯ ಒಡೆತನವನ್ನು ಹೊಂದಿದ ಪಾಳೇಗಾರಿಕೆ ದುಡಿವವನಿಗೆ ಶೋಷಣೆಯ ಪ್ರತಿರೂಪವಾಗಿ ಕಾಣದೆ ಇರುವಂತಹ ಆಚರಣೆ ಮತ್ತು ಆರಾಧನಾ ಪರಂಪರೆಗಳಿವೆ. ಕೃಷಿ ಜಗತ್ತಿನ ಹಿರಿಮೆಯನ್ನು ಹೇಳುವಾಗ ಅದರ ಜತೆಗೇ ಇರುವ ಪಾಳೇಗಾರಿಕೆ ಮತ್ತು ದುಡಿಯುವವರ ಮತ್ತು ದುಡಿಸುವವರ ಮಧ್ಯದ ಅಂತರವನ್ನು ಮರೆಯದೆ ಇರಲಾಗದು.

ತುಳುವರು ಬುಡಕಟ್ಟಿನ ಬೇರುಗಳನ್ನು ಇಂದಿಗೂ ಅಳವಡಿಸಿಕೊಂಡವರು. ಬಹುತ್ವಗಳ ಲಕ್ಷಣಗಳು ಕಣ್ಣಿಗೆ ರಾಚುವಂತಿದ್ದರೂ ಭೂ ಒಡೆತನವನ್ನು ಹೊಂದಿದ ಮನೆಗಳು ಗುತ್ತು, ಬಾವ, ಬೂಡು , ಚಾವಡಿಗಳಾದರೆ ಆ ಎಲ್ಲ ಕುಟುಂಬಗಳಲ್ಲೂ ನಿಷ್ಠೆಯ ಕಾಲಾಳುಗಳಾಗಿ ದುಡಿಯುತ್ತಿದ್ದವರು ದಲಿತರು. ಇಂತಹ ದುಡಿಮೆಯ ವಿವರಗಳು ಮಿತ್ತ ಬೈಲ್ ಯಮುನಕ್ಕೆ "ಕಾದಂಬರಿಯಲ್ಲಿ ಡಿ.ಕೆ ಚೌಟರೂ ನಿರೂಪಿಸಿದ್ದಾರೆ. ಎರಡನೆಯ ಅಧ್ಯಾಯವೇ "ಕಾಡ್ ಕಡ್ತೆರ್ ಗುಡ್ಡೆ ಗರ್ತೆರ್ ಬೆನ್ನಿ ಬೆಂದೆರ್" (ಕಾಡು ಕಡಿದು ಗುಡ್ಡ ಅಗೆದರು ಸಾಗುಳಿ ಮಾಡಿದರು)ಎಂದಾಗಿದೆ. (ಆನಂದ ಕೃಷ್ಣ ,೨೦೦೫ ಪು ;೪೨) " ಈ ದೆಯ್ಯು ಮಿತ್ತ ಬೈಲ್‌ದ ಮೂಲದಕ್ಲೆನೆಟ್ ಬದ್‌ಕ್‌ದ್ ಒರಿನ ಪರ ತರೆಕುಲೆಡ್ ಒರಿ...... ಬೆನ್ನಿದ ಕೆಲಸದ ಜವಾಬ್ದಾರಿ ದೆಯ್ಯುನ ಆಯಡ ಕೇಣಂದೆ ಪಣಂದೆ ಬೆನ್ನಿದ ವಾ ಕೆಲಸಲಾ ನಡಪಂದ್. ಮಿತ್ತಬೈಲ್‌ಗ್ ರಡ್ಡನೇ ಗುರಿಕಾರೆ ಪಂದ್ ಏರಾಂಡ್ಲ ಇತ್ತ್ಂಡ ಅವು ದೆಯ್ಯಂದೇ ಪನೊಲಿ. ಕುದ್ಯ ಆದ್ ಬೆಂದ್‌ದ್ ಕಲ್ಲಾಯಿನ ಜೂವ ಗಟ್ಟಿ ಮುಟ್ಟದ... ಕೊಲ್ಯುರು ಪೈವಳಿಕೆ ಸೀಮೆಡ್ ಮಿತ್ತಬೈಲ್‌ದ ಈ ಮೂಲದ ಮುಗೆರೆರ್ ಪುದರ್ ಪೋಯಿನಕ್ಲ್. ಮಿತ್ತ ಬೈಲ್ ಗುತ್ತುದ ಮಾನ ಮರ್ಯಾದೆ ಪಂಡ ಅಕ್ಲೆನವೆ (ಅದೇ ಪು.೨) (ಕೊನೆ ಟಿಪ್ಪಣಿ ೧೩).

ಪಾಳೇಗಾರಿಕೆಯ ವ್ಯವಸ್ಥೆಯ ಒಳಗಡೆಯೂ ದುಡಿದು ಮೂಲದವರೆಂದು ಗುರುತಿಸಿಕೊಂಡು ಜಮೀನ್ದಾರರ ಸಿರಿವಂತಿಕೆಯನ್ನು ಬೆಳೆಸಲು ಕಾರಣವಾಗುತ್ತಾರೆ. ಒಕ್ಕಲಿನವರಾಗಿರುವ ಇವರಿಗೆ ಭೂಮಿಯ ಒಡೆತನ ಇಲ್ಲದಿದ್ದರೂ ದುಡಿಮೆಯ ನಿಷ್ಠೆ ವಸತಿ ಕೊಟ್ಟ ಒಡೆಯನ ಬಗೆಗಿರುತ್ತದೆ. ಎಲ್ಲೋ ಕೋಳಿ ಅಂಕದಲ್ಲೋ ಕಂಬಳ ಗದ್ದೆಯಲ್ಲೋ ನಡೆದ ವಾಗ್ವಾದ ಕಲಹಗಳು ಗುತ್ತಿನ ಅಂಗಳದಲ್ಲಿ ಕೊನೆಯಾಗುತ್ತಿತ್ತು.

ಹಾಗೆ ಅಂತ್ಯಗೊಳ್ಳುವಾಗಲೂ ಒಂದೆರಡು ಕೊಲೆ ಸುಲಿಗೆಗಳಲ್ಲಿ ಕೊನೆಯಾಗುತ್ತಿತ್ತು. ದುಡಿಮೆಯೇ ಅವರ ಮಂತ್ರವಾಗಿದ್ದು, ಪ್ರತಿ ಫಲಾಪೇಕ್ಷೆಯಿಲ್ಲದೆ ದುಡಿಯುತ್ತಾರೆ ಎಂದು ನಿರೂಪಿಸಿಕೊಂಡರೂ ಹೊಟ್ಟೆಯ ಹಸಿವು ನೀಗಿಸಿಕೊಳ್ಳುವಲ್ಲಿಯ ತುಡಿತವನ್ನು ಮರೆಯಲಾಗದು. ಹೀಗೆ ದುಡಿಯಬೇಕಾದರೂ ಬುಡಕಟ್ಟಿನ ಜನರೇ ಅವರಿಗೆ ಲಭ್ಯವಾಗುತ್ತಿದ್ದರು ಬಲಾತ್ಕಾರವಾಗಿ, ಒತ್ತಾಯಪೂರ್ವಕವಾಗಿ ಇಲ್ಲವೆ ಅನ್ನ ಮತ್ತು ವಸತಿಯ ಆಸೆಯನ್ನು ಹುಟ್ಟಿಸಿ ನೆಲೆಯೂರಿಸಿ ತಮ್ಮ ಕಾಲಾಳುಗಳಾಗಿ ದರ್ಪ ದಾಷ್ಟ್ಯಗಳ ಪ್ರತಿರೂಪವಾಗಿ ನಿಗ್ರಹದಲ್ಲಿರಿಸುತ್ತಿದ್ದರು.

ಕರಾವಳಿಯ ಗದ್ದೆ ಸಾಗುವಳಿಯ ಕೃಷಿಯನ್ನು ಹೇಗೆ ಮಾಡುತ್ತಿದ್ದರು.? ಗದ್ದೆಯ ನಿರ್ಮಾಣ ಯಾವ ರೀತಿ ಇತ್ತು? ಮತ್ತು ಅಲ್ಲಿಯ ದುಡಿಮೆಯ ವೈಶಿಷ್ಟ್ಯವಾದರೂ ಎಂತುದು ಎಂಬುದನ್ನು ಪರಿಭಾವಿಸಬೇಕು. ಈ ಎಲ್ಲಾ ಸೂಕ್ಷ್ಮ ವಿವರಗಳೊಂದಿಗೆ ಕೃಷಿಯನ್ನು ವಿಸ್ತರಿಸಿದ ರೀತಿಯನ್ನು ಇತಿಹಾಸದ ಹೆಜ್ಜೆ ಗುರುತುಗಳಾಗಿ ಗುರುತಿಸಬಹುದು.

"ಬೆನ್ನಿ ಕರಿದ್ ಗುಡ್ಡೆ ಗರ್ತ್‌ದ್ ಪೊಸ ಕಂಡ ಮನ್ತೆರ್. ಬೈಲ್‌ದ ಮೂಲೆಡ್ ಪರಿತ್ ಪೋಪಿ ತೋಡುಗು ಅಡ್ಡ ಕಟ್ಟ್‌ದ್ ಬೊಟ್ಟಿ ಕಂಡೊಲೆಗ್ ನೀರೊಡ್ಡಾದ್ ಸುಗ್ಗಿದ ಬೆನ್ನಿ ಮಂತೆರ್. ಎದುರುದ ಭಟ್ರೆನ ಪರ ಬೈಲ ಕಂಡೊನು ಗರ್ತ್‌ದ್ ಮಲ್ಲೆ ಮಂತೆರ್. ಮಂತ್‌ದ್ ಪೂಕರೆದ ಕಂಡಂದ್ ಪಂಡೊಂಡೆರ್. ಪೂಕರೆದ ಕಂಡ ಬಾಕಿ ಮಾರ ಕಂಡ ಆಂಡ್. ಬಾಕಿಮಾರ ಕಂಡ ದುಂಬುಗು ಕಂಬ್ಳದ ಕಂಡ ಆಂಡ್. ಕೆಲವು ವರ್ಷ ಕರಿನಗ ಅವ್ವೇ ಕಂಡ ಮೂಜಿ ಮುಡಿ ಅತಿಕಾರ ಬಾರ್ ಬಿತ್ತುನ ಕಂಡ ಆಂಡ್." (ಆನಂದ ಕೃಷ್ಣ; ೨೦೦೫; ಪು.೪೪) (ಕೊನೆ ಟಿಪ್ಪಣಿ ೧೪) ತುಳುವರು ತಮ್ಮ ನೆಲ ಮೂಲದ ಸತ್ಯಗಳನ್ನು ಅರಿತುಕೊಂಡು ಅದನ್ನು ಬಳಸಿಕೊಂಡ ರೀತಿ ವಿಭಿನ್ನವಾದುದು. ಕೃಷಿಯನ್ನು ಬದುಕಿನ ಧರ್ಮವೆಂದು ತಿಳಿದುದರಿಂದ ದುಡಿಮೆ ಒಂದು ಮೌಲ್ಯವಾಗಿಯೂ ನಿರೂಪಿಸಲ್ಪಟ್ಟಿದೆ. ಕೃಷಿಲೋಕ ಸಾಗಿ ಬಂದ ದಾರಿಯಲ್ಲಿ ಕೃಷಿಯನ್ನು ವಿಸ್ತರಿಸಿಕೊಂಡ ಭೂಮಿಯನ್ನು ಹದಗೊಳಿಸಿ ಕೊಯ್ಲಿನವರೆಗೂ ವಿಭಿನ್ನ ನೆಲೆಯಲ್ಲಿ ನಿರ್ವಹಿಸುವ ಕೆಲಸಕಾರ್ಯಗಳೂ ನೆಲ ಮೂಲ ಸಂಸ್ಕೃತಿಯ ಬೇರುಗಳೇ ಆಗಿವೆ. ಆಹಾರದ ಮೂಲವಾಗಿ ಬೆಳೆದ ಬೆಳೆಗಳು ಕ್ರಮೇಣ ಸ್ಥಿತ್ಯಂತರಗೊಂಡು ವಾಣಿಜ್ಯ ಬೆಳೆಗಳಾದುದು ಕಾಲದ ಕ್ರಮಿಸುವಿಕೆಯಲ್ಲಿ ದಾಖಲಾಗಿದೆ. ಗುಡ್ಡವನ್ನು ಅಗೆದು ಗದ್ದೆ ಮಾಡಿ ಕೃಷಿಯ ಉತ್ಸಾಹವನ್ನು ತೋರಿದಂತೆ ವಾಣಿಜ್ಯ ಬೆಳೆಯಾಗಿ ಪರಿವರ್ತನೆ ಹೊಂದಿ ಕೃಷಿ ವಿಸ್ತಾರವಾಗುತ್ತ ಸಾಗಿದೆ.

"ಕಟ್ಟ ಪುಣಿಟ್ ಬನ್ನಗ ಅರುವದೆ ತಮ್ಮಲೆಗ್ ಗುಡ್ಡೆಲೆನ್ ಒರಿನ ಅಡ್ಕೊಲೆನ್ ತೋಜಾದ್ ಅಯೆನ್ ಎಂಚ ಕಂಡ ಮನ್ಪಯೆರೆ ಉಂಡುಂದು ವಿವರಿತೊಂದು ಒತ್ತೆ. ಇಲ್ಲ್‌ದ ಮೂಡಾಯಿ ಮೆಯಿಟ್ ಗರ್ತ್‌ದ್ ಮಂತೊದುಪ್ಪುನ ಕಂಗ್‌ದ ತೋಟ ತೋಜಾಯೆ. ಸುತ್ತ ತಂಕುಲು ದೀತ್‌ನ ಸುಮಾರು ಐನೂದು ಫಲ ಬರ್ಯೆರೆ ಆಯಿನ ಕಂಗ್‌ಲೆನ್ ತೋಜಾಯೆ. ತೋಟ ಬಾರೆ ಶಾರೆಲೆಡ್ ದಿಂಜಿದಿತ್ತ್‌ಂಡ್.

ಕಾಡ್ ಕಡ್ತ್‌ದ್ ತೋಟ ಮನ್ಪುನ ಗುಡ್ಡೆ ಗರ್ತ್‌ದ್ ಬೊಟ್ಟಿ ಕಂಡ, ಅಡ್ಕ ಗರ್ತ್‌ದ್ ಸುಗ್ಗಿದ ಭೂಮಿ ಮನ್ಪುನ, ಬೊಟ್ಟಿ ಕಂಡೊನು ಬೈಲ ಕಂಡ ಮನ್ಪುನ ಕೆಲಸ ಪೂರಾ ಕಿನ್ಯನನ, ಮಂತಿ ಭೂಮಿಡ್ ಮೂಜಿ

ಬುಳೆ, ರಡ್ಡ್ ಬುಳೆ ಬೊಟ್ಟುದ ಬುಳೆ ದೆಪ್ಪುನ ಕೆಲಸ ತನ್ನವುಂದು ಪಂಡೆ (ಅದೇ, ಪು.೪೫) (ಕೊನೆ ಟಿಪ್ಪಣಿ ೧೫)

ಕಟ್ಟ ಹುಣಿಯಲ್ಲಿ ಬರುವಾಗ ಅಳಿಯ (ಅರುವತ್ತೆ) ಸೋದರ ಮಾವನಿಗೆ ಗುಡ್ಡಗಳನ್ನು ಉಳಿದ ಸ್ಥಳಗಳನ್ನು ತೋರಿಸುತ್ತ ಅದನ್ನು ಹೇಗೆ ಗದ್ದೆ ಮಾಡಲಿದೆ ಎಂದು ವಿವರಿಸುತ್ತ ಬಂದನು. ಮನೆಯ ಪೂರ್ವ ದಿಕ್ಕಿನಲ್ಲಿ ಅಗೆದು ಮಾಡುತ್ತಿರುವ ಅಡಿಕೆ ತೋಟವನ್ನು ತೋರಿಸಿದ ಸುತ್ತ ತಾವು ಇಟ್ಟ ಸುಮಾರು ಐನ್ನುರು ಫಲ ಬರಲು ಆದ ಅಡಿಕೆ ಮರವನ್ನು ತೋರಿಸಿದ. ತೋಟ ಬಾಳೆ ತೆಂಗಿನಿಂದ ತುಂಬಿತ್ತು.

ಸಾಗುವಳಿಯ ಕ್ರಮವನ್ನು ವಿವರಿಸುವುದರೊಂದಿಗೆ ಕೃಷಿಯ ಅನ್ವೇಷಣೆಯೊಂದಿಗೆ ವಿಸ್ತರಣೆಯಾದುದನ್ನು ವಿವರಿಸುತ್ತಾರೆ. ವಿಸ್ತರಣೆಯೊಂದಿಗೆ ಕೃಷಿ ಬದಲಾವಣೆಯಾದ ಸ್ವರೂಪವೂ ತಿಳಿಯುತ್ತದೆ. ಕಟ್ಟ ಹುಣಿಯ ರಚನೆಯ ವಿನ್ಯಾಸದೊಂದಿಗೆ ಕರಾವಳಿಯಲ್ಲಿ ಬೆಳೆಯುವ ಮೂರು ಬೆಳೆಗಳು ಎಣೆಲು, ಸುಗ್ಗಿ, ಕೊಳಕೆಗಳನ್ನು ಬೆಳೆಯುವಾಗ ವೈಶಿಷ್ಟ್ಯವೂ ಇಲ್ಲಿದೆ. ಬೈಲು , ಬೆಟ್ಟು ಗದ್ದೆಗಳ ನಿರ್ಮಾಣದಲ್ಲಿ ಇರುತ್ತಿದ್ದ ಶ್ರಮವನ್ನು ಅದನ್ನು ವ್ಯವಸಾಯ ಮಾಡುವ ಕ್ರಮವನ್ನು ಉಲ್ಲೇಖಿಸುತ್ತಾರೆ. ಬಹಳ ಸೂಕ್ಷ್ಮ ಎಳೆಗಳಲ್ಲಿ ಕರಾವಳಿಯ ವ್ಯವಸಾಯದ ಕ್ರಮ ರೀತಿ ನೀತಿಗಳು ಭಿನ್ನವಾಗಿದ್ದು ಅದಕ್ಕೆ ಕಾರಣ ಭೂಮಿಯ ಚಹರೆಯೂ ಆಗಿದೆ. ಮಣ್ಣಿನ ಕಸುವನ್ನು ಅರಗಿಸಿಕೊಂಡುದರಿಂದ ಯಾವ ಬೆಳೆಯನ್ನು ಎಲ್ಲಿ ಹೇಗೆ ಎಷ್ಟು ಪ್ರಮಾಣವನ್ನು ಬೆಳೆದು ಬದುಕು ಕಟ್ಟ ಬೇಕು ಎನ್ನುವ ಜಾಣ್ಮೆ ತುಳುವರದು. ತಳಿಯ ವೈವಿಧ್ಯದೊಂದಿಗೆ ಇಳುವರಿಯ ವಿಭಿನ್ನತೆಯೂ ಇಲ್ಲಿ ಗಮನಿಸಬೇಕಾದ ಅಂಶ. ಕೃಷಿಯ ವಿಭಿನ್ನತೆಯೊಂದಿಗೆ ಆಹಾರದ ಕ್ರಮವೂ ಬೆಸೆದಿರುವುದರಿಂದ ವೈಶಿಷ್ಟ್ಯದ ಕುಚ್ಚಲಕ್ಕಿಯ ಅನ್ನ ಕಡಲ ತೀರದ ಈ ಪ್ರದೇಶಕ್ಕೆ ತನ್ನದೇ ಆದ ಅನನ್ಯತೆಯನ್ನು ನೀಡಿದೆ.

ಮಂದಾರ ಕೇಶವ ಭಟ್ಟರು ಬರೆದ ಮಂದಾರ ರಾಮಾಯಣ ಕೃತಿಯಲ್ಲಿ ರಾಮಾಯಣ ಕಾವ್ಯವನ್ನು ಬರೆದ ವಾಲ್ಮೀಕಿಯನ್ನು ಮಲೆಕುಡಿಯನೆಂದು ಚಿತ್ರಿಸಿದ್ದಾರೆ. ಕರಾವಳಿಯ ಪಶ್ಚಿಮ ಘಟ್ಟದ ತಪ್ಪಲುಗಳ ಕಾಡಿನ ನಡುವಿರುವ ಬುಡಕಟ್ಟು ಸಮುದಾಯದ ಮಲೆಕುಡಿಯರ ಬದುಕಿನ ಕ್ರಮವನ್ನು ವಿವರಿಸುತ್ತಾರೆ. ಕುಡಿಯರು ಅಪ್ಪಟ ಕೃಷಿಕರು ಮಾತ್ರವಲ್ಲ ಕುಮರಿ ಬೇಸಾಯವನ್ನು ಮಾಡುತ್ತಿದ್ದರು. ಕಾಡಿನ ಮಡಿಲಲ್ಲಿರುವ ಈ ಸಮುದಾಯ ಮಣ್ಣನ್ನು ನಂಬಿಯೇ ಬದುಕಿದ್ದರು. ಕಾಡಿನವರಾದ ವಾಲ್ಮೀಕಿಯನ್ನು ಕುಡಿಯನನ್ನಾಗಿಸುವುದರ ಮೂಲಕ ತುಳುವರ ಬಹುತ್ವದ ನೆಲೆಗಳಲ್ಲಿ ದಾಖಲಾದ ನೆಲ ಮೂಲದ ಸತ್ಯಗಳನ್ನು ನಿರೂಪಿಸುತ್ತಾರೆ.

“ಬಡಕಾಯಿ ಮೆಯ್ಯೊಂಜಿ ಊರು ಇತ್ತ್‌ಂಡವುಳು

ಕಂಡೊಡ್ದು ಕಾಡೆಚ್ಚ ಕುಡಿಯರೆನ ಪಡೆಯೆಚ್ಚ

ಒಂಜಿ ಕಾಡ್‌ದ ಕಡೆಟ್ ಪುಂಡಿ ಕೇನೆದ ಮುದೆಲು

೪ಡ್ಕ ಬಾರೆದ ಪುದೆ ಎಳಿತ್ತಿ ಪಡ್ಪುಡು ಪರಪು

ತನ್ನೆ ತೋಡುದರುಟ್ಟು ಮುರಕಲ್ಲ ತೆಕ್ಕೆಲೆಡ್

ಬರೆ ಮೊರಂಪಾಯಿದೆತ್ತರ ಕಟ್‌ದ್, ದೀಯಿ ತಡ

ಮೆಗೆ ಕಾಡ ಬೂರು ಮೊಡೆತಿನ ಪಡಿನ್ ತಿಕ್ಕಾದೆ

ಇಲ್ಲದುಳಯಿದ ಜಾಲ್‌ಡೊಂಜಿ ಮೂಲೆಡ್ ಕಾಟ್–

ಪೀರೆ , ಕಾರೊಳು, ಬಸಲೆದ ದೊಂಪೊಳೇ ಮೆಯ್ಪ್

ಪದ್ಪೆಕಳ, ರಚ್ಚೇವು ಕಂಡೆ, ಪಕಳ ಪಚ್ಚೆ

ಪರೆಲೆಲ್‌ದ ದೂಜಿಲೆನ್ ನಿದ್ಪ ಉಂತಾಯಿಲೆಕ

ಪರ್ನ್ದ್ ಕಾಯೆಲ್ ಗೆಜ್ಜೆ ಕಟಿನಂಚ ದಿಂಜಿದಿನ

ಜೀರ್ಗೆ ಮುಂಙ್ಚಿಲೆದ ದಯ್ಯುಳು------(ಮಂದಾರ ಕೇಶವ ಭಟ್ಟ; ೧೯೮೭; ಪು ೨) (ಕೊನೆ ಟಿಪ್ಪಣಿ ೧೬)

ಕಾಡಿನ ವಾತಾವರಣದಲ್ಲಿ ಸಹಜವಾಗಿ ಬೆಳೆದ ಸಹಜ ಕೃಷಿಯೊಂದಿಗೆ ಬಂದ ಫಸಲು ಮತ್ತು ಬೆಳೆಗಳು ಕಣ್ಣಿಗೆ ರಾಚುವಂತೆ ಚಿತ್ರಿಸಿದ ಮಲೆಕುಡಿಯರ ಮನೆ ಪರಿಸರದ ಈ ವಾತಾವರಣ ಕೃಷಿ ಲೋಕದ ಆರಂಭದ ದಿನಗಳನ್ನು ನಿರೂಪಿಸುತ್ತದೆ. ಕೃಷಿಯ ಅನ್ವೇಷಣೆಯ ಹಂತದಲ್ಲಿ ಪ್ರಾಕೃತಿಕವಾಗಿ ಬೆಳೆಯುವ ಬೆಳೆಗಳನ್ನು ನೋಡಿ ಫಸಲನ್ನು ಪಡೆದಂತೆ ಒಳ್ಳೆಯ ಫಲವತ್ತಾದ ಬೆಳೆಯನ್ನು ತಳಿಗಳ ಆಯ್ಕೆಯಿಂದ ಪ್ರಾಕೃತಿಕ ನೆಲೆಯಲ್ಲಿಯೇ ನಡೆಸಿದ್ದರು. ಪ್ರಾದೇಶಿಕವಾಗಿ ಕರಾವಳಿಯ ಮನೆ ಮುಂದೆ ಇರುವ ಭೌಗೋಳಿಕತೆ ಆ ಭೂಮಿಯ ಸಂರಚನೆಗೆ ಒಗ್ಗುವ ಬೆಳೆಯುವ ಬೆಳೆಗಳು ಮತ್ತು ವೈವಿಧ್ಯ ಅಲ್ಲದೆ ವೈಶಿಷ್ಟ್ಯವನ್ನು ಸೂಕ್ಷ್ಮವಾಗಿ ನಿರೂಪಿಸುತ್ತಾರೆ. ಮಣ್ಣು, ನೀರು, ಬೆಳೆ ಮತ್ತು ಅದರಿಂದ ಸಿಗುವ ಉತ್ಪತ್ತಿ ಜೀವನ ನಿರ್ವಹಣೆ ಮತ್ತು ಆಹಾರದ ಮೂಲ ಕಾಲ ದೆಸೆಯಲ್ಲಿಯೇ ಇದ್ದು, ಅದನ್ನು ನಿರ್ವಹಿಸಿದ ಜಾಣ್ಮೆಯೂ ಬಹುಮುಖ್ಯವಾದುದು. ಕಾಡಿನ ಪರಿಸರದಲ್ಲಿ ಬದುಕಿದ ಮಂದಿ ನೆಲಕ್ಕೆ ಹತ್ತಿರಾಗಿ ಅದರ ಸತ್ತ್ವ ಮತ್ತು ತತ್ತ್ವಗಳನ್ನು ಅರ್ಥೈಸಿಕೊಂಡು ಬದುಕಿನ ಸರಳತೆಯನ್ನು ನಿರೂಪಿಸಿಕೊಂಡವರು ಜೀವನದ ಮೌಲ್ಯವನ್ನು ದುಡಿಮೆಯ ತತ್ತ್ವದ ಮೂಲಕವೇ ಪ್ರತಿಪಾದಿಸಿದ್ದಾರೆ. ಕಥೆ ರಾಮಾಯಣದ್ದೇ ಆದರೂ ಪರಿಸರ ಕರಾವಳಿಯದ್ದು ವಾಲ್ಮೀಕಿ ಕಾಡಲ್ಲಿ ಮೌನವಾಗಿ ಕುಳಿತು ತಪಸ್ಸನ್ನಾಚರಿಸಿದ್ದಲ್ಲ. ದುಡಿಯುತ್ತಲೇ ಪ್ರಕೃತಿಯೊಂದಿಗೆ ಬೆರೆಯುತ್ತಲೇ ಅದರ ರಹಸ್ಯ ತನ್ನ ಮನದಾಳಕ್ಕೆ ದಕ್ಕಿತೇ ಎಂದು ತರ್ಕಿಸಿದವನು. ಪ್ರಕೃತಿ ತತ್ತ್ವದ ತರ್ಕದ ಗ್ರಹಿಕೆ ಕಾರಣಕ್ಕಾಗಿ ಹೊಸ ದಿಕ್ಕಿನ ಯೋಚನೆಯ ಮೈಲಿಗಲ್ಲಾಗುತ್ತದೆ.

ದುಡಿಯುವ ವರ್ಗದ ದುಡಿಮೆಯ ಬವಣೆಗಿಂತಲೂ ತಾವು ಮಾಡುವ ಕೆಲಸಗಳಲ್ಲಿರುವ ಸಣ್ಣ ಸಣ್ಣ ಸೂಕ್ಷ್ಮ ಗ್ರಹಿಕೆಯ ಎಳೆಗಳು ಬದುಕು ಕಟ್ಟುವುದಕ್ಕೆ ಸಹಕಾರಿಯಾಗಿದೆ. ಸುತ್ತ ಇರುವ ಪ್ರಕೃತಿಯನ್ನು ಇರುವುದನ್ನು ಇರುವಂತೆಯೇ ಸದುಪಯೋಗ ಪಡಿಸಿಕೊಳ್ಳುತ್ತ ತಮ್ಮ ಕೌಶಲ್ಯ ಮತ್ತು ಜಾಣ್ಮೆಗಳಿಂದ ನೆಲದ ಸತ್ಯಗಳನ್ನು ಅರ್ಥೈಸಿಕೊಳ್ಳಲು ಯತ್ನಿಸಿದರು. ಸಂಸ್ಕೃತಿ ವಿಕಾಸದ ಹಾದಿಯಲ್ಲಿ ನಾಗರಿಕತೆ ಬೆಳೆದು ಬಂದ ಕ್ರಮವನ್ನು ಸರಳವಾಗಿ ಗ್ರಹಿಸಲು ಸಾಧ್ಯವಾಗಿದೆ. ಕಾಡು ಮತ್ತು ಅದರ ಒಡನಾಟದ ಮೂಲಕವೇ ಬದುಕು ಕಟ್ಟಿದ ಜನರ ಜೀವನ ಧರ್ಮ ಮತ್ತು ಧೋರಣೆಗಳೂ ಸ್ಪಷ್ಟಗೊಳ್ಳುತ್ತದೆ.

ಕೃಷಿ ಜಗತ್ತಿನ ವಿಕಾಸದ ಹಂತಗಳನ್ನು ಗುರುತಿಸುವುದರೊಂದಿಗೆ ಶ್ರಮಿಕತೆಯ ಬೇರಾಗಿ ಬಾಳಿದ ಜನರ ಬದುಕಿನ ನಿರೂಪಣೆಯೂ ಪ್ರಮುಖವಾಗಿದೆ. ಕೃಷಿಯನ್ನು ಅನ್ವೇಷಣೆ ಮಾಡಿದ ಕುಮೆರಿ ಕೃಷಿ.

ಕೃಷಿಯನ್ನು ವಿಸ್ತರಣೆ ಮಾಡಿದ ಪಾಳೇಗಾರಿಕೆ, ಕೃಷಿಯನ್ನು ನಿರ್ವಹಣೆ ಮಾಡಿದ ಸೂಕ್ಷ್ಮಗಳೂ ಕಾಣಿಸಿಕೊಳ್ಳುತ್ತಿವೆ. ಕಾಡಿನಿಂದ ನಾಡಿಗೆ ಬಂದ ಮೊದಲ ಹಂತದಲ್ಲಿ ಕಾಡನ್ನು ಸುಟ್ಟು ನಾಡಾಗಿಸಿದರು. ಎರಡನೆ ಹಂತಕ್ಕಾಗುವಾಗ ಬದಲಾಗುತ್ತಿದ್ದ ಕೃಷಿ ಭೂಮಿ ಸ್ಥಿರ ಕೃಷಿಯಾಯಿತು. ಸ್ಥಿತ್ಯಂತರದ ಮೂರನೆಯ ಹಂತದಲ್ಲಿ ಮನುಷ್ಯ ಬದುಕಿಗೆ ಒದಗಿಸಿದ ಚಲನೆ ಕೃಷಿ ಭೂಮಿಯನ್ನು ವಿಸ್ತರಿಸುತ್ತ ಸಾಗಿದೆ. ಈ ವಿಸ್ತರಣೆಗೆ ಅನುಕೂಲವಾದುದು ಭೂಮಿಯ ಒಡೆತನವನ್ನು ಹೊಂದಿದ ಅಲ್ಪ ಸಂಖ್ಯಾತ ಜನ ಪಾಳೇಗಾರರಾಗಿ ಬಹು ಸಂಖ್ಯಾತರು ಶ್ರಮಿಕರಾಗಿ ಪರಿವರ್ತನೆ ಹೊಂದಿದುದು ತುಳುವರ ಪರಂಪರೆಯ ತಿಳುವಳಿಕೆಯಿಂದ ಸರಳ ಎಚ್ಚರವೂ ಹೌದಾಗಿದೆ.

**೭.೨ ಪರಂಪರೆಯ ಮರುಕಳಿಕೆ**

'ಪರಂಪರೆ'ಎಂಬುದು ಯಾರೊಬ್ಬರಿಂದಲೂ ಬರೆಸಿಕೊಂಡ ಸಂವಿಧಾನವಲ್ಲ. ಕಾನೂನು ಅಲ್ಲ. ಪರಂಪರೆ ಎಂಬುದು ಆಯಾ ಪ್ರದೇಶದ ಕಾಲಮಾನದ ಭಾಷೆಯ ಸಮಷ್ಟಿ ಸಂವೇದನೆಯ ಪ್ರಜ್ಞೆ. ಭಾರತೀಯ ಪರಂಪರೆಯೆಂದರೆ ಆರ್ಷೇಯ ಪರಂಪರೆ ಎಂದು ಹೆಸರಿಡುವ ರೂಢಿ ಒಂದು ಕಾಲಕ್ಕಿತ್ತು. ಆದರೆ ಭಾರತೀಯ ಪರಂಪರೆ ಎಂದರೆ ಯಾವುದೆಂಬುದನ್ನು ನಿರ್ದಿಷ್ಟವಾಗಿ ಹೇಳಲು ಇಂದು ಆಗುತ್ತಿಲ್ಲ. ಭಾರತೀಯ ಪರಂಪರೆ ಎಂದು ಗುರುತಿಸುವಷ್ಟು ಇವತ್ತು ಅಸಲಿಯಾಗಿ ಉಳಿದಿಲ್ಲ. ಜಾಗತೀಕರಣಕ್ಕೆ ಮುಖಾಮುಖಿಗೊಂಡು ನವ ವಸಾಹತೀಕರಣದ ಈ ಕಾಲಘಟ್ಟದಲ್ಲಿ ಭಾರತೀಯ ಪರಂಪರೆ ಒಂದು ಸಂಕರ ರೂಪವಾಗಿರುವಂತೆ ಬಹು ಶ್ರುತಿ ರೂಪವೂ ಆಗಿದೆ.

ಒಬ್ಬ ಸೃಜನಶೀಲ ಬರಹಗಾರನಿಗೆ ಚಾರಿತ್ರಿಕ ತುರ್ತು ಒತ್ತಡಗಳು ಬರವಣಿಗೆಗೆ ಪ್ರೇರಣೆ ನೀಡಿದಂತೆ, ಗತಕಾಲದ ಇತಿಹಾಸ ಪ್ರಜ್ಞೆಯೂ ಕೂಡ ಸಹಾಯಕವಾಗದೆ ಇರದು. ಆಯಾ ಕಾಲದ ಬರಹಗಾರರು ಸಾಹಿತ್ಯ ಸಂಸ್ಕೃತಿಗಳಿಗೆ ಮುಖಾಮುಖಿಯಾಗುತ್ತಲೇ ಪುನರ್ ವ್ಯಾಖ್ಯಾನಿಸುತ್ತ ಮರು ನಿರೂಪಣೆಗೊಳಿಸಿದರು.

ಕಾಲಾತೀತವಾದ ವಿಶಿಷ್ಟ ಪ್ರಕ್ರಿಯೆಯೇ ಮಾನವ ಕುಲಕೋಟಿಗೆ ಒಂದು ಪರಂಪರೆ ಎಂಬುದು ಸಾಮಾನ್ಯ ತಿಳುವಳಿಕೆ. ಪರಂಪರೆ ಮನುಷ್ಯನ ಬದುಕಿನ ಹತ್ತಾರು ಮಗ್ಗುಲುಗಳಾದ ಸಂಸ್ಕೃತಿ, ಕಲೆ, ಸಂಪ್ರದಾಯ ಧರ್ಮ, ಅಚರಣೆ, ನಂಬಿಕೆ, ಜಿಜ್ಞಾಸೆ ಜೀವನ ಮೌಲ್ಯಗಳು ಹೀಗೆ ಏನೆಲ್ಲ ಆಯಾಮಗಳನ್ನು ಒಳಗೊಂಡಿರುತ್ತದೆ. ಪರಂಪರೆಯನ್ನು ವೈದಿಕ ಪರಂಪರೆ ಅವೈದಿಕ ಪರಂಪರೆ, ಚಂಪೂ ಪರಂಪರೆ, ವಚನ ಪರಂಪರೆ, ದಲಿತ ಪರಂಪರೆ ಹೀಗೆ ಜನಾಂಗ, ದೇಶ, ಭಾಷೆ, ಸಾಹಿತ್ಯ ಮೊದಲಾದ ನೆಲೆಗಳಿಂದ ಗುರುತಿಸಿಕೊಳ್ಳುವುದುಂಟು.

ಪರಂಪರೆಯು ಸ್ವಯಾರ್ಜಿತವಲ್ಲ. ಅತ್ಯಂತ ವ್ಯಾಪಕ ಮಹತ್ವವುಳ್ಳ ಅದನ್ನು ವಂಶಾನುಗತವಾಗಿ ಪಡೆಯಲಾಗುವುದಿಲ್ಲ. ಅದಕ್ಕೆ ಬರಹಗಾರನಿಗೆ ಪರಿಶ್ರಮ ಬೇಕು. ಸೃಜನಶೀಲ ಲೇಖಕನೊಬ್ಬನ ಮನಸ್ಸು ಎರಡು ರೀತಿಯಲ್ಲಿ ಕಾರ್ಯನಿರ್ವಹಿಸುತ್ತದೆ. ಒಂದು ಸೃಷ್ಟಿ ಕ್ರಿಯೆಗೆ ತೆರೆದುಕೊಳ್ಳುವುದು ಮತ್ತು ಎರಡನೆಯದು ತನ್ನ ಬರಹವನ್ನು ವಿಮರ್ಶೆಗೆ ಒರೆ ಹಚ್ಚಿ ನೋಡುವುದು. ಒಬ್ಬ ಒಳ್ಳೆಯ

ಬರಹಗಾರನಾಗಬೇಕಾದರೆ ಒಬ್ಬ ಒಳ್ಳೆಯ ಓದುಗನೂ ಅಗಬೇಕು. ಒಂದು ಕೃತಿಯನ್ನು ಓದುವಾಗ ಯಾವ ವಿಚಾರ ಮನಸ್ಸಿನಲ್ಲಿ ಹಾದು ಹೋಗುವುದೋ ಅದನ್ನು ಪ್ರಕಟಪಡಿಸುವ ರೀತಿಯೇ ಆಗಿರುತ್ತದೆ. ಹಾಗೆ ಓದುವಾಗಲೂ ಒಬ್ಬೊಬ್ಬ ಕವಿಯನ್ನು ಓದುವುದಿಲ್ಲ. ಸಾಗಿ ಬಂದ ಬರಹಗಾರರನ್ನು ಗಮನಿಸುತ್ತೇವೆ. ಪರಂಪರೆಯ ಬರಹಗಾರರನ್ನು ಪರಂಪರೆಗೆ ಹೋಲಿಸಿ ಓದುತ್ತೇವೆ. ಲೇಖಕನ ಸೋಪಜ್ಞತೆ, ಸ್ವಂತಿಕೆ ಹಿಂದೆ ಆಗಿ ಹೋದ ಬರಹಗಾರರ ಕೃತಿಗಳನ್ನು ಗಮನಿಸಿದಾಗ ವ್ಯಕ್ತವಾಗುತ್ತದೆ. ಆತನ ಋಜುತ್ವ ಇರುವುದು ತಾನು ನಿರೂಪಿಸಿದ ಬರಹಗಳಲ್ಲಿ ತನಗಿಂತ ಹಿಂದೆ ಆಗಿ ಹೋದವರು ಒಂದಲ್ಲ ಒಂದು ರೀತಿಯಲ್ಲಿ ಮಹತ್ವವನ್ನು ಪಡೆಯುತ್ತಾರೆ. ಹೀಗೆ ಪ್ರಾಮುಖ್ಯತೆಯನ್ನು ಹೊಂದಿದಾಗ ತನ್ನ ಹಿಂದಿನ ಪರಂಪರೆಯನ್ನು ಕುರುಡಾಗಿ ಅನುಸರಿಸುವುದಿಲ್ಲ. ಪರಂಪರೆಯನ್ನು ಪಡೆಯಬೇಕಾದರೆ ಚಾರಿತ್ರಿಕ ಪ್ರಜ್ಞೆ ಬೇಕು. ತನ್ನ ಹಿಂದಿನ ಭೂತಕಾಲದ ಅರಿವು ಮತ್ತು ವರ್ತಮಾನದ ಪ್ರಜ್ಞೆಯ ತೌಲನಿಕ ದೃಷ್ಟಿ ಮುಖ್ಯವಾಗುತ್ತದೆ. ಈ ಎರಡು ಸಂಗತಿಗಳನ್ನು ಪರಸ್ಪರ ಪರಾಮರ್ಶಿಸಿದಾಗ ಪರಂಪರೆಯನ್ನು ಅರ್ಥೈಸಿದ ಕೃತಿ ವೈಶಿಷ್ಟ್ಯ ಎದ್ದು ಕಾಣುತ್ತದೆ. ವೈಯಕ್ತಿಕತೆಯನ್ನು ಮೀರಿ ಪರಂಪರೆಯ ಜತೆ ಮುಖಾಮುಖಿಯಾದಾಗ ತೌಲನಿಕ ದೃಷ್ಟಿಯಲ್ಲಿ ಎರಡು ಅಂಶಗಳು ಎದ್ದು ಕಾಣುತ್ತದೆ. ಹೊಂದಾಣಿಕೆ ಮತ್ತು ವೈಯಕ್ತಿಕತೆಗಳ ಮೂಲಕ ತನ್ನ ಕಾಲದ ಪೂರ್ವಕ್ಕೆ ಸೇರಿದ ಸಮಷ್ಟಿಯನ್ನು ಹೇಗೆ ಅರ್ಥೈಸಬೇಕು ಎಂಬ ದೃಷ್ಟಿಯೂ ಮುಖ್ಯವಾಗುತ್ತದೆ. ತನ್ನ ಗತಕಾಲವನ್ನು ಗ್ರಹಿಸಿದ ಬಗೆ ಮತ್ತು ಅದನ್ನು ಮರು ನಿರೂಪಿಸಿಕೊಳ್ಳಲು ವರ್ತಮಾನದ ಪ್ರಜ್ಞೆಯೊಂದಿಗೆ ಚಾರಿತ್ರಿಕ ಪ್ರಜ್ಞೆಯೂ ಅವಶ್ಯ. ಪರಂಪರೆಯ ಮರುಕಳಿಕೆಯ ಮೂಲಕ ಕಳೆದುಕೊಂಡುದ್ದನ್ನು ಮತ್ತೆ ಪಡೆಯಬೇಕೆನ್ನುವ ಹಪಾಹಪಿಗಿಂತ, ಶ್ರೇಷ್ಠ ಕನಿಷ್ಠದ ಪ್ರಶ್ನೆಗಳಿಗಿಂತಲೂ ಮರು ನಿರೂಪಣೆಗೊಳ್ಳುವಲ್ಲಿ, ಸಂಸ್ಕೃತಿಯೊಂದು ತನ್ನ ಅನನ್ಯತೆಯ ಬೇರುಗಳನ್ನು ಹುಡುಕಾಡುತ್ತದೆ. ಬೇರಿನ ಜೀವ ದ್ರವ್ಯದ ಮೂಲಕವೇ ಕಾಂಡ, ಚಿಗುರು, ಕೊಂಬೆ, ರೆಂಬೆ ಹೂ ಕಾಯಿಗಳೂ ವ್ಯತ್ಯಾಸಗಳೂ ತಿಳಿಯುತ್ತದೆ. ಬೆಳೆದಿದ್ದೇವೆ, ಬದಲಾಗಿದ್ದೇವೆ ಎಂಬ ಹೊರ ನೋಟದ ಮಾತುಗಳಿಗಿಂತ ತಿರುಳಿನ ಅರ್ಥಗಳನ್ನು ತಿಳಿಯುವುದು ಮತ್ತು ಸತ್ಯಕ್ಕೆ ಮುಖಾಮುಖಿಯಾಗುವುದು ಮುಖ್ಯವೆನಿಸುತ್ತದೆ.

"ಪರಂಪರೆಗೂ ಸಾಹಿತ್ಯಕ್ಕೂ ಇರುವ ಸಂಬಂಧ ಗಾಢವಾದದ್ದು ಒಂದು ಸಾಹಿತ್ಯ ಕೃತಿಯ ಅಧ್ಯಯನವೆಂದರೆ ಅದರ ಪರಂಪರೆಯ ಅಭಿವ್ಯಕ್ತಿಯ ಅಧ್ಯಯನವೆಂದೇ ಅರ್ಥ. ಮನುಷ್ಯ ಜೈವಿಕ ಬೆಳವಣಿಗೆಯ ಪ್ರಕ್ರಿಯೆಗಳಲ್ಲಿ ಮಾನವ ವಿಕಾಸದ ಸಾಂಸ್ಕೃತಿಕ, ಮಾನಸಿಕ, ಬಾವುಕ, ಬೌದ್ಧಿಕ ಅಭಿವ್ಯಕ್ತಿಗಳಲೆಲ್ಲ ಪರಂಪರೆ ಹಾಸುಹೊಕ್ಕಾಗಿ ಬೆಸೆದುಕೊಂಡಿರುತ್ತದೆ. ಅದು ಸಾಮಾಜಿಕ ಅರಿವು ಅನುಭವ ಆಲೋಚನೆ ಹೀಗೆ ವಿವಿಧ ಅಭಿವ್ಯಕ್ತಿಯ ಹತ್ತಾರು ಹಂತಗಳನ್ನು ಅವು ಕಾಲ ಕಾಲಕ್ಕೆ ಬೆಳೆದು ಬಂದ ಬಗೆಯನ್ನು ಅದು ರೂಪಿಸಿದ ಧ್ಯೇಯ ಧೋರಣೆ ಹಾಗೂ ಸಾಧನ ಸಾಧನೆಗಳನ್ನು ಒಳಗೊಂಡಿರುತ್ತದೆ. ಸಾಮಾಜಿಕ ಸನ್ನಿವೇಶದ ಪಲವು ರೀತಿಯ ಪ್ರಭಾವ ಪ್ರೇರಣೆ ಪರಿಣಾಮ ಪ್ರಯತ್ನಗಳನ್ನೆಲ್ಲ ಪರಂಪರೆ ಎಂಬ ಪರಿಕಲ್ಪನೆ ತನ್ನೊಳಗೆ ಅಡಕ ಮಾಡಿಕೊಂಡಿರುತ್ತದೆ. ಇಡೀ ಜನಾಂಗದ ವ್ಯಷ್ಟಿ ಮತ್ತು ಸಮಷ್ಟಿ ಸಾಧನೆಯ ಎಲ್ಲಾ ನೆಲೆಗಳ ಸಾಮೂಹಿಕ ಮತ್ತು ಸಮಗ್ರವಾದ ಫಲ ಅದು". (ಕರೀಗೌಡ ಬೀಚನಹಳ್ಳಿ; ೧೯೯೧; ಪು ೫೯)

ಒಂದು ಸಾಹಿತ್ಯ ಕೃತಿ ಆ ಕಾಲದ ಸಾಮಾಜಿಕ ಒತ್ತಡ ಹಾಗೂ ಲೇಖನದ ಮನಸ್ಥಿತಿ ದೃಷ್ಟಿ ಧೋರಣೆಗಳನ್ನು ಒಳಗೊಂಡಿರುತ್ತದೆ ಎಂಬುದು ಸಾಮಾನ್ಯ ಗ್ರಹಿಕೆ. ಕೃತಿಯ ಚೌಕಟ್ಟಿನೊಳಗೆ ಸಂಸ್ಕೃತಿ, ಧರ್ಮ, ಆರ್ಥಿಕ, ರಾಜಕೀಯ, ಸಾಮಾಜಿಕ ವಿದ್ಯಮಾನಗಳು ಯುಗಧರ್ಮದ ಮೌಲ್ಯಗಳಾಗಿ ಪ್ರಕಟವಾಗಿರುತ್ತದೆ. ಯಾವುದೇ ಸೃಜನಕ್ರಿಯೆಯು ತನ್ನ ಪರಂಪರೆಯ ಅಂಶಗಳನ್ನು ದಾಖಲಿಸಲು ಹಿಂದೆ ಸರಿಯುವುದಿಲ್ಲ. ತುಳುವಿನಲ್ಲಿ ಬರೆದ ಲೇಖಕರೂ ತಮ್ಮ ನೆಲ ಮೂಲದ ಸತ್ಯಗಳನ್ನು ಅರಿಯುತ್ತಲೇ ಪರಂಪರೆಯ ಬಗೆಗಿನ ಗ್ರಹಿಕೆ ಒಳನೋಟಗಳನ್ನು ತಮ್ಮ ಬರಹಗಳಲ್ಲಿ ನಡೆಸಿದ್ದಾರೆ. ತಮ್ಮ ಪರಂಪರೆಯ ಬಗೆಗಿನ ಅಭಿಮಾನ ಪ್ರೀತಿಗಳಿಗಿಂತಲೂ ತಮ್ಮ ಸುತ್ತ ಇರುವುದನ್ನು ತಿಳಿಯುವುದು ಮತ್ತು ವರ್ತಮಾನವನ್ನು ಹೆಚ್ಚು ಸಹ್ಯವಾಗಿಸಿಕೊಳ್ಳುವುದು ಅವರಿಗೆ ಪ್ರಮುಖವಾಗುತ್ತದೆ. ಆಗಿ ಹೋದ ಬದುಕಿನ ವಿವರಣೆಗಳೊಂದಿಗೆ ಅಲ್ಲಿರುವ ಮೌಲ್ಯಗಳು, ವಿಚಾರಗಳೂ ಮೌಲ್ವಿಕತೆಯನ್ನು ಅರಿಯಲು ಪರಂಪರೆಯ ಮರುಕಳಿಕೆ ನಿರಂತರವಾಗಿರುತ್ತದೆ. ಕಳೆದು ಹೋದುದನ್ನು ಮತ್ತೆ ಮತ್ತೆ ನೆನಪಿಸುವುದರ ಜತೆಗೆ ಪರಂಪರೆಗೆ ಮುಖಾಮುಖಿಯಾಗುವುದರ ಮೂಲಕ ತಮ್ಮ ಅನನ್ಯತೆಯನ್ನು ಗುರುತಿಸುತ್ತಾರೆ. ಬದುಕಿನ ಕ್ರಮವನ್ನು ದಾಖಲುಗೊಳಿಸುವುದಷ್ಟೇ ಅವರ ಉದ್ದೇಶವಲ್ಲ. ಸಂದು ಹೋದ ಜೀವನಕ್ರಮವೊಂದರ ಬಗೆಗಿನ ಕುತೂಹಲದ ಅರಿವೂ ಮುಖ್ಯವಾಗುತ್ತದೆ. ಈ ತಿಳುವಳಿಕೆಯನ್ನು ಗ್ರಹಿಸಿದ ಕ್ರಮ ಮಾತ್ರ ಭಿನ್ನ ಭಿನ್ನ ಸ್ವರೂಪದ್ದಾಗಿರುತ್ತದೆ.

ಮಂದಾರ ಕೇಶವಭಟ್ಟರು "ಮಂದಾರ ರಾಮಾಯಣ"ದ ಕೃತಿ ಹೇಳಿದ ಕತೆ ರಾಮಾಯಣದ್ದಾದರೂ ಇಡಿಯ ಕಥಾ ಪರಿಸರವೇ ತುಳುನಾಡಿನದ್ದಾಗಿದೆ. ಕೃತಿ ಕರ್ತೃವಾದ ವಾಲ್ಮೀಕಿಯನ್ನೇ ಕವಿ "ಪುಂಚದ ಬಾಲೆ" ಎಂದು ಕರೆಯುತ್ತಾರೆ. ಅಲ್ಲದೆ ವಾಲ್ಮೀಕಿ ಮತ್ತವನ ಪತ್ನಿ ಕಮಲಕ್ಕ ತುಳುನಾಡಿನ ಕೃಷಿಕ ಕುಟುಂಬದ ಅದರಲ್ಲು ಮಲೆ ಕುಡಿಯ ಸಮುದಾಯದ ಒಬ್ಬ ಕುಡಿಯನನ್ನಾಗಿ ಚಿತ್ರಿಸುತ್ತಾರೆ. ಈಗಾಗಲೇ ಚರ್ಚಿಸಿರುವಂತೆ ಕೃಷಿಕನೊಬ್ಬನ ದಿನಚರಿಯಿಂದ ಕುಡಿಯನ ಕೆಲಸಗಳು ಮುಂದುವರಿಯುತ್ತದೆ. ಸಾಂಪ್ರದಾಯಿಕವಾದ ಹಳ್ಳಿ ಮನೆಯ ಪರಿಸರದಲ್ಲಿರುವ ಕುಡಿಯ ಕಾಡು ಮತ್ತು ಕಾಡಿನ ಸಹವಾಸದಿಂದ ಬದುಕನ್ನು ಕಟ್ಟಿಕೊಂಡವನು ಅವನ ಜೀವನಕ್ರಮದ ರೀತಿನೀತಿಗಳು ಕಾಡಿನ ಪರಿಸರದಲ್ಲಿ ವಾಸಿಸುವ ಮಲೆ ಕುಡಿಯನೊಬ್ಬನ ಸಾಮಾನ್ಯ ತುಳುವನ ಬದುಕಿನ ಕ್ರಮವೇ ಆಗಿದೆ.

"ಬಡಕಾಯಿ ಮೆಯ್ಪೊಂಜಿ ಊರು ಇತ್ತ್ಂಡವುಳು
ಕಂಡೊಡ್ದು ಕಾಡೆಚ್ಚ ಕುಡಿಯೆರೆನ ಪಡೆಯೆಚ್ಚ (ಮಂದಾರ ಕೇಶವ ಭಟ್ಟ; ೧೯೮೭; ಪು ೨)
(ಉತ್ತರದಲ್ಲಿ ಇರುವ ಊರಲ್ಲಿ ಗದ್ದೆಗಿಂತ ಕಾಡು ಹೆಚ್ಚು ಕುಡಿಯರ ಸಂಖ್ಯೆ ಹೆಚ್ಚು)

"ಕೋಡಿ ಜಗಲಿಡ್ ದುಂಬೆನಾನಿ ಕನದಿನ ಕಡ್ಯ
ಕಣಿತ್ ಕಂಕಣಿ ಪಾಡ್ದ್ ದಿಯಿನೆನ್ ದೆತ್ತೊಂದು
ತನ್ನೆ ತೋಡುಗು ಜತ್ತ್ ತೋಡಿ ಪಳ್ಲದ ಮುರ್ಕು
ಡೆರ್ಕಿ ನೀರ್‍ಡ್ ನೀಂದು ಕಜನೆಳೆನ್ ಕಡ್ಯನಂ
ಚಿಂಚಿ ಪಂದಾದ್ ಬರಿಕೊಂದಾದ್ ಮುರ್ಕಾದ್

ದಿಂಜಿ ಕಡ್ಯೊನು ಪುಗೆಲ್‌ಗೇರಾದ್ ಕೊಂದತ್‌ದ್

ಸೊಂಟ ಮುಟ್ಟೊಗು ಜಾದ್ ದೊಂಪದಿಂಜಿದಿ ಬಸಲೆ

ಗೊರ ಮಯ್ತೆ ಕುಡಕಣತೆ ಪದ್ದೆಕಳತಡೆ ಮಯ್ಪು –

ನಗ ಕಡ್ಯ ಬಾಯಿಗಂಗಯ್ಪತ್‌ದ್ ತಟ್ಟೆ ಬಿರೆ

ಲೆಳೆನ್ ಪಂದಾದ್ ತಲಿತ್‌ದ್ ಪೋದು ಕುಡ ಕಣತೆ" (ಅದೇ, ಪು ೩)(ಕೊನೆ ಟಿಪ್ಪಣಿ: ೧೭)

ತುಳುನಾಡಿನ ಹಳ್ಳಿಗ ಕೃಷಿಕನೊಬ್ಬನ ಮನೆಯ ದಿನನಿತ್ಯದ ಕಾಯಕವಿದು. ಈ ವಿವರಣೆಗಳು ಹಳ್ಳಿ ಮನೆಯ ಪರಿಸರದ ವಿವರಣೆಯನ್ನು ನೀಡುವುದರೊಂದಿಗೆ ಮನೆ ಮುಂದಿನ ಬಸಳೆ ಚಪ್ಪರ, ಹರಿವೆ ಕಳಗಳನ್ನು ಗಮನಿಸುತ್ತಲೇ ನೀರು ಸುರಿದು ಬೆಳೆಸುವ ಕಾಯಕವೂ ಮಹತ್ವದ್ದಾಗಿದೆ. ರೈತನೊಬ್ಬನ ಬದುಕಿನ ದಿನಚರಿಯೂ ಇದು ಆಗಿದೆ.

ಕೌಶಿಕ ರಾಮ–ಲಕ್ಷ್ಮಣರನ್ನು ತಾಟಕಿ ಸಂಹಾರಕ್ಕೆ ಕರೆದೊಯ್ದು, ಆಕೆಯನ್ನು ವಧಿಸಿ ಹಿಂದಿರುಗುವ ದಾರಿಯಲ್ಲಿ ಸಿಗುವ ಜನಸಾಮಾನ್ಯರು ತುಳುವರೇ ಆಗಿದ್ದರೇನೊ ಎನ್ನುವಂತಿದೆ. ದಾರಿಯುದ್ದಕ್ಕೂ ಪಾರಂಪರಿಕ ಕೃಷಿ ಚಟುವಟಿಕೆಯಲ್ಲಿ ತೊಡಗಿರುವ ಜನರ ವಿವರಣೆ ಲಭಿಸುತ್ತದೆ.

"ತರೆಕ್ ಮುಟ್ಟಲೆ ದೀದ್ ತುಂಡು ಕುಂಟುನು ಸೊಂಟೊ

ಗೊಯ್ತ್ ಕಟ್ಟ್‌ದ್ ಕಟ್ಟಿ ಕಟ್ಟೊಡೆರ್ಕಿನ ನೀರ್

ನವುಳವುಳು ಪಾಡಿ ಪಣೆಕಯ್ದಂಬೆಲೆಡ್ ಮಗಪು

ತೇಪು ಜನೊಕುಳು, ಮಣ್ಣೊರೆಂಕೊಂದು ಬೆನ್ನಿ ಬೆ

ನ್ನಿನ ಪಾಕದಕುಳರಾದಿನ ಬೆಜಕಿರೆನ್ ಕುರ್ಕಿ

ಲೆಡ್ ನಿಲ್ಕೆ ದಿಂಜಾದ್ ಕಣಪಿನಕುಳಂಚಿಡ್ದ್

ಕಂಜಿ ಕೆಯ್ಯುಕ್ಕೆಳೆನ್ ಮೇಪಾವು ಜೋಕುಳು– ಇಂಚ'

ಯೇರವಡೊಂಜೊಂಜಿ ಬೇಲೆಡತ್ತಂದೆ ಜಂ

ಬರ ದಾಂತಿನಕುಳುಜ್ಜಿ (ಅದೇ, ಪು ೪೯) (ಕೊನೆ ಟಿಪ್ಪಣಿ ೧೮)

ಕೃಷಿಕನೊಬ್ಬನ ಮನೆಯ ವಾಸ್ತವ ಸ್ಥಿತಿಯಿದು. ದುಡಿದು ಉಣ್ಣುವ ಜನರಿಗೆ ದುಡಿಮೆಯಿಲ್ಲದೆ ವಿರಾಮ, ಐಷಾರಾಮದ ಕಲ್ಪನೆ ಇಲ್ಲ. ಮಕ್ಕಳಾದಿಯಾಗಿ ಎಲ್ಲರೂ ದುಡಿಯುವವರೇ ತಮ್ಮಿಂದಾದಷ್ಟು ದುಡಿಮೆಯನ್ನು ಮಾಡುತ್ತ ದುಡಿದರೆ ಉಣ್ಣ ಬಹುದು ಎಂಬ ಮಾತಿನ ಪರಂಪರೆಗೆ ಮಾದರಿಯಾಗಿದ್ದವರಾಗಿದ್ದರು.

ಇಪ್ಪತ್ತೊಂದನೆಯ ಶತಮಾನಕ್ಕೆ ಕರಾವಳಿ ಸರಿಯುವ ಹೊತ್ತಲ್ಲಿ ತುಳುನಾಡಿನ ನಿನ್ನೆಗಳ ಬಗ್ಗೆ ಸಂವಹಿಸುತ್ತಲೇ ಬರೆದ ಕಾದಂಬರಿ ಜಾನಕಿ ಬ್ರಹ್ಮಾವರ ರವರ "ಯುಗ ಮಗ್‌ರ್ನಗ" ಶತಮಾನದ ಅಂತ್ಯದಲ್ಲಿ ಪ್ರಾದೇಶಿಕ ಭಾಷಾ ಲೇಖಕನೊಬ್ಬನಿಗೆ ಕಾಡುವ ಕೆಲವು ವಿಚಾರಗಳು ಮುಖ್ಯವಾಗುತ್ತದೆ. ವೈಿಕೆ ಕಂಪ್ಯೂಟರ್‌ನಲ್ಲಿ ಕಾಡುವ ಕ್ಲೀಷೆಯ ಪ್ರೋಗ್ರಾಮ್ಮಿಂಗ್ ಆದರೂ ಅದರ ಬಗೆಗಿನ ಕುತೂಹಲಕ್ಕಿಂತ ಹೆಚ್ಚು,

ತಮ್ಮ ನಾಡು ನುಡಿಯ ಬಗ್ಗೆ ಹುಟ್ಟಿಕೊಂಡ ಹೊಸ ಎಚ್ಚರವೂ ಇಲ್ಲಿದೆ. ಕಳೆದು ಹೋದ ಕಾಲಮಾನದ ಬದುಕಿನ ಮರು ನಿರೂಪಣೆಗಳು ಬಹಳ ಮುಖ್ಯವಾಗುತ್ತದೆ. ಕಾದಂಬರಿ ನಿರೂಪಣೆಯ ತಂತ್ರವಾಗಿ ನಿಂತು ಹೋದ ಗಡಿಯಾರವೊಂದನ್ನು ಶಾಲಾ ಶಿಕ್ಷಕಿ ಸರೋಜ, ನಿವೃತ್ತ ಶಿಕ್ಷಕ ಎಚ್ಚಣ್ಣಾಯೆರಲ್ಲಿ ರಿಪೇರಿಗೆ ತರುವಲ್ಲಿಂದ ಆರಂಭಗೊಳ್ಳುತ್ತದೆ. ಕರಾವಳಿಯಲ್ಲಿ ಕಾಲ ಸಾಗಿದಂತೆಲ್ಲ ಆಗುತ್ತಿರುವ ಬದಲಾವಣೆಗಳನ್ನು ಕುಟುಂಬವೊಂದರ ಹಿನ್ನೆಲೆಯಲ್ಲಿ ವ್ಯಕ್ತಿಯ ಪ್ರಜ್ಞೆಯ ಆಳದಲ್ಲಿ ನಿರೂಪಿಸುವ ಪ್ರಯತ್ನ ಸಾಗುತ್ತಿದೆ. ತನ್ನ ಪರಂಪರೆಗೆ ಮುಖಾಮುಖಿಯಾಗುವ ಲೇಖಕರಿಗೆ ನಾಡು ನುಡಿಯ ಬಗೆಗಿನ ಅಭಿಮಾನಕ್ಕಿಂತ ವಾಸ್ತವಿಕ ಪ್ರಜ್ಞೆಯ ತಿಳಿವೂ ಮುಖ್ಯವೆನಿಸುತ್ತದೆ. ತುಳುನಾಡಿನ ಬದುಕಿನ ಕ್ರಮವನ್ನು ಕಾದಂಬರಿಯ ವಸ್ತು ವಿಷಯಕ್ಕೆ ಪೂರಕವಾಗಿ ನಿರೂಪಿಸುತ್ತಾರೆ. "ತುಳುನಾಡ್‌ಡ್ ವರ್ಸಾದಿ ನೇಮ, ಕೋಲ, ಅಗೆಲ್, ಪಸರ್ನೆ ಬಂಡಿ, ಜಾಲಾಟ, ನಾಗಮಂಡಲ___.. ನಡತೊಂದು ಪಟ್ಟಪರಕೆ ಸಂದೊಂದುಂಡು. ನಾಲ್ ಕೋಡಿಡ್ ತಂಬಡ, ತೆಂಬರೆ, ದೋಲು, ದಕ್ಕೆ, ವಾದ್ಯ, ಬ್ಯಾಂಡ್ ಗರ್ನಾಲ್‌ದನೇ ಗದ್ದಲ. ಬೂತ ದೈವೊಲು ಬಯಂಕರ ಚುರ್ಕುಡು ಬಗ್ತೆರ್ ಲೆತ್ತಿನಲ್ಪ , ಲೆತ್ತಿನಪಗ ಒಸಾಯೊ ಆದ್ ಕುಟುಮೊನುಸರ್ಕೆಡ್, ಊರುನ ಮದಿಮಾಲೆಲೆಕ ಕಾತೊಂಬಿನ ಅಬಯ ಕೊರ್ಪ. ಬಗ್ತಿಡ್ ಕೆರ್ಪಿನ ಕುರಿ, ಕೋರಿ ಏಡ್‌ಲೆನ ನೆತ್ತೆರ್ದ ಓರ್ಳ ಪರಪ್ಪುಂಡು. ಅರೆ ಬೇಸೊಡೇ ಅಕ್ಕಸೊಡು ಮುಗಲ್ ಕಬಿದ್‌ಂಡ್ (ಜಾನಕಿ ಬ್ರಹ್ಮಾವರ ಎಂ, ೨೦೦೨, ಪು, ೯೬) (ಕೊನೆ ಟಿಪ್ಪಣಿ ೧೯) ತುಳುವರ ನಾಡು ಮತ್ತು ಆರಾಧನೆಯ ಪರಿಕಲ್ಪನೆಯಲ್ಲಿ ಸಾಗಿ ಬಂದ ಕ್ರಮವನ್ನು ಗುರುತಿಸಬಹುದು. ಪರಂಪರೆಯ ಕೆಲವು ಸೂಕ್ಷ್ಮಗಳನ್ನು ತಿಳಿಯಬೇಕಾದರೆ ಇಲ್ಲಿರುವ ಆರಾಧನೆ ನಂಬಿಕೆ, ಆಚರಣೆಗಳನ್ನು ನಿರೂಪಿಸುತ್ತಾರೆ. ದೈವಾರಾಧನೆಯು ಕೃಷಿ ಬದುಕಿನ ಒಂದು ಭಾಗವಾಗಿ ಕೃಷಿ ಕಾರ್ಯದ ವಿರಾಮದ ಹೊತ್ತಲ್ಲಿ ತಮ್ಮ ಅನನ್ಯತೆಯನ್ನು ಉಳಿಸಿಕೊಳ್ಳುವ ಮತ್ತು ಬದುಕಿನ ಕ್ರಮದ ಮೌಲ್ಯಗಳನ್ನು ಪ್ರಚುರ ಪಡಿಸುವ ಅಂಶಗಳಾಗಿ ಪ್ರಕಟಗೊಳ್ಳುತ್ತದೆ. ಭೂತರಾಧನೆಯ ಇತಿಹಾಸವನ್ನೇ ನಿರೂಪಿಸುವಂತಹ ಮಾತುಗಳು ಪ್ರಾಚೀನತೆಯನ್ನು ಅರಿತುಕೊಳ್ಳಬೇಕಾದ ಎಚ್ಚರದ ಬಗ್ಗೆ ಕಾಳಜಿ ತೋರುತ್ತವೆ. ಬದಲಾಗುತ್ತಿರುವ ಕಾಲ ಘಟ್ಟದಲ್ಲಿ ಕಾಲ ಸರಿದಂತೆಲ್ಲ ಇಲ್ಲವಾಗುವ ಬದುಕಿನ ಮೌಲ್ಯಗಳು ಮುಖಾಮುಖಿಗೊಳ್ಳುವ ಜೀವನ ಧರ್ಮದ ಬಗೆಗೆ ಪ್ರತಿಕ್ರಿಯಿಸುತ್ತವೆ.

"ಮಾಯೊನು ತೆರಿಯೊಂಬಿನೆಟ್ ಕಲ್ತ್‌ದಿನಕ್ಲೆಡ್ದ್ ಕಲ್ಪಂದಿನ ಬಯಬಕ್ತಿಲು ಆವೊಲಿ. ಒಂಜಿ ಪಣ್ಪೆ, ದೂಪ ದೀಪದ ಅದ್ದಯೊಡು ಪಂಡ್ ಪುಡಾಡುನು ಇಲ್ಲ್‌ದ್ ಮಂಟಮೆಡ್ ಕುಲ್ಲಾದಿನ ದೇವೆರೆಗ್, ಮಾಯೊದ ಬೂತ ಒಸಯೊ ಆವೊಡಾಂಡ ಕಟ್ಟ್‌ಕಟ್ಲೆ ತಪ್ಪೆರೆ ಬಲ್ಲಿ . ಪನಿಯಾರೊಗು ಬೂತ ಅಂಗ್ ಬುಡ್ಪುಜಿ. ಅರ ಕೊರುಂಡನೇ ಅಬಯ ಕೊರ್ಪಿನ ಇರೆಗ್ ಪೂಜೆಗೀಜೆದ ಕಸ್ಟ ದಾಯೆಗ್? ಮರತಡಿಟ್ ಬುಳೆತಿನ ಮುಲ್ಲು ಬಲ್ಲೆ ಅಂಚೆನೇ ಬುಲೆವಡ್... ಆಂಡ ನನೊಂಜಿ ಯೆತಾರ್ತ ಪಣ್ಪೆ. ಮರತಡಿತ ಲೆಕ್ಕಸಿರಿ ಜಾರಿ ಬಿಗುತವು. ಅಳಿಯಂತ್ರ ಆಂಡ ಯಾನ್ ಪಿಣಯೆ... ಈರ್ನ ಜಾಗೆಡ್ ನಾಗನಡೆಲಾ ಉಂಡು, ನಾಗಗ್ ನಡತೊಂಜಿಡ ಕಣ್ಣ್ ಕಾರ್‌ಗ್ ಕೇಡ್, ಯಾನ್ ಪಂಡ ಅಯಿಲೀಸ್‌ಡೇ ದೆಪ್ಪುವರ್. ಈರ್ನ ಅರ್ತಿಗಾರ್ ತಂತ್ರಿಲೆಡ ಕೇಣ್ಲೆ, ಆರೆನ ಪಾತೆರ ಆಂಡಲಾ ಈರ್ನ ಕೆಬಿಕ್ ನಾಟಡ್" (ಅದೇ, ಪು.೭೯) (ಕೊನೆ ಟಿಪ್ಪಣಿ :

೨೦) ಕೃಷಿ ಬದುಕಿನ ಭಾಗವಾಗಿ ಬೆಳೆದ ಆರಾಧನೆಗಳು ಪರಂಪರೆಯ ಸೂಕ್ಷ್ಮಗಳನ್ನು ಹೇಳುವ ಮೂಲಕ ಜೀವನ ಕ್ರಮದ ರೀತಿಗಳು ಮತ್ತು ಪ್ರಕೃತಿಗೆ ಹತ್ತಿರವಾಗಿದ್ದ ಬದುಕಿನ ಮೌಲ್ಯಗಳೂ ಪ್ರಮುಖವೆನಿಸುತ್ತದೆ. ಕಳೆದು ಹೋದ ಕಾಲದ ಬದುಕಿನ ಕನವರಿಕೆ ಕೇವಲ ಹಳಹಳಿಕೆಯ ಉಳಿಸಬೇಕಾದ ಮೌಲ್ಯಗಳ ಬಗೆಗೆ ಒತ್ತಾಸೆ ನೀಡುತ್ತವೆ. ಚಾರಿತ್ರಿಕವಾಗಿ ಕಾಲ ಘಟಿಸಿ ಹೋದರೂ ವಸ್ತು ಸ್ಥಿತಿಯ ಗ್ರಹಿಕೆ ಮತ್ತು ನಿರೂಪಣೆಗೆ ಇದು ಮುಖ್ಯವೆನಿಸುತ್ತದೆ.

ಕೃಷಿ ಜಗತ್ತಿನ ಪಾಳೆಗಾರಿಕೆ ವ್ಯವಸ್ಥೆಯು ಕೃಷಿ ವಿಸ್ತರಣೆಗೆ ಕಾರಣವಾದಂತೆ ಮನುಷ್ಯರ ಮಾನವೀಯ ಸಂಬಂಧಗಳ ನಾಶಕ್ಕೂ ಕಾರಣವಾಗಿದೆ. ದುಡಿಸುವ ವರ್ಗ ಮತ್ತು ದುಡಿಯುವ ವರ್ಗಗಳ ನಡುವೆ ಇದ್ದ ಸಂಬಂಧಗಳಿಗಿಂತಲು ಹೆಚ್ಚಾಗಿ ಸಂಪತ್ತಿನ ಶೇಖರಣೆ ಏಕ ಪಕ್ಷೀಯವಾಗಿ ಮುಂದುವರಿಯಲು ಕಾರಣವಾಯಿತು.ಭೂಮಿಯ ಒಡೆತನವನ್ನು ಹೊಂದಿ ಪಾಳೇಗಾರರಾದವರು ದಿನದಿಂದ ದಿನಕ್ಕೆ ಭೂಮಿ ಮತ್ತು ಫಸಲನ್ನು ಸಂಗ್ರಹಿಸುತ್ತಾ ಸಂಪತ್ತು, ಅಧಿಕಾರಗಳನ್ನು ಹೆಚ್ಚಿಸಿಕೊಂಡರು. ಅಂತಹವರೇ ಪಟೇಲರೋ, ಶಾನುಭೋಗರೋ ಆಗಿ ಭೂಮಿಯ ಒಡೆತನ, ಲೆಕ್ಕಾಚಾರ ಧನ ಸಂಗ್ರಹದಂತಹ ಕೆಲಸ ನಿರಂತರವಾಗಿ ಸಾಗುತ್ತಿತ್ತು. ಕಳೆದುಕೊಂಡದ್ದನ್ನು ಮರಳಿ ಪಡೆಯಲಾಗದೆ ಹೋದಾಗ ನೂರು ದಾರಿಗಳ ಮೂಲಕ ಸಂಘರ್ಷಗಳೂ ನಡೆದಿವೆ. ಸಾಮರ್ಥ್ಯ ಇಲ್ಲದಿದ್ದಾಗ ಸಂವಾದಗಳೂ ನಡೆದಿವೆ. ತೀರಾ ಅನಿವಾರ್ಯವೆನಿಸಿದ ಸಂದರ್ಭದಲ್ಲಿ ಪರಂಪರೆಯ ಆರ್ಥಿಕ ಅನುಕೂಲಗಳು ಇಲ್ಲದಿದ್ದರೂ ಬಂದದ್ದು ಬರಲಿ ಎಂಬ ಧೋರಣೆಯಿಂದ ಬಾಳಿನ ಕ್ರಮಗಳಲ್ಲಿ ಇದ್ದವು. ಎಚ್ಚಣ್ಣಯರು ಪಟ್ಲೇರ್ ಮನೆಯವರಾದರೂ ಅವರ ನಡವಳಿಕೆಗಳ ಹಿರಿತನ ವ್ಯಕ್ತವಾಗುವುದು ಇಲ್ಲಿ. “ಪಟ್ಲೇರಿಲ್ಲ್‌ಲಾ ಅಜ್ಜೆರ್ನ ಕಾಲೊಡು ಸಂಪೊತ್ತುದ ದಿಂಜಿಗೆನೇ. ಬರ್ಪಿನ ಉಟ್ಪೋಲಿಗ್ ಲೆಕ್ಕನೇ ಇಜ್ಜಿ. ಅಮ್ಮೆರ್ನ ಕಾಲೊಡು ಅವು ಕಮ್ಮಿ ಆಂಡಲಾ ತೆರಿದಿಜಿ. ಆರ್ ತೀರ್ದ್ ಪೊಯಿ ಬೊಕ್ಕ, ಅಪ್ಪೆಗೆ ಕಣ್ಣ್ ತೋಜಂದೆ ಮೂಲೆ ಸೇರಿ ಬೊಕ್ಕ, ಒಕ್ಕಲ್‌ದಕುಲು ಕೊರಿನೆನ್ ಕಯ್ಕೊಂಬಿನಿ. ಪೋಡಿಗೆ ಕಟ್ಟಾದ್ ದೆತೊಂಬಿನ ಹಿಕ್ಮತ್, ಪುಲ್ಲಿಡ ಇಜ್ಜಾಂಡ್, ಬಾಯಿಡ್ ಪಂಡಿನೆಕ್ ಸೈ ಕುಟ್ಟುನತ್ತಾಂದೆ ನಿಜೊನು ಅಜಪೆರೆ ಪೋವಯೆರ್. ಅಂಚ ಒಕ್ಕೆಲ್‌ದಕ್ಲೆನ ಬಾಯಿಡ್ ಏಪೊಲಾ ನೇಜಿಗ್ ಸೀಕ್ ಧಾನ್ಯೋಗು ಕುತ್ತ. ಎಲಿಕ್ಲೆನ ಬಾದೆ, ಮಂಗೆರ್ಲೆನ ಉಪದ್ರ ಇಂಚಿತ್ತಿನನೆ ...” (ಅದೇ, ಪು.೪೨) (ಕೊನೆ ಟಿಪ್ಪಣಿ ೨೧) ಪರಂಪರೆಯನ್ನು ಮರು ನೆನಪಿಸಿಕೊಳ್ಳಲು ಇದೂ ಒಂದು ಕಾರಣವಾಗಿದೆ. ಇರುವಾಗ ತಿಳಿಯದೆ ಇದ್ದ ಮಹತ್ವ ನಂತರ ತಿಳಿಯಿತು. ದುಡಿಯುವ ವರ್ಗದ ದುಡಿಮೆಯ ಅರಿವಿಗಿಂತಲೂ ಅವರ ನೋವು, ಆಯಾಸಗಳು ಪರಿಚಿತವಾಗುವುದರೊಂದಿಗೆ ಒಳಕುದಿಗಳೂ ಮುಖ್ಯವಾಗುತ್ತದೆ.

ಹಿಂದಿನಿಂದ ನಡೆದು ಬಂದ ಆಚಾರ ಸಂಪ್ರದಾಯ ಕೃಷಿ ಪರಂಪರೆಯ ಭಾಗವಾಗಿಯೂ ಮುಂದುವರೆದಿದೆ. ಫಲವಂತಿಕೆ ಮತ್ತು ಬಂಧುತ್ವವು ಸಾಂಪ್ರದಾಯಿಕ ಬದುಕಿನ ಭಾಗವೇ ಆಗಿತ್ತು. ಭೂಮಿಯ ಒಡೆತನದ ಅಧಿಕಾರವೂ ಇವರಿಗೆ ಮುಖ್ಯವೆನಿಸಿತು. ಹಲವು ಸ್ಥಿತ್ಯಂತರಗಳು ಕೃಷಿ ಜಗತ್ತಿನಲ್ಲಿ ನಡೆದು ಭೂಮಿಯು ಪರಭಾರೆಯಾದವು ಅದನ್ನು ಸ್ವೀಕರಿಸಿದ ಮನಸ್ಥಿತಿಯೂ ಭಿನ್ನವಾದುದು. ದುಡಿದು ಉಣ್ಣುವ ಪರಂಪರೆಯಲ್ಲಿ ಹಸಿವು ಮುಖ್ಯವಾಗಿದ್ದರೆ ದುಡಿಸಿಕೊಳ್ಳುವ ಪರಂಪರೆಯಲ್ಲಿ ಸಂಪತ್ತಿನ ಸಂಗ್ರಹವೇ

ಮುಖ್ಯವಾಗಿತ್ತು. "ಈ ಕಸ್ಪ ನಸ್ಪದ ಸೊಲಕೊಲು ವರ್ಸೊಡ್ದು ಒರ್ಸ, ಒರ್ಲ ಪೊದು ಇರ್ಲನೇ... ಒಟ್ರಾಸಿಡ್. ಪಟ್ಲೆರಿಲ್ಲ್ ಉಳತ್ತುಲಯಿಡ್ ಬಚ್ಚೆಂಡ್, ಆಂಡ ಊರುಡು, ಪಟ್ಲೇರೆ ಪುಲ್ಲಿ ಎಡ್ಡೆ ನರಮಾನಿ ಪಣ್ಪಿನ ಪುಗರ್ತೆ ಪರಡ್‌ಂಡ್' (ಅದೇ, ಪು. ೪೨) (ಕೊನೆ ಟಿಪ್ಪಣಿ ೨೨) ಪರಂಪರೆಯ ಬಗೆಗಿನ ಒಲವನ್ನು ನಿರೂಪಿಸುತ್ತಲೇ ಬದಲಾಗುತ್ತಿರುವ ಕಾಲಘಟ್ಟದಲ್ಲಿ ಆದ ಸ್ಥಿತ್ಯಂತರಗಳು ಕಳೆದ ದಿನಗಳ ಮಹತ್ವವನ್ನು ಕೃಷಿ ಜಗತ್ತಿನ ಮಾನ್ಯತೆಯನ್ನು ನಿರೂಪಿಸುತ್ತದೆ. ಹಿಂದೆ ಇದ್ದ ಪಾಳೇಗಾರಿಕೆ ಪರಂಪರೆ ಹಾಗೆಯೇ ಉಳಿಯಬೇಕೆಂಬ ಇರಾದೆ ಇಲ್ಲ. ಪರಂಪರೆಯನ್ನು ಮರುಕಳಿಸುವ ಮೂಲಕ ಅಲ್ಲಿರುವ ಒಳಿತು– ಕೆಡುಕು ಎರಡನ್ನು ಅರಿಯುವ ಪರಾಮರ್ಶಿಸುವ ಚಿಂತನೆಗಳು ಇಲ್ಲಿವೆ.

ಕೃಷಿ ಬದುಕು ಬೆಳೆಯನ್ನು ಸಂಪತ್ತಾಗಿ ಪರಿಭಾವಿಸಿ ಅದನ್ನು ಒಳಗೊಳ್ಳುವ ಮನೋಭಾವವನ್ನು ಹೊಂದಿದೆ. ಕರಾವಳಿಯಲ್ಲಿ ಬಂದ ಮೊದಲ ಬೆಳೆಯನ್ನು ಸ್ವಾಗತಿಸಲು 'ಪೊಲಿ' ಕರೆಯುತ್ತಾರೆ. 'ಪೊಲಿ' ಎಂದರೆ ಒಂದರ್ಥದಲ್ಲಿ ಹೆಚ್ಚುವುದು ದುಪ್ಪಟ್ಟಾಗುವುದು ಎನ್ನುವ ಅರ್ಥವಿದೆ. "ಮಿತ್ತಬೈಲ್ ಯಮುನಕ್ಕೆ' ಕಾದಂಬರಿಯಲ್ಲಿ ಆನಂದ ಕೃಷ್ಣ ಕಾವ್ಯನಾಮದಿಂದ ಬರೆದ ಡಿ.ಕೆ. ಚೌಟರು ಪೊಲಿಯ ಹಾಡಿನೊಂದಿಗೆ ಕಾದಂಬರಿಯನ್ನು ಆರಂಭಿಸುತ್ತಾರೆ. ಎಲ್ಲವೂ ಹೆಚ್ಚಬೇಕು ಎಂಬ ಆಶಯದ ಪರಂಪರೆ ಇದು. 'ಪುದ್ದಾರ್ ದೆಚ್ಚಿದ ನೇಮ' ದಿಂದ  ಕಾದಂಬರಿ ಅರಂಭಗೊಳ್ಳುತ್ತದೆ. ಕೃತಿಯ ಉದ್ದಕ್ಕೂ ತುಳುನಾಡಿನ ಪರಂಪರೆಯ ಚಿತ್ರಣಗಳು ಹೇರಳವಾಗಿ ಸಿಗುತ್ತದೆ. ಅತ್ಯಂತ ಶ್ರೀಮಂತ ಚರಿತ್ರೆಯಿಂದ ಕೂಡಿದ್ದು, ಕೃಷಿ ಬದುಕಿನೊಂದಿಗೆ ತಳುಕು ಹಾಕಿಕೊಂಡಿದೆ. 'ಪುದ್ದಾರ್ ದೆಚ್ಚಿ' ಎನ್ನುವುದೇ ಹೊಸ ಬೆಳೆಯನ್ನು  ಸ್ವಾಗತಿಸಿ ಮನೆತುಂಬಿಸಿ ಮಾಡುವ  ದೈವದ ಸೇವೆಯೇ ಆಗಿದೆ. ಆರಾಧನಾ ಪರಂಪರೆಯಲ್ಲಿ ಕೃಷಿ ಬದುಕಿನ ಆವರ್ತನ ಬೆಸೆದುಕೊಂಡಿದೆ. ಹೊಸ ವರ್ಷವು ಆರಂಭಗೊಳ್ಳುವುದೇ 'ಬಿಸು' ಹಬ್ಬದಿಂದ. ಯುಗಾದಿಯನ್ನು 'ಬಿಸು'ವಾಗಿ ಪರಿಭಾವಿಸುತ್ತ ಕೃಷಿ ಬದುಕಿನ  ತಾತ್ವಿಕತೆಯನ್ನೇ ಬಿಸು ಕಣಿ ನಿರೂಪಿಸುತ್ತದೆ. ಕೇವಲ ಕಾಲದ ಚಲನೆ ಮಾತ್ರವಲ್ಲ ಬಂದ ಬೆಳೆಯ ಸ್ವಾಗತದೊಂದಿಗೆ ಮುಂದಿನ ವರ್ಷ ವನ್ನು ಒಳಿತಿನೊಂದಿಗೆ ನಿರೀಕ್ಷಿಸಲಾಗುತ್ತದೆ. ಕೃಷಿಯ ಎಲ್ಲ ಚಟುವಟಿಕೆಗಳು ಇಲ್ಲಿಂದಲೇ ಆರಂಭಗೊಳ್ಳುತ್ತದೆ. "ಜೋಕುಲು ಬಿನ್ನೆರ್ ಮಾತ ಬೇಕ ಬೇಕ ಮೀದ್ ಚಾವಡಿದ ಪಿದಾಯಿ ಪಾಡಿ ದೊಂಪೊಡು ತಯಾರಾಯೆರ್. ಗುತ್ತಿನಾರ್ ಕಂಡದಲ್ತ್ ಬತ್ತ್‌ದ್ ಗುಂಡದ ಮಂಚವೊಡಿತ್ತಿ ದೈವದ ಮುಗ ಮಣಿ ಕಡ್ತಲೆಗ್ ಕೇಪುಳ  ಪಿಂಗಾರದ ಸಿಂಗಾರ  ಮಂತ್‌ದ್ ಗಂಧದ ದೂಪ ಕೊರ್ಯೆರ್. ಅಲ್ತ್  ಬತ್ತ್‌ದ್ ಚಾವಡಿಡ್ ಕಣಿ ದೀಯೆರೆ ತಯಾರಾನಗ, ಬಿಸುತ್ತ  ಬೋಣಿಗ್  ರಡ್ಡ್ ಸಾಲ್ ದೆಪ್ಯೆರೆ ಪೊಯಿನ ಸಿಂಗಾರ ಮಂತಿ  ಬೋರ್ಲು ಬತ್ತ.  ಎಲ್ಯ  ತಮ್ಮಲೆ ಮುಂಡಾಸ್ ಕಟ್ಟ್‌ದ್ ಬತ್ತ್‌ನಾರ್ ಬೊರ್ಲೆಗ್ ಪಂರ್ದ್ ಬಜಿಲ್ ಮೊರೆತ್ ಬಾರ್ನೆನ್ ಜಾಲ್ ಡ್ ಕೊರ್ಯೆರ್. ಚಾವಡಿಡ್ ಕಣಿ ತಯಾರಾಂಡ್. (ಆನಂದ ಕೃಷ್ಣ ;೨೦೦೫;  ಪು ೭೦)(ಕೊನೆ ಟಿಪ್ಪಣಿ ೨೩) ಬಹಳ ವಿವರಣಾತ್ಮಕವಾಗಿ ಬಿಸು ಕಣಿಯ ಆಚರಣೆಯನ್ನು  ವಿವರಿಸುತ್ತಾರೆ. "ಜಾಲ್‌ದ ಬೂತದ ಕೊಟ್ಯದ ಎದುರು ಕಾಯಿ ಕಜಿಪುಲೆನ್ ದೀದ್ ಬಂಗಾರ್ದ ಪಣವುದ ಕರಜನ ದೀಯೆರ್. ಚೆಂಬುಡು ನೀರ್  ಆ ನೀರ್‌ದ ಚೆಂಬುದ ಮಿತ್ತೊಂಜಿ ಪೊಸ ಕುಂಟು, ಕೊಡಿ ಇರೆಟ್ ಒರ್ಲ ಬೊಳಂತೆ ಅರಿ, ಬರಿಟ್ ತಾರಾಯಿ ಬಜ್ಜೆಯಿ

ಸುತ್ತ ಕಮ್ಮೆನದ ಮಲ್ಲಿಗೆದ ಮಾಲೆ ದೀದ್ ಒಂಜಿ ಕಲಶ ಕನ್ನಡಿ ದೀದ್ ಗುತ್ತಿನಾರ್ ಕಣಿಕ್ ಅಡ್ಡ ಬೂರ್ಯೆರ್. ಆ ಪೊಸ ದಿನತ್ತಾನಿ ಇಲ್ಲದ ಧನ ಧಾನ್ಯೊದ ಸಂಪೊತ್ತುನು ಪೂಜೆಮನ್ಪವನವೇ ಬಿಸುತ್ತ ಕಣಿತ ಪೂಜೆ. ಒಕ್ಕೆಲ್ದಕ್ಲೆಗ್ಲ ಧನಿಕುಲೆ ಇಲ್ಲದ ಕಣಿತ್ತ ಸಂಪತ್ತೊ ಸೌಭಾಗ್ಯೊಗು ಅಡ್ಡ ಬೂರ್ದು ಅಕ್ಲೆನ ಭಾಗ್ಯ ಎಚ್ಚಿಗೆ ಆವಡಂದ್ ಕೈ ಮುಗೀದ್ ಅಡ್ಡ ಬೂರುನವೇ ಸೌಭಾಗ್ಯ!!!

ಇಲ್ಲದ ಎಲ್ಯಾಕ್ಲು ಮಾತೆರ್ಲ ಬೂತದ ಗುಂಡೊಗು ಕೈ ಮುಗಿದ್ ಚಾವಡಿಗೆ ಬತ್ತ್‌ದ್ ಗುತ್ತಿನಾರ್ ಕಾರ್ ಪತ್ಯೆರ್. ಗುತ್ತಿನಾರ್ ಮಾತೆರೆಗ್ಲ ದಿಂಜ ವರ್ಸ ಬದ್‌ಕ್‌ದ್ ಸುಕೊಟ್ಟು ಬಾಳೇಂದ್ ಆಶೀರ್ವಾದ ಕೊರ್ಯೆರ್. ಒಟ್ಟಿಗೆನೇ ಮಲ್ಲಾಕ್ಲೆಗ್ ಒಂಜಿ ವರಾಣೆ ಜೋಕುಲೆಗ್ ಅರ್ಧ ವರಾಣೆ ಒಕ್ಕೆಲ್ದಕ್ಲೆಗ್ ಒಂಜೊಂಜಿ ಬೊಳ್ಳಿದ ರೂಪಾಯಿ ಕೊರ್ದು ಕಡಪುಡಿಯೆರ್.

ಒಕ್ಕೆಲ್ದಕ್ಲು ದೊಂಪೊಡು ಬುಳೆ ಕಾಣಿಕೆ ದೀದ್ ಅಕ್ಲೆನ ಸಂಸಾರ ಸಮೇತ ಮಲರಾಯಗ್ ಅಡ್ಡ ಬೂರ್ದು ಕಣಿಕ್ ಕೈ ಮುಗಿದ್ ಗುತ್ತಿನಾರೆನ ಕಾರ್ ಪತ್ಯೆರ್. ಗುತ್ತಿನಾರ್ ಅಕ್ಲೆನ ಸುಖ ದುಃಖ ವಿಚಾರ್ತಿದ್ ಇಲ್ಲದ ಕೊಟ್ಟಾರಿನ ಕೈತಡೆ ಕಡಪುಡ್ಯೆರ್. ಗೇಣಿಡ್ ಕಂಡ್ ತಪ್ಪಾವುನಕ್ಲೆಗ್ ಒಕ್ಕೆಲ್ ಲಕ್ಕಾವುನ, ಬಂಜದಕ್ಲೆಗ್ ಗೇಣಿ ಮಾಪಿ ಮನ್ಪುನ ಮಾತ ಮುಗಿತ್‌ದ್ ಗುತ್ತಿನರ್ ಚಾವಡಿಡ್ದ್ ದೊಂಪೊಗು ಬತ್ತೆರ್. ದೊಂಪೊಡು ರಾಸಿ ಬೂರ್‌ದ್‌ನ ಬುಳೆ ಕಾಣಿಕೆಲೆನ್ ತೂದು ಆನಿ ಬತ್ತಿ ಕಟ್ಟದ ಪೂಂಜೆರ್ಲೆನ ಮುಳ್ಳೆ ಈಸ್‌ದ್ ಒರ್ಯೊರ್ಯೊನೇ ಪಾತೆರ್ಪಾದ್ ಅಕ್ಲೆನ್ ಉನಸ್‌ಗ್ ಲಕ್ಕಾಯೆರ್.(ಅದೇ, ಪುಟ ;೭೦-೭೧) (ಕೊನೆ ಟಿಪ್ಪಣಿ ೨೪)

ಅರಾಧನೆಯ ಸೂಕ್ಷ್ಮ ಎಳೆಗಳನ್ನು ಕಟ್ಟಿ ಕೊಡುವುದರ ಮೂಲಕ ಕಳೆದು ಹೋದ ಕಾಲದ ಮೌಲ್ಯವೂ ಪ್ರಮುಖವೆನಿಸುತ್ತದೆ. ಪರಂಪರೆಯ ಮರು ಕಳಿಕೆಯಲ್ಲಿ ತನ್ನ ಇರವನ್ನು ಅರಿಯುವ ವಾಸ್ತವದ ಎಚ್ಚರವೂ ಇರುತ್ತದೆ. ಸಮುದಾಯದ ಬದುಕಿನ ಕ್ರಮ ಮತ್ತು ಕೃಷಿ ಜಗತ್ತಿನ ಒಟ್ಟು ತಾತ್ವಿಕತೆಯನ್ನು ನಿರೂಪಿಸುತ್ತದೆ. ಕೃಷಿ ಕುಟುಂಬದಲ್ಲಿ ಆದ ಪಲ್ಲಟವು ಸಾಮಾಜಿಕ ವ್ಯವಸ್ಥೆಯ ವರ್ತುಲದೊಳಗೂ ದಾಖಲಾಗುತ್ತದೆ.

ಕರಾವಳಿ ಕೃಷಿ ಬದುಕಿನ ಪ್ರಮುಖ ಹಬ್ಬವಾಗಿ ಹೊಸ ವರ್ಷದ ಆಚರಣೆಯೊಂದಿಗೆ ಬೆಳೆಗಳ ಲೆಕ್ಕಾಚಾರ, ಭೂಮಿಯ ವ್ಯವಹಾರ ಎಲ್ಲವೂ ಅಲ್ಲಿಂದಲೇ ಆರಂಭವಾಗುತ್ತದೆ. ಗೇಣಿಯ ವ್ಯವಹಾರವನ್ನು ನಡೆಸುವ ಕೃಷಿ ಸಮುದಾಯ ಒಂದೆಡೆ ಶ್ರಮಿಕ ವರ್ಗದವರಾಗಿ, ಪಾಳೇಗಾರಿಕೆಯ ಒಂದು ಭಾಗವಾಗಿ ಇದ್ದರೂ ಭೂಮಿಯ ಲೆಕ್ಕಾಚಾರ ಮತ್ತು ಕೃಷಿಯನ್ನು ನಿರ್ವಹಣೆ ಮಾಡುವ ಸೂಕ್ಷ್ಮವನ್ನು ತಿಳಿಯಬಹುದು.

ಕೆಂಬುಡೆ, ಕುಂಬುಡ, ತೆಕ್ಕರೆ, ತೌತೆದ ಬುಳೆ ಕಾಣಿಕೆದ ರಾಸಿ ಒಂಜಿ ಕಡೆಟ್ ಅರಿ ಬಾರ್‌ದ ಮುಡಿತ್ತ ರಾಸಿ, ಓಲೆ ಬೆಲ್ಲದ ಕಟ್ಟುಲು, ಕಡ್ಯ ನಿಲಿಕೆ ಬತ್ತಿ ಗಾಣದೆಣ್ಣೆ, ಬಜಿಲ್‌ದ ಗೋಣಿ, ಕತ್ತಿ, ಕೊಟ್ಟುಲು, ಇಂಚ ಒಕ್ಕೆಲ್ದಕ್ಲೆನ ಕಾಣಿಕೆ ಆಯಾಯ ಕಸುಬುದ ಕಾಣಿಕೆಲಾ ಆದಿತ್ತ್‌ಂಡ್, ಸೇನೆರೆನ ಕೆಲಸ ನಡತೊಂದೇ ಇತ್ತ್‌ಂಡ್. ಪರ ಗೇಣಿದ ಲೆಕ್ಕ ಆದ್ ಪೊಸ ವರ್ಸದ ಗೇಣಿ ನಿಗಂಟಾದ್ ಒಕ್ಕೆಲ್ದಕ್ಲ್ ಪೋವೊಡಿತ್ತ್‌ಂಡ್. ಅವು ಮುಗಿದಾನಗ ಬೈಯಾಂಡ್ (ಅದೇ, ಪು, ೭೧) (ಕೊನೆ ಟಿಪ್ಪಣಿ ೨೫) ಕೃಷಿಯ ಲೆಕ್ಕಾಚಾರಗಳು ಗೇಣಿಯ ವ್ಯವಹಾರ, ಬೆಳೆಯುವ ಬೆಳೆಗಳು, ತರಕಾರಿ, ಕೃಷಿಗೆ ಪೂರಕವಾಗಿ ನಡೆಸುತ್ತಿದ್ದ ಆಯಗಾರಿಕೆಯ ವೃತ್ತಿಗಳು,

ಸಿರಿವಂತಿಕೆಯ ಆಯಾಮಗಳು ದುಡಿಯುವ ವರ್ಗದ ದೈನ್ಯ, ಉಳ್ಳವರ ದಾಷ್ಟ್ಯ ಕೃಷಿ ಪರಂಪರೆಯ ಭಾಗವೇ ಆಗಿದೆ.

ಕೃಷಿಯ ಕೂಲಿಯಾಳುಗಳಾಗಿ ದುಡಿಯುವವರಿಗೆ, ದುಡಿದರೂ ಹೊಟ್ಟೆ ತುಂಬಾ ಅನ್ನ ಲಭಿಸುವುದಿಲ್ಲ. ಭೂಮಿಯ ಒಡೆತನವಾಗಲೀ ಅದರಿಂದ ಲಭಿಸುವ ಸ್ಥಾನಮಾನ ಅಧಿಕಾರಗಳೂ ಇಲ್ಲ ಹಾಗಿದ್ದೂ ದುಡಿಮೆಯನ್ನು ನಿರಾಕರಿಸಿದ ಮಂದಿ ಇಲ್ಲ. ಕೃಷಿ ಲೋಕದಲ್ಲಿ ತಾವು ದಾಖಲಾಗದೆ ಇದ್ದರೂ ಸ್ಥಾನಮಾನಗಳು ಲಭಿಸದೆ ಹೋದರು ದುಡಿಮೆ ತಪ್ಪಲಿಲ್ಲ. ಕರಾವಳಿಯಲ್ಲಿ ಪರಂಪರೆಯಿಂದ ಅವರವರು ಮಾಡುವ ವೃತ್ತಿಗೆ ಅನುಗುಣವಾಗಿ ಜಾತಿಗಳೂ ಜಾತಿ ಸೂಚಕ ಪದಗಳೂ ಚಾಲ್ತಿಯಲ್ಲಿದ್ದವು. ಸಾಂದರ್ಭಿಕವಾಗಿ ಬರುವ ಈ ವಿವರಣೆ ಅತ್ಯಂತ ಸುಕ್ಷ್ಮವಾಗಿ ಪಾರಂಪರಿಕ ಜಾತಿ ಸಮಾಜವನ್ನು ನಿರೂಪಿಸುತ್ತದೆ.

"ಮಂಜೇಸರದ ಜೈನ ಸೆಟಿನಕ್ಲ್, ಕೊಂಕಣಿಯೆಕ್ಲಾಯಿನ ಭಂಡಾರಿ ಮಠತ ಭಂಡಾರಿ, ಸೇನೆರ್ ಭಕ್ತೆರ ಮಠತ ಭಕ್ತೆರ್, ಮಣಿಯಾಣಿ ಸಮಾಜ, ಬೋವಿ ಸಮುದಾಯ, ಪೂಜರ್ಲು, ಬ್ಯಾರ್ಲೆನ ಮುಕ್ರಿ ಮೈಲಾರೆನಕ್ಲೆ, ಬೇರದ ಬ್ಯಾರ್ಲೆನ ಹಮ್ಜದಕ್ಲ್, ಬೆಳ್ಚಾಡೆರೆನ ಅಚ್ಚಮಮ್ಮರ್‌ನಕ್ಲ್ ಇಂಚ ಮಾತ ಸಮುದಾಯದ ಗುರಿಕಾರ್ರೆನಕ್ಲ್, ಬಾಕುಡೆರ್, ಮುಗೇರೆರೆ ಹಿರಿಯಾಕ್ಲ್, ನಲ್ಕೆದಕ್ಲ್, ಕೊರಗೆರ್, ದೊಂಬೆರ್, ಪಾಣಾರೆರ್, ಪನ್ಪಿ ದಲಿತ ಸಮಾಜದಕ್ಲೆ ಹಿರಿಯಾಕುಲು ಮಾತೆರ್ಲ ಮುಜಿಂಗಾವುಡು ಸೇರ್ದಿತ್ತೆರ್. ಪಾರ್ಥ ಸಾರಥಿ ದೇವಸ್ಥಾನದ ಕಾಂಡೆದ ಪೂಜೆ ಮನ್ಪಾದ್ ಗಂಧ ಪ್ರಸಾದ ಗೆತೊಂದು ರಾಮಂತರಸುಲು ಪಟ್ಟೊಡು ಕುದೊಂದು ಸಬೆ ಸುರುಪತ್ಯೆರ್ (ಅದೇ, ಪು ೧೨೫). (ಕೊನೆ ಟಿಪ್ಪಣಿ ೨೬)

ರಾಮಂತರಸರು ಪಟ್ಟದಲ್ಲಿ ಕುಳಿತಾಗ ಸಭೆಯಲ್ಲಿ ಇದ್ದ ಜಾತಿ ಸಮುದಾಯಗಳ ಹೆಸರನ್ನು ಹೇಳುತ್ತಾರೆ. ಇಲ್ಲಿ ಜಾತಿಯೊಂದಿಗೆ ವೃತ್ತಿಯೂ ಬೆಸೆದುಕೊಂಡಿದ್ದು ಅವರವರ ಕುಲಕಸುಬುಗಳು ಅಲ್ಲಿ ಗೋಚರಿಸುತ್ತದೆ. ಶ್ರೇಣೀಕೃತ ವ್ಯವಸ್ಥೆಯಲ್ಲಿ ಕೃಷಿ ಮತ್ತು ವ್ಯಾಪಾರ, ಕೃಷಿಯ ಕೂಲಿ ಕಾರ್ಮಿಕರೂ ಮುಖ್ಯವಾಗುತ್ತಾರೆ. ಭೂಮಿಯ ಒಡೆತನಕ್ಕನುಗುಣವಾಗಿ ರಾಜಕೀಯ ಸ್ಥಾನಮಾನಗಳೂ ಮುಖ್ಯವೆನಿಸುತ್ತದೆ.

ಕೃಷಿಯನ್ನು ಅನ್ವೇಷಣೆ ಮಾಡಿ ವಿಸ್ತರಣೆ ಮಾಡುವ ಹಂತದಲ್ಲಿ ದಲಿತರನ್ನು, ಬುಡಕಟ್ಟು ಸಮುದಾಯದ ಜನರೂ ಕೃಷಿಯಲ್ಲಿ ನುರಿತ ಜಾಣರಾಗಿ ಪಾಳೆಗಾರಿಕೆಯನ್ನು ಒಪ್ಪಿಕೊಂಡು ಕಾರ್ಯ ನಿರ್ವಹಿಸಿದ ಪರಂಪರೆ ಹಿಂದಿನಿಂದಲೂ ಇತ್ತು. ಮಿತ್ತ ಬೈಲಿನ ಪಾಳೆಗಾರಿಕೆಯನ್ನು ಒಪ್ಪಿಕೊಂಡು ಒಕ್ಕಲುಗಳಾಗಿದ್ದ ಕುಟುಂಬಗಳು ಶ್ರದ್ಧೆಯಿಂದ ಕಾರ್ಯ ನಿರ್ವಹಿಸಿದ ರೀತಿಯನ್ನು ಗಮನಿಸಬಹುದು. "ಈ ದೆಯ್ಯು ಮಿತ್ತಬೈಲ್‌ದ ಮೂಲದಕ್ಲೆನೆಟ್ ಬದ್‌ಕ್‌ದ್ ಒರಿನ ಪರ ತರೆಕುಲೆಡ್ ಒರಿ. ಪ್ರಾಯೊಡು ಯಮುನಕ್ಕೆಡ್ದ್ ಮಲ್ಲೆ ಆವೆ. ಮಾಂಕರಾಲೆಡ್ದ್ ಎಲ್ಯೆಗೆ. ದಿಕ್ಕೆರ್ಲೆಗ್ ಇತ್ತೆ ಆಯೆನೆ ಗುರಿಕಾರೆ. ಬೆನ್ನಿದ ಕೆಲಸದ ಪೂರಾ ಜವಾಬ್ದಾರಿ ದೆಯ್ಯುನ. ಆಯಡ ಕೇಣಂದೆ ಪಣಂದೆ ಬೆನ್ನಿದ ವಾ ಗುರಿಕಾರೆಂದ್ ಏರಾಂಡ್ಲ ಇತ್ತ್‌ಂಡ ಅವು ದೆಯ್ಯುಂದೇ ಪನೊಲಿ. ಕುಟುಂಬದಕ್ಲೆಗ್ ಆಯೆ ಕುಟುಂಬ ದಾಯೆ. ಪೊದ್ವೆರೆಗ್ ಪೊದ್ವೆ ಅಂಚ ಪಂಡ್‌ದ್ ದಡಿಕೆದ ಪೂರ ಮೂಲದಕ್ಲ್ ಮಿತ್ತಬೈಲ್‌ಗ್ ಕುಟುಂಬದಕ್ಲೆ. ಈ ಮೂಲದ ಮುಗೆರೆರೆ

ದಡಿಕ್ಕೆಲೆಗ್ಲ ಗುತ್ತುದಲೆಕನೆ ಗಡಿಪತ್ತಿ ಗುರಿಕಾರೆ ಆವೊಡು ತಮ್ಮಲೆ ತೈತಿ ಒಕ್ಕ ಕರಿಪತ್ತ್ ವರ್ಸೊಗು ದುಂಬು ಮಾಂಕರಾಲೆ ಅಪ್ಪಣೆ ಪಡೆವೊಂದು ದೆಯ್ಯು ಗುರಿಕಾರ್ಮೆ ಒಯಿಸೊಂದೆ.

ಕುದ್ಯ ಆದ್ ಬೆಂದ್‌ದ್ ಕಲ್ಲಾಯಿನ ಜುವ ಗಟ್ಟಿಮುಟ್ಟ್‌ದ ಒಯಿಕ್ಕ್‌ಲ ಜಾರಂದ್‌ನ ಧೈರ್ಯ ಮಾನ್ಯ ಕೆರ್ಯೆರೆಲಾ ಹೇಸಂದಿನ ಮಿತ್ತಬೈಲ್‌ದ ಮೂಲದಕ್ಲೆಗ್ ಆಯೆ ಗುರಿಕಾರೆ ಪಂಡ ತೆರ್ಯೊಡು ಆಯೆ ಎಂಚಿತ್ತಿನಾಯೆಂದ್. (ಅದೇ, ಪು. ೨೮) (ಕೊನೆ ಟಿಪ್ಪಣಿ ೨೭)

ಗಿಡ್ಡ ಅಗಿ ದುಡಿದು ಕಲ್ಲಾದ ದೇಹ ಗಟ್ಟಿ ಮುಟ್ಟಿನದು. ಯಾವುದಕ್ಕೂ ಹಿಂಜರಿಯದ ಧೈರ್ಯ ಕೊಲ್ಲಲೂ ಹೇಸದ ಮಿತ್ತ ಬೈಲಿನ ಮೂಲದವರಿಗೆ ಅವನು ಗುರಿಕಾರ ಎಂದರೆ ಅವನು ಎಂತವನು ಎಂದು ತಿಳಿಯಬಹುದು. ದಲಿತ ಸಮುದಾಯ ಉಳ್ಳವರ ಮನೆಯಂಗಳದಲ್ಲಿ ದುಡಿಯುತ್ತಲೇ ತಮ್ಮ ಅಸ್ತಿತ್ವವನ್ನು ಕಾಯ್ದುಕೊಂಡುದು ನಂಬಿಕೆಯ ಬಂಟರಾಗಿ ವಿಶ್ವಾಸಗಳಿಸಿಕೊಂಡಿದ್ದ ಈ ವರ್ಗ ಕೃಷಿ ಕಾರ್ಯ ಚಟುವಟಿಕೆಗಳನ್ನು ನಡೆಸುವಾಗಲೂ ಅದು ತಮ್ಮದೇ ಮನೆಯಂಗಳ ಎಂದು ಪರಿಭಾವಿಸಿದ್ದರು. ದುಡಿಮೆಗೆ ಪರ್ಯಾಯವಿಲ್ಲದ ಕಾಲವದು, ಹಸಿವು ಅನಿವಾರ್ಯವಾದಂತೆ ದುಡಿಮೆಯೂ ಅನಿವಾರ್ಯವಾಗಿತ್ತು. ಭೂಮಿ ತಮ್ಮದಲ್ಲವಾದರೂ ಅಲ್ಲಿಯ ಕೃಷಿ ಚಟುವಟಿಕೆ ತಮ್ಮದೇ ಎಂಬಂತೆ ಶ್ರದ್ಧೆ ನಿಷ್ಠೆಯ ದುಡಿಮೆ ಇತ್ತು. ಹೀಗೆ ದುಡಿಮೆ ಮಾಡುವುದಕ್ಕೂ ಕಾರಣವಿದೆ. ಧಣಿ ಒಕ್ಕಲಿನ ಸಂಬಂಧವು ಕೇವಲ ಒಡೆಯ ಆಳು ಸಂಬಂಧಗಳೇ ಆಗಿದ್ದರೂ ಅಲ್ಲಿ ಆತ್ಮೀಯತೆಯೂ ಇತ್ತು. ಸಂಬಂಧಗಳನ್ನು ನಿರ್ವಹಿಸುವ ಜಾಣ್ಮೆಯೂ ಬಹಳ ಮುಖ್ಯವಾಗಿತ್ತು. ಭೂಮಿಯ ಒಡೆಯರಾದ ಗುತ್ತಿನವರು ತಮ್ಮ ಒಕ್ಕಲು ಮಕ್ಕಳನ್ನು ನೋಡಿಕೊಂಡ ಕ್ರಮ ಏಕ ರೂಪವಲ್ಲವಾದರೂ ನಿಷ್ಠೆ–ಪ್ರಾಮಾಣಿಕತೆಯ ಬಾಂಧವ್ಯಗಳೂ ಮುಖ್ಯವಾಗಿದ್ದವು.

"ಮಿತ್ತಬೈಲ್‌ದ ಬೈಲ್ ಗುಡ್ಡೆದ ನಡುಟ್ಟು ಇತ್ತಿ ಬಟ್ಟಲ್‌ದಲೆಕತ್ತಿ ಒಳ್ಪಿಡ್ ಮುಗೆರೆರೆನ ದಡಿಕೆಲು, ಆ ಒಳ್ಪಿಡ್ ಪತ್ತ್ ಪದ್‌ರಾಡ್ ದಡಿಕೆಲು, ಆಯಿಟ್ ಅನ್ ಪೊಣ್ಣುಂದು ಒಂಜಿ ನಲ್ಪ ಮಲ್ಲಾಕ್‌ಲ್‌ಲ ಪತ್ತೈವ ಜೋಕುಲುಲಾ ಇತ್ತ. ಆತ್ ಜನತ ಬಂಜಿಗ್ ಕುಂಟುಗು, ಬದ್‌ಕ್‌ಗ್ ಗುತ್ತು ಆಧಾರ. ಗುತ್ತುಡತ್ತಂದೆ ಬೇತೆ ಇಲ್ಲಲ್ ಅಕ್ಲ್ ಗುತ್ತುದಕ್ಲೆನ ಒಪ್ಪಿಗೆದಾಂತೆ ಕೆಲಸೊಗು ಪೋಯೆರೆ ಬಲ್ಲಿ. ದಾದ ಇತ್ತ್‌ಂಡಲ ಗುತ್ತುದ ಒಪ್ಪಿಗೆಡ್ ಆವೊಡು. ಮಾತ ಬುಡ್ದು ಮದಿಮೆ ಮಾಂತ ಸನ ಗುತ್ತುದ ಒಪ್ಪಿಗೆಡ್ ಆವೊಡು. ಆ ಮದಿಮೆಡ್ದ್ ಬತ್ತ್‌ನ ಸಾವು ಮುಟ್ಟ ಲೇಸುಲು ಗುತ್ತು ದಕ್ಲೆನ ಖರ್ಚಿಡೇ ಆವೊಂದಿತ್ತ್‌ಂಡ್. ಮದಿಮೆ ಆದ್ ಏರ್ಲ ಬೇತೆ ಕುಲ್ಲುವೆಂದಾಂಡ ಆಯಗೊಂಜಿ ದಡಿಕೆ ಕಟ್ಟ್‌ದ್ ಒಂಜಿ ತಾರೆ, ಒಂಜಿ ಪೆಲ, ಒಂಜಿ ಕುಕ್ಕುದ, ಒಂಜಿ ಪುಳಿತ್ತ ಮರ ಬುಡುದು ಕೊರೊಡಾಯಿನವು ಗುತ್ತುದ ಹೊಣೆ. ಬತ್ತಿ ಪೊಣ್ಣಗ್‌ಲ ಗುತ್ತುಡೇ ಕೆಲಸ. ಒರ್ಲ ಬಾರ್‌ದ ಕೂಲಿ ಕೆಲವೆರೆಗಾಂಡ ಒರ್ಲ ಅರಿತ ಕೂಲಿ ಕೆಲವೆರೆಗ್. ಗುತ್ತುದ ಇಲ್ಲಲ್ ಏರಾಂಡಲಾ ಸೈತ್‌ಂಡ ಅಕ್ಲೆಗ್ಲ ಸೂತಕ, ದಡಿಕೆಡ್ ತೈತ್ತ್‌ಂಡ ಗುತ್ತುದಕ್ಲೆಗ್ ಸೂತಕ. ಸೂತಕೊಡು ದೈವ ದೇಬೆರೆ ಗುಡಿಕ್ ಪೋಯೆರೆ ಬಲ್ಲಿ. ದಡಿಕೆದಕ್ಲೆ ಗಡಿಪತ್ತ್‌ನಾರ್ ತೀರ್‌ಪೋಂಡ ಮೀದ್ ಉಂಡುದು ಮಧು ಮಾಸ ಬುಡ್ದು ಉಪ್ಪೊಡು. ದಡಿಕೆಡ್ ಏರ್ಲ ತೈತ್ತ್‌ಂಡ ಗುತ್ತುದಕ್ಲೆ ಪುಣ ದೆತ್ತ್‌ನೆಟ ಉಣಯೆರ್. ಅಂಚಾದೆ ಈ ಜೂವೊಗು ಜೂವ ಕೊರಿ ಮೂಲದಕ್ಲ್ ಮಿತ್ತಬೈಲ್‌ದಕ್ಲೆ ಕುಟುಂಬದಕ್ಲೆಲೆಕ. ದೆಯ್ಯು ಯಮುನಕ್ಕೆಗ್ ವಾ ತಮ್ಮಲೆಗ್‌ಲಾ ಕಮ್ಮಿದಾಂತೆ

ಬಲಗೈ ಬಂಟೆ ಆಚುನ್ ಎದುರು ಪಾಡೊನ್ನ ಧೈರ್ಯ ಗುತ್ತುಡು ಸನಾ ಏರೆಗ್ಲಾ ಇದ್ಯಾಂಡ್."(ಅದೇ, ಪು ೨೯). (ಕೊನೆ ಟಿಪ್ಪಣಿ ೨೮)

ಪರಂಪರೆಯ ಪಾಳೆಗಾರಿಕೆಯೇ ಆದರೂ ಈ ಸಂಬಂಧಗಳಲ್ಲಿ ಅಧಿಕಾರವೂ ಇತ್ತು. ಒಡನಾಟವೂ ಇತ್ತು. ಉಳ್ಳವರು ಮತ್ತು ಇಲ್ಲದವರ ಮಧ್ಯದ ಅಂತರ ಕಣ್ಣಿಗೆ ರಾಚುವಂತಿದ್ದರೂ ದುಡಿಮೆ ಬದುಕಿನ ಧರ್ಮವೇ ಆಗಿತ್ತು. ಕೃಷಿಯ ಕೂಲಿಯಾಳುಗಳಾಗಿದ್ದ ದಲಿತರು ಶ್ರಮ ವಹಿಸಿ ದುಡಿದಂತೆ ನಿಷ್ಠೆಯ ದುಡಿಮೆಗಾರರೂ ಆಗಿದ್ದರು. ಸಂಬಂಧಗಳ ಬಾಂಧವ್ಯವೂ ಅತ್ಯಂತ ಆಪ್ತತೆಯ ನೆಲೆಯಲ್ಲಿ ನಿರ್ವಹಿಸಿದುದಕ್ಕೆ ಮಿತ್ತ ಬೈಲ್ ಉದಾಹರಣೆಯಾದರೆ ಇದಕ್ಕಿಂತ ಭಿನ್ನವಾಗಿ ಕ್ರೌರ್ಯದ ಪರಮಾವಧಿಯ ಅಂಶಗಳೂ ಇದ್ದವು. ಸ್ವಂತಿಕೆ ಮತ್ತು ಪೂರ್ಣ ಸ್ವಾತಂತ್ರ್ಯ ಇಲ್ಲದಿದ್ದು, ಕೇವಲ ಹೊಟ್ಟೆ ಬಟ್ಟೆಯ ಚಿಂತೆಯಿಂದ ಪೂರ್ಣ ಪ್ರಮಾಣದಲ್ಲಿ ಮುಕ್ತಿ ದೊರಕುತ್ತಿತ್ತು ಎನ್ನಲಾಗದು. ಒಂದೆಡೆ ಆಸರೆ ಇನ್ನೊಂದೆಡೆ ನಿಗ್ರಹ ಈ ಎರಡು ವೈರುಧ್ಯಗಳನ್ನು ಇಲ್ಲಿ ಗುರುತಿಸಲು ಸಾಧ್ಯವಿದೆ.

ಹಾಗಾಗಿ ಮಿತ್ತಬೈಲಿನ ಕತೆ ಕೇವಲ ಒಂದು ಗುತ್ತಿನ ಕತೆಯಲ್ಲ. "ಮಿತ್ತ ಬೈಲ್ ಗುತ್ತುದ ಕತೆ ಮಾತ ಒಕ್ಕೆಲಾಕ್ಲೆ ಗುತ್ತುದ ಕತೆತ ಲೆಕ್ಕತ್ತ್‌ನವೆ. ಒಂಜತ್ತ್ ಒಂಜಿ ನಮುನೆಡ್ ಅವು ಮಾತ ಗುತ್ತುಲೆನೆ ಇತಿಹಾಸ ಪನ್ಪುಂಡು. ಜಾಗೆ ಬೇತೆ ಉಪ್ಪು ಕಾಲ ಬೇತೆ ಉಪ್ಪು, ಜನಮಾನಿ ದೈವ ದೇವೆರ್‌ನಕ್ಲ್ ಬೇತೆ ಉಪ್ಪು, ಆಂಡ ಕತೆ ವ್ಯತೆಕುಲ್ ಅವ್ವೆ, ಬೆನ್ನಿ ಬೆನ್ಪಾಟ ಪೆಟ್ಟ್ ಕುಟ್ಟು, ಕಂಬ್ಳದ ಎರ್ಲು, ಕಟ್ಟದ ಕೋರ್ಲು, ಮಾತ ಅವ್ವೇ. ಯಮುನಕ್ಕೆಗ್ ಅಜ್ಜಿ ಪಂಡಿ ಕತೆಕ್ಕುಲು, ಮಿತ್ತ ಬೈಲ್ ಗುತ್ತುದ ಆದಿ ಮೂಲದ ಕತೆಕುಲು ಕಣ್ಣ ದುಂಬು ಬತ್ತ್ ಪೋಂಡು. ಭೂಮಿನ್ ಒಕ್ಕುದು, ಗರ್ತ್‌ದ್ ನೀರ್ ಬುಡ್ಡು ಬಲಪ್ಪಾಯಿನ ಹಿರಿಯಾಕುಲೆನ ಕತೆಕುಲು, ಒಕ್ಕೆಲಾಕ್ಲೆನ, ಬಂಟೆರೆನ, ಬಾರಗೆರೆನ, ಇತಿಹಾಸ" (ಅದೇ, ಪು ೩೭), (ಕೊನೆ ಟಿಪ್ಪಣಿ ೨೯) ಕರಾವಳಿಯ ಕೃಷಿಕರು ಮತ್ತು ಶ್ರಮಿಕ ವರ್ಗ ಮಣ್ಣಿನಲ್ಲಿ ಹೊರಳಾಡುತ್ತಲೇ ಹೊಟ್ಟೆ ಬಟ್ಟೆಯ ಚಿಂತೆಯನ್ನು ನೀಗಿಸಿಕೊಂಡವರು. ಆಹಾರದ ಮೂಲವಾಗಿ ಕೃಷಿ ವಿಸ್ತರಿಸಿಕೊಳ್ಳುವುದರ ಜೊತೆಗೆ ಬದುಕಿಗೊಂದು ಅಸರೆ ಭದ್ರತೆಯನ್ನು ದಕ್ಕಿಸಿಕೊಳ್ಳಲು ಪ್ರಯತ್ನಿಸಿದರು.

ಪರಂಪರೆಯ ಕೃಷಿ ಕಾರ್ಯ ಚಟುವಟಿಕೆಗಳು ಶ್ರಮದ ವಿವರಣೆಯನ್ನು ನೀಡುವುದರೊಂದಿಗೆ ಬೆಳೆಯೊಂದನ್ನು ಬೆಳೆಯಬೇಕಾದರೆ ನಡೆಸುವ ಪೂರ್ವ ಸಿದ್ಧತೆಗಳೂ ಮುಖ್ಯವೆನಿಸುತ್ತದೆ. ಪಾರಂಪರಿಕ ಸಾಗುವಳಿಯ ಕ್ರಮದ ವಿವರಣೆಗಳೂ ಕಾದಂಬರಿಗಳಲ್ಲಿ ಲಭ್ಯವಿದೆ. ಪರಂಪರೆಯ ಬದುಕು ಮಾತ್ರವಲ್ಲ ಅವರ ಬವಣೆ, ಕೃಷಿಯ ತಂತ್ರಗಾರಿಕೆ, ನೀರಾವರಿಯ ಚಾಣಾಕ್ಷತೆಯ ನಿರ್ವಹಣೆಯೂ ಮುಖ್ಯ. ಕರಾವಳಿಯಲ್ಲಿ ವಿಸ್ತಾರವಾದ ಗದ್ದೆ ಬಯಲುಗಳಿವೆ 'ಪನೆ' ಹಾಕುವ ಕ್ರಮವಿತ್ತು. ಅದನ್ನು ಹೊಸದಾಗಿ ಅಳವಡಿಸಿದಾಗ ಜನರ ಕುತೂಹಲ ಮತ್ತು ಪತಿಕ್ರಿಯೆಯನ್ನು ವಿವರಿಸುವ ಅಂಶಗಳು ಮಿತ್ತ ಬೈಲ್ ಯಮುನಕ್ಕೆ ಕಾದಂಬರಿಯಲ್ಲಿವೆ. ಮಿತ್ತಬೈಲಿನ ಯುವಕನಾದ ಮಂಜಣಾಳ್ವ ಹಾಕುವ ಪನೆಯ ವಿವರಣೆ ಬಳಸುವ ಸಲಕರಣೆಗಳು ಮುಖ್ಯವೆನಿಸುತ್ತದೆ.

"ಕುಡಿಯೆರ್ಲುಲ, ಮುಗೆರೆರೆ ಜವಣೆರ್ಲ ಮುಟ್ಟು ಮರಕ್ಕುಲೆನ್ ಉಂತಾದ್ ಬೆರಿಮರ ಕುಲ್ಲಾಯೆರೆ ಮಂಜಣನ್ ಕಾತೊಂದಿತ್ತೆರ್. ಮಂಜಣೆ ಬತ್ತ್‌ದ್ ಕುಂಡಚ್ಚ್ ಮುದಲೆ ಕುಲ್ಲಾಯೆರೆ ಗುರ್ತ ಮಂತ್ ಕೊರ್ಯೆ. ಚಡಿ ಗೆಪ್ಪಾದ್ ಬೆರಿಮರತ್ತ ಕೊಡಿಟ್ಟ್ ಪುರಿಬಲ್ಲ್‌ಡ್ ಕುಂಡಚ್ಚನ್ ಕುಲ್ಲಾಯೆರ್. ಕುಂಡಚ್ಚಗ್ ಕೊಡಂಗೆನ್ ಕೋತೆರ್. ಮಿತ್ತ ಬೈಲ್‌ದ ದಿಕ್ಕೆರ್ಲು ಬೈತಬಲ್ಲ್‌ನ್ ನೆಯ್ಯೆರ್. ಬಾಕಿದಕ್ಲ್ ಬೆರಿಮರ ಏರ್ಸಾಯೆರ್. ಗುತ್ತಿನಾರೆನ್ ಕಾತೆರ್. ಗುತ್ತಿನಾರ್ ದೈವೊಗು ಬೊಂಡ ಕೊಡಪಾದ್ ದೀದ್ ಪೊರ್ತು ನೆತ್ತಿಗೆ ಬತ್ತ್, ಅಜ್ಜಿ ಕೊಣತಿ ತಾರಾಯಿನ್ ಮಂಜಣೆ ಪಣಿತ ಅಡ್ಡ ಮರಕ್ಕ್ ದುನ್ನೊಗುಂದ್ ಕಟ್ಟ್‌ದ್‌ನ ಕಲ್ಲ್‌ಗ್ ದರ್ತೆ. ಅಜಿ ಕೋಳಿತ್ರಿ ಕುತ್ತ್‌ದ್‌ನ ಕುಂಬ್ಡೊನು ಮಜಲೋಡಿದ ಮುಗೇರೆರೆ ಗುರಿಕಾರಡ ಕೊರ್ದು ದರ್ಪೆಯೆರೆ ಪಂಡೆರ್. ಕುಂಬ್ಡ ದರ್ತಿ ಬೊಕ್ಕ ಮಾತೆರ್ಲ ಕೂಡುದು ಬೆರಿಮರನ್ ಏರ್ಸಾಯೆರ್ ಮುದಲೆಡ್ ಕುಲ್ಲ್‌ನ ಬೆರಿಮರ ಕಬೆತ್ತ ಕೋಲುಡು ಮಿತ್ತ್ ತಿರ್ತ್ ಪೋಂಡು. ಕಡೆಟಿತ್ತಿ ಅಡ್ಡ ಮರೊಕ್ಕು ಬೈತ ಬಲ್ಲ್ ನೇಲ್ಪುಡಾಯೆರ್. ಮಂಜಣೆ ಬೆದ್‌ರ್‌ದ ಕರೆನ್ ಕೊಡಂಗೆಗ್ ಕಟ್ಟ್‌ದ್ ಕರೆಟ್ ಕೆಬಿನ್ ಕಟ್ಟ್‌ದ್ ತೊಟ್ಟೆದ ಮರಾಯಿನ್ ತಿರ್ಗನೆದ ಕೋಲುಡು ಕರೆತ ಕೆಬಿಕ್ ಕೋತೆ ಪಣೆ ತಯಾರಾದಾನಗ ಮುಟ್ಟು ಮರಟುಂತಿ ಅರುವತ್ತನ ಮುಂಡೊಗ್ಲ ಮರಯಿಗ್ಲ ದೈವದ ಗಂಧ ಪೂಜಿದ್ ಪನೆತ್ತ ಬರಿಟ್ ಉಂತ್‌ನ ಗುತ್ತಿನಾರ್ ಕಣ್ಣ್ ಮುಚಿದ್ ಮಲರಾಯನ್ ನೆನೆತೊಂಡೆರ್. ಅಂಚಿಡ್ದ್ ಬಲ್ಲ್‌ಡ್ ನೇಲುನ ಉಮೇದ್ ಜವಣೆರೆಗ್ ಮಾತೆರೆಗ್ಲ ಕಡೆಕ್ ಕಿನ್ಯನೆಲ ಕುಡಿಯೆರ್ಲುಲ ಪತ್ತ್ ಮರಯಿ ನೀರ್ ಮಗತ್‌ದ್ ತೋಜಾಗಂದ್ ಪನೆತ್ತ ಬಲ್ಲ್‌ನ್ ಪತೊಂಡೆರ್.

ಪಣೆತ್ತ ಬಲ್ಲ್‌ಡ್ ನೇಲುನಕ್‌ಲ್ ನೇಲ್‌ದ್ ಪನೆತ್ತ ಗುರಿಕ್ ಲಾಗಿನಗ ಮಿತ್ತ್ ಬತ್ತಿ ಮರಯಿದ ನೀರ್ ಮಿತ್ತ್ ಬನ್ನಗ ದಾದಂದ್ ಅರ್ತಾವಂದ್‌ನ ಜನಕ್ಕೊಲು ರಡ್ನೆ ಮರಯಿದ ನೀರ್ ದಂಡೆಗ್, ಬನ್ನಗ ಹೋ ಪಂಡ್‌ದ್ ಕಲ್ಕೊಂಡೆರ್" (ಅದೇ, ಪು.೪೯-೫೦) (ಕೊನೆ ಟಿಪ್ಪಣಿ ೩೦)

ಕೃಷಿಯಲ್ಲಿ ನೀರಾವರಿಗಾಗಿ ಬಳಸುವ 'ಪನೆ' ವಿಸ್ತಾರವಾದ ಗದ್ದೆಗಳಿಗೆ ನೀರು ಹಾಯಿಸಿ ಬೆಳೆ ಬೆಳೆಯಲು ಅನುಕೂಲ ಕೇವಲ ಹರಿವ ನೀರು ಮಳೆಯ ನೀರನ್ನು ಆಶ್ರಯಿಸುವುದಕ್ಕಿಂತ ವಿಸ್ತಾರವಾದ ಗದ್ದೆ ಬಯಲುಗಳಲ್ಲಿ ಬಾವಿಯ ನೀರಿಗೆ 'ಪನೆ' ಅಳವಡಿಸಿ ಕೃಷಿಗೆ ಅಳವಡಿಸಲು ಬಳಸಿದ ತಂತ್ರಜ್ಞಾನವೂ ಇಂದು ಹಳೆಯದಾಗಿ, ಗೋಡೆಯ ಸ್ವಿಚ್ ಒತ್ತಿದರೆ ನೀರೆತ್ತುವ ಪಂಪ್‌ಸೆಟ್‌ಗಳು ಚಾಲ್ತಿಗೆ ಬಂದವು. ಇಂದು ಕೇವಲ ಚಿತ್ರದಲ್ಲಿ ವಸ್ತು ಸಂಗ್ರಹಾಲಯಗಳನ್ನು ಸೇರಿಕೊಂಡಿರುವ 'ಪನೆ'ಯ ಮರಯಿ, ಬೆರಿಮರಗಳು ಪ್ರಾತ್ಯಕ್ಷಿಕೆಯನ್ನು ನಡೆಸಿ ತಿಳಿಸುವ ಜ್ಞಾನವು ಈ ಪೀಳಿಗೆಗೆ ಲಭ್ಯವಿಲ್ಲ. ವ್ಯವಸಾಯದ ಕ್ರಮಗಳ ಪರಂಪರೆಯನ್ನು ನೀರಾವರಿಯ ಚಾಣಾಕ್ಷತೆಯನ್ನು ತಿಳಿಯಲು ಸಾಧ್ಯವಾಗಿದೆ. ಇಲ್ಲಿ ಕಳೆದು ಹೋದ ಕಾಲದ ಮಾಹಿತಿಯೊಂದರ ದಾಖಲೀಕರಣವೂ ಮುಖ್ಯವೆನಿಸುತ್ತದೆ.

ಭೂಮಿಯಲ್ಲಿ ಬೆಳೆ ಬೆಳೆಯಬೇಕಾದರೂ ಭೂಮಿಯನ್ನು ಹದಗೊಳಿಸುತ್ತಿದ್ದ ಗದ್ದೆಗಳು ನಿರ್ಮಿಸುತ್ತಿದ್ದ ಸಂಗತಿಯೂ ಕೃಷಿ ಪರಂಪರೆಯ ಭಾಗವೇ ಆಗಿದೆ. "ದಂಡ್‌ಡ್ದ್ ಬತ್ತಿ ಮಂಜಣ್ಣಗ್ ಭೂಮಿ ತಿರ್ಗಂದೆ ಒರ್ಕ ಇಜ್ಜಾಂಡ್. ಕಾಂಡೆ ಬೇಕ ಲಕ್ಕ್‌ದ್ ಮೆಗಿಯಲ್ಲೆಲ್ಲ್‌ನ್ ಸೇರ್ಸಾವೊಂದು ಆಯೆರೆ ಬೈಲ್‌ಗ್ ಪಿದಡ್ಯೆ. ಬೈಲ್ ತೂನಗ ಪೊಸತ್ ಮಂತ್‌ನ ರಡ್ಡ್ ಕಂಡೊಲೆಡ್ಲ ಕುಡು ಪದೆಂಜಿ ಬಿತ್ತ್‌ದ್‌ನ ತೊಜಿಂಡ್. ಮೆಗಿ ರಾಮೆ

ವಿವರಿತೆ, ಗರ್ತ್‌ದ್ ಮಂತ್‌ನ ಪೊಸಕಂಡದ ಮಣ್ಣ್‌ಡ್ ದಾಲ ಸತ್ವ ಉಪ್ಪಂದ್ ಅಂಚಾದ್ ಕೆಯಿ ಮೆನ್ಪಿಯೆರೆ ಅವು ಎಡ್ಡೆ ಅತ್ತ್‌ಂದ್ ಎಣ್ಣ್‌ದ್ ಕುಡುಪದೆಂಜಿ ಬತ್ತ್‌ದ್‌ನೆ. ರಡ್ಡ್ ವರ್ಸ ದಾನ್ಯ ಬತ್ತ್‌ಂಡ ಮೂಜಿನೇ ವರ್ಸೊಗು ಪೊರ್ಲುದ ಕೆಯಿ ಆವುಂದು ಆಯನ ಲೆಕ್ಕ. ತಿಕ್ಕಿನಾತ್ ದಾನ್ಯೊನು ಪೂಜೊಂದು ಧಾನ್ಯದ ದಯಿನ್ ಕಂಡೊಗು ದತ್ತ್ ಕೊರ್‌ಂಡ ಬುಳೆಕ್ ಎಡ್ಡೆ ಅಯಿತ ಮಿತ್ತ್ ಅರೆಗೆಲೊಡು ನಾಲ್ ತೂಟಾನ್ ದೀದ್ ಬಿರ್ಕ್‌ಂಡ ದಪ್ಪೈರೆ ಆನಗ ನೂದು ಬಟ್ಟಿ ಗೊಬ್ಬರ ಪಾಡ್‌ದ್ ತಪ್ಪು ತಜತ್ ಪಾಡ್ದ್ ಬುಡ್‌ಂಡ ಬಂಗಾರ್ ಬುಳೆದೆಪ್ಪೊಲಿಂದ್ ರಾಮಣ್ಣೆ ವಿವರಿಪುನಗ  ಮಂಜಣೆ ಮೆಗ್ಯನ ಬೆರಿ ಬೊಟ್ಟೈ. ಪಡ್ಡುಲೆನ್ ಬರಿಕಟ್ಟ್‌ದ್ ದಪ್ಪಾದ್ ಪಾಡ್ದ್ ಕಂಡ ಮಂತ್‌ನ ತೂದು ಬರ್ಪಿವಸ್ ಪತ್ತೈವ ಮುಡಿ ಬಾರ್ ಲಪ್ಪೊಲಿಂದ್ ಮಂಜಣೆ ಎಣ್ಯೊಂಡೆ. ದೂರದ ಊರುಡಿತ್ತ್‌ನ ತನ್ನ ಮರ್ಮಾಯನ್ ತರ್ಪಾಯಿನ ಮರಾಟಿಲೆ ಪರಬ್ಬೆ ಮಗಳೆನ್ಲ ಮಗಳೆ ಕಂಡನಿಯನ ದನಿಕುಲೆ ಕಾರ್ಗ್ ಅಡ್ಡ ಬೂರ್ಪಾಯೆ. ಕಿನ್ಯೆನೆ ರಡ್ಡ್ ಜನಲ ಎಡ್ಡೆ ಬೆನ್ಪಿ ಬೇಲೆದಕ್ಲ್‌ಂದ್ ಪನ್ನಗ ಮರಾಟಿ ಜವಣೆ.

ಎಂಕ್‌ಲೆನ್ ಕಾಪಾಡೊಡು ಗುತ್ತಿನಾರೆ ಪಂಡೆ (ಅದೇ, ಪು ;೬೫) (ಕೊನೆ ಟಿಪ್ಪಣಿ ೩೧)

ಕೃಷಿ ಕೆಲಸದ ವಿವರಗಳನ್ನು ಕೃಷಿ ಮಾಡುವ ಪಾರಂಪರಿಕ ಕ್ರಮವನ್ನು ವಿಶ್ಲೇಷಿಸುವಾಗ ಸಾಂಪ್ರದಾಯಿಕ ವ್ಯವಸಾಯ ಜಗತ್ತಿನ ಜ್ಞಾನವನ್ನು ತಿಳಿಯಬಹುದು. ಬೆಳೆಯ ಕ್ರಮಗಳು ಮಾಡುವ ರೀತಿಗಳು ಒಳ್ಳೆಯ ಫಸಲನ್ನು ತೆಗೆಯುವ ಜವಾಬ್ದಾರಿಯನ್ನು ವಿವರಿಸುತ್ತದೆ.

ಪರಂಪರೆಯ ಬಗೆಗೆ ಕೇವಲ ಪ್ರೀತಿ ವ್ಯಾಮೋಹ ಮಾತ್ರ ದಾಖಲೀಕರಣಗೊಂಡುದಲ್ಲ. ಬೆರಗು ವಿಸ್ಮಯಗಳೂ ಇವೆ. ಕೃಷಿ ಸಂಸ್ಕೃತಿ ಅನ್ವೇಷಣೆಗೊಂಡು ಸಾಗುವಳಿಯ ಗದ್ದೆಗಳನ್ನು ನಿರ್ಮಿಸಿದ ರೀತಿ ಇವೆಲ್ಲವನ್ನು ಮತ್ತೆ ಮತ್ತೆ ಸಾಹಿತ್ಯ ಕೃತಿಗಳಲ್ಲಿ ಹೇಳುವ ಮೂಲಕ, ಪರಂಪರೆಯನ್ನು ಚರಿತ್ರೆಯಾಗಿಸದೆ ಗಮನಿಸುವ ಕ್ರಮವೂ ಇದೆ. ಸಂಸ್ಕೃತಿ ವಿಕಾಸದ ಹೆಜ್ಜೆ ಗುರುತುಗಳಲ್ಲಿ ಕೇವಲ ಗದ್ದೆಗಳ ವಿಸ್ತಾರಗಳು ಮಾತ್ರ ವಿಸ್ತರಣೆಗೊಂಡುದಲ್ಲ. ಬದುಕಿನ ಕ್ರಮದಲ್ಲೂ ವಿಸ್ತರಣೆಗಳಾಗಿವೆ. ಅದು ಆರಾಧನಾ ಪರಂಪರೆ, ಆಚರಣೆಗಳು ಜೀವನ ಕ್ರಮದ ರೀತಿಗಳು, ಬದುಕಿನ ಮೌಲ್ಯಗಳೂ  ಆಗಿವೆ.  ಇವೆಲ್ಲವನ್ನು ತಿಳಿಯುವ ಮೂಲಕ ಕಳೆದುಹೋದ ಬದುಕಿನ ಗತಿಯೂ ಕಣ್ಣೆದುರು ಕಟ್ಟುತ್ತದೆ. ಕೃಷಿ ಬದುಕು ಬದಲಾಗುತ್ತ ಬಂದ ಕ್ರಮವೂ ಇಲ್ಲಿದೆ.

**೭.೩. ಸಂಸ್ಕೃತಿ ಚಿಂತನೆಯ ಅನನ್ಯತೆ**

'ಸಂಸ್ಕೃತಿ' ಎಂಬುದು ಒಂದು ಸಮುದಾಯ ಬದುಕುವ ಆಲೋಚಿಸುವ ಸಮಸ್ತ ಆಯಾಮಗಳನ್ನು ಒಳಗೊಳ್ಳುವ ಒಂದು ಪರಿಭಾಷೆ (ರಹಮತ್ ತರೀಕೆರೆ, ೨೦೦೮, ಪು. ೬) ಎಂದು ವಿಶಾಲವಾದ  ಅರ್ಥದಲ್ಲಿ ಪರಿಭಾವಿಸಲಾಗುತ್ತದೆ.  ಸಾಮಾನ್ಯವಾಗಿ ಎಲ್ಲರೂ ಬಳಸುವ ಸಂಸ್ಕೃತಿ ಪದ ಕೇವಲ ಕ್ಲೀಷೆಯಾಗದ ಹಾಗೆ ವಿವರಿಸಿಕೊಳ್ಳಲಾಗುತ್ತದೆ. ಸಮುದಾಯ ಎನ್ನುವಾಗ ಗುಂಪು ಒಂದಲ್ಲ, ಅದರಲ್ಲಿ  ಹಲವು ಗುಂಪುಗಳಿರುತ್ತದೆ. ನಾಡು, ನುಡಿ, ಸಂಸ್ಕೃತಿ ಎನ್ನುವಾಗ ಅದು ಸಾಮಾನ್ಯೀಕರಿಸುವ ಸರಳ ಅರ್ಥ

ವಿವರಣೆಯಲ್ಲಿ ಇಡೀ ನಾಡಿಗೆ ಏಕರೂಪಿಯಾದ ಸಂಸ್ಕೃತಿಯಲ್ಲ. ತುಳುವರನ್ನೆ ಗಮನಿಸಿಕೊಂಡರೆ ತುಳು ಭಾಷೆಗೂ ಏಕರೂಪ ಸಂಸ್ಕೃತಿ ಇಲ್ಲ. ವ್ಯವಹಾರ ಭಾಷೆಯ ದೃಷ್ಟಿಯಿಂದ ಏಕತ್ವಗೊಂಡರೂ ಪ್ರಾದೇಶಿಕ ವಿಭಿನ್ನತೆಗಳೊಂದಿಗೆ ಕರಾವಳಿಯಲ್ಲಿರುವ ಬಹುಭಾಷೆಯಂತೆ ಬಹು ಸಮುದಾಯಗಳದ್ದು ಬಹು ಸಂಸ್ಕೃತಿಯ ಸ್ವರೂಪವೂ ಪ್ರಾದೇಶಿಕ, ಜಾತೀಯ, ಧಾರ್ಮಿಕ, ಬುಡಕಟ್ಟಿನ ರೂಪಗಳೂ ಇರುತ್ತದೆ. ಬಹುರೂಪಿ ಗುಣವಿರುವ ಸಂಸ್ಕೃತಿಯ ವ್ಯಾಖ್ಯೆಯಲ್ಲಿ ಬಹುಕಾಲದಿಂದಲೂ ಕೊಳ್ಳು ಕೊಡುವಿಕೆಗಳು ನಡೆಯುತ್ತಾ ಬಂದಿದೆ. ಈ ರೀತಿಯ ಬೆಳವಣಿಗೆಗೆ ಚಾರಿತ್ರಿಕ ಕಾರಣಗಳಿವೆ. ಅಲ್ಲದೆ ಸಾಮಾಜಿಕ, ರಾಜಕೀಯ, ಆರ್ಥಿಕವಾದ ಚಲನೆಗಳಿಂದಲೂ ಸಾಧ್ಯವಾಗಿದೆ. ಹೀಗನ್ನುವಾಗ ಶುದ್ಧವಾದುದು ಮೂಲ ಸಂಸ್ಕೃತಿ ಎಂಬುದು ಇರಲು ಸಾಧ್ಯವಿಲ್ಲ. ತರತಮ ಭೇದವನ್ನು ಮಾಡದೆ ನೈತಿಕ ಒಳ್ಳೆಯ, ಕೆಟ್ಟ ಎಂಬ ವರ್ಗೀಕರಣವನ್ನು ಮಾಡಲೂ ಸಾಧ್ಯವಿಲ್ಲ. ಶ್ರೇಷ್ಠ ಕನಿಷ್ಠದ ಅಳತೆಗೋಲಿನಿಂದಲೂ ಅಳೆಯಲು ಸಾಧ್ಯವಿಲ್ಲ. ಸಮುದಾಯಗಳ ಎಲ್ಲಾ ಬಗೆಯ ನಂಬಿಕೆ, ಆಚರಣೆಗಳನ್ನು ಸಂಸ್ಕೃತಿ ಎಂದು ಒಪ್ಪಿಕೊಳ್ಳಬೇಕಾಗುತ್ತದೆ. ಹಾಗಾಗಿ ಸಂಸ್ಕೃತಿ ಪರಿಕಲ್ಪನೆ ಮೂಲತಃ ಒಂದು ರಾಜಕೀಯ, ಅರ್ಥಿಕ, ಸಾಮಾಜಿಕವಾದ ಲೋಕದೃಷ್ಟಿಯನ್ನು ಸೂಚಿಸುವ ಸೈದ್ಧಾಂತಿಕ ಪರಿಭಾಷೆ" (ರಹಮತ್ ತರೀಕೆರೆ,೨೦೦೮;ಪು.೮) ಧಾರ್ಮಿಕವಾಗಿ ಪವಿತ್ರವೆಂದು ಅರ್ಥದಲ್ಲಿ ಬಳಸುವಾಗಲೂ ರಾಜಕೀಯ, ಸಾಮಾಜಿಕ, ಆರ್ಥಿಕ ಚಿಂತನೆಗಳನ್ನು ಒಳಗೊಂಡಿರುತ್ತದೆ.

ಸಂಸ್ಕೃತಿ, ಸಂಸ್ಕೃತಿ ಚಿಂತನೆ ಮತ್ತು ಸಂಸ್ಕೃತಿ ಅಧ್ಯಯನ ಎನ್ನುವ ವಿಸ್ತೃತ ಅಧ್ಯಯನ ವಿಶ್ಲೇಷಣೆಗಳ ವಿಸ್ತೃತತೆಯನ್ನು ಗಮನಿಸಿದಾಗ ಅದರ ಹಿಂದಿರುವ ಭಿನ್ನತೆ ಮತ್ತು ಆಲೋಚನೆಗಳನ್ನು ಗಮನಿಸಬೇಕು. ಅಧ್ಯಯನಕ್ಕಾಗಿ ಹಲವು ಪ್ರಶ್ನೆಗಳನ್ನು ಎತ್ತುತ್ತೇವೆ ಮತ್ತು ಹಲವು ವಾದಗಳೂ ಪರ–ವಿರೋಧವನ್ನು ಗಮನಿಸಲಾಗುತ್ತದೆ. ಬದುಕಿನ ಸೂಕ್ಷ್ಮ ಎಲ್ಲವನ್ನು ಒಳಗೊಳ್ಳುವ ಪರಿಭಾಷೆ ಸಂಸ್ಕೃತಿಯಾದರೆ, ಆ ಕುರಿತಾದ ಆಲೋಚನೆಗಳನ್ನು ಅರ್ಥೈಸಿಕೊಳ್ಳುವುದು ಸಂಸ್ಕೃತಿ ಚಿಂತನೆ. ಈ ಚಿಂತನೆಗಳನ್ನು ವಿಶ್ಲೇಷಿಸುವುದೇ ಸಂಸ್ಕೃತಿ ಅಧ್ಯಯನ.ಮೂರು ವಿಭಾಗ ಕ್ರಮಗಳೂ ಒಂದರೊಳಗೊಂದು ಹುದುಗಿಕೊಂಡಿದ್ದರೂ ಆಲೋಚನೆಯ ಸ್ತರಗಳನ್ನು ಅರ್ಥೈಸುತ್ತ ಆಪ್ತವಾಗಿಸುವ ಪ್ರಕ್ರಿಯೆ ಇಲ್ಲಿದೆ.

ಆಧುನಿಕ್ಕೋತ್ತರ ಸಂಸ್ಕೃತಿ ಚಿಂತಕರು ಈ ಚಿಂತನೆಗಳನ್ನು ಏಕಾಕಾರದ ಒಂದು ತತ್ತ್ವವಾಗಿ ಪರಿಭಾವಿಸದೆ ವ್ಯಕ್ತಿ ಪ್ರಜ್ಞೆಗೆ ಮಹತ್ವಕೊಡುತ್ತಲೇ ವ್ಯಷ್ಟಿಯೊಂದಿಗೆ ಸಮಷ್ಟಿಯನ್ನು ಗ್ರಹಿಸಿದರು. ಆಧುನಿಕ ನಾಗರಿಕತೆ ಮತ್ತು ಅದರ ಯಾಂತ್ರಿಕತೆಯ ಕಟು ವಿಮರ್ಶೆ ಮಾಡುತ್ತಾರೆ. ಸಾಮಾಜಿಕ ಸಂಗತಿಗಳನ್ನು ನಾವು ಏನನ್ನು ನೋಡುತ್ತೇವೆ ಎನ್ನುವುದಕ್ಕಿಂತ ಹೇಗೆ ನೋಡುತ್ತೇವೆ ಎನ್ನುವುದು ಮುಖ್ಯವಾಗುತ್ತದೆ. ಕೇವಲ ವ್ಯಷ್ಠಿ ಪ್ರಜ್ಞೆಗಿಂತ ಸಮಷ್ಠಿ ಪ್ರಜ್ಞೆಯೂ ಮುಖ್ಯವೆಂದು ಪರಿಭಾವಿಸಿ ಆಧುನೀಕೋತ್ತರವಾದ ಎಂಬ ಚಿಂತನೆ ಹುಟ್ಟಿಕೊಳ್ಳುವುದಕ್ಕೆ ಕಾರಣವಾಯಿತು. ಇದು ಏಕರೂಪದಚಿಂತನೆಯಲ್ಲ. ಹಲವು ಚಿಂತನೆಗಳ ತತ್ವಗಳ ಒಂದು ಗುಚ್ಚ. "ಆಧುನೀಕೋತ್ತರವಾದ ಚಿಂತನೆಯಲ್ಲಿ ವಸಾಹತ್ತೋತ್ತರವಾದ ರಚನಾವಾದ, ರಚನೋತ್ತರವಾದ ಅನೇಕ ಎಳೆಗಳು ಸೇರಿಕೊಂಡವು" (ಅದೇ ಪುಟ ೨೩) ಇದರ ತಾತ್ವಿಕ ನಿಲುವುಗಳು ಸಾಂಸ್ಕೃತಿಕ ಅಧ್ಯಯನಕ್ಕೆ ಹೊಸ ದಿಕ್ಕನ್ನು ಕೊಟ್ಟವು. ಈ ವಿಚಾರಗಳನ್ನು ಸಂಗ್ರಹಿಸಿ ಹೀಗೆ ಹೇಳಬಹುದು.

"ಸತ್ಯ, ಚರಿತ್ರೆ, ಪರಂಪರೆ ಎನ್ನುವುದು ವಾಸ್ತವದಲ್ಲಿ ಇಲ್ಲ. ಅದನ್ನು ಬೇರೆ ಬೇರೆಯವರು ತಮಗೆ ಬೇಕಾದಂತೆ ಕಟ್ಟಿಕೊಂಡಿದ್ದಾರೆ. ಹೀಗೆಯೇ ಶಬ್ಧ ಅಥವಾ ಪಠ್ಯಕ್ಕೆ ಅರ್ಥವನ್ನು ಕೂಡಾ ಕಟ್ಟಿಕೊಳ್ಳುವುದರಿಂದ ಹುಟ್ಟಿಕೊಳ್ಳುತ್ತದೆ. ಜನ ತಮ್ಮ ನಿತ್ಯ ಜೀವನದ ಸಾಮಾನ್ಯ ಚಟುವಟಿಕೆಗಳನ್ನು ಲೋಕದ ಕಣ್ಣಲ್ಲಿ ಕ್ಷುದ್ರ ಎನಿಸುವ ಸಂಗತಿಗಳಲ್ಲಿ ತೊಡಗಿಸಿದ್ದಾರೆ. ವಾಸ್ತವದಲ್ಲಿ ಅವರು ಆ ಮೂಲಕ ತಮ್ಮ ಗುರುತುಗಳನ್ನು ಹುಡುಕುತ್ತ ಇರುತ್ತಾರೆ. ಆದ್ದರಿಂದ ಲೋಕದಲ್ಲಿ ಯಾವ ಸಣ್ಣ ಪುಟ್ಟ ಸಂಗತಿಗಳೂ ಅಮುಖ್ಯವಲ್ಲ. ಯಾವುದೋ ಬೃಹತ್ತಾದ ಚಾರಿತ್ರಿಕ ಒತ್ತಡವೊಂದು ಲೋಕವನ್ನು ಬದಲಾಯಿಸುತ್ತದೆ ಎಂದು ಭಾವಿಸುವುದು ವ್ಯರ್ಥ. ಇದರಿಂದ ಸಣ್ಣ ಪುಟ್ಟ ಕಿರು ಲೋಕಗಳಿಗೆ ಜೀವನದಲ್ಲಿ ಮಹತ್ವವೇ ಇಲ್ಲವಾಗುತ್ತದೆ. ಯಾವುದನ್ನು ಚರಿತ್ರೆಯಲ್ಲಿ ಮುಖ್ಯ ಪ್ರಧಾನ ಎಂದುಕೊಂಡು ಬರೆಯಲಾಗಿದೆಯೋ ಅದರ ಬದಲಿಗೆ ಚರಿತ್ರೆಯಲ್ಲಿ ನಿರ್ಲಕ್ಷಿತವಾದ ಸಂಗತಿಗಳ ಮೂಲಕ ಲೋಕ ಗ್ರಹಿಸುವುದು ಮುಖ್ಯ. ಇಡಿಗಿಂತ ಬಿಡಿ ಮುಖ್ಯ. ಜಾಗತಿಕ ಪರಿಭಾಷೆಗಳ ಮೂಲಕ ಲೋಕದ ವಿದ್ಯಮಾನಗಳನ್ನು ನೋಡುವುದರಿಂದ ಹೆಚ್ಚು ಪ್ರಯೋಜನವಿಲ್ಲ. ಸ್ಥಳೀಯ ಸಂಗತಿಗಳು ವಾಸ್ತವದಲ್ಲಿ ದಿನನಿತ್ಯದ ನಮ್ಮ ಗ್ರಹಿಕೆಗಳನ್ನು ರೂಪಿಸುತ್ತಿರುವುದಕ್ಕಿಂತ ವ್ಯಕ್ತಿಯು ಬದುಕುವ ಭೌತಿಕ ಪರಿಸರ ಅವನ ಪ್ರಜ್ಞೆಯ ಮೇಲೆ ಮಾಡುವ ಪರಿಣಾಮಕ್ಕಿಂತ ವ್ಯಕ್ತಿಗಳು ತಮ್ಮ ಪ್ರಜ್ಞೆಯ ಮೂಲಕ ಪರಿಸರವನ್ನು ಹೇಗೆ ಗ್ರಹಿಸುತ್ತಾರೆ ಎನ್ನುವುದು ಮುಖ್ಯ. (ಅದೇ ಪು. ೨೩)

ಈ ತರ್ಕವನ್ನು ಪರಿಭಾವಿಸಿದಾಗ ತುಳುವರು ತಮ್ಮ ಲೋಕಗ್ರಹಿಕೆಯನ್ನು ನಿರೂಪಿಸಿದ ಕ್ರಮ ಬಹಳ ಅನನ್ಯವಾದುದು. ಪ್ರತಿಯೊಬ್ಬ ಬರಹಗಾರನಿಗೂ ತನ್ನ ಜೀವನ ಕ್ರಮದ ಬಗೆಗೆ ಇರುವ ಅಭಿಮಾನಕ್ಕಿಂತಲೂ ತನ್ನ ಪ್ರಜ್ಞೆಯ ಮೂಲಕ ದಾಖಲಾದ ವಿಚಾರಗಳು ಹೇಗೆ ಮುಖ್ಯ ಎನ್ನುವುದನ್ನು ಪರಿಶೀಲಿಸಬೇಕಾಗುತ್ತದೆ. ಬೇರೆ ಬೇರೆ ಸಮುದಾಯಗಳಿಂದ ಬಂದವರು ಶ್ರಮದ ಸಂಸ್ಕೃತಿಯ ಕೃಷಿ ಜಗತ್ತನ್ನು ಮರು ನಿರೂಪಿಸಿಕೊಂಡ ಬಗೆ ಮತ್ತು ಅದನ್ನು ದಾಖಲೀಕರಿಸಿದ ಆಯಾಮಗಳು ಮುಖ್ಯವಾಗುತ್ತದೆ. ಈಗಾಗಲೇ ಚರ್ಚಿಸಿದಂತೆ ಆ ನಿರೂಪಣೆ ಏಕ ರೂಪವಾಗಿಲ್ಲದಿರುವುದರಿಂದ ಅದು ಅನನ್ಯತೆಯೂ ಹೌದು, ಬಹುಮುಖೀ ಪರಂಪರೆಯೂ ಹೌದು. ತುಳುವಿನಲ್ಲಿ ಬರೆದ ಲೇಖಕರ ವ್ಯಕ್ತಿ ಪ್ರಜ್ಞೆಯ ಆಳದಲ್ಲಿ ಹುಟ್ಟಿದ ಸಮಷ್ಠಿ ಪ್ರಜ್ಞೆಯನ್ನು ಸ್ಥಳೀಯವಾದ ತಮ್ಮ ಲೋಕದೃಷ್ಠಿಯ ಮೂಲಕ ಕಟ್ಟಿಕೊಡುವಲ್ಲಿ ಯಶಸ್ವಿಯಾಗಿದ್ದಾರೆಯೇ ಎನ್ನುವುದು ವಿಶ್ಲೇಷಣಾತ್ಮಕ ನೆಲೆ ಎನಿಸುತ್ತದೆ. ಸಣ್ಣ ಸಣ್ಣ ಎಳೆಗಳನ್ನು ದಾಖಲಿಸುವುದರ ಮೂಲಕ ಬಹುತ್ವದ ಸೆಲೆಯನ್ನು ಗ್ರಹಿಸುವುದರೊಂದಿಗೆ ಏಕರೂಪಿಯಲ್ಲದ ನವ ನವೀನವಾದ ಅನನ್ಯತೆಯ ಅಂಶವೂ ಮುಖ್ಯವಾಗುತ್ತದೆ.

ಕೃಷಿ ಸಂಸ್ಕೃತಿಯೇ ಬದಲಾಗುತ್ತ ಬಂದ ಜೀವನಕ್ರಮವೊಂದರ ಪರಿಭಾಷೆ, ದುಡಿಮೆ, ಉತ್ಪಾದನೆ, ಬಳಕೆ, ಸಂಪತ್ತು, ಅಧಿಕಾರ, ಆಡಳಿತ, ಪ್ರಭುತ್ವ ಎಂಬ ಎಲ್ಲ ನೆಲೆಗಳೂ ಇದಕ್ಕೆ ಅಂಟಿಕೊಂಡವು. ಭೂಮಿಯ ಒಡೆತನ ಮತ್ತು ವಿಸ್ತಾರವಾದ ಭೂಮಿಯನ್ನು ಉಪಭೋಗಿಸುವ ಕ್ರಮದಿಂದ ಪಡೆದ ಅವಕಾಶಗಳೆಂದರೆ ಕೈ ಕಾಲುಗಳಿಗೆ ಆಳುಕಾಳುಗಳು, ಸಂಪತ್ತಿನ ಶೇಖರಣೆ, ಆ ಮೂಲಕ ಪಡೆದ ಅಧಿಕಾರದ ಸ್ಥಾನಮಾನಗಳಿಗೂ ಐಷರಾಮಿ ಬದುಕು ಲಭ್ಯವಾಯಿತು. ಈ ರೀತಿಯ ವ್ಯವಸ್ಥೆ ಸುಸ್ಥಿರವಾಗಿ ಹಾಗೆಯೇ ಉಳಿಯದೆ ಬದಲಾಗುತ್ತ

ಬಂತು. ಆಡಳಿತ ಪ್ರಭುತ್ವದಲ್ಲಿ ಬಂದ ಕಾರಣಗಳಲ್ಲದೆ ಚಾರಿತ್ರಿಕ, ಸಾಮಾಜಿಕ, ಕಾರಣಗಳಿಂದ ಕೃಷಿ ಜಗತ್ತು ಬದಲಾಗುತ್ತ ಹೋಯಿತು. ಕಾಲಾನುಕ್ರಮದಲ್ಲಿ ತಾವು ಪಡೆದ ಸವಲತ್ತುಗಳನ್ನು ಕಳೆದುಕೊಳ್ಳಬೇಕಾದುದರಿಂದ ಒಂದು ರೀತಿಯ ಹತಾಶೆ ಮತ್ತು ಅಸಹನೆಗೆ ಒಳಗಾದರು. ಅಧಿಕಾರ ಕೇಂದ್ರಗಳಿಂದಲೂ ವಂಚಿತರಾದಾಗ ಮತ್ತೆ ತಮಗೆ ಜನರ ಮೇಲೆ ಸ್ವಾಮ್ಯವನ್ನು ಹೊಂದಲು ಬೇರೆ ಅವಕಾಶಗಳು ಇರಲಿಲ್ಲ. ಸಾಮಾಜಿಕವಾದ ಬದುಕು ಪಲ್ಲಟವಾಗುತ್ತ ಹೋದಾಗ ತಮ್ಮ ಪರಂಪರೆ ಮತ್ತು ಸಂಸ್ಕೃತಿಯ ಮೇಲಿನ ಅಭಿಮಾನ ಪ್ರೀತಿಗಳು ಮರುಕಳಿಸಿದವು. ಮಾತ್ರವಲ್ಲ ಸಮಾಜದಲ್ಲಿ ಕೇಂದ್ರ ಸ್ಥಾನದಲ್ಲಿದ್ದವರಿಗೆ ತಮ್ಮ ಅಧಿಕಾರವನ್ನು ಉಳಿಸಿಕೊಳ್ಳುವ ತಂತ್ರಗಾರಿಕೆಗಳ ಸಿದ್ಧತೆಗಳೂ ನಡೆದವು.

ಕೃಷಿಯಲ್ಲಿ ಬೆವರು ಹರಿಸಿ ಕಷ್ಟ ಪಟ್ಟು ದುಡಿಯುವುದು ಬೆಳೆಯುವುದಷ್ಟೇ ಪ್ರಮುಖವಾಗಿದ್ದರೆ ಬೆವರು ಸುರಿಸದೆ ಶ್ರೀಮಂತರಾಗುವ ಸುಲಭದ ದಾರಿಗಳಾಗಿ ವ್ಯವಹಾರ ಆಕರ್ಷಕವೆನಿಸಿತು. 'ಬೆನ್ನಿ' (ಕೃಷಿ)ಗೆ ಪರ್ಯಾಯವಾಗಿ 'ಬೇರ' (ವ್ಯಾಪಾರ) ವೇ ಎಂದು ಪರಾಮರ್ಶಿಸಿಕೊಂಡರೆ ಅದು ಎಲ್ಲರಿಗೂ ಆಗಿರಲಿಲ್ಲ. ವ್ಯಾಪಾರ ಸಂಪತ್ತಿನ ಕ್ರೋಡೀಕರಣದ ಸುಲಭದ ದಾರಿಯಾಗಿ ಒಂದನ್ನು ಹತ್ತಾಗಿಸುವ ಕ್ರಮ ಕೃಷಿಗೆ ಸ್ಪರ್ಧೆಯನ್ನು ಒಡ್ಡಿತು. ಕೃಷಿಯ ಉತ್ಪನ್ನಗಳನ್ನು ಸಂಗ್ರಹಿಸಿಡುವ 'ಬಂಡಸಾಲೆ'ಗಳ ಒಡೆಯರು ಧನಿಕರಾಗಿ ಸಹಜವಾಗಿಯೇ ಬೇರೆ ಪ್ರದೇಶಗಳಿಂದ ವಲಸೆ ಬಂದ ಸಮುದಾಯದವರೇ ಆಗಿದ್ದರು. ಗೌಡ ಸಾರಸತ್ವ ಬ್ರಾಹ್ಮಣರ ಅಧೀನದಲ್ಲಿದ್ದು 'ಬಂಡಸಾಲೆಗಳ' ಅರಬ್ ದೇಶಗಳ ವ್ಯವಹಾರದ ಸಂಪರ್ಕದಿಂದ ನಿರ್ಮಾಣಗೊಂಡ ಸಮುದಾಯವಾದ ಬ್ಯಾರಿಗಳು ಕ್ರಮೇಣ ತಮ್ಮ ಪಾರಮ್ಯವನ್ನು ಸ್ಥಾಪಿಸಲು ಯತ್ನಿಸಿದುದು ಸಂಘರ್ಷಕ್ಕೂ ಕಾರಣವಾಗಿತ್ತು. ಚಾರಿತ್ರಿಕವಾಗಿ ಮಿಶನರಿಗಳು ಆಗಮನ, ಅಕ್ರಮಣ ಮತ್ತು ಅಧಿಪತ್ಯದ ಸ್ಥಾಪನೆ ಸ್ಥಳೀಯವಾಗಿ ಇದ್ದ ಸಾಮಂತರಸರ ಅಂತಃ ಕಲಹಗಳು ಟಿಪ್ಪು –ಹೈದರಾಲಿಯ ಆಕ್ರಮಣಗಳು ಬಹಳಷ್ಟು ಪಲ್ಲಟಗಳನ್ನು ತಂದಿತು. ಟಿಪ್ಪುವಿನ ಆಡಳಿತದಲ್ಲಿ ಜಮೀನ್ದಾರರ ಅಧೀನದಲ್ಲಿದ್ದ ಭೂಮಿಗಳನ್ನು ರೈತರ ಅಧೀನಕ್ಕೆ ಒಪ್ಪಿಸಿ ಅವರು ನೇರವಾಗಿ ಅರಸರಿಗೆ ತೆರಿಗೆ ಪಾವತಿಸಲು ಅವಕಾಶ ಒದಗಿಸಿ ಕೊಟ್ಟಿತು. ಸಾಮಾಜಿಕವಾಗಿ ಇದು ಬಹಳಷ್ಟು ಬದಲಾವಣೆಯನ್ನು ತಂದಿತು. ಚಾರಿತ್ರಿಕವಾಗಿ ನಡೆದ ಘಟನಾವಳಿಗಳು ಭೂಮಿಯ ಮೇಲಿನ ಒಡೆತನದ ಅಧಿಕಾರದಲ್ಲಿ ಸ್ಥಿತ್ಯಂತರಗಳಿಗೆ ಕಾರಣವಾಯಿತು. ೧೭೯೯ ರಲ್ಲಿ ಟಿಪ್ಪುವಿನ ಸೋಲಿನಿಂದ ಮಂಗಳೂರು ದ.ಕ ಪೂರ್ತಿ ಬ್ರಿಟಿಷರು ವಶಪಡಿಸಿಕೊಂಡರು. ಅವರು ವಿಧಿಸಿದ ತೆರಿಗೆ ಪದ್ಧತಿ ಅವೈಜ್ಞಾನಿಕವಾಗಿತ್ತು. ಬೆಳೆಯ ಪ್ರಮಾಣದ ಬದಲು ರೈತ ಹೊಂದಿರುವ ಒಟ್ಟು ಭೂಮಿಯ ವಿಸ್ತೀರ್ಣವನ್ನು ಆಧಾರವಾಗಿರಿಸಿದ ಕಂದಾಯ ನೀತಿ ಜಾರಿಯಾಯಿತು. ಭೂಮಿಯನ್ನು ಒಂದು ವರ್ಷ ಉಳುಮೆ ಮಾಡದೆ ಬಿಟ್ಟರೆ ಮರು ವರ್ಷ ಎರಡೂವರೆ ಪಟ್ಟು ಕಂದಾಯ ಕಟ್ಟಬೇಕಿತ್ತು. ಸಾಟಿ ವಿನಿಮಯದ ಪದ್ಧತಿ ರದ್ದುಗೊಳಿಸಿ ಹಣದ ರೂಪದಲ್ಲೆ ವ್ಯವಹಾರಗಳು ನಡೆಯಬೇಕೆಂಬ ಕಾನೂನು ಜಾರಿಗೊಂಡಿತ್ತು. ಈ ವ್ಯವಹಾರಗಳ ನಿರ್ವಹಣೆಯ ಅವಶ್ಯಕತೆಯೇ ಅಧ್ಯಯನದ ಆಸಕ್ತಿಯೇ ಎಂಬಂತೆ ಸ್ಥಳೀಯ ಪರಂಪರೆ, ಚರಿತ್ರೆ, ಸಂಸ್ಕೃತಿಗಳ ಕುತೂಹಲ ಹೆಚ್ಚಿ ದಾಖಲೀಕರಣವೂ ಮುಖ್ಯವೆನಿಸಿತು. ಸ್ಥಳೀಯ ಭಾಷೆಯಾದ ತುಳುವನ್ನು ಕಲಿಯುವುದರೊಂದಿಗೆ ಜಾನಪದದ ಸಂಗ್ರಹ ಅಧ್ಯಯನಗಳೂ ಸ್ವಲ್ಪ ಮಟ್ಟಿಗೆ

ನಡೆದವು. ಇದರಿಂದ ಸಾಮಾಜಿಕ, ಆರ್ಥಿಕ, ರಾಜಕೀಯ, ಸಾಹಿತ್ಯಿಕ, ಭಾಷಿಕ, ಅಧ್ಯಯನಗಳೊಂದಿಗೆ 'ಸಾಂಸ್ಕೃತಿಕ'ವಾದ ಆಯಾಮವೂ ಪ್ರಾಮುಖ್ಯ ಪಡೆಯಿತು. ಯಾಕೆಂದರೆ ೧೮ ಮತ್ತು ೧೯ ನೇ ಶತಮಾನಗಳ ವಸಾಹತುವಾದವು ಆರ್ಥಿಕ ಮತ್ತು ವ್ಯಾಪಾರ ಆಯಾಮಗಳನ್ನು ಒಳಗೊಂಡಿತು. ಸಂಸ್ಕೃತಿ ಎಂಬುದು ಮೂಲತಃ ರಾಜಕೀಯವಾದುದು ಎಂಬುದನ್ನು ಮತ್ತೆ ಮತ್ತೆ ರುಜುವಾತು ಮಾಡುತ್ತದೆ. ಶೈಕ್ಷಣಿಕವಾಗಿ ಸಮಾಜವನ್ನು ಅರ್ಥ ಮಾಡಿಕೊಳ್ಳಲು ಕೆಲವು ವಿಶಿಷ್ಟ ವಿಧಾನಗಳೊಂದಿಗೆ ಹೊಸ ನೋಟ ಪಡೆದ ದೃಷ್ಟಿಕೋನಗಳನ್ನು ಒದಗಿಸುತ್ತವೆ. ಹೊಸ ಹೊಸ ಪರಿಕಲ್ಪನೆಗಳು ಹುಟ್ಟು ಹಾಕಿದ ಚರ್ಚೆಗಳು ಇರುವ ವಸ್ತು ಸ್ಥಿತಿಯನ್ನು ಅರ್ಥೈಸಿಕೊಂಡು ಸೂಕ್ಷ್ಮ ಎಳೆಗಳ ಸೀಳಿಕೊಂಡು ಹೊಸ ರೂಪಧಾರಣೆ ಮಾಡುವ ಪ್ರಕ್ರಿಯೆಯೇ ಅರ್ಥಪೂರ್ಣವಾದುದು. ಸಾಂಸ್ಕೃತಿಕ ಅನನ್ಯತೆಯ ಹೊಸ ಹೊಳವುಗಳ ಮೂಲಕ ಒಟ್ಟು ಸಮಾಜವನ್ನು ಬದುಕನ್ನು ಎಲ್ಲವನ್ನು ಅರ್ಥಪೂರ್ಣವಾಗಿ ಗ್ರಹಿಸಲು ಸಾಧ್ಯವಾಗುವ ಪ್ರಯತ್ನ ಇಲ್ಲಿಯದು.

ಸಂಸ್ಕೃತಿ ಚಿಂತನೆಯ ಭಾಗವಾದರೆ ತುಳು ಸಾಹಿತ್ಯ ಕೃತಿಗಳು ಕಟ್ಟಿಕೊಟ್ಟ ಅಂಶಗಳನ್ನು ಗ್ರಹಿಸುವುದು, ವಿಶ್ಲೇಷಣೆಗೆ ಒಳಪಡಿಸುವುದು ಮುಖ್ಯ ನೆಲೆ ಎನಿಸುತ್ತದೆ. ಸಾಹಿತ್ಯದ ಪ್ರಶ್ನೆಯನ್ನು ಸಂಸ್ಕೃತಿಯ ಪ್ರಶ್ನೆಯಾಗಿ ಗ್ರಹಿಸುವುದು ಮತ್ತು ಈ ಕೇಂದ್ರಕ್ಕೆ ಬದುಕಿನ ಬೇರೆ ಬೇರೆ ಆಯಾಮಗಳ ಜೋಡಿಸುತ್ತ ಚರ್ಚೆ ಮಾಡುವುದು ಇಲ್ಲಿನ ಆಶಯವಾಗಿದೆ. ಈ ಬದಲಾವಣೆ ನಿರಂತರವಾದುದು ಮತ್ತು ಸತ್ಯವನ್ನು ಶೋಧಿಸಲು ಒಂದು ಶಿಸ್ತಿನ ಹಾದಿ ಸಾಲದು ಎಂಬ ಅರಿವಿನ ಭಾಗವಾಗಿಯೂ ಇದೆ. ತಮ್ಮ ಕಾಲ–ದೇಶ–ಸಮಾಜವನ್ನು ಮೀರುವ ಗುಣದೊಂದಿಗೆ ಆಯಾ ಸಂದರ್ಭಕ್ಕೆ ಮರು ಹುಟ್ಟು ಪಡೆಯದೆ ಅರ್ಥ ಪೂರ್ಣವಾಗಿ ಅನ್ವಯವಾಗುವುದಿಲ್ಲ. ಕಳೆದ ಕಾಲದ ಸಂಗತಿಗಳನ್ನು ಮರು ನಿರೂಪಣೆಗೊಳಿಸುವ ಮೂಲಕ ವರ್ತಮಾನವನ್ನುಅರ್ಥೈಸುವ ಯತ್ನವೂ ಆಗಿದೆ.

ಡಿ.ಕೆ ಚೌಟರ ಮಿತ್ತಬೈಲ್ ಯಮುನಕ್ಕೆ ಕಾದಂಬರಿ ಆರಂಭ ಆಗುವ ಮುನ್ನ ಒಂದು ಹಾಡನ್ನು ಬಹಳ ಸಂಗ್ರಹವಾಗಿ ನಿರೂಪಿಸುತ್ತಾರೆ. ಮೊದಲಿಗೆ ಬಂದ ಬೆಳೆಯನ್ನು ಮನೆಯಂಗಳಕ್ಕೆ ಸ್ವಾಗತಿಸುತ್ತ ಎಣೆಲು ಬೆಳೆಯ ರಾಶಿಯ ಮುಂದೆ 'ಪೊಲಿ' ಕರೆಯುತ್ತಾರೆ.

'ಪೊಲಿ ಪೊಲಿ ಪೊಲಿ ಪೊಲಿ ಪೊಲಿ ಎಚ್ಚಾಲ
ಪಂಚ ಪಾಂಡವೆರೆ ಪೊಲಿ, ನಿಚ್ಚ ದೇವರ್ಕುಳ ಪೊಲಿ, ತುಪ್ಪೆ
ಪಾಡೊಡು, ಸಿರಿ ತೂವೊಡು ಆ ಜಾಲ ಪೊಲಿ, ಈ ಜಾಲ ಪೊಲಿ
ಅಜ್ಜತ್ತಾಜಿ ಜಾಲ್ದಾತ್ ಪೊಲಿ, ಎಳ್ಪತ್ತೇಳ್ ಕೋಟಿ ಪೊಲಿ
ಎನ್ನ ಉಳ್ಳಾಯ ಜಾಲ್‌ಗೇ
ಅಪ್ಪೆ ಬೆರಿಟೆ ಬಾಲೆಲು ಬನ್ನಂಗೆ ಬರೊಡು
ಪೆತ್ತದ ಬೆರಿಯೆ ಕಂಜಿ ಬನ್ನಂಗೆ ಬರೊಡು
ಪೆರಡೆದ ಬೆರಿಟ್ ಕಿನ್ನಿಲು ಬನ್ನಂಗೆ ಬರೊಡು
ಪಿಲಿತ ಬೆರಿಯೆ ಪಿಲಿತ ಕುರ್ಲೆಲು ಬನ್ನಂಗೆ ಬರೊಡು

ಮದಿಮಾಳ್ ಪೊನ್ನಗ್ ತರೆ ಬನ್ನಂಗೆ ಬರೊಡು

ಜವಂದಿ ಪೊನ್ನಗ್ ಮಿರೆ ಬನ್ನಂಗೆ ಬರೊಡು

ಪಿಜಿನ್‌ದ ದಾರೆ ಬನ್ನಂಗೆ ಬರೊಡು

ದೂಜಿದ ಪಿರಾವೆ ನೂಲು ಬನ್ನಂಗೆ ಬರೊಡು

ಪಕ್ಕಿಲೆ ಬಾಯಿಡೆ ಬರೊಡು, ಬಲಿಪ ನಾಲಾಯಿಡೆ ಬರೊಡು

ಕುದುಕ ಬೀಲೊಡು ಬರೊಡು

ಪೇರ್ ಉರ್ಕಾರುಲೆಕ ಉರ್ಕಾರೊಡು'

ಕಡಲ ಸೆರೆ ಮಗುಲೆಕ ಮಗ್ರೊಡು

ನೀರ್ ಪೆರ್ಚುಲೆಕ ಪೆರ್ಚೊಡು

ಪೊಲಿ ಪೊಲಿಯೇ ಆಜಾಲ ಪೊಲಿ ಈ ಜಾಲ ಪೊಲಿ

ಪೂರಾ ಈ ಜಾಲ್‌ಗೇ ಬರೋಡು (ಆನಂದ ಕೃಷ್ಣ, ೨೦೦೫; ಪು.೧೫)(ಕೊನೆ ಟಿಪ್ಪಣಿ ೩೨)

ಶ್ರಮವನ್ನು ಬದಿಗಿರಿಸಿ ಸಂಪತ್ತನ್ನು ಕೇಂದ್ರೀಕರಿಸಿ ಒಡೆಯನ ಮನೆಯಂಗಳಕ್ಕೆ ಎಲ್ಲಾ ಸಂಪತ್ತು ಬರಲಿ ಎಂದು ಹಾರೈಸುವ ಆಳಿಗೆ ತನ್ನ ಹಸಿವಿನ ಮೂಲದ ಧಾನ್ಯವಾದ ಭತ್ತದ ಬಗೆಗೆ ಗೌರವ, ಪ್ರೀತಿ, ಹೆಮ್ಮೆ ಎಲ್ಲವೂ ಇದೆ. ಪ್ರಾಣಿ ಪ್ರತಿಮೆ ಮತ್ತು ಹೆಣ್ಣಿನ ಉಪಮೆಯ ಮೂಲಕ ಸಂಪತ್ತಿನ ವೃದ್ಧಿಗೆ ಪ್ರಾರ್ಥಿಸುವ ಇರಾದೆಯೂ ಇಲ್ಲಿದೆ.

ಕಾದಂಬರಿಯ ಆರಂಭದಲ್ಲಿ ನಿರೂಪಣೆಗೊಂಡ ಈ ಹಾಡು ಎಣೆಲು ಬೆಳೆಯ ಭತ್ತವನ್ನು ಅಂಗಳದಲ್ಲಿ ರಾಶಿ 'ತುಪ್ಪೆ'ಹಾಕುವ ಸಂದರ್ಭ ಮತ್ತು ಭತ್ತದ ಪೈರು ಪಡಿಮಂಚಕ್ಕೆ ಬಡಿದಾಗ ಪಡಿಯ ತುಂಬ ಬತ್ತದ ರಾಶಿ ತುಂಬಿಕೊಂಡರೆ ಹಾಡುವ ಹಾಡಿದು. ಸಂಪತ್ತಿನ ರೂಪವಾಗಿರುವ ಭತ್ತವನ್ನು ಸಂಭ್ರಮದಿಂದ ಆದರದಿಂದ ಒಡೆಯ ಆಳು ಎನ್ನದೆ ಸ್ವಾಗತಿಸುತ್ತಾರೆ. ಭತ್ತದ ಬೆಳೆಯ ಕೃಷಿಯನ್ನೇ ಕೇಂದ್ರವಾಗಿರಿಸಿ ಕಟ್ಟಿದ ಆಚರಣೆಗಳಲ್ಲಿ ಬಹಳ ವಿಶಿಷ್ಟವಾಗಿ ನಿರೂಪಣೆಗೊಳ್ಳುತ್ತದೆ. ಭತ್ತವನ್ನು ಹದಗೊಳಿಸುವ ಕಾಯಕ ಸ್ವಲ್ಪ ಕಷ್ಟವಾದರೂ ಗಂಡು & ಹೆಣ್ಣು ಜತೆ ಸೇರಿ ಮಾಡುವ ಕಾಯಕವಿದು. ಇಲ್ಲಿ ಶ್ರೇಷ್ಠ ಕನಿಷ್ಠದ ಕಲ್ಪನೆಯಿಲ್ಲ. ಕಾದಂಬರಿ ಆರಂಭಗೊಳ್ಳುವುದೇ 'ಪುದ್ದಾರ್ ದೆಚ್ಚಿದ ನೇಮದಿಂದ ಮನೆಯ ಫಸಲನ್ನು ತಂದು ಸಂಭ್ರಮಿಸುವುದರ ಜತೆಗೆ ಭೂತದ ನೇಮಕ್ಕೆ ನಡೆಯುವ ಸಿದ್ಧತೆಗಳು ಪೂರ್ಣಗೊಳ್ಳುತ್ತವೆ. ಈ ಆರಾಧನಾ ಪರಂಪರೆಯಲ್ಲಿ ಪಾಲ್ಗೊಳ್ಳುವ ಸಮಾಜದ ವಿವರಣೆಗಳು ಬರುತ್ತದೆ.

"ವಾದ್ಯದ ರಾಮೆ, ಬೊಲ್ಲುಗ್ಡೆದ ಪಕೀರೆ ಬಸವನ್ ಪತ್ತೊಂಬತ್ತ್‌ನ ನರ್ಸಪ್ಪೆ, ಮುಗ ಪತ್ತುನ ಪಕರು, ಕರ್ಜನ್ದ ಪೆಟ್ಟಿಗೆ, ಪತೊಂದು ಬತ್ತ್‌ನ ಐತಪ್ಪೆ, ಮಾತ ಗುರುಕಾರಿನ ಕಾರ್‌ಪತ್ತ್‌ದ್ ಗುಂಡದ ಬರಿಟ್ ಉಂತ್‌ನಗ ತಂತ್ರಿದಾರ್ ಬತ್ತೆರ್" (ಅದೇ, ಪು ೩೧) (ಕೊನೆ ಟಿಪ್ಪಣಿ ೩೩)

ಕೇವಲ ಆರಾಧನಾ ಪರಂಪರೆಯಲ್ಲಿಲ್ಲದೆ ರಾಜರ ಆಡಳಿತವನ್ನು ಗಮನಿಸುವಾಗ ಮಾಯಿಪ್ಪಾಡಿಯ ಅರಸರು ಮುಜಿಂಗಾವು ಪಾರ್ಥ ಸಾರಥಿ ದೇವಾಲಯ ನ್ಯಾಯ ಮಂಟಪದಲ್ಲಿ ಸಭೆ ಸೇರಿದರು. ಅಲ್ಲಿ

ಸೇರಿರುವ ಸಮುದಾಯದ ಜನರನ್ನು ಹೆಸರಿಸುವಾಗ ಜಾತಿ ಸಮಾಜವನ್ನು ಗುರುತಿಸುತ್ತಾರೆ. "ಮಂಜೇಸರದ ಜೈನ ಸೆಟ್ಟಿನಕ್ಲೆ ಕೊಂಕಣಿಯೆರ್ ಸಮಾಜದ ಹಿರಿಯಾಕ್ಲಾಯಿನ ಭಂಡಾರ ಮಠತ ಭಂಡಾರಿ ಸೇನೆರ್, ಭಕ್ತೆರೆ ಮಠತ ಭಕ್ತೆರ್, ಮಾಣಿಯಾಣಿ ಸಮಾಜ, ಬೋವಿ ಸಮುದಾಯ, ಪೂಜಾರ್ಲು, ಬ್ಯಾರ್ಲೆನ ಮುಕ್ರಿ ಮೈಲಾರನಕ್ಲೆ ಬೇರದ ಬ್ಯಾರ್ಲೆನ ಹಮ್ಜದಕ್ಲ್, ಬೆಳ್ಚಾಡೆರೆನ ಅಚ್ಚಮ್ಮರೆನಕಲ್ ಇಂಚ ಮಾತ ಸಮುದಾಯದ ಗುರಿಕಾರ್ಲೆನಕ್ಲ್, ಬಾಕುಡೆರ್, ಮುಗೇರೆರ್ ಹಿರಿಯಾಕ್ಲ್ ನಲ್ಕೆದಕ್ಲ್, ಕೊರಗೆರ್, ದೊಂಬೆರ್, ಪಾಣಾರೆರ್, ಪನ್ನಿ ದಲಿತ ಸಮಾಜದಕ್ಲ್ ಹಿರಿಯಾಕುಲ್ ಮಾತೆರ್ಲ ಮುಜಂಗಾವುಡು ಸೇರ್ದಿತ್ತೆರ್. ಪಾರ್ಥ ಸಾರಥಿ, ದೇವಸ್ಥಾನದ ಕಾಂಡೆದ ಪೂಜೆ ಮನ್ಪಾದ್ ಗಂಧಪ್ರಸಾದ ದೆತೊಂದು ರಾಮಂತರಸುಲು ಪಟ್ಟೊಡು ಕುದೊಂದು ಸಭೆ ಸುರು ಪತ್ಯೆರ್ (ಅದೇ, ಪು ೧೨೫)

ರಾಜನ ಪ್ರಭುತ್ವದ ಆಡಳಿತದಲ್ಲೂ ಶ್ರೇಣೀಕೃತ ಜಾತಿ ವ್ಯವಸ್ಥೆಯನ್ನು ಗುರುತಿಸಲು ಸಾಧ್ಯವಾಗುತ್ತದೆ. ಜನರನ್ನು ಅವರು ಬೇರೆ ಬೇರೆ ರೀತಿಯಲ್ಲಿ ವಿಂಗಡಿಸಿ, ಪ್ರತ್ಯೇಕಿಸಿ ತಮ್ಮ ಅಧೀನದಲ್ಲಿ ಇರಿಸಿಕೊಂಡಿದ್ದರು. ಪರಂಪರೆಯಿಂದ ಬಂದ ನಂಬಿಕೆಗಳಿಗೆ ಅನುಗುಣವಾಗಿ ಶ್ರೇಣೀಕೃತ ಜಾತಿ ವ್ಯವಸ್ಥೆಯನ್ನು ಪೋಷಿಸುತ್ತಲೇ ಬಂದರು. ಸಾಮಾಜಿಕ ಸ್ಥಾನಮಾನಗಳಲ್ಲಿಯೂ ಜಾತಿಗೆ ಅನುಗುಣವಾಗಿ ಶ್ರೇಣೀಕರಣದ ವ್ಯವಸ್ಥೆ ಇತ್ತು. ಇದು ಅಧಿಕಾರದ ಬಲವನ್ನು ಆರ್ಥಿಕತೆಯನ್ನು ನಿರೂಪಿಸುವಂತಿತ್ತು.

ಗುತ್ತಿನಮನೆ ಹೇಗಿತ್ತು ಎನ್ನುವ ವಿವರಣೆಯ ವಿನ್ಯಾಸಗಳನ್ನು ವಿವರಿಸುತ್ತಾರೆ. "ಮಿತ್ತಬೈಲ್‌ಡ್ ಇಲ್ಲ್ ಕಟ್ಟ್‌ದ್ ಒಕ್ಕೆಲಾನಗ ಬಾಕಿ ಇತ್ತಿ ಕೆಲಸೊಲು ಮಾತ ಮುಗಿಂಡ್, ಬೆಂದ್ರ್ ಕೊಟ್ಯ, ಕೈಕಂಜಿ, ಕಿದೆ, ಕೋರ್ಲೆನ ಕೊಟ್ಯ, ಗಿಡದೆರ್ಲನ ಕೊಟ್ಯ, ಅರಿತಾರಾಯಿದ ಉಗ್ರಾಣ ಪೂರಾ ತಯಾರಾದ್ ಪಡಿಪ್ಪೆರೆದ ಕೆಲಸ ಸುರುವಾನಗ ತಮ್ಮಲೆಲ, ಅಜ್ಜಿಲ ಮಿತ್ತ ಬೈಲ್‌ದ ಹಿರಿಯಾಕ್ಲು, ಕಿರಿಯಾಕ್ಲು ಮಿತ್ತಬೈಲ್‌ಗ್ ಪಟ್ಲೇರೆನ ಸಂಭ್ರಮೊಡು ಸೇರೊನ್ಯೆರೆ ಬತ್ತೆರ್ (ಅದೇ, ಪು ೧೭೧)(ಕೊನೆ ಟಿಪ್ಪಣಿ ೩೪) ಮನೆಯ ವಿನ್ಯಾಸ ಮತ್ತು ಅದನ್ನು ಸಂಯೋಜಿಸಿದ ರೀತಿ ಕೃಷಿ ಉತ್ಪನ್ನಗಳಾದ ಅಕ್ಕಿ ತೆಂಗಿನಕಾಯಿಯ ಉಗ್ರಾಣ ಇವನ್ನೆಲ್ಲ ಜತೆಯಾಗಿ ಕಟ್ಟುವ ಮೂಲಕ ಕರಾವಳಿ ಗುತ್ತು ಮನೆಗಳ ಸೊಬಗನ್ನು ಕಾಣಬಹುದು. ಸಂಸ್ಕೃತಿಯ ಒಂದು ಭಾಗವಾಗಿ ಅಧಿಕಾರ ಮತ್ತು ಅಂತಸ್ತಿನ ಕ್ರಮಗಳಿಗೆ ಅನುಗುಣವಾಗಿ ಇವುಗಳ ರಚನೆಯಾಯಿತು. ಕೃಷಿ ಮತ್ತು ಭೂಮಿ ಬದುಕಿನ ಭಾಗವಾಗಿ ದುಡಿಯುವ ವರ್ಗದ ಜನರ ದುಡಿಮೆ ಆಯಾಸವನ್ನು ಪ್ರಸ್ತಾಪಿಸದೆ ಕಟ್ಟಿದ ಮನೆಯ ಅಂತಸ್ತು ಸಾಮಾಜಿಕ ಸ್ಥಾನಮಾನಗಳಿಗೂ ಕಾರಣವಾದ ಅಂಶ ಮುಖ್ಯವಾದುದು.

ಮನೆ ಕಟ್ಟಿ ನೋಡು, ಮದುವೆ ಮಾಡಿ ನೋಡು ಎಂಬ ಗಾದೆ ಮಾತಿನಂತೆ ಮನೆ ಕಟ್ಟಿ ಮದುವೆಯ ಸಿದ್ಧತೆಗಳು ನಡೆದವು. 'ಕಾಡ್‌ಡ್ದ್ ಕಬೆ ಕಡ್ತ್‌ದ್ ಬೆದುರು ತಲಕೆ ಕೊಣತ್‌ದ್ ಮಡಲ್‌ದ ದೊಂಪೊ ತಿಂಗೊಳಾವೊಡಾಂಡ ತಯಾರಾಂಡ್. ಒಣಸ್‌ದ ದೊಂಪೊ ಅಡಿಗೆದ ದೊಂಪೊ ಬಾಕ್ಲ್‌ದ ಬಾಕಿಮಾರ್ ಕಂಡೊಡು ತಯಾರಾಂಡ್. ಅಡಿಗೆದ ಲೇಸ್‌ದ ಕೊಪ್ಪರಿಗೆ ಕಳಂಗ ಕೋಳ್ಯೂರ ದೇವಸ್ತಾನೊಡ್ದ್ ಬಡಾಜೆ ತಂತ್ರಿಲೆ ಇಲ್ಲಡ್ದ್ ಬತ್ತ್ ಬೂರುಂಡು. ನೀರ್‌ದ ಮರಯಿ ಮಣ್ಣ್‌ದ ಕರ ಚೆಂಬುದ ಮಂಡೆಲೆನ್ ಕಂಡ ಇಡೀ ಕೌಂತೆರ್. (ಅದೇ, ಪು ೧೭೭)(ಕೊನೆ ಟಿಪ್ಪಣಿ ೩೫) ಹಳ್ಳಿಗಳಲ್ಲಿ ನಡೆಯುತ್ತಿದ್ದ ಮದುವೆ

ಸಮಾರಂಭವನ್ನು ವಿವರಿಸುತ್ತಾ ಬದುಕಿನ ಕ್ರಮಗಳನ್ನು ವಿವರಿಸುತ್ತಾರೆ. ಮದುವೆಯ ತಯಾರಿಗಳೊಂದಿಗೆ ಜೀವನಕ್ರಮದ ವಿವರಣೆಗಳನ್ನು ನೀಡುತ್ತಾರೆ. ಪರಂಪರೆಯ ಬದುಕಿನ ಕ್ರಮಗಳು ಮತ್ತು ಸೂಕ್ಷ್ಮಗಳೂ ಬಹು ಮುಖ್ಯವೆನಿಸಿದೆ.

ಮದುವೆ ಸಿದ್ಧತೆಗೆ ಚಪ್ಪರದಿಂದ ತೊಡಗಿ ಆಭರಣಗಳು ಮದುವೆಯ ಕ್ರಮಗಳನ್ನು ದಾಖಲಿಸುತ್ತಾರೆ. 'ಮದಿಮಲ್ಲಾಲೆನ ಬಂಗಾರ್ ಪದ್ದೆಯಿ ವಿಟ್ಲ ಕಾರ್ಲದ ಆಚಾರ್ಲೆನ್ ತರ್ಪಾದ್ ಇಲ್ಲಲ್ ಕುಲ್ಲಾದ್ ಮನ್ಪಾವುನ ಜವಾಬ್ದಾರಿ ಭಂಡಾರ್ಲ್ ಬೊಡೆದಿ ದುರ್ಗಮ್ಮಲ ಆದಿ ಸೆಟ್ಟಿನ ಮೆಗ್ಗಿ ಮಾಚಬ್ಬೆಲ ವಹಿಸೊಂಡೆರ್...... ದುರ್ಗಮ್ಮ ಅಕ್ಲೆ ಎದುರುಗೇ ಆಚಾರ್ಲೆನ್ ತರ್ಪಾದ್ ಒಡ್ಡಿ, ಒಂಕಿ, ಬೆಂಡೋಲೆ, ನತ್ತ್, ಕುಕ್ಕು, ಮುಡಿಸರ, ಬಜಿಲ್‌ಸರ, ಚಕ್ರಸರ, ಸೊಂಟದಕಟ್ಟ, ತೋಳಬಂದಿ, ಒಕ್ಕನೂಲು, ಕೈಬಳೆ, ಕಾರ ಗೆಜ್ಜೆ, ಪಂಡ್‌ದ್ ನಮೂನೆ ನಮೂನೆದ ಬಂಗಾರ್‌ನ್ ಮನ್ಪಾಯೆರೆ ಪಾಡ್ಯೆರ್'(ಅದೇ, ಪು ೧೭೭).(ಕೊನೆ ಟಿಪ್ಪಣಿ ೩೬)

ಮದುವೆಯ ದಿನ ಸೇರಿದ ಸಭೆ, ಸಂಭ್ರಮ, ಬೇಂಡು ವಾಲಗ ಇವೆಲ್ಲದರ ವರ್ಣನೆ ಬರುತ್ತದೆ. ಮನೆಯಲ್ಲಿಯೇ ವಿವಾಹ ಸಮಾರಂಭಗಳು ನಡೆಯುತ್ತಿದ್ದ ಕಾಲವದು. "ಮದಿಮೆದ ದಿನತ್ತಾನಿ ಕಾಂಡೆ ಮಜಲೋಡಿಡ್ದ್ ಬತ್ತ್‌ನ ಸುಬ್ಬಾಳ್ವೆರ್ ಮೂರ್ತದ ಕಂಬ ನಡ್‌ಪಾಯೆರ್. ಪೇರ್ ಮಯ್ತ್‌ದ್ ಬಂಗಾರ್‌ದ ಚೂರು ಪಾಡ್ದ್ ನಡತ್ತ್‌ನ ಪಾಳೆದ ಮರತ ಕಂಬ ಉಂತ್‌ನಗ ಕೊಂಬು ವಾದ್ಯ ಆಂಡ್. ಮಡ್ಯೆಲೆ ಮೂರ್ತದ ಕಂಬೊಗು ಕುಂಟ್ ಸುಂದ್‌ದ್ ಕವುಂತ್‌ದಾನಗ ಮದಿಮೆದ ದಿಬ್ಬಣ ಬತ್ತ್‌ನ ಸುದ್ದಿ ಮುಟ್ಟ್‌ಂಡ್. ಮೂಜಿ ನಾಲ್ ಸೇರಿಗಾರೆನಕ್ಲೆ ತಂಡ ಉರಿಪುನಗ ಕುಡುಲಡ್ದ್ ಬತ್ತ್‌ಂಡ್ ಬೇಂಡ್. ಬೇಂಡ್ ಅದಗ ಊರುಗೇ ಪೊಸತ್. ಆನ ಅಯನ್ ತೂಯೆರೆಂದೆ ಒಲ್ತೊಲ್ತು ಬತ್ತೆರ್... ಮದಿಮಾಯೆ ಮದಿಮಲಲ್ಲೆನ್ ದೊಂಪೊಗು ಮಾಗಣೆದ ಹಿರಿಯಾರ್ ಲೆತೊಂದು ಬತ್ತ್‌ದ್ ಮಡ್ಯೆಲೆ ಪಾಡಿ ಪಾವಡೆದ ನಡುಟ್ಟು ಉಂತಾಯೆರ್. ಮಜಲೋಡಿದ ಯಜಮಾಂಟ್ರ್ ಸಬೆಕ್ ಕೈ ಮುಗಿದ್ ದೈವ ದೇಬೆರೆನ್ ನೆನೆತೊಂದು ದಾರೆ ಮೈಪ್ಯೆರೆ ಅಪ್ಪಣೆ ಕೇಂಡೊಂಡೆರ್. ತಮ್ಮಲೆನಕ್ಲ್ ದಾರೆ ಮೈತ್ ಕೊರಿಯೆರ್. ತಮ್ಮಲೆನಕ್ಲ್ ದಾರೆ ಮೈಪಾದ್ ಗೆತೊಂಡೆರ್.

ಊರುದ ಗುರಿಕಾರ್‌ರ್ಡ್ ಹಿರಿಯಾಯಿನ ನಾಞರಾಲ್ ಕಂಚಿದೀಯೆರೆ ಸಭೆತ ಅಪ್ಪಣೆ ಗೆತೊಂದು ಕಂಚಿ ದೀಯೆರ್. ಇತ್ತೆಲ ಮಲ್ಲ ಸಭೆಕ್ಲೆಡ್ ಕಂಚಿಗ್ ದಿನ ಪಣವುನು ಲೆತ್ತ್ ಪನ್ಪುನೆ ನಾಞರಾಲೆ.

ಆಣ್ ಪೊಣ್ಣನ್ ಮಣೆಟ್ ಕುಲ್ಲಾದ್ ಸಭೆ ಸೇಸೆ ಪಾಡ್‌ಂಡ್. ಸೇಸೆ ಪಾಡ್ದ್ ಬತ್ತ್‌ನ ಅರಸುಲೆನ ಬುಕ ಬ್ರಹ್ಮಸಬೆನ್ ವಣಸ್‌ಗ್ ಲಕ್ಕಾಯೆರ್. ಅಕ್ಲೆ ವಣಸಾದ್ ಒಕ್ಕೆಲಾಕ್ಲು ಬೊಕ್ಕ ಬಾಕಿದ ಜಾತಿ ವಣಸ್ ಮುಗಿತ್‌ಂಡ್. (ಅದೇ, ಪು ;೧೭೯) (ಕೊನೆ ಟಿಪ್ಪಣಿ ೩೭)

ಊರಿನ ಗುರಿಕಾರರಲ್ಲಿ ಹಿರಿಯರಾದ ನಾಞರಾಲ್ ಕಂಚಿ ಇಡಲು ಸಬೆಯ ಅಪ್ಪಣೆ ಸ್ವಿಕರಿಸಿ ಕಂಚಿ ಇಟ್ಟರು. ಈಗಲೂ ದೊಡ್ಡ ಸಭೆಗಳಲ್ಲಿ ಕಂಚಿಗೆ ಇಟ್ಟ ಹಣವನ್ನು ಕೂಗಿ ಕರೆಯುವವರು ನಾಞರಾಲ್.

ಗಂಡು & ಹೆಣ್ಣನ್ನು ಮಣೆಯಲ್ಲಿ ಕುಳ್ಳಿರಿಸಿ ಸಭೆ ಸೇಸೆ ಹಾಕಿತು. ಸೇಸೆ ಹಾಕಿ ಬಂದ ಅರಸರನ್ನು ಮತ್ತೆ ಬ್ರಹ್ಮ ಸಭೆಯನ್ನು ಊಟಕ್ಕೆ ಎಬ್ಬಿಸಿದರು. ಅವರ ಊಟವಾದ ಮೇಲೆ ಬಂಟರು ಮತ್ತು ಉಳಿದ

ಜಾತಿಯವರ ಊಟವಾಯಿತು. ತುಳುನಾಡಿನಲ್ಲಿ ಮಾತೃ ಮೂಲ ಸಮುದಾಯವಿದ್ದು ಹೆಣ್ಣಿನಿಂದ ಬೆಳೆಯುವ ವಂಶಕ್ಕೆ 'ತಮೆರಿ'ಯಾಗಿ ನಿಂತು ರಕ್ಷಣೆ ನೀಡುವವರು ಮಾವಂದಿರು. ಹಾಗಾಗಿ ಧಾರೆ ಎರೆಯುವುದು ಮತ್ತು ದಾರೆ ಎರೆಸಿ ಸ್ವೀಕರಿಸುವವರೂ ಸೋದರ ಮಾವಂದಿರು. ತನ್ನ ಸಂತತಿಯನ್ನು ಪೊರೆಯುವ, ಪೋಷಿಸುವ, ರಕ್ಷಿಸುವ ಹೊಣೆಗಾರಿಕೆ ಅವರದು. ತಂದೆ ತಾಯಿಗಿಂತಲೂ ಹೆಚ್ಚಿನ ಜವಾಬ್ದಾರಿ ನಿರ್ವಹಿಸುವವರು ಸೋದರ ಮಾವಂದಿರು ಅಲ್ಲದೆ ಯಾವುದೇ ಶುಭ ಕಾರ್ಯಗಳಾದಾಗ ಅದಕ್ಕೊಬ್ಬ ಯಜಮಾನ ಇರುತ್ತಾನೆ. ಇಡೀ ಕಾರ್ಯಕ್ರಮವನ್ನು ನಿರ್ವಹಿಸುವ ಹೊಣೆಗಾರಿಕೆಯನ್ನು ಹೊಂದಿರುವ ಸಮುದಾಯದ ಮುಖಂಡನಿಗೆ ಸಮಾಜದಲ್ಲಿ ಗೌರವದ ಸ್ಥಾನವಿದೆ. ಸಾಮಾಜಿಕ ಸ್ಥಾನಮಾನಗಳೊಂದಿಗೆ ಜಾತಿಯ ಏಣಿ ಶ್ರೇಣಿಗಳನ್ನು ಇವರು ಜಾಣತನದಿಂದ ನಿರ್ವಹಿಸುತ್ತಾರೆ. ಮದುವೆಯಲ್ಲಿ ಮದುಮಕ್ಕಳಿಗೆ ನೀಡಲಾಗುವ ಉಡುಗೊರೆ 'ಹಣದ ಸ್ವರೂಪವಾದಾಗ ಅದನ್ನು ಎಲ್ಲರಿಗೂ ತಿಳಿಯುವಂತೆ ಹೇಳುವ ಕಾರ್ಯವೂ ಗೌರವದ ಭಾವವೆಂದು ನಿರ್ಧರಿಸಲಾಗುತ್ತದೆ. ಸಾಮೂಹಿಕ ಸಮಾರಂಭಗಳಲ್ಲಿ ಸಹ ಭೋಜನ ಇದ್ದಾಗಲೂ ಮೊದಲ ಪಂಕ್ತಿಯ ಊಟ ಯಾರದ್ದಾಗಿರಬೇಕು ಎಂಬ ಶ್ರೇಣೀಕರಣ ವ್ಯವಸ್ಥೆಯೂ ಇದೆ. ಈ ರೀತಿಯ ಸಾಮಾಜಿಕ ವ್ಯವಸ್ಥೆಯ ದಾಖಲೀಕರಣವು ಸಾಂಸ್ಕೃತಿಕ ಬದುಕಿನ ಸೂಕ್ಷ್ಮತೆಗಳ ಕಡೆ ಗಮನ ಬೆಳೆಯುತ್ತದೆ. ಈ ವ್ಯವಸ್ಥೆ ಇಂದಿಗೂ ಹಾಗೆಯೇ ಉಳಿದಿಲ್ಲ. ಅಲ್ಪ ಸ್ವಲ್ಪ ಬದಲಾವಣೆ ಹೊಂದಿದೆ.

ಕೃಷಿಯ ವ್ಯವಸ್ಥೆಗಾಗಿ ಕರಾವಳಿಯಲ್ಲಿ ನೀರಾವರಿಗಾಗಿ ಬಳಸುತ್ತಿದ್ದ "ಪಣೆ" ಯ ರಚನೆ ವಿನ್ಯಾಸಗಳು ಬಹು ವಿಶಿಷ್ಟವಾದವು. "ಈಂದ್‌ದ ಮರತ್ತ ಕಂಡೆ ಲಕ್ಕಾದ್ ತೊಟ್ಟೆದ ಮರಯಿ ಬಾರ್ವಾಯೆರ್, ಪೊರ್ಲುದ ತೆಕ್ಕಿದ ಮರ ಒಂಜಿ ತೂದು ಒಂಜಿ ಬೆರಿಮರ, ಎಡ್ಡೆ ಗಟ್ಟಿದ ಬೆದ್ರುದ ಒಂದು ಕರೆ, ಬೆತ್ತದ ಕೊಡಂಗೆ ಬೆರಿ ಮರತ್ತ ಕೊಡಿಕ್ ಕಟ್ಟುನ ಕುಂಡೆಚ್ಚ, ನಡುಕು ಕಟ್ಟುನ ಮುದಲೆ ತಿರೆಗಣೆ, ತಿರ್‌ಗಣ್‌ಗ್ ರಡ್ಡ್ ಕೆಬಿ , ದಂಬೆ, ನೀರ್ ಕುತ್ತಿ, ಅಡ್ಡ ಮರ ತಯಾರಾದಾನಗ ಪತ್ತ್ ದಿನ ಆಂಡ್. ಒಂಜಿ ದಿನ ಅಪ್ಪೆನ ಕಾರ್ ಪತ್ತ್‌ದ್ ಮೆಗಿಲ ಪಲೆಲ ಮುಗೆರೆರ್ಲೆನ ನಾಲ್ ಕುಡಿಯೆರೆನ್ಲಾ ಸೇರ್‍ಸಾದ್ ಸಾಮಾನ್ ತುಂಬಾವೊಂದು ಮಜಲ ಲೋಡಿಗ್ ಪಿದಾಡ್ಯೆರ್. ಕಾಂಡೆದ ತಂಞನ ಬೆಂಞನ ಆದ್ ಪಿದಾಡ್ನಕ್ಲ್ ಮಜಲೋಡಿದ ಬೈಲ್‌ಗೆತ್ತ್‌ನಗ ಮದ್ಯನ ಕರಿದಿತ್ತ್‌ಂಡ್. (ಅದೇ, ಪು ೪೭) (ಕೊನೆ ಟಿಪ್ಪಣಿ ೩೮)

ಇಂದು ಕರಾವಳಿಯಲ್ಲಿ ಕೃಷಿ ನೀರಾವರಿಗೆ ಎಲ್ಲ ಕಡೆಯಂತೆ ಪಂಪು ಸೆಟ್ಟುಗಳನ್ನು ಬಳಸಿದರೆ, ಹಿಂದೆ 'ಪನೆ'ಯನ್ನು ಬಳಸುತ್ತಿದ್ದರು. ಅಳವಾದ ಬಾವಿಗಳಿಂದ ಬಹಳ ವಿಶಿಷ್ಟವಾಗಿ ನೀರೆತ್ತುವ ಸಾಧನ ಮತ್ತು ಅದಕ್ಕೆ ಬಳಸುವ ಸಲಕರಣೆಗಳು ಇಂದು ಕಾಣೆಯಾಗುತ್ತಿದೆ. ನೀರೆತ್ತುವ ತಂತ್ರಜ್ಞಾನದ ಪ್ರಾಚೀನತೆ ಅದನ್ನು ತಯಾರಿಸುವ ಬಳಸುವ ವೈವಿಧ್ಯದಿಂದ ಸಂಸ್ಕೃತಿಯ ಒಂದು ಭಾಗವಾಗಿ ಗುರುತಿಸಲ್ಪಡುತ್ತಾರೆ.

ಪನೆಗೆ ಬಳಸುವ ಸಲಕರಣೆ ಮಾತ್ರವಲ್ಲದೆ ಅದನ್ನು ತಯಾರಿಸುವ ನೀರೆತ್ತುವ ವಿಧಾನವನ್ನು ವಿವರಿಸುತ್ತಾರೆ. "ಕುಡಿಯೆರ್ಲುಲ ಮುಗೆರೆರೆ ಜವಣ್ಯೆರ್ಲ ಮುಟ್ಟು ಮರ, ಕಬೆ ಮರಕ್ಕುಲೆನ್ ಉಂತಾದ್ ಬೆರಿಮರ ಕುಲ್ಲಾಯೆರೆ ಮಂಜಣನ್ ಕಾತೊಂದಿತ್ತೆರ್. ಮಂಜಣೆ ಬತ್ತ್‌ದ್ ಕುಂಡಚ್ಚೆ ಮುದಲೆ ಕುಲ್ಲಾಯೆರೆ ಗುರ್ತ ಮಂತ್ ಕೊರ್ಯೆ, ಚಡಿ ಗೆಪ್ಪಾದ್ ಬೆರಿ ಮರತ್ತ ಕೊಡಿಟ್ ಪುರಿಬಲ್ಲ್‌ಡ್ ಕುಂಡಚ್ಚನ್ ಕುಲ್ಲಾಯೆರ್. ಕುಂಡಚ್ಚಗ್

ಕೊಡಂಗೆನ್ ಕೋತೆರ್ ಮಿತ್ತ ಬೈಲ್‌ದ ದಿಕ್ಕೆರ್ಲು ಬೈತ ಬಲ್ಲ್ ನೆಯ್ಯೆರ್, ಬಾಕಿದಕ್ಲ್ ಬೆರಿ ಮರ ಏರ್ಪಾಯೆರ್. ಗುತ್ತಿನಾರೆನ್ ಕಾತೆರ್. ಗುತ್ತಿನಾರ್ ದೈವೊಗು ಬೊಂಡ ಕೊಡಪಾದ್ ದೀದ್ ಬನ್ನಗ ಪೊರ್ತು ನೆತ್ತಿಗ್ ಬತ್ತ್, ಅಜ್ಜಿ ಕೊಣತಿ ತಾರಾಯಿನ್ ಮಂಜಣೆ ಪಣೆತ್ತ, ಅಡ್ಡ ಮರಕ್ಕ್ ದುನ್ನೊಗುಂದ್ ಕಟ್ಟ್‌ದ್‌ನ ಕಲ್ಲ್‌ಗ್ ದರ್ತ್, ಅಜ್ಜಿ ಕೋಳಿತ್ರಿ ಕುಂಬುಡೊನು ಕುತ್ತ್‌ದ್‌ನ ಮಜಲೋಡಿದ ಮುಗೇರೆರೆ ಗುರಿಕಾರಡ ಕೊರ್ದು ದರ್ಪಯೆರ ಪಂಡೆರ್. ಕುಂಬ್ಡ ದರ್ತಿ ಬುಕ್ಕ ಮಾತೆರ್ಲ ಕೂಡುದು ಬೆರಿ ಮರನ್ ಏರ್ಪಾಯೆರ್, ಮುದಲೆಡ್ ಕುಲ್ಲ್‌ನ ಬೆರಿಮರ ಕಬೆತ್ತ ಕೋಲುಡು ಮಿತ್ತ್ ತಿರ್ತ್ ಪೋಂಡು. ಕಡೆಟಿತ್ತಿ ಅಡ್ಡ ಮರೊಕ್ಕು ಬೈತ ಬಲ್ಲ್ ನೇಲ್ಪಡಾಯೆರ್, ಮಂಜಣೆ ಬೆದ್‌ರ್‌ದ ಕರೆನ್ ಕೊಡಂಗೆಗ್ ಕಟ್ಟ್‌ದ್ ಕರೆಟ್ ಕೆಬಿನ್ ಕಟ್ಟಾದ್, ತೊಟ್ಟೆದ ಮರಾಯಿನ್ ತಿರ್ಗಣೆದ ಕೋಲುಡು ಕರೆತ ಕೆಬಿಕ್ ಕೋತೆ. ಪಣೆ ತಯಾರಾದಾನಗ ಮುಟ್ಟುದ ಮರಟುಂತಿ ಅರುವತ್ತನ ಮುಂಡೊಗ್ಲ ಮರಯಿಗ್ಲ ದೈವದ ಗಂಧ ಪೂಜಿದ್ ಪನೆತ್ತ ಬರಿಟ್ ನೇಲುನ ಉಮೇದ್ ಜವಣೆರೆಗ್ ಮಾತೆರೆಗ್ಲ ಕಡೆಕ್ ಕಿನ್ಯನೆಲ ಕುಡಿಯೆರ್ಲುಲ ಪತ್ತ್ ಮರಯಿ ನೀರ್ ಮಗ್‌ತ್‌ದ್ ತೋಜಾಬಂದ್ ಪನೆತ್ತ ಬಲ್ಲ್‌ಗ್ ಪತೊಂಡೆರ್( ಅದೇ, ಪು ೫೦) (ಕೊನೆ ಟಿಪ್ಪಣಿ ೩೯)

"ಪನೆತ್ತ ನೀರ್ ಮಗಪುನಗ ಲೆಕ್ಕೊಗುಂದು ರಡ್ಡ್ ಗುರಿಕ್ಲೆಡ್ ಐವ ಕಲ್ಲ್ ಪಾಡ್ದ್ ಅಯೆನ್ ಮರಯಿದ ನೀರ್ ಮಗತ್ತಿಲೆಕೊನೆ ಗುರಿಡ್ದ್ ಗುರಿಕ್ ಪಗತ್ತ್‌ಂಡ ಐವ ಕಲ್ಲ್ ಒಂಜಿ ಗುರಿಡ್ದ್ ಬೊಕ್ಕೊಂಜಿ ಗುರಿಕ್ ಪಗರ್‍ನಗ ಒಂಜಿ ಗುರಿ ನೀರಾಂಡ್‌ಂದ್ ಲೆಕ್ಕ. ಈ ರೀತಿ ಐವತ್ತೊಟ್ಟೆದ ನಾಲ್ ಗುರಿ ನೀರಾಂಡ ಅಯಿಕ್ ಒರ್ಲ ಬಾರ್‌ದ ಮಜೂರಿ (ಅದೇ ,ಪು ೫೬) (ಕೊನೆ ಟಿಪ್ಪಣಿ ೪೦)

ಹೀಗೆ ದುಡಿದದ್ದರಿಂದಲೇ ಬಹಳ ವಿಸ್ತಾರವಾದಭೂಮಿಯ ಒಡೆಯರಾಗುವುದೇ ಬದುಕಿನ ಕನಸಾಗಿತ್ತು. "ಆಯಗ್ ಸುತ್ತ ಮುತ್ತ ವರ್ಕಾಡಿ ವಿಟ್ಲ ಸೀಮೆಡ್ ಮಾತೆಡ್ದ್ ಮಲ್ಲ ಆಸ್ತಿದ ಇಲ್ಲ್ ತನ್ನವಾವೊಡು. ಒಂಜಿ ಸಾರ ಮುಡಿ ಅರಿತ್ತ ಆಸ್ತಿ ಬೆನೊಡು, ಒಂಜಿ ಸಾರ ಮುಡಿ ಅರಿತ ಗೇಣಿ ಬರೊಡು, ಬಾಕಿ ಮಾರ ಕಂಡೊಡು ಕಂಡ ಗೋರುನಾನಿ ಇರ್ವತ್ತೈನ್ ಜೋಡು ಎರು ಕಟ್ಟೊಡು. ಸೀಮೆದ ಜನ ಅಯನ್ ತೂಯೆರೆ ಬರೊಡು, ಇಂಚ ಮಲ್ಲ ಮಲ್ಲ ಕನ ತಿರ್ಗೆರೆ ಸುರುವಾಂಡ್" (ಅದೇ ,ಪು ೬೨) ಕೊನೆ ಟಿಪ್ಪಣಿ ೪೧)

ಕೃಷಿಕರಾಗುವುದೇ ಹೆಮ್ಮೆಯ ಸಂಗತಿಯಾಗಿಭೂಮಿಯ ಒಡೆತನ ಹೆಚ್ಚಿದಷ್ಟು ಸಾಮಾಜಿಕ ಸ್ಥಾನಮಾನಗಳು ಹೆಚ್ಚುತ್ತಿತ್ತು. ಅಂತಹ ಜಮೀನನ್ನು ಮಾಡಲು ಅವರು ಮಾಡಿಕೊಂಡ ಸಿದ್ಧತೆಯೇ ಬಹು ಶ್ರಮದಾಯಿಕವಾದುದು. "ಬೆನ್ನಿ ಕರಿದ್ ಗುಡ್ಡೆ ಗರ್ತ್‌ದ್ ಪೊಸ ಕಂಡ ಮನ್ತೆರ. ಬೈಲ್‌ದ ಮೂಲೆಡ್ ಪರಿತ್ ಪೋಪಿ ತೋಡುಗು ಅಡ್ಡ ಕಟ್ಟ್‌ದ್ ಬೊಟ್ಟ್ ಕಂಡೊಲೆಗ್ ನೀರೊಡ್ಡಾದ್ ಸುಗ್ಗಿದ ಬೆನ್ನಿ ಮಂತೆರ್. ಎದುರುದ ಬಟ್ರೆನ ಪರ ಬೈಲ್ ಕಂಡೊನು ಗರ್ತ್‌ದ್ ಮಲ್ಲೆ ಮಂತೆರ್. ಮಂತ್‌ದ್ ಪೂಕರೆದ ಕಂಡಂದ್ ಪಂಡೊಂಡೆರ್. ಪೂಕರೆದ ಕಂಡ ಬಾಕಿಮಾರ ಕಂಡ ಆಂಡ್. ಬಾಕಿ ಮಾರ ಕಂಡ ದುಂಬುಗು ಕಂಬ್ಳದ ಕಂಡ ಆಂಡ್. ಕೆಲವು ವರ್ಸ ಕರಿನಗ ಅವ್ವೆ ಕಂಡ ಮೂಜಿ ಮುಡಿ ಅತಿಕಾರ ಬಾರ್ ಬಿತ್ತುನ ಕಂಡ ಆಂಡ್"(ಅದೇ, ಪು ೪೪).(ಕೊನೆ ಟಿಪ್ಪಣಿ ೪೨)

ಕೃಷಿ ಸಂಸ್ಕೃತಿಯ ಮುಖ್ಯ ಭಾಗವಾಗಿ ಕೃಷಿಯನ್ನು ವಿಸ್ತರಿಸಿದ ಸೂಕ್ಷ್ಮಗಳು ಬಹಳ ಮುಖ್ಯವಾದವು. ಯಾವ ಎಲ್ಲ ಪ್ರದೇಶಗಳನ್ನು ಗದ್ದೆಗಳನ್ನಾಗಿ ಪರಿವರ್ತಿಸಲಾಯಿತು. ಕರಾವಳಿಯ ಉದ್ದಗಲಕ್ಕೂ ಭೂಮಿಯ ಒಡೆತನ ಹೊಂದಿರುವವರೆಲ್ಲರೂ ಬೇರೆ ಬೇರೆ ಸ್ವರೂಪಗಳಲ್ಲಿ ತಮ್ಮ ಅದೀನಕ್ಕೆ ದಕ್ಕಿದ ಜಮೀನನ್ನು ವಿಸ್ತರಿಸಿಕೊಂಡ ಬಗೆ ಮತ್ತು ಅದರಿಂದ ಪಡೆದ ಅಧಿಕಾರ ಸಾಮಾಜಿಕ ಸ್ಥಾನಮಾನಗಳೂ ಮುಖ್ಯವೆನಿಸುತ್ತದೆ. ಬಾಕಿಮಾರು ಗದ್ದೆ ಪೂಕರೆ ಗದ್ದೆಯಾಗಿ, ಪೂಕರೆ ಕಂಬಳದ ಗದ್ದೆಯಾಗಿ ಪರಿವರ್ತನೆ ಹೊಂದಿದ ಪಲ್ಲಟದ ಅಂಶ ಈ ಗದ್ದೆಯ ಯಜಮಾನನೂ ಸಾಮಾಜಿಕವಾಗಿ ಪಡೆದ ಸ್ಥಾನಮಾನಗಳ ನಿರೂಪಣೆಯಾಗಿದೆ. ವಿಸ್ತಾರಗೊಂಡ ಅಧಿಕಾರದ ಹಂತಗಳೊಂದಿಗೆ ಪಡೆದ ಆದಾಯಗಳು, ಶ್ರಮವನ್ನು ದುಡಿಮೆಯನ್ನು ವಿಸ್ತರಿಸಿಕೊಂಡ ಹಂತಗಳೂ ಬಹು ಮುಖ್ಯ ಅಂಶವಾಗಿದೆ. ಜೀವನ ಕ್ರಮದ ರೀತಿ ನೀತಿಗಳೂ ಆರಾಧನೆ ಮತ್ತು ಆಚರಣೆಯ ಭಾಗವಾಗಿ ಸಂಸ್ಕೃತಿಯ ಪ್ರತಿಬಿಂಬ ಮಹತ್ವದ ಸ್ಥಾನವನ್ನು ಪಡೆದುಕೊಂಡಿದೆ.

ತುಳುನಾಡಿನ ಜನಸಾಮಾನ್ಯ ದುಡಿಯುವ ವರ್ಗ ಹೇಗಿದೆ ಎಂದು ಎಳೆ ಎಳೆಯಾಗಿ ಸಾಂದರ್ಭಿಕವಾಗಿ ವಿವರಿಸುತ್ತಾರೆ. 'ಮಂದಾರ ರಾಮಾಯಣ' ದಲ್ಲಿ ಮಂದಾರ ಕೇಶವ ಭಟ್ಟರು ತನ್ನ ಕೃತಿಯುದ್ದಕ್ಕೂ ತುಳುನಾಡಿನ ಜನ ಜೀವನದ ಪ್ರತಿಬಿಂಬವನ್ನು ಕಿರಿದರಲ್ಲಿ ಹಿರಿದರ್ಥ ಹೇಳುವ ಗಾದೆಮಾತು, ನುಡಿಕಟ್ಟಿನಿಂದ ವಿವರಿಸುತ್ತಾರೆ. ಕೌಶಿಕನೊಂದಿಗೆ ತೆರಳುತ್ತಿರುವ ರಾಮಲಕ್ಷಣರನ್ನು ಹಾದಿಯುದ್ದಕ್ಕೂ ನೋಡಲು ಬಂದ ಜನ ಹೇಗಿದ್ದರು ಎಂದು ವಿವರಿಸುತ್ತಾರೆ.

"ಒಂಜಿ ದಿನೊಟೀ ಜವಣೆರೆನ್ ಬೆರಿಯೆ ಲೆತ್ತೊಂದು
ಕೌಸಿಕೆರ್ ಕಾಡ್ ತೋಡುದ ಪೊರ್ಲು ತೋಜಾವೊ–
ಡುಂದು ಪೋನಗ ಸಾದಿಡಿತ್ತಿಲ್ಲ್‌ದಕುಳು ಜಾ–
ಲ್‌ಗ್ ಬತ್ತ್‌ದೀ ಕುಸಿಕ್ ಕೆಯ್ಮುಗಿದ್ ಪಾಸಾಡಿ–
ಡಿತ್ತಿನಕುಳೇರ್‌ಂದ್ ಪಿಂದ್ ದಸರ್‌ಗ್ ಲತ್ತ್
ಬೊಂಡ ದೆತ್ತ್‌ದ್ ಕೆತ್‌ದ್ ಕೊರ್ದು ಕಡಪುಡುನಕುಳು
ತರೆಕ್ ಮುಟ್ಟಲೆ ದೀದ್ ತುಂಡು ಕುಂಟುನು ಸೊಂಟೊ –
ಗೊಯ್ತ್ ಕಟ್ಟ್‌ದ್ ಕಟ್ಟಿ ಕಟ್ಟೊಡೆರ್ಕಿನ ನೀರ್
ನವುಳುವುಳು ಪಾಡಿ ಪಣೆ ಕಯ್ದಂಬೆಲೆಡ್ ಮಗಪು
ತೇಪು, ಜನೊಕುಳು, ಮಣ್ಣೊರೆಂಕೊಂದು ಬೆನ್ನಿ ಬೆ
ನ್ನಿನ ಪಾಕದ ಕುಳರಾದಿನ ಬೆಜಕೆರೆನ್ ಕುರ್ಕಿ–
ಲ್‌ಡ್ ನಿಲ್ಕೆ ದಿಂಜಾದ್ ಕಣಪಿನಕುಳಂಚಿಡ್ದ್
ಕಂಜಿ ಕಯ್ಕಳೆನ್ ಮೇಪಾವು ಜೊಕುಳು ಇಂಚ
ಯೇರಾವಡೊಂಜೊಂಜಿ ಬೇಲೆಡತ್ತಂದೆ ಜಂ–

ಬರ ದಾಂತಿನಕುಳಿಜ್ಜಿ ಪತ್ತ್ ಬಿರೆಲ್‌ಲೆ ತರೆಪು
ಐನ್ ಬಿರೆಲ್‌ಲ ಮೊರೆಪು ಪಣ್ಪಿ ಪಾತೆರ ಮೊಕುಳೆ-
ಗೇಪಲಾ ಸರಿ ನೆನಪು, ಮಣ್ಣ್ ಪುಂಚೆದ್ ಬೆಗರ್
ಸೀಂಟ್ ಜನೊಕುಳೆನ ಕಯ್ಯುಗ್ಗೊಟು ಬಂಗಾರ್ ಬುಳೆ
ಪುನ ಮಣ್ಣಗುಣೊನು___ತೂದು
......... ಈ ಕೊಳೆಂಜಿಲೆಡ್ ಯೆರು
ಕಟ್‌ದ್ ನಾಯೆರ್‌ದ ಪುಟ್ಕಾಯ ಪತ್ತ್‌ದ್ ದತ್ತ
ಕಯ್ಪುರಬುಡುನು ಬಲ್ತ ಕಯ್ಪ್ ಪತ್ತೊಂದುರಲ್
ಪಾಡೊಂದು ದತ್ತ್‌ದುರ ಮಳ್ಪುನಾಯನ ಮೆಯ್ಪ್
ರಟ್ಟಿ ಕೆಸರ್‌ದ ಲೇಪ ತೂಂಡ ಮೊಕುಳೀ ಮಣ್ಣ
ಬಾಲೆಲೂನ್ವಿನ ಸತ್ಯ (ಮಂದಾರ ಕೇಶವ ಭಟ್ಟ ; ೧೯೮೭; ಪು ೪೮-೪೯ )(ಕೊನೆ ಟಿಪ್ಪಣಿ ೪೩)

ಶ್ರಮಿಕ ವರ್ಗದ ಜನಸಾಮಾನ್ಯ ಕೃಷಿಕನೊಬ್ಬನ ಚಿತ್ರ ಇಲ್ಲಿ ಕಣ್ಣಿಗೆ ಕಟ್ಟುವಂತೆ ವರ್ಣನೆಯಾಗಿದೆ. ದುಡಿಮೆ, ಪ್ರಪಂಚದ ಬಿಸಿಯುಸಿರುಗಳನ್ನು ಹಸಿ ಹಸಿಯಾಗಿ ಹೇಳುವಾಗ ರೈತರ ಬಾಳುವೆಯ ತಿರುಳು ಮತ್ತು ಮೌಲ್ಯ ಮೇಲ್ನೋಟಕ್ಕೆ ಗಮನ ಸೆಳೆಯುತ್ತದೆ.

ಕೃಷಿಯಿಂದ ಬದುಕು ಕಟ್ಟುವ ಜನರಲ್ಲಿ ಮಣ್ಣಲ್ಲಿ ಮಣ್ಣಾಗಿ ದುಡಿಯದೆ ಇದ್ದರೆ ಅವರ ಬಾಳುವೆಯ ನಿರ್ವಹಣೆ ಅಸಾಧ್ಯ. ಹಾಗೆ ದುಡಿಯುತ್ತಲೇ ಶ್ರಮವನ್ನೇ ಬದುಕಿನ ಧರ್ಮವಾಗಿಸಿ ಆದರದ ಆತಿಥ್ಯವನ್ನು ಜೀವನ ಪ್ರೀತಿಯನ್ನು ಜನ ಮನ್ನಣೆಯನ್ನು ಮರೆಯದವರು ಆಗಿದ್ದಾರೆ.

ಕರಾವಳಿಯಲ್ಲಿ ಸಹಜವಾಗಿ ಮೂರು ಬೆಳೆಯನ್ನು ಬೆಳೆಯುವ ಸಮೃದ್ಧಿಯ ನೆಲವಿದು, ಎಣೆಲು, ಸುಗ್ಗಿ, ಕೊಳಕೆ ಎಂಬ ಮುಖ್ಯ ಬೆಳೆಯನ್ನು ಬೆಳೆಯಲಾಗುತ್ತದೆ. ಕರಾವಳಿಗೆ ಬಹಳ ವಿಶಿಷ್ಟವಾಗಿರುವ ಕೃಷಿ ಪರಂಪರೆ ಇದು. ಸಾಗುವಳಿಯಲ್ಲಿ ಎಣೆಲು, ಸುಗ್ಗಿ, ಕೊಳಕೆಯಲ್ಲಿರುವ ಸೂಕ್ಷ್ಮ ವ್ಯತ್ಯಾಸಗಳನ್ನು ಮತ್ತು ಸರಳ ನಿರೂಪಣೆಗಳ ಮೂಲಕ ಕೃಷಿ ಬದುಕಿನ ವಿವರಗಳನ್ನು ನೀಡುತ್ತಾರೆ.

'ಪತ್ತನಾಜೆಲ ಕರಿದ್ ಕಿರ್ತಿಕೆಲ ಕಾಯ್ದ್ ಪಾಡ್ದಿತ್ತಿ ಪೊಡಿ
ನೇಜಿ ಗಂಡೇಡ್ದೀಜಿ ಪೂರಲ ಕರ್‌ಂಚಿದೇ
ಪೋಂಡು ದೋಟೊಲು ಮಾತ ಕೆಂಪಾಂಡ್ ಊರು ಕೂ-
ಡಿಗ್ ಆದ್ ಗೆರಮ ದೇವೆರೆಗೊಂಜಿ ಬೊಂಡ-
ದಬಿಸೇಕಲಾಂಡ್ ಕೆಮ್ಮುಗಿದ್ ಪಂಡೊಂದಾಂಡ್
................................ ದಾರೆ ನೀರ್
ಜತ್ತ್‌ಂಡ್ ಬಾಣೊ ಡೊರ್ಮೆಲ ಮಯ್ತ ಲೆಕ್ಕಂತಿ
ಮುಗಲ್ ಪರತ್‌ಂಡ್ ಸುರುವಾಂಡ್ ದೊರಿಯೆರೆ ಬರ್ಸ

ಸೊರ್ಗ ಲೋಕೊಡು ತೂಟೆದಾರನಾನ್ಪಿನ ಲೆಕ್ಕ

ನಾಲ್ ಮೆಯೊರ್ಮೆ ಬಾಣೊಡು ಮೆಂಚಿ ದಕ್ಕುನೆನ್

ತೂಯೆರಾಪುಜಿ ಕಣ್ಣ್ ಬುಡ್ದು.......

___...........ಬಾರಿ ಗಾಳ್ಯಬರ್ಸ್ಲೊಗು ಜತ್ತಿ

ಕಾಡ ನೀರ್ಡಡ್ಡ ಕಡತಿನ ಕಾಟಿ ಪಂಜಿಲು ಪು

ಲಾವೊಂದು ಪೋಂಡು ನೀರ್ಗ್ ತೋಡು ಯಾವಂದೆ

ಕಟ್ಟಪುಣಿ ತಮೆಲ್ಂಡ್ ನೀರ್ ನೆಗತ್ಂಡ್ ತೋ

ಡುಡು ಪರಪು ಸುರುವಾಂಡ್ ಒರ್ಮೆಲಾ ವೊಸರಾಂಡ್

ಕಂಡೊಗೆರು ಜತ್ತ್ಂಡ್ ಉರಲ್ ಕೇಂಡೊಂದುಂಡು

ನೇಜಿ ಗಂಟಾವೂನ್ಪಿ ಯೆತೆ ಪೋಂಡು ದಪ್ಪುವೆರ್

ಬರಿ ಕಡ್ಪುವೆರ್ ಪಲಾಯ್ಮುಟ್ಟುವೆರ್ ಪೊಂಜೋವ್ಲು

ಪಾರ್ದನೆನ್ ಪಂಡೊಂದು ನೇಜಿ ದೆಪ್ಪುವೆರ್ ನ

ಡ್ಪೆರ್ ಇಂಚ ಬೆನ್ನಿ ಮುಗಿತೆರ್ ಹಳ್ಳಿಡಿತ್ತಿ ಜನೊಕುಳು

ಬೆನ್ಪಿನಕುಳು (ಅದೇ, ಪು ೨೩೬ –೨೩೭) (ಕೊನೆ ಟಿಪ್ಪಣಿ ೪೪)

ಮುಂಗಾರು ಮಳೆಯೊಂದಿಗೆ ಕರಾವಳಿಯಲ್ಲಿ ಆರಂಭಗೊಳ್ಳುವ ಕೃಷಿ ಚಟುವಟಿಕೆ ಮತ್ತು ಮೊದಲು ಬೆಳೆಯುವ ಬೆಳೆಯೇ ಎಣೆಲು. ಅತಿ ಹೆಚ್ಚು ಪ್ರದೇಶದಲ್ಲಿ ಫಸಲು ಪಡೆಯುವ ಈ ಬೆಳೆಯು ಮಳೆಯನ್ನು ಅನುಸರಿಸಿ ನಡೆಯುವ ಕೃಷಿ ಕಾರ್ಯ ಬೇಷದಲ್ಲಿ ಬಿದ್ದ ಮೊದಲ ಮಳೆಗೆ ಬೇಸಿಗೆಯಲ್ಲಿ ಬಿತ್ತಿದ 'ಪೊಡಿನೇಜಿ' ಗಂಟಾಗದಂತೆ ನಾಟಿಯಾದರೆ ಒಳ್ಳೆಯ ಫಸಲು ಬರುತ್ತದೆ. ಸಾಂಸ್ಕೃತಿಕವಾಗಿ ಕೃಷಿ ಚಟುವಟಿಕೆಯೊಂದಿಗೆ ಬೆಸೆದ ಜನರ ಬದುಕು ಬೆಳೆಯುವ ಬೆಳೆಯ ವೈವಿಧ್ಯತೆಯೆ ವಿಭಿನ್ನವಾದುದು. ಜನಪದದ ತಾಯಿ ಬೇರೇ ಕೃಷಿ ಚಟುವಟಿಕೆಯಾದುದ್ದರಿಂದ ಉರಲ್, ಸಂಧಿ, ಪಾಡ್ದನಗಳು ಕಿವಿಗೆ ಅನುರಣನಗೊಳ್ಳುತ್ತಿತ್ತು. ಸಾಂಪ್ರದಾಯಿಕ ಕೃಷಿ ಚಟುವಟಿಕೆಯ ಸೂಕ್ಷ್ಮ ವಿವರಗಳಾದ ಉಳುಮೆ, ಬದುಸವರುವ, ಹಲಗೆ ಹಾಕುವ ಕಾರ್ಯಗಳ ಉಲ್ಲೇಖಗಳು ಕೃಷಿಯೊಲುಮೆಯನ್ನು ಕಣ್ಣಿಗೆ ಕಟ್ಟುವಂತೆ ವರ್ಣಿಸುತ್ತಿದೆ.

.............ನಡ್ತಿನ ಮಾತ

ಜಿವ ಪತ್ತ್‌ನಗ ಸುದೆ ಬರಿಟಿತ್ತಿ ತಗ್ಗ್ ಸಾ

ಲ್‌ದ ಕಂಡೊಲೆಗ್ ಬೊಳ್ಳ ಬೂರ್ದು ಏಳೆಣ್ಮ ದಿನ

ತಗ ಜತ್ತ್‌ದೊಂಜಿ ತಿಂಗೊಳುದಗನೆ ಕೇದ್‌ಕು–

ಳ್ಳುದು ಕೆಯ್ತ ವೊಂಜೊಂಜಿ ಪತ್ತ್ ಪಣ್ಪಿನ ನೇಲ್ಯ

ಬೆದುರ ಪುಂಡೆದ ಲೆಕ್ಕ ಲಕ್ಕ್‌ಂಡ್ ಬೇಶೊಡೆಂ–

ಚಲ ಬೂತೊಲೆಗ್ ಮಳ್ತ್‌ದಾತ್‌ಂಡ್, ಆಟಿ ಕರಿ-
ಪೆರೆ ಮದಿಮೆಯಾದಿತ್ತಿ ಪೊಸ ಪೊಣ್ಣುಳಪ್ಪೆನಿ-
ಲ್ಲಡೆ ಗೆತ್ತ್‌ದಾಂಡಾಟಿ ತಿಂಗೊಳುಡು, ತಯ್ತಿನಕ್
ಳೆಗ್ ನುಪ್ಪು ಕಜಿಪು ಬಾಜೆಲೆನ್ ತಟ್ಟಿಡ್ ದೀದ್
ಪೊಸ ಕುಂಟು ದೀದ್ ಕಯ್ಮುಗಿದೊಂಜಿ ವರ್ಸಮು-
ಟ್ಟೆಲ್ಲೆಲ್ಯ ಬಾಲೆಲೆಗ್ ಮದಿಮಾಳ್ ಪೊಣ್ಣುಳೆಗ್
ಕಯ್ಕಂಜಿಲೆಗುಪದ್ರ ಬಾದೆಲು ಬರಂದಿಲೆ-
ಕ್ಕಾಂಡ್ ಆಟಿದಮಾಸೆದಾನಿ ಮೂಡಾಯಿ ಬೊ
ಳ್ಪಾವೋಡ್ಡ ಕರ್ಬ ಮುಟ್ಪಾವಂದೆ ತೆಕ್ಕೆ ಕ-
ಲ್ಲ್‌ಡ ಕೊಡಂಟಿಡ ಗುದುದು ಕೆತ್ತೆ ಲಕ್ಕಾದ್ ಪಾ-
ಳೆದ ಕೆತ್ತೆ ಪರ್ದ್ ತಾರಾಯ್ದ ಗಂಜಿನುಣಂದಿ-
ನಕುಳಿಜ್ಜಿ, ಕೇಪುಲ್ದ ಪೂ ತಿರಿಯೊಲಿಕ್ಕ್ ತಿ
ಕ್ಕಾದ್ ಕೂರಂಬೆಲೊಟ್ಟುಗು ಕಟ್ಟ ಪಾಡ್ದ್ ಕ-
ಳ್ಳಿದ ತುಂಡು ಕಂತಾದಿ ಕಾಯೆರೆದ ಕೋಲು ಪು
ಲ್ಯಾನಗನೆ ಮಾತೆರ್ಲ ಕೊಣೊಂದು ಕೌಂತೆರ್ ಕಂಡೊ-
ಲೆಡ್ ಬೊಕ್ಕ ಕಡಲ್ ಮೀಯೆರ್ ನಡತಿ ಪೋದು ೪೫)

ವಾರ್ಷಿಕ ಆವರ್ತನದಲ್ಲಿ ಕೃಷಿ ಚಟುವಟಿಕೆಯಿಂದ ಬೆಸೆದಿರುವ ಹಬ್ಬ ಹರಿದಿನಗಳು ಮತ್ತು ಬೆಳೆವ ಬೆಳೆಯ ಫಸಲಿನ ಹಂತಗಳನ್ನು ಗಮನದಲ್ಲಿರಿಸಿವೆ. ಅದರಲ್ಲೂ ಮುಖ್ಯ ಅಹಾರ ಬೆಳೆಯಾದ ಭತ್ತದ ಬೆಳೆಯು ಪ್ರಮುಖ ಸ್ಥಾನ ಪಡೆಯುತ್ತದೆ. ಪ್ರಾಕೃತಿಕವಾಗಿ ಸುರಿಯುವ ಮಳೆಯೊಂದಿಗೆ ಫಸಲು ಕೈ ಸೇರುವುದರಿಂದ ಪ್ರಸಿದ್ಧವಾದ ಗಾದೆಯೊಂದು ಚಾಲ್ತಿಯಲ್ಲಿದೆ. 'ಎಣೆಲು ಸೂಳೆ, ಸುಗ್ಗಿ ಮದಿಮಾಳ್, ಕೊಳಕೆ ಪೆದ್ಮೆದಿ"(ಎಣೆಲು ಸೂಳೆ, ಸುಗ್ಗಿ ಮದುಮಗಳು, ಕೊಳಕೆ ಬಾಣಂತಿ) ಹೆಣ್ಣಿನ ಬದುಕಿನ ಮೂರು ಗತಿಗಳನ್ನು ಸ್ಥಿತ್ಯಂತರಗಳನ್ನು ಬೆಳೆಯೊಂದಿಗೆ ಸಮೀಕರಿಸಲಾಗಿದೆ.

........ ನಿರ್ನಾಲ ನಡಪುಂಡು

ಪಾಯಾತಿ ಕುಗಲ್ ಬನ್ನಂಗಾಯಿ ಆಂಡ್, ಕೊಡಿ
ಕದಿಕೆ ಪೆಲ ಕುಕ್ಕು ಬೆದುರುತ್ತಸದ ಇರೆ ದಡ್ಡ
ಲೆದ ನಾರ್ ಕುರಲ್ ಕಣತ್‌ದ್ ಪಾಕದಕುಳಿಲ್ಲ್

ದಿಂಜಾದ್‌ಲಾಂಡ್ .....(ಅದೇ, ಪು ೨೪೦)

... (ಶ್ರಾವಣ ತಿಂಗಳು ನಡೆಯುತ್ತಿದೆ

ತುಂಬಿದ ತೆನೆಗಳು ಹಾಲು ತುಂಬಿ ಆಯಿತು.

ಕದಿಕೆ, ಹಲಸು, ಮಾವು, ಬಿದಿರು, ಅಶ್ವತ್ಥದ ಎಲೆ

ದಡ್ಡಿನ ನಾರಿನೊಂದಿಗೆ ತೆನೆ ತಂದು ಕೆಲವರು

ಮನೆತುಂಬಿಸಿಯಾಯಿತು.)

ಬಂದ ಮೊದಲ ಬೆಳೆಯನ್ನು ಮನೆ ತುಂಬುವ ಕೆಲಸವಾದ ತೆನೆ ಹಬ್ಬವನ್ನು ಪೂರೈಸಿಯಾಯಿತು. ಪ್ರಾದೇಶಿಕವಾಗಿ ಭಿನ್ನ ಭಿನ್ನ ಎಲೆ ನಾರುಗಳನ್ನು ಜತೆಯಾಗಿ ಕಟ್ಟಿ ಬೆಳೆಯನ್ನು ಸಂಪತ್ತಿನ ಪ್ರತೀಕವಾಗಿ ಸ್ವಾಗತಿಸಲಾಗಿದೆ.

'ಪಚ್ಚೆ ಮಾಜಿಂಡ್ ಮಂಜಲ್ ರಂಗ್ ಮಗ್‌ರ್‌ಂಡ್

ಕಂಡೊಲೆಡ್ ಪುಂಡು ಪುಂಡಾದ್ ಗಿಳಿಕುಲು ಕುರಲ್

ರುಂಬೊಂದು ರಾದ್ ಪೋವೊಂದುಂಡು ಸಾಲ್ ಸಾ

ಲಾದ್ ಪರ್ದತ್ತಿ ಕಂಡೊಲೆಗ್ ಜತ್ತ್‌ಂಡ್ ಕೆ–

ಯ್ತುಂಬುದರ್ತ್‌ದ್ ಬಾರ್ ನುಂಗೆಲ್‌ಡುಳಾಯಾಂಡ್

ದಡೆ ದೀದ್ ಬಯ್ಮುಟ್ಟುದಾಂಡ್ ಕೊಡಿ ಬೇದಾಂಡ್

ತುಪ್ಪೆ ಸಿರಿತುಪ್ಪೆ ಪತ್ತಾಯೊಲೆಡ್ ಬಾರಾಂಡ್

ಮಜಲ್ ಬಯ್ಲ್‌ಲೆನ್ ದತ್ತೊಂದು ಬರಿ ಕಡ್ತೊಂದು

ಬರಿ ಮಣ್ಣ್ ಪೂಜೊಂದು ಬೊಟ್ಟುದ ಕೊಳಂಜಿಡಾ–

ಟಿಡ್ ಪಾಡ್ದ್ ನೇಜಿ ದೆತ್ತೊಂದು ತುಂಬೊಂದು ಪೋ

ದುರ ಆತಿ ಕಂಡೊಡು ನಡೊಂದು ಸುಗ್ಗಿದ ಬೆನ್ನಿ

ಸುರುವಾಂಡ್ ಬೆನ್ನಿದ ಬರಾಂದ್‌ಂಡ್ ನಿರ್ಮಲೊಡು

ಕುಳ್ದು ಬಚ್ಚಿರೆ ಪೂಳು ತಿನಿಯೆರೆಲ ಪೊರ್ತಿಜ್ಜಿ (ಅದೇ, ಪು ೨೪೦)(ಕೊನೆ ಟಿಪ್ಪಣಿ ೪೬)

ಕೃಷಿ ಚಟುವಟಿಕೆಯ ಸೂಕ್ಷ್ಮಗಳನ್ನು ಅದೇ ಪಾರಿಭಾಷಿಕ ಪದಗಳೊಂದಿಗೆ ನಿರೂಪಿಸುತ್ತ ಎಳೆ ಎಳೆಯಾಗಿ ಕೃಷಿ ಕಾರ್ಯಗಳನ್ನು ವಿವರಿಸುತ್ತಾರೆ. ಸುಗ್ಗಿಯ ಬೆಳೆ ಮಾಡುವ ಗದ್ದೆಗಳು ಯಾವುದು ಮತ್ತು ಅದರ ನಿರ್ವಹಣೆಯ ಸೂಕ್ಷ್ಮತೆ ಹೇಗೆ ಎನ್ನುವ ವಿವರಣೆಗಳನ್ನು ನೀಡುತ್ತಾರೆ. ಕೃಷಿ ಸಂಸ್ಕೃತಿಯ ಭಾಗವಾಗಿರುವ ಈ ಎಲ್ಲಾ ಎಳೆಗಳನ್ನು ಗ್ರಹಿಸುವುದರಿಂದ ಜೀವನಕ್ರಮದ ರೀತಿ ನೀತಿಗಳನ್ನು ತಿಳಿಯಲು ಸಾಧ್ಯವಾಗಿದೆ.

ಬಹುತ್ವದ ಚಿಂತನೆಯನ್ನು ತಮ್ಮ ಬೇರುಗಳಲ್ಲಿ ಇಂದಿಗೂ ಉಳಿಸಿಕೊಂಡಿರುವ ಕರಾವಳಿಯಲ್ಲಿ ಬದುಕಿನ ದೃಷ್ಟಿಕೋನ ಮತ್ತು ಮೌಲ್ಯಗಳು ವಿಭಿನ್ನ ನೆಲೆಯನ್ನು ಹೊಂದಿವೆ. ತುಳುವರೆಲ್ಲರೂ ವಿವಾಹದ ದಿನ ಶುಭವನ್ನು ಹಾರೈಸಲು ಸೇಸೆಯಾಗಿ ಅಕ್ಕಿಯನ್ನೇ ಬಳಸುತ್ತಾರೆ. ದೇಹದ ಗಂಟು ಗಂಟಿಗೆ ಹಿಡಿ ಅಕ್ಕಿಯನ್ನು ಮುಟ್ಟಿಸಿ ಎರಡೂ ಕೈಗಳಿಂದ ಹರಸುವ ಸೇಸೆಯ ಆಶಯ ಬೆಸೆಯುವಂತಹುದೆ ಆಗಿದೆ. ಎರಡು ಜೀವಗಳನ್ನು ಬೆಸೆಯುವ ಮತ್ತು ಆ ದೇಹಕ್ಕೆ ಶಕ್ತಿ ತುಂಬುವ ಆಹಾರದ ಮೂಲವಾದ ಅಕ್ಕಿಯ ಮೂಲಕ ಬದುಕಿಗೂ ಶಕ್ತಿ ತುಂಬುವ ಆಶಯವಿದೆ. ಎಲ್ಲರಲ್ಲು ಸಾಮಾನ್ಯವಾಗಿರುವ ಈ ಆಚರಣೆಗಿಂತ ಭಿನ್ನವಾಗಿ ಬುಡಕಟ್ಟು ಸಮುದಾಯಗಳ ವಿವಾಹದ ಪರಿಕಲ್ಪನೆ ಮತ್ತು ಆಶಯವಿದೆ. ವಿಧವೆಯ ಪರಿಭಾಷೆಯೇ ಇಲ್ಲದಿರುವ ಬುಡಕಟ್ಟುಗಳಲ್ಲಿ ಬಹುಪತಿತ್ವವು ಚಾಲ್ತಿಯಲ್ಲಿದೆ. ಹೆಣ್ಣನ್ನು ಕೇಂದ್ರೀಕರಿಸಿ ಹೆಣೆದ ಕುಟುಂಬ ವ್ಯವಸ್ಥೆಯ ಒಳಗಡೆ ಹೆಣ್ಣಿನ ಫಲವಂತಿಕೆಯನ್ನು ಗೌರವಿಸಲಾಗುತ್ತದೆ.

ಜಯಮ್ಮ ಚೆಟ್ಟಿಮಾಡ ಅವರ ಕಾದಂಬರಿಯಲ್ಲಿ ನಾಯಕಿ ಮಾಚು ಋತುಮತಿಯಾಗುವ ಸಂಧರ್ಭವನ್ನು ಆಚರಣೆಯ 'ಕರಪತ್ತಾವುನ ಲೇಸ್'ಎಂದು ವಿವರಿಸುತ್ತಾರೆ.

"ಮಾಯ್ಲು ಬತ್ತಾಳ್, ನಿರೆಕರೆತ ಐನ್ ಬರಿತ ಮುತ್ತೇಸಿಲೆನ್ ಲೆಪ್ಪಾಯಾಳ್, ಕಾಪೆತಿ ಅತಿಕಾಯಿ ಬಾರೆತ (ಸುಗ್ಗಿ ಬಾರ್) ಎಳ್ಯ ಕುರುಂಟು (ಮಾಡಿ) ಮಾಳ್‌ತ ಅಳೆನ್ ಐನ್ ಹಾರಗೆತ ಮಿತ್ತ್ ಕುಳ್ಯಾತ್, ಆ ಕುಂಟುತ ಮಿತ್ತ್ ಅಳೆನ ಬಲತ್ತ ಕಾರ್ ದೀಡ್ಪಪೆರ್. ಆಳ್ ಕುಲ್ಯನಳ್ಳೇ ಒಂಜಿ ಮಿಳ್ಳಿಡ್ ಎಣ್ಣೆ ದೀಡ್ಯೆರ್. ಈ ಐನ್ ಮುತ್ತೇಸಿಳ್ ನೀರ್ ಬಚ್ಚಿರೆ ಬಜ್ಜೈ ದೀಡಿ. ಐನ್ ಚೆಂಬುಳೆನ್ ಬುಕ್ಕೊ ಚೆಂಬುಡಿತ್ತಿ ಬಚ್ಚಿರೆ ಬಜ್ಜೈನ್ ಪತ್ತೊಂಬ್ತು ಸುರುಕು ಎಣ್ಣೆನ್ ಬುಕ್ಕೊ ನೀರ್‌ನ ತಳಿತ್ತೇರ್. ಆಯಿಡ್ತ್ ಬುಕ್ಕೊ ಆಳೆಗ್ ಹರೆಮೈ ಮೀಪತ್ ಬೇತೆ ಕುಂಟು ಉತ್ತಾತ್, ಅಗೆಲ ಮಾಳ್ತ್‌ತ್ ಕಟ್ಟ್‌ನ ಕದಿಕೆತ ಉಳಾಯಿ ಕುಳ್ಪಾಯೆರ್, ಆಳ್ ಕುಳ್ಳ್‌ನ ಹಾರಗೆ ಬುಕ್ಕೊ ಆಳೆಗೇ ಹಿನ್ಯರ ಕೊರ್ಪುನ ಕೆರಮೊ (ಜಯಮ್ಮ ಚೆಟ್ಟಿಮಾಡ, ೨೦೧೩; ಪು ೫೩). (ಕೊನೆ ಟಿಪ್ಪಣಿ : ೪೭).

ಹೆಣ್ಣಿನ ಫಲವಂತಿಕೆ ಮತ್ತು ಕೃಷಿಯ ಮೂಲ ಧಾತುವಾಗಿರುವ ಆಹಾರ ಧಾನ್ಯವಾದ ಭತ್ತ ಮತ್ತು ತೆಂಗಿನಕಾಯಿಯನ್ನು ಸಂಕೇತಿಸಿ, ಅದನ್ನು ಬಳಸುವ ಮೂಲಕ ಅಕೆ ಶಕ್ತಿವಂತಳಾಗುವುದು ಮಾತ್ರವಲ್ಲ ಒಂದು ನೂರಾಗುವ ಸಾಮರ್ಥ್ಯದ ಧಾನ್ಯದಂತೆ ಪ್ರಜನನ ಶಕ್ತಿಯನ್ನು ಪಡೆಯುತ್ತಾಳೆ. ಬಹಳ ಸಾಂಕೇತಿಕವಾಗಿರುವ ಈ ಆಚರಣೆಯ ವಿವರಣೆಯ ವಿಧಿ ವಿಧಾನಗಳಲ್ಲಿ ಸಮೃದ್ಧಿಯ ಆಶಯವೇ ತುಂಬಿಕೊಂಡಿದೆ. ಸಂತತಿ ಬೆಳೆಸಲು ಹೆಣ್ಣು ಅವಶ್ಯವಿರುವಂತೆ ತಳಿ ಉಳಿಯಲು ಧಾನ್ಯ ಬೆಳೆಯಲು ಚಿಗುರುವುದು ಒಂದು ಧಾನ್ಯ ಸಾವಿರ ಧಾನ್ಯಗಳ ಕಣಜವಾಗುವ ಆಶಯವಿದೆ.

ಮಾಚುವಿಗೆ ಎರಡನೇ ಸಂಬಂಧದಲ್ಲಿ ಮದುವೆ ನಿಶ್ಚಯಿಸಿದಾಗ 'ಕೈ ಪತ್ತಾವುನು' ಕಾರ್ಯಕ್ರಮ ನಡೆಯುವ ಸಂದರ್ಭದ ಪೂರ್ವದಲ್ಲಿ ನಿಶ್ಚಿತಾರ್ಥವೂ ಅತಿ ವಿಶಿಷ್ಟವಾಗಿ ನಡೆಯುತ್ತದೆ. ಮಾಚುವಿನ ಅಪ್ಪ ಕಳಲ, ಹೇಳುವ ಮಾತುಗಳು ಮಹತ್ವದವು. 'ಕಳಲೆ' "ನಮಲ ಅಂಚೆನೆ ಗೆನ್ತ್ ತೊ ಅಂಚಾಟ ನಮೊ ಜಾತಿ ಕಟ್ಟೆಟ್ ಲೆಕ್ಕೊತ ಬಾರ್ ಕೊಂಡ್ರುನಾಂದ್ ಉಂಡೆಂದ್ ಪಂಡ್‌ತ್ ಕಾಪಾಡಿನ ಮೋನೆ ಊಯೆ' "ಅಂದಂದ್"ಂದ್ ಪಂಡ್‌ನ ಕಾಪೆ ಏಪೊಗು ಲೆಕ್ಕೊತ ಬಾರ್ ಕೊಂಡ್ರೋಳಿಂದ್ ಕೇಂಡೆ......... ಕುಳ್ಳುತು

ಪಾತೇರ್ತ್ ಅಗೆಗ್ಗೆಗ್ ಪೊಣ್ಣು ಆಣ್ ಪೊದು ಆವುದುಂಟ ಆಣ ಕೊಡಿತಗ್ಳ ಬಾರ್ ಅಳಪ್ಪಿಯರ ಪಂಟ ನಿಶ್ಚಯೊಗು ಬರ್ಪುನ ಕೆರ್ಮೊ. ಅಂಚ ಬನ್ನಗ ಬಾರ್ ಆಚಿಟ ಐನ್ ಮುಡಿ, ಅರಿ ಆಂಟ ರಡ್ಡರೆ ಮುಡಿ ಕೊಂಡ್ರೊಡು. ಒಂಜಿ ಮುಡಿ ಆಂಟಲಾ ಮದಿಮಾಯೆ ಆಣೇ ಉಂಬೊಣ್ತು ಬರೊಡು. ಪೊಣ್ಣ ಇಲ್ಲಡೆಟ್ ಮೂಜಿ ಸೇರಾಂಟಲ ಅಳಪ್ಪೊಡು"(ಅದೇ ಪು ೫೬–೫೭)(ಕೊನೆ ಟಿಪ್ಪಣಿ ೪೮)

ಹೆಣ್ಣನ್ನು ಗಂಡು ವಿವಾಹವಾಗುವುದಕ್ಕಾಗಿ ಕೊಡುವ ತೆರವನ್ನು ಭತ್ತ ಅಕ್ಕಿಯ ರೂಪದಲ್ಲೆ ಅಳೆಯುತ್ತಾರೆ. ಗಂಡು ಹೆಣ್ಣಿನ ಮನೆಗೆ ಭತ್ತ/ಅಕ್ಕಿ ಹೊತ್ತು ತಂದರೆ ಮಾತ್ರ ಅವನಿಗೆ ಆ ಬಂಧುವೆಂಬ ಮನ್ನಣೆ ದೊರೆಯುತ್ತದೆ. ಕೃಷಿಯ ಉತ್ಪನ್ನ ಜೀವನದ ಬಂಧುತ್ವಕ್ಕೆ ಪ್ರಮುಖ ಮೌಲ್ಯವಾಗಿತ್ತು. ಅನ್ನದ ಮೂಲವಾಗಿದ್ದುದು ಗಂಡಿನ ಘನತೆಯನ್ನು ಕಾಯುವ ಅಂಶವೂ ಆಗಿತ್ತು.

ಈ ಸಂದರ್ಭದಲ್ಲಿ ಹಾಡುವ ಹಾಡು ಸಮೃದ್ಧಿಯನ್ನು ಸಾರುವಂತಿದೆ.

"ಪೊಲಿ ಪೊಲಿ ಪೊಲಿ ತುಳ್ಯೇಲ್
ಬಿನ್ನೆರ್ ಪೋತು ಕುಳ್ಯೇರ್
ಕೊರ್ಪುನ ಪೊಣ್ಣು ಉಂಡಾ? ಮಾರುನ ಎರು ಉಂಡಾ?
ಕೊರ್ಪುನ ಪೊಣ್ಣಾನ್ ಕೊರ್ತು ಆತ್ಂಡ್
ಮಾರುನ ಎರುನುಲಾ ಮಾರ್ತ್ ಆತ್ಂಡ್
ಇತ್ತೆ ಒಂಜಿ ಪೊಣ್ಣುಂಡೂ
ಮೂಲೆತ ಕಜವು ಅಡಿಪ್ಯರ ಗೊಂತಿದ್ಯಾಂತಿನವು
ಕಜಾವು ಅಡಿಪ್ಯರ ಗೊಂತಿದ್ಯಾಂಟ
ಎಂಕೊಳೊ ಪಂಡ್ತ್ ಕಲ್ಪಾಪೋ
ಪೊಣ್ಣು ಆವೊಂದ್ ನಿಚ್ಚಯ ಮಾಳ್ಪುವೇರ್
ನಿಚ್ಚಯೊ ಮಾಳ್ತ್ತ್ ಪಜಿ ಕಡ್ಪೊಡು
ಪಂದೇಲ್ ದೊಂಪೊ ಪಾಡೋಡು
ಓ......ಪೊಲಿ ಪೊಲಿ ಪೊಲಿ ತುಳ್ಯೇಲ್
ಪಾಳೆ ಕಡ್ಪೊಡು , ಪೊಲಿ ಲೆಪ್ಪೊಡು
ಪಜಿ ಕಡ್ಪೊಡು ಉಳ್ಳಾಯ
ಪಂದೇಲ್ ದೊಂಪೊ ಪಾಡೋಡು
ಓಳ್ ನಾಣ ಪೋಪನಯಾ
ಪಂಬತ್ತೆ ಒರಿ ಮಗಾ
ಪಾಲೆ ನೆಡ್ಯೆರ ಸಾಲು ದೆಪ್ಪುಲ
ಸಾಲ್ ದೆತ್ತ್‌ದ್ ಬಿತ್ತ್ ಪಾಡ್ಲಾ

ಪಂಬತ್ತೆ ಒರಿ ಮಗ

ರಡ್ಡ್ ಕಡ್ಯ ನೀರ್ ಮಯ್ತೆ

ರಡ್ಡ್ ಇರೆ ಬಿರ್ಂಡ್ ಉಳ್ಳಾಯ

...................... (ಅದೇ, ಪು ೫೯)(ಕೊನೆ ಟಿಪ್ಪಣಿ ೪೯)

ಕಾದಂಬರಿಯ ಮಧ್ಯ ಭಾಗದಲ್ಲಿ ಬರುವ ಈ ಹಾಡು ಪೊಲಿ ಪೊಲಿ ಎಂದು ಸಮೃದ್ಧಿಯನ್ನು ಸೂಚಿಸುವುದರೊಂದಿಗೆ ಈ ಫಲವಂತಿಕೆಯನ್ನು ಗಂಡು & ಹೆಣ್ಣಿನ ಸಂಬಂಧದ ವಿವಾಹದಲ್ಲೂ ನಿರೂಪಿಸುತ್ತದೆ. ವೈವಾಹಿಕ ಸಂಬಂಧ ಅನುಬಂಧವನ್ನು ಹೆಚ್ಚಿಸುವುದರೊಂದಿಗೆ ಫಲವಂತಿಕೆಗೆ ಕಾರಣವೂ ಹೌದು. ಸಂತಾನ ಬೆಳೆಯಬೇಕು ಸೃಷ್ಟಿಯ ಪ್ರಕ್ರಿಯೆಗೆ ಇದು ಮೂಲಧಾತು ಈ ಧಾತು ಪ್ರಕೃತಿಯ ಭಾಗದಲ್ಲೂ ಇರುವುದನ್ನು ಗಮನಿಸಬಹುದು. ಭೂಮಿ ಮತ್ತು ಹೆಣ್ಣನ್ನು ಸಮೀಕರಿಸುವ ನೆಲೆಯಲ್ಲಿ ಈ ಅಂಶಗಳನ್ನು ಗುರುತಿಸಬಹುದು.

ಸಂಸ್ಕೃತಿ ಚಿಂತನೆಯ ಮೂಲ ಆಶಯ ಮತ್ತು ಧೋರಣೆಯಿಂದ ಹೆಣ್ಣಿಗೆ ಇರುವ ಪ್ರಾಧಾನ್ಯತೆ ಆಶಯ ಕುಟುಂಬ ವ್ಯವಸ್ಥೆಯ ಒಳಗೂ ಇರುವುದನ್ನೇ ಪ್ರತಿಬಿಂಬಿಸುವ ಶುಭ ಸೂಚಕ ಹಾಡೂ ಚಾಲ್ತಿಯಲ್ಲಿದೆ.

ಚಲನಶೀಲವಾದ ಬದುಕು ಒಂದು ಹಂತದಿಂದ ಇನ್ನೊಂದು ಹಂತಕ್ಕೆ ಹೇಗೆ ಸ್ಥಿತ್ಯಂತರಗೊಂಡಿದೆ ಎಂಬುದು ಸಂಸ್ಕೃತಿ ಚಿಂತನೆಯ ಒಂದು ಭಾಗವೇ ಆಗಿದೆ. ಕೃಷಿ ಅನ್ವೇಷಣೆಗೊಂಡು ವಿಸ್ತರಣೆಗೊಳ್ಳುತ್ತಲೇ ಪ್ರಕೃತಿಯೊಂದಿಗೆ ಮನುಷ್ಯ ನಡೆಸಿದ ಸೆಣಸಾಟಗಳೊಂದಿಗೆ ಅದಕ್ಕೆ ಒಡ್ಡಿದ ಪ್ರತಿರೋಧ ಮತ್ತು ತನ್ನ ಬದುಕಿನ ದಿಕ್ಕಿಗೆ ಅನುಗುಣವಾಗಿ ಬದಲಾಯಿಸಿಕೊಂಡ ಕ್ರಮವೂ ಬಹಳ ಮಹತ್ತ್ವದ್ದು. ಈ ಎಲ್ಲವನ್ನು ಮಹಾಲಿಂಗರ "ನಾಣಜ್ಜೆರ್ ಸುದೆ ತಿರ್ಗಾಯೆರ್ ಕಾದಂಬರಿ ಚಿತ್ರಿಸುತ್ತದೆ. ನದಿ ತನ್ನ ಪಾತ್ರ ಮತ್ತು ಗಾತ್ರಗಳಿಂದ ತನಗೆ ಬೇಕಾದಂತೆ ಹರಿಯುತ್ತಿದ್ದರೆ 'ನಾಣಜ್ಜ'ನೆಂಬ ಪ್ರಯೋಗಶೀಲ ವ್ಯಕ್ತಿ ನದಿಯ ದಿಕ್ಕನ್ನೇ ಬದಲಾಯಿಸುವ ಸಾಹಸಕ್ಕೆ ಕೈಯಿಕ್ಕುವುದು ಬಹಳ ಮಹತ್ವಪೂರ್ಣ ನಡೆಯಾಗಿದೆ. ಕುದುರೆ ಸಾಕಿ 'ಕುದ್ರೆಮೂಲೆ' ಎಂದು ಹೆಸರಾದ ಸ್ಥಳದಲ್ಲಿ ಕೃಷಿಯನ್ನು ಹೇಗೆ ಆರಂಭಿಸಿದರು ಮತ್ತು ಸ್ಥಳಕ್ಕೆ ಯಾರು ಮೊದಲು ಬಂದವರು ಎಂಬುದೂ ಪ್ರಶ್ನಾರ್ಹವಾದ ಚರ್ಚಿತ ಸಂಗತಿಯೇ ಆಗಿದೆ. ನಾಣಜ್ಜನ ಒಕ್ಕಲಿನವನಾದ ಪಕೀರ ತನ್ನ ಮಗ ಪೋಣಿ ಮೂಲ್ಯನಲ್ಲಿ ಪ್ರಾಮಾಣಿಕವಾಗಿ ಹೇಳುವ ಮಾತಿದಾಗಿದೆ.

"ನಮೋ ದಾಲ ಮೊಕ್ಲೆನ ವಂಸೊದ ಒಕ್ಕೆಲತ್ತ್ ಪೋಣಿ. ಸುದೆ ಬರಿತ್ತ ಜಾಗೆಡ್ ಯಾನ್‌ಲಾ ಕುಲ್ಯೆ, ಬ್ರಾಣೆಲಾ ಕುಲ್ಯೆ. 'ಏರ್ ದುಂಬು ಬತ್ತ್‌ದ್ ಕುಲ್ಲಿನಾಂದ್" ಎಂಕ್ಲೆಗ್ ಇರ್ವೆರ್ಗ್ಗೇ ತೆರಿವು. ಬ್ರಾಣೆ ಕಂಡೊ ಕಡ್ತೆ –ಯಾನ್ ಕಂಡೊಡು ಬೆನ್ಯೆ ವಾ ಊರುಡ್ಲಾ ನುಪ್ಪು ಬೆನ್ಯೆರಾವಂದೆ ಬೆರಿಪದವುದ ನಿರೆಲ್‌ಡ್ ಬ್ರಾಣೆ ಉಸುಲು ಪತ್ತೆ. ಯಾನ್ ಬಜೀ ಓಡಾರಿ ಕಂಡೊಡು ಬಾರ್ ದೆಪ್ಯೆರ ತೀರಾಂದೆ ಒಕ್ಕೆಲಾವೊಡಾಂಡ್ ( ಮಹಾಲಿಂಗ ೧೯೯೪; ಪು ೩೩) (ಕೊನೆ ಟಿಪ್ಪಣಿ ೫೦)

ನದಿ ಬದಿಯಲ್ಲಿ ಹುಟ್ಟಿದ ಜೀವನಕ್ರಮದ ರೀತಿ, ಕೃಷಿಯನ್ನು ಮಾಡಲು ನಡೆಸಿದ ಹೋರಾಟ, ಕುತೂಹಲಗಳೊಂದಿಗೆ ಭೂಮಿಯನ್ನು ಒಡೆತನ ಸಾಧಿಸಿದ್ದು ಹೇಗೆ ಎಂಬ ಉಲ್ಲೇಖವೂ ಮುಖ್ಯ. ಇಂತಹ ವಿಸ್ತಾರವಾದ ಭೂಮಿಯನ್ನು ಪಡೆದದ್ದು ಸುಲಭದ ಕೆಲಸವಲ್ಲ. ಮಾನವ ಶ್ರಮದೊಂದಿಗೆ ಆ ಬಗೆಗಿನ ಯೋಜನೆಯೂ ಮುಖ್ಯ. ಆ ದಿಕ್ಕಿನಲ್ಲಿ ಯೋಚಿಸುವ, ಅಂಶಗಳನ್ನು ಗಮನಿಸಬೇಕಾಗುತ್ತದೆ.

"ಪಕೀರೆ ಪಂಡೊಂದಿತ್ತೆ – ಒಂಜ್ಯೊಂಜಿ ಗುಡ್ಡೆ ಕಡ್ತೆರ್, ಕಂಡೊ ಮನ್ತೆರ್ ಶಿರಂಕಲ್ಲ್‌ದ ಕಾಡ್ದಕ್ಲೆನಾನೆ ಮಲ್ಲ ಕಾರ್ಬಾರ್ ಗುಡ್ಡೆ ಅಂಚ ಬಯಿಲವೊಂದು ಪಕೀರೆಲಾ ಗ್ರೇತಿಜ್ಯೆ. ನೆಲ್ಲಿಗುಡ್ಡೆದ ನಮುನೆದ ರಡ್ಡ್ ಗುಡ್ಡೆಲೆನ ಬರಿ ಕಡ್ತ್‌ದ್ ಕಾಡ್ ದೆತ್ತ್‌ದ್ ಮುಡಿ ಕಂಡೊಲು ಆಯಿನಾಂದ್ ಪಕೀರೆ ಒರೊ ಪಂಡ್ ಇತ್ತೆ" (ಅದೇ, ಪು ೨೦) (ಕೊನೆ ಟಿಪ್ಪಣಿ ೫೧) ಕಾಡು–ಗುಡ್ಡ ಕಡಿದು ಮಾಡಿದ ಗದ್ದೆಗಳು ನಿರ್ಮಾಣದ ಹಿಂದಿನ ಶ್ರಮ ಕುತೂಹಲ, ಪ್ರಯತ್ನ ಬಹಳ ಮಹತ್ತ್ವದ್ದು, ಹಂತ ಹಂತವಾಗಿ ಜನ ಜೀವನದ ಬದುಕು ವಿಸ್ತಾರವಾಗುತ್ತಾ ಹೋಯಿತು. ಭೂಮಿಯ ಮೇಲೆ ಖಾಸಗಿ ಒಡೆತನದ ಪರಿಕಲ್ಪನೆ ಮತ್ತು ಸ್ವಾಧೀನತೆಯೂ ಬೆಳೆದದ್ದು, ಮಾತ್ರವಲ್ಲ ದುಡಿಯುವ ವರ್ಗವನ್ನು ಅಧೀನದಲ್ಲಿರಿಸಿಕೊಳ್ಳಲು ಸಾಧ್ಯವಾದ ಅಂಶವೂ ಮುಖ್ಯವೆನಿಸುತ್ತದೆ. ಹೀಗೆ ಮಾಡಲ್ಪಟ್ಟ ಗದ್ದೆಗಳನ್ನು ಉಳಿಸಿಕೊಳ್ಳುವುದೂ ಅವಶ್ಯವಾಗಿತ್ತು. ಮಾಡಿದ ಗದ್ದೆಗಳಿಗೆ ಎತ್ತರದ ಗುಡ್ಡ ಬಿದ್ದಾಗ ಆದ ಸಂಕಷ್ಟವು ಸಂಕಟವಾಗಿತ್ತು. ಪ್ರಕೃತಿಯೊಂದಿಗೆ ಸಂಘರ್ಷ ಮನುಷ್ಯನ ಪ್ರಯತ್ನ ಮತ್ತು ಛಲಕ್ಕೆ ಸವಾಲೇ ಆಗಿತ್ತು.

ಮನುಷ್ಯರ ತ್ರಾಣ ತಿಳಿಯುವುದಕ್ಕಾಗಿಯೇ ಪ್ರಕೃತಿಯೊಂದಿಗೆ ನಡೆಸಿದ ಸೆಣಸಾಟ ಮತ್ತು ಸವಾಲಿನಿಂದಲೇ ನದಿಯ ದಿಕ್ಕನ್ನೂ ಬದಲಾಯಿಸಬೇಕೆಂಬ ಯೋಜನೆ ನಿರೂಪಿತವಾಗುತ್ತದೆ. ಕಂಡವರಿಗೆ ಹುಂಬತನವಾಗಿ ಕಂಡರೂ ಅದನ್ನು ಆಗು ಮಾಡಿದಕ್ಕೆ ಉಪಯೋಗಿಸಿಕೊಂಡ ತಂತ್ರಜ್ಞಾನ ಮತ್ತು ತಂತ್ರಗಾರಿಕೆ 'ನಾಣಜ್ಜ' ಎಲ್ಲರೂ ಸಾಗುವ ದಾರಿಯಲ್ಲಿ ಮುನ್ನಡೆಯುವವರಲ್ಲ ಎನ್ನುವುದನ್ನು ಸಾಬೀತು ಪಡಿಸಿದೆ. "ತೂಲೆ –ಅವ್ವೆ ಸುದೆ– ಗುಡ್ಡೆದ ಈಪಿದ ಬರಿಟ್ಟ್ – ಮೂಲೇ ಪಾಡ್ವೆ, ಏತ್ ಜಾಗೆ ಸುದೆ ಸಾದಿ ತತ್ತ್ ಪೋಯಿನೈಡ್ದ್ ಆಲಾತ್ಂಡ್ ತೂಲೆ! ಸುದೆಕ್ಕ್ ಸರಿಯಾಯಿ ಸಾದಿ ಮನ್ತ್ ಕೊರೊಡು. ಸಾದಿ ತತ್ತಿನ ಸುದೆನ್ ಸಾದಿಗ್ ಕೊನರೂಡೂಂದು ಗ್ರೇತ್‌ದ್. ಈರ್ ಉಂದೆನ್ ಪೂರೋ ಸರಿ ತೂವೊನೊಡು. (ಅದೇ, ಪು ೪೨). (ಕೊನೆ ಟಿಪ್ಪಣಿ ೫೨)

'ಈ ಅಬ್ಬಿಗ್ ಬೂರುನ ನೀರ್‌ಗ್ ಕಟ್ಟ ಕಟ್ಟ್‌ದ್ – ಮುಲ್ತು ಇಲ್ಲ ಬೆಂದ್ರ್ ಮುಟ್ಟ ದಂಬೆ ದೀಪಾದೆ. ಅಬ್ಬಿಡ್ ಹಾಲಾಪಿ ನೀರ್ ಇಲ್ಲ್‌ದ ಕೆಲಸೊಗು ಆಪುಂಡು. ಮುಲ್ತು ಮುಕ್ಕಾಲ್ ಮೈಲ್ ಚಾಂಪೊ ದಂಬೆಡ್ ನೀರ್ ಪೋಪುಂಡು (ಅದೇ, ಪು ೪೩) (ಕೊನೆ ಟಿಪ್ಪಣಿ ೫೪)

ಶ್ರಮದಲ್ಲಿ ಸಮಾನರಾಗಿ ದುಡಿದ ವರ್ಗಕ್ಕೆ ಶ್ರಮವಷ್ಟೇ ಮುಖ್ಯವಾಯಿತು. ದುಡಿಸಿಕೊಂಡವರ ಆಲೋಚನೆಗಳನ್ನು ಕಾರ್ಯ ರೂಪಕ್ಕೆ ತರುವುದಷ್ಟೇ ಮುಖ್ಯವಾಗಿತ್ತು. "ಸುದೆ ತಿರ್ಗ್‌ದ್ಂಡ್ –ಅಕ್ಕೆರೆ ಸುದೆ ತಿರ್ಗ್‌ದ್ಂಡ್" (ಅದೇ, ಪು ೮೫). (ನದಿ ತಿರುಗಿತು –ಅಕ್ಕನವರೇ– ನದಿ ತಿರುಗಿತು) ಈ ಸಂಭ್ರಮ ಹೆಚ್ಚು

ದಿನ ಉಳಿಯಲಿಲ್ಲ. "ನೀರೊಟ್ಟುಗು ಪುನೆಯರಾವಂದೆ ಕಟ್ಟೊ ಕಡಿತಿತ್ತ್ಂಡ್. ಪೊಸ ಸುದೆತ ಬಾಯಿಡೇ ಗುಡ್ಡೆ ಜರಿದ್ ಕುಲ್ಲುದಿತ್ತ್ಂಡ್! ಒಂತೆ ಒಂತೆನೇ ಮಣ್ಣ್ ಗುಡ್ಡೆದ್ದ್ ಜಾರ್ದ್ ಪೊಸ ಸಾದಿತ ಬಾಯಿ ಪೂರ ಮುಚ್ಚಿದ್ಂಡ್! ಮಲ್ಲ ಮಲ್ಲ ಕಲ್ಲುಲು ಜಾರ್ದ್ ಕುಲ್ಲಿನಲ್ತೆ ಪೋಣಿನ್ ತೂದು ತೆಲಿತ್ತೊ! ಮಣ್ಣ್ ಮಣ್ಣು ಪೂರ ಜರಿನ ಮಣ್ಣ್ – ಕೆಸರ್! ಅಡ್ಡ ಬೂರಿ ಬಲ್ಲೆಲು–ಬೇರುಲ್ಲ! ನೀರ್ ಐತ್ತಾತನೇ "ಸಾದಿಡ್ ದಾಲ ತೆರಿಯಾಂದಿ ಪೊಡಿ ಬಾಲೆ" ಲೆಕ್ಕೊ ಪರತೊಂದಿತ್ತ್ಂಡ್! (ಅದೇ ಪು ೮೬) ಕೊನೆ ಟಿಪ್ಪಣಿ ೫೪ ನದಿ ತನ್ನ ಅಳವಿಗೆ ಸಿಗದಾಗಿದ್ದು, ಅದು ತನ್ನ ದಿಕ್ಕು ಬದಲಾಯಿಸುತ್ತ ಸಾಗುತ್ತದೆ. ಪ್ರಕೃತಿಯನ್ನು ಮಣಿಸುವ ಮನುಷ್ಯ ಪ್ರಯತ್ನ ಕೊನೆಗೂ ತನ್ನ ಕೈ ಮೀರಿ ಮಣ್ಣು ಭೂಮಿ ತನ್ನ ಬಲವನ್ನು ತೋರಿಸಿ ಕೊಡುತ್ತದೆ. ಹತಾಶನಾದ ಮನುಷ್ಯ ಊರು ಬಿಟ್ಟು ತೆರಳಬೇಕಾಗುತ್ತದೆ. ಇದನ್ನು ಜನ ನಂಬಿದ ದೈವ ಪ್ರಶ್ನಿಸುತ್ತಾರೆ. ದೈವವನ್ನು ಸತ್ಯವೆಂದವರಿಗೆ ಮಣ್ಣಿನ ಸತ್ಯ ತಿಳಿಯುವುದೂ ಸುಲಭವಾಗಿರಲಿಲ್ಲ.

'ಅಂದ್ ಅರಿ ಬಾರ್ ಎನ್ನ ಪತ್ತಾಯೊಡು ದಿಂಜ್ಂಡ ಸತ್ಯೊದ ಸಾದಿನ್ ಪತ್ತೊರುಡು ಪನುವೆರ್. ಅರಿ ಬಾರ್ ಎಚ್ಚ ಆವೊಡೂಂಡ ಅಡ್ಡ ಬರ್ಪಿ ಎಲ್ಯ ತೋಡುಗು ಬಂಜದಾಂತೆ ಪೋಯರ ಪೊಸ ಸಾದಿ ಕೊರೊಡೂಂದ್ ಉಲ್ಲೆ' (ಅದೇ, ಪು ೫೪) (ಹೌದು ಅಕ್ಕಿ ಭತ್ತ ನನ್ನ ಪತ್ತಾಯ (ಬಣವೆ) ಗಳಲ್ಲಿ ತುಂಬಿದರೆ ಸತ್ಯದ ದಾರಿಯನ್ನು ಹತ್ತೂರಲ್ಲಿ ಹೇಳುವರು. ಅಕ್ಕಿ ಭತ್ತ ಹೆಚ್ಚು ಆಗಬೇಕಾದರೆ ಅಡ್ಡ ಬರುವ ಸಣ್ಣ ತೋಡಿಗೆ ಕಷ್ಟವಿಲ್ಲದೆ ಹೋಗಲು ಹೊಸದಾರಿ ಕೊಡಬೇಕೆಂದು ಇದ್ದೇವೆ) ಪ್ರಕೃತಿಯ ನಿಗೂಢತೆಯನ್ನು ಅರ್ಥೈಸಿಕೊಳ್ಳುತ್ತಲೇ ಅದನ್ನು ತನ್ನ ಇಚ್ಛೆಗೆ ಅನುಗುಣವಾಗಿ ಬಾಗಿಸುವ ಮಾನವ ಶ್ರಮದ ಅವನ ಜಾಣತನದ ಬಗೆಗೆ ಅತಿಯಾದ ವಿಶ್ವಾಸ ಹೊಂದಿ ದಿಕ್ಕು ಬದಲಾಯಿಸುವ ಪ್ರಯತ್ನ ಬಗೆಯನ್ನು ಆಗು ಮಾಡಲು ಯತ್ನಿಸಲಾಗುತ್ತದೆ. ಹೊಸ ದಾರಿಯ ಅನ್ವೇಷಣೆಯನ್ನು ದೈವ ಪ್ರಶ್ನಿಸುತ್ತದೆ.

'ಅಂಚ ಉಪ್ಪುನಗ ಎನ್ನಡ ಅನು ದೆತೊನಾಂದೆ ಎನ್ನ ನೀರ್‌ನ್ ಸಾದಿ ತಪ್ಪಾಯರ ಈರೆಂಚ ದುಂಬರಿಯರ್. ಸತ್ಯೊದ ನೆಂಪು ಮದಪುನವತ್ತತೊ? ಆಂಡಲಾ ಎನ್ನಡ ಪನಾಂದೆ ಸುದೆ ತಿರ್ಗಾವುನಂಚಿ ಪೊಸ ಕೆಲಸೊಗು ಈರ್ ಪಿದಾಡ್ಯರೋ' (ಅದೇ ಪು ೫೪) (ಹಾಗೆ ಇರುವಾಗ ನನ್ನಲ್ಲಿ ಅನುಮತಿ ಕೇಳದೆ ನನ್ನ ನೀರಿಗೆ ದಾರಿ ತಪ್ಪಿಸುವಂತೆ ನೀವು ಹೇಗೆ ಮುಂದುವರಿದಿರಿ? ಸತ್ಯದ ನೆನಪು ಮರೆಯುವುದಲ್ಲವಲ್ಲವೇ? ಆದರೂ ನನ್ನಲ್ಲಿ ಹೇಳದೆ ನದಿ ತಿರುಗಿಸುವ ಹೊಸ ಕೆಲಸಕ್ಕೆ ನೀವು ಹೊರಟಿರಾ)

ಈ ಭೂಮಿಯ ನೀರು –ಮಣ್ಣಿನ ಒಡೆತನ ನನ್ನದು ಎಂದು ನೆನಪಿಸುವ ದೈವ ಅದರ ಮೇಲಿನ ದೈವತ್ವವನ್ನು ಅಧೀನವಾಗಿರಿಸಿಕೊಂಡೇ ಮನುಷ್ಯ ಶ್ರಮಕ್ಕೆ ಸವಾಲೆಸೆಯುತ್ತದೆ. ಮಾತ್ರವಲ್ಲ ನದಿಯ ದಿಕ್ಕು ಬದಲಿಸುವ ಕಾಯಕಕ್ಕೆ ತನ್ನ ಅನುಮತಿಯೂ ಮುಖ್ಯ ಎಂದು ವಿವರಿಸುತ್ತದೆ. ನದಿಯ ಹಾದಿಯನ್ನು ಬದಲಾಯಿಸಲು ಯತ್ನಿಸಿ ಅದರಲ್ಲಿ ನಾಣಜ್ಜರು ಯಶಸ್ವಿಯೂ ಆಗುತ್ತಾರೆ. ಯಾವುದನ್ನು ಮಾಡಬಾರದು ಎಂದಿದೆಯೋ ಅದನ್ನೆ ಮತ್ತೆ ಮತ್ತೆ ಬೇರೆ ಬೇರೆ ಚಟುವಟಿಕೆಗಳ ಮೂಲಕ ನಡೆಸಲು ಯತ್ನಿಸುತ್ತಾರೆ. ನಾಣಪ್ಪಯ್ಯ ಮನುಷ್ಯ ಪ್ರಕೃತಿಯ ಮೇಲೆ ಅಧಿಪತ್ಯ ನಡೆಸಲು ಮಾಡುವ ಪ್ರಯತ್ನಕ್ಕೆ ಯೋಚನೆ, ಯೋಜನೆ

ಎಲ್ಲವೂ ಇರುತ್ತದೆ. ನದಿಯ ದಿಕ್ಕು ಬದಲಾಯಿಸಿ ನಾವು ಬಯಸುವ ದಾರಿಗೆ ದೀರ್ಘವಾಗಿ ದಂಬೆಯಲ್ಲಿ ನೀರು ಹೋಗುತ್ತದೆ. ಮನುಷ್ಯ ತನ್ನ ಸಾಹಸಗಳಿಗೆ ತಾವೇ ತಲೆದೂಗಿ ಪ್ರಕೃತಿಯನ್ನು ಮಣಿಸಿಕೊಳ್ಳುವ ಇರಾದೆಯನ್ನೇ ನಾಗರಿಕತೆ ಎಂದು ಭ್ರಮಿಸುತ್ತಾರೆ. ಯಾವ ಪ್ರಕೃತಿಯನ್ನು ದೇವರೆಂದು ಅತೀತವೆಂದು ಭಾವಿಸಲಾಗಿತ್ತೇ ಅದನ್ನು ಬಾಗಿಸಿ ತಾನು ಬೀಗಲು ಪ್ರಯತ್ನಿಸುವಾಗ ದೈವರಾಧನೆಯ ನೇಮದ ಕಳದಲ್ಲಿ ನದಿಯ ಮಾತು ಬರುತ್ತದೆ. ಆರಾಧನೆ ಮತ್ತು ಆಚರಣೆಗೆ ಮೂಲ ನೆಲೆ ಪ್ರಕೃತಿ. ಈ ಬಗೆಗೆ ತುಳುವರು ಬಹಳ ಶ್ರದ್ಧೆ ಭಕ್ತಿಯಿಂದ ನಂಬುವ ದೈವಗಳು ನುಡಿಯುವ ನುಡಿ ಮಹತ್ವದ್ದು.

"ಮದಿಪುಗು ಬೆರಿಸಾಯ ಉಂತುನ ದೈವೊ ಈ ಒಂಜೆಕ್ ಒಂಜರೆ ಪತ್ತೆಕ್ ಪದಿನಾಜಿ ಪುಟ್ಟದ್ – ಎರುಕ್ಕು ಇನೆ ಬಿತ್ತ್‌ಗ್ ಮುದೆಲ್ ಸಂತಾನೊಗು ಸಾಯಿರೊ ಮನ್ತ್‌ದ್, ಪೇರುರ್ಕಾಯಿ ಲೆಕ್ಕೊ ಉರ್ಕವುನ ಸತ್ಯ ಈ"(ಅದೇ ಪು ೫೩). (ಮದಿಪುವಿಗೆ ಬೆಂಬಲವಾಗಿ ನಿಲ್ಲುವ ದೈವ ನೀನು, ಒಂದಕ್ಕೆ ಒಂದುವರೆ ಹತ್ತಕ್ಕೆ ಹದಿನಾರು ಹುಟ್ಟಿಸಿ ಕೋಣಕ್ಕೆ ಜತೆ, ಬೀಜಕ್ಕೆ ಬುಡ, ಸಂತಾನಕ್ಕೆ ಸಾವಿರ ಮಾಡಿ ಹಾಲು ಉಕ್ಕಿಸಿದಂತೆ ಉಕ್ಕುವ ಸತ್ಯ ನೀನು). ಮಾಡುವ ಪ್ರಾರ್ಥನೆಯಲ್ಲಿ ವಿನಯವಿರುವಂತೆಯೇ ಭಿನ್ನವಿಸುವ ಮೂಲಕ ತಮ್ಮ ಮನದಾಳದ ಆಶಯವನ್ನು ನಿರೂಪಿಸಲಾಗುತ್ತದೆ. ಸಭೆಯನ್ನು ಸೇರಿದ ಜನರ ಮಾತಿಗೆ ಪ್ರತಿಕ್ರಿಯೆ ಏನು ಎನ್ನುವುದು ಪ್ರಮುಖ ರಹದಾರಿಯ ತಿಳುವಳಿಕೆಯೂ ಆಗಿದೆ. ತಾವು ಬೇಡುವ ದೈವದಲ್ಲಿ ಸೃಷ್ಟಿಯ ಸೃಷ್ಟಿಕ್ರಿಯೆಯನ್ನು ಸೂಕ್ಷ್ಮವಾಗಿ ಗಮನಿಸದ ಜನರು ಪ್ರಕೃತಿಯ ಸೃಜನಶೀಲ ಗುಣವನ್ನು ಗುರುತಿಸುತ್ತ ಈ ಪ್ರಕ್ರಿಯೆ ನಡೆಯಬೇಕದರೆ ದೈವಾನುಗ್ರಹಬೇಕು ಎಂದು ಆಶಿಸುತ್ತಾರೆ.ಪ್ರಕೃತಿಯಲ್ಲಿಯೇ ಪರಮಾತ್ಮನನ್ನು ಕಾಣಬೇಕಾದರೆ ಒಂದು ಎರಡಾಗಿ ಹಲವು ಸಾವಿರವಾಗುವ ಈ ಸೃಷ್ಟಿ ಶೀಲ ಗುಣ ತಿಳಿದಿರಬೇಕು. ಪ್ರಕೃತಿಯ ರಹಸ್ಯದ ಸೂಕ್ಷ್ಮ ಎಳೆಯೊಂದು ದಕ್ಕಿಬಿಟ್ಟದ್ದು ಬಹಳ ಮಹತ್ತ್ವದ ಅಂಶವಾಗಿದೆ. ಕೃಷಿಯೆಂದರೆ ಬರಿಯ ಬಿತ್ತುವ ಬೆಳೆಯುವ ಹೊಟ್ಟೆ ಹೊರೆಯುವ ಕಾಯಕವಾಗಿ ಮಾತ್ರ ಉಳಿಯದೆ ಆರಾಧನೆಯ ಮೂಲ ಆಶಯವಾಗಿ ಒಂದು ಎರಡಾಗಿ ಹಲವು ಸಾವಿರವಾಗುವ ನಿಗೂಢ ಮರ್ಮಕ್ಕೆ ಸಾಕ್ಷಿ ಪ್ರಜ್ಞೆಯಾಗಿದೆ. ದೈವದೊಂದಿಗಿನ ಅನುಸಂಧಾನವೂ ಪ್ರಕೃತಿಯ ಸೃಷಿ ಶೀಲ ಗುಣಕ್ಕೆ ರೂಪಕವಾಗಿ ಗೋಚರಿಸಲು ಸಾಧ್ಯವಾಗಿದೆ.

ಭೂಮಿಯನ್ನು ಮಣಿಸಿ ಕೃಷಿ ಮಾಡಿದ್ದು, ಒಂದು ಭಾಗವಾದರೆ ಕೈ ಚೆಲ್ಲಿದ್ದು ಇನ್ನೊಂದು ಹಂತ ಎಲ್ಲವನ್ನು ತನ್ನ ಅಧೀನದಲ್ಲಿ ಇರಿಸಿಕೊಳ್ಳಬೇಕೆಂಬ ಮನುಷ್ಯ ಪ್ರಯತ್ನಕ್ಕೆ ಸವಾಲಾದದ್ದು, ಭೂಮಿಯ ಒಡೆತನದ ಮೇಲಿನ ಮನುಷ್ಯರ ಅಹಂಕಾರ ಮತ್ತು ಅದನ್ನು ತಾನು ಬಾಗಿಸಿಯೇ ತೀರುತ್ತೇನೆ ಎನ್ನುವ ದಾಷ್ಟ್ಯಕ್ಕೆ ಸವಾಲಾಗಿ ಭೂಮಿ ತಲೆ ಎತ್ತಿ ನಿಲ್ಲುತ್ತದೆ. ಪ್ರಯೋಗಶೀಲನಾದ ನಾಣಜ್ಜನ ತನ್ನ ತಂತ್ರಗಾರಿಕೆ ಮತ್ತು ವಿಧಿ ನಿಷೇಧಗಳನ್ನು ಮೀರಿಯೂ ಕಾರ್ಯ ನಿರ್ವಹಿಸುತ್ತದೆ. 'ಬ್ರಾಣೆ ನಾಯರ್ ಪತ್ತ್‌ಂಡ ಬರ್ಸ ಬರಾಂದ್‌ಂದ್ ತೆರಿದ್ಲಾ ನಾಯರ್ ಪತ್ಯೆ –ಗೊಬ್ಬರ ತುಂಬ್ಯೆ'(ಅದೇ, ಪು ೬೬) (ಬ್ರಾಹ್ಮಣ ನೇಗಿಲು ಹಿಡಿಯದರೆ ಮಳೆ ಬಾರದು ಎಂದು ತಿಳಿದೂ ನೇಗಿಲು ಹಿಡಿದ, ಗೊಬ್ಬರ ಹೊತ್ತ್ತೆ) ಪರಂಪರೆಯಿಂದ ಬಂದ

ತಿಳುವಳಿಕೆಯನ್ನು ಮೀರಿ ಕೃಷಿ ಮಾಡಲು ಪ್ರಯತ್ನಿಸುತ್ತಾರೆ. ಕೃಷಿ ಶ್ರಮಿಕರ ಬದುಕಿನ ಭಾಗ ಎನ್ನುವುದನ್ನು ಮರೆತು ಈ ಕಾರ್ಯ ನಿರ್ವಹಣೆ ಸಾಧ್ಯವಾಗುತ್ತದೆ.

ಭೂಮಿಯೊಂದಿಗೆ ನಡೆಸಿದ ಸೆಣಸಾಟಗಳಿಂದ ಬದುಕು ಕಟ್ಟಿದ ಜನರ ಜೀವನ ಕ್ರಮದ ರೀತಿ ನೀತಿಗಳು ಸಂಸ್ಕೃತಿ ಚಿಂತನೆಯ ಭಾಗವೇ ಆಗಿದೆ. ಮಣ್ಣಿನ ಒಡನಾಟಕ್ಕೆ ಶ್ರೇಣೀಕರಣದ ಅವಶ್ಯಕತೆಯಿಲ್ಲ. ಒಡೆತನದ ಪ್ರಶ್ನೆ ಬಂದಾಗ ಅಧಿಕಾರ, ಅಂತಸ್ತು, ಸ್ಥಾನ ಮಾನಗಳಿಂದ ಶ್ರೇಣೀಕರಣ ಗೋಚರವಾಗುತ್ತದೆ. ಮಣ್ಣಿನೊಂದಿಗೆ ಒಡನಾಡುವ ಶ್ರಮಿಕ ವರ್ಗ ಬಡವರಾಗಿಯೇ ಉಳಿದದ್ದು, ಒಡೆತನವನ್ನು ಹೊಂದಿದವರು ಭೂಮಿಯ ಮೇಲಿನ ಹಕ್ಕಿನಿಂದ ಶ್ರೀಮಂತರಾಗಿ, ಪಾಳೇಗಾರರಾಗಿ ಬೆಳೆದದ್ದು ಸಂಸ್ಕೃತಿಯ ಭಾಗವೇ ಆಗಿದೆ. ಕಾಲ ಬದಲಾದಂತೆಲ್ಲ ಸ್ಥಾನಗಳು ತಿರುವು ಮುರುವು ಆಗಿ ಹುಟ್ಟಿಕೊಂಡ ಸಂಕೀರ್ಣ ಸಾಮಾಜಿಕ ವ್ಯವಸ್ಥೆಯಲ್ಲಿ ದುಡಿಯುವವರು ಮತ್ತು ದುಡಿಸುವವರು ಪರಸ್ಪರರಲ್ಲಿ ಅಸಮಾನತೆಯಿದ್ದವರು, ಜತೆಯಾಗಿ ಬಾಳುವೆ ನಡೆಸಿದ್ದು ಕೃಷಿ ಸಂಸ್ಕೃತಿಯ ಅನನ್ಯತೆಯ ಭಾಗವೇ ಆಗಿದೆ. ರೈತನೊಬ್ಬ ಉಳುಮೆ ಮಾಡಿ ಬೆಳೆ ಬೆಳೆದವೆಂದರೆ ಅದು ತನಗೊಬ್ಬನಿಗೇ ಆಹಾರದ ಮೂಲವಾಗಿ ಅಲ್ಲ. ಸುತ್ತ ಇರುವ ಪ್ರಾಣಿ ಪಕ್ಷಿ ಸಮಸ್ತ ಜೀವ ಸಂಕುಲಕ್ಕೆ ಪ್ರತ್ಯಕ್ಷ ಯಾ ಪರೋಕ್ಷವಾಗಿ ಆಹಾರದ ಮೂಲವಾಗಿ ಹೊಟ್ಟೆಯ ಹಸಿವಿನ ನಿವಾರಣೆಗೆ ಕಾರಣವಾಗುತ್ತದೆ. ಹಸಿವಷ್ಟೇ ಅಲ್ಲದೆ ಸಾಗಿದ ಬದುಕಿನ ಕ್ರಮಗಳೂ ಮುಖ್ಯವಾಗಿ ಅಲ್ಲಲ್ಲಿ ದಾಖಲಾಗುತ್ತ ಬದಲಾಗುತ್ತ ಸಾಗುತ್ತಿರುತ್ತದೆ. ಮನುಷ್ಯ ಬದುಕಿನ ಹುಟ್ಟಿನಿಂದ ಸಾವಿನವರೆಗೆ ರೀತಿ ನೀತಿಗಳು, ಮತ್ತು ವಾರ್ಷಿಕ ಆವರ್ತನದಲ್ಲಿ ನಡೆಯುವ ಆಚರಣೆ ಹಬ್ಬ ಹರಿದಿನಗಳು ಪರಸ್ಪರ ಒಂದರೊಡನೊಂದು ಬೆರೆತು ಜೀವನದ ಮೌಲ್ಯವನ್ನು ಲೋಕಗ್ರಹಿಕೆಯನ್ನು ನಿರೂಪಿಸುತ್ತದೆ. ಬಹಳ ಪ್ರಾಮುಖ್ಯವಾಗಿ ತುಳುಭಾಷೆಯಲ್ಲಿರುವ ಬಹಳ ದೊಡ್ಡ ಶಬ್ದ ಭಂಡಾರ ಮತ್ತು ಪಾರಿಭಾಷಿಕ ಪದಗಳು ಕೃಷಿ ಜಗತ್ತಿನ ಲೋಕದೃಷ್ಟಿಯನ್ನೇ ಸಾರುವಂತಿದೆ.

ತುಳುವರ ಜನ ಜೀವನದ ವಿವಿಧ ಹಂತಗಳು ಮತ್ತು ಬದುಕಿನ ಕ್ರಮಗಳು ಮೌಲ್ಯಗಳು ಎಲ್ಲವು ಕೃಷಿಗೆ ಹತ್ತಿರವಾಗಿಯೇ ಇದೆ. ದುಡಿಮೆ ಮತ್ತು ಬದುಕು ಒಂದರೊಡನೊಂದು ಬೆರೆತು ಯಾವ ವ್ಯತ್ಯಾಸ ಗೋಚರಿಸಲು ಸಾಧ್ಯವಾಗುವುದಿಲ್ಲ. ಅವರ ಆಚರಣೆ, ಹಬ್ಬ ಹರಿದಿನಗಳು, ಕುಣಿತ, ಆಟಗಳು ನುಡಿಕಟ್ಟುಗಳು, ಗಾದೆ, ಒಗಟುಗಳು ಕೃಷಿ ಬದುಕನ್ನು ಬೆಸೆದುಕೊಂಡೇ ಇದೆ. ಬದುಕಿನ ವರ್ತುಲದಲ್ಲಿ ಜೀವನ ಆವರ್ತನ ಮತ್ತು ವಾರ್ಷಿಕ ಆವರ್ತನದ ಅಂಶಗಳು ಒಂದರೊಡನೊಂದು ಬೆರೆತು ಅಭೇಧ್ಯ ಚಿಂತನೆಯ ಲೋಕ ದೃಷ್ಟಿಯನ್ನು ಕಟ್ಟಿಕೊಡುತ್ತದೆ. ಅಚರಣೆಯ ಸಂದರ್ಭದಲ್ಲಿ ನಡೆಸುವ ವಿಧಿ ವಿಧಾನಗಳೊಂದಿಗೆ ಬಳಸುವ ಪರಿಕರಗಳೂ ಕೃಷಿ ಮೂಲದವೆ ಆಗಿದೆ. ಅದೇ ಆಶಯವನ್ನು ಪ್ರಚುರ ಪಡಿಸಲು ಸಾಧ್ಯವಾಗಿದೆ. ಈ ಅನ್ಯತೆಯೇ ಸಂಸ್ಕೃತಿಯ ಮೂಲ ಬೇರಾಗಿ ನಿರೂಪಿಸಿಕೊಂಡು ಬದುಕಿನ ಆಶಯವನ್ನು ಪರಿಭಾವಿಸಿ ಉದಾತ್ತ ಜೀವನ ಮೌಲ್ಯವನ್ನು ಪ್ರತಿಪಾದಿಸಲಾಗುತ್ತದೆ. ತಾನು ಉಣ್ಣುವ, ಪರರಿಗೆ ಇಕ್ಕುವ, ಬಹಳ ದೊಡ್ಡ ಚಿಂತನೆಯೊಂದು ಇಲ್ಲಿದೆ. ಕೃತಜ್ಞತೆಯ ಪಾರಿಭಾಷಿಕ ಪದಗಳಿಗಿಂತ ಪ್ರಮಾಣ ಬದ್ಧವಾಗಿ ತಮ್ಮನ್ನು ತಾವು ನಿರ್ವಚಿಸಿಕೊಂಡು ಬಾಳಿದ ತುಳುವರು ಸಾಹಿತ್ಯದ ಮೂಲಕ ಪ್ರತಿಕ್ರಿಯಿಸಿದ ಅನನ್ಯತೆಯೂ ವಿಶಿಷ್ಟವಾದುದು.

ಬೇರೆ ಬೇರೆ ಸಮುದಾಯದವರಾಗಿ ಬೇರೆ ಬೇರೆ ಕಾಲದಲ್ಲಿ ಬಹಳ ವಿಸ್ತಾರವಾದ ದೃಷ್ಟಿಯಿಂದ ಕೃತಿ ರಚಿಸುವಾಗ ಕೃಷಿ ಲೋಕದ ಒಳ ಹೊರಗನ್ನು ಹೊಕ್ಕು ಸೂಕ್ಷ್ಮ ವಿಷಯಗಳು ದಾಖಲಾಗಿವೆ. ಸಮುದಾಯಗಳಿಗೆ ಕೃಷಿ ಜಗತ್ತಿನ ಬಗೆಗಿನ ಕೆಲವು ನಂಬಿಕೆ, ನುಡಿಕಟ್ಟುಗಳೊಂದಿಗೆ ಬೆಳೆ ಬೆಳೆಯುವ ತಿಳುವಳಿಕೆಯೂ ಮುಖ್ಯವೆನಿಸುತ್ತದೆ. ಕೃಷಿಯೊಂದಿಗೆ ಕಟ್ಟಿಕೊಂಡ ಬದುಕಿನ ಅವಿನಾಭಾವ ಬಾಂಧವ್ಯವೂ ಜನರ ನಂಬಿಕೆ, ಆರಾಧನೆ, ಆಚರಣೆ, ವಿಧಿ ನಿಷೇಧಗಳೂ ಪ್ರಾದೇಶಿಕ ಭಿನ್ನತೆಗೆ ಬದುಕಿನ ಗುಣ ಧರ್ಮಕ್ಕೂ ಮೂಲವಾಗಿದೆ. ಮೌಲ್ಯಗಳು ತಮ್ಮನ್ನು ತಾವು ಪ್ರತಿನಿಧೀಕರಣಗೊಳಿಸುವ ಸಾಮಾಜಿಕ ಬದುಕಿನ ಕೃಷಿ ಸಂಸ್ಕೃತಿಯ ಆಯಾಮವೂ ಬಹು ಮುಖ್ಯವಾದುದು.

**೭.೪ ಸಾಮಾಜಿಕ ಮುಂಚಲನೆಗಳು**

ಕರಾವಳಿ ಕರ್ನಾಟಕದ ಕೃಷಿ ಸಂಸ್ಕೃತಿ ಎಂಬ ಪರಿಭಾಷೆಯ ನಿರೂಪಣೆಯ ವಿಸ್ತರಣೆ ಎಲ್ಲೋ ಹುಟ್ಟಿ ಇನ್ನೆಲ್ಲೋ ಮುಂದುವರಿಯಿತು ಎಂಬ ಸರಳ ಅರ್ಥವಲ್ಲ. ಚಲನಶೀಲವಾದ ಬದುಕಿನಲ್ಲಿ ಬದಲಾವಣೆಗಳೊಂದಿಗೆ ಜೀವನಕ್ರಮದ ಗತಿಗಳೂ ಸ್ಥಿತ್ಯಂತರಗೊಂಡವು. ನಾಗರಿಕತೆ, ಅಭಿವೃದ್ಧಿ, ಆಧುನಿಕತೆ ಎಂಬ ಎಲ್ಲಾ ಅಂಶಗಳ ಕಾರಣದಿಂದ ಕರಾವಳಿಯ ಬದುಕು ಬದಲಾಗುತ್ತ ಬಂತು ಎಂಬ ನೇರ ತೀರ್ಮಾನಕ್ಕೆ ಮುನ್ನುಗ್ಗಲಾಗುವುದಿಲ್ಲ. ಉಳಿದ ಪ್ರದೇಶಗಳಿಗಿಂತ ಬಹಳ ವಿಶಿಷ್ಟ ಭೌಗೋಳಿಕ ಆವರಣವನ್ನು ಹೊಂದಿದ್ದು ಒಂದೆಡೆ ಅನಂತ ವಿಸ್ತಾರದ ಮೊರೆಯುವ ಕಡಲು, ಇನ್ನೊಂದೆಡೆ ಆಗಾಧ ಎತ್ತರದ ನೀರವ ಕಾಡು ಬದುಕಿನ ಗತಿಯನ್ನು ನಿರ್ಧರಿಸಿದೆ. ನಿರಂತರವಾದ ಸವಾಲು ಮತ್ತು ನಿಗೂಢತೆಗೆ ಒಡ್ಡಿಕೊಳ್ಳುತ್ತಲೇ ಬದುಕು ಕಟ್ಟಿಕೊಳ್ಳುವುದು ಸರಳವೂ ಸುಲಭವೂ ಆಗಿರಲಿಲ್ಲ. ಆಹಾರವನ್ನು ಹುಡುಕುತ್ತಾ, ಹಸಿವಿನ ಮೂಲಕ್ಕೆ ಪರಿಹಾರ ಕಂಡುಕೊಳ್ಳುತ್ತ, ಪ್ರಾಣಿ ಜಗತ್ತಿನೊಂದಿಗೆ ಮುಖಾಮುಖಿಯಾಗುತ್ತಲೇ ಆತಂಕ, ಭಯಗಳೊಂದಿಗೆ ಕುತೂಹಲವನ್ನು ಉಳಿಸಿಕೊಂಡು ಬದುಕು ಕಟ್ಟಿದವರು ತುಳುವರು. ಪರಸ್ಪರರಲ್ಲಿ ಸಹಕಾರ ಮತ್ತು ಸಂಘರ್ಷಗಳು ಇದ್ದುದರಿಂದ ಅಸ್ತಿತ್ವಕ್ಕಾಗಿ ಹೋರಾಟವು ಸಮನ್ವಯವೂ ಜತೆ ಜತೆಯಲ್ಲಿಯೇ ಇದ್ದಿತು. ಹಾಗಾಗಿ ಒಂದೆಡೆ ವಿಸ್ತಾರವಾದ ಭೂಮಿಯ ಒಡೆತನದ ಪಾಳೇಗಾರಿಕೆ ಬೆಳೆದಂತೆ ಸ್ವತಂತ್ರವಾಗಿ ಕಾಡ ಬದಿಗಳಲ್ಲಿ ಕುಮೆರಿ ಬೆಳೆಯುತ್ತ ಬದುಕು ಕಟ್ಟಿದವರೂ ಇದ್ದರು.

ಕೃಷಿಯಿಂದಲೇ ಕರಾವಳಿಯ ಜನರ ಜನ ಜೀವನ ಬದಲಾಯಿತೇ? ಎಂದು ಪ್ರಶ್ನಿಸಿಕೊಂಡರೆ ಕೃಷಿ ಸಂಸ್ಕೃತಿ ವಿಕಾಸದ ಹೆಜ್ಜೆ ಗುರುತುಗಳನ್ನು ಮರೆಯಲಾಗದು. ಕೃಷಿ ಜಾಗತಿಕವಾಗಿ ಕೇವಲ ಒಂದೇ ಪ್ರದೇಶದಲ್ಲಿ ವಿಕಾಸಗೊಂಡುದು ಅಲ್ಲ. ಅಯಾ ಪ್ರದೇಶದ ಮಣ್ಣು, ನೀರು ಹವಾಮಾನಗಳ ಲಭ್ಯತೆಗೆ ಅನುಗುಣವಾಗಿ ಬೇರೆ ಬೇರೆ ರೀತಿಯ ಬೆಳೆಗಳನ್ನು ಬೆಳೆದುದು ಇತಿಹಾಸ. ಮನುಷ್ಯನ ಚಲನೆಯಂತೆ ಆಹಾರ ಕ್ರಮದೊಂದಿಗೆ ಬೆಳೆಯುವ ಬೆಳೆಗಳೂ ಬದಲಾಗುತ್ತ ಬಂದವು. ಜಗತ್ತಿನ ಎಲ್ಲ ಪ್ರದೇಶಗಳಲ್ಲೂ ಕೃಷಿ ಸಂಸ್ಕೃತಿ ಏಕರೂಪವಾಗಿ ವಿಕಾಸ ಹೊಂದಿಲ್ಲ ಎಂದು ಈಗಾಗಲೇ ಸಮಾಜಶಾಸ್ತ್ರಜ್ಞರು ನಿರೂಪಿಸಿದ್ದಾರೆ. ಬೇಟೆ, ಕೃಷಿ ಪಶುಪಾಲನೆಯ ಹಂತಗಳು ಬೇರೆ ಬೇರೆ ಸ್ವರೂಪವಲ್ಲಿ ವಿಸ್ತರಣೆಗೊಂಡುದು ಅಲ್ಲದೆ ಜೀವನಕ್ರಮದ ರೀತಿ ನೀತಿಗಳೂ ಬದಲಾದುದು ಎಲ್ಲರಿಗೂ ತಿಳಿದಿರುವ ಸತ್ಯ. ಕುಟುಂಬರಚನೆ ಮತ್ತು ಭೂಮಿಯ ಒಡೆತನದಲ್ಲಿ

ಆದ ಪಲ್ಲಟಗಳನ್ನು ಮಾನವಶಾಸ್ತ್ರದ ಹಿನ್ನೆಲೆಯಲ್ಲಿಯೂ ವಿಶ್ಲೇಷಣೆ ಮಾಡಲಾಗಿದೆ. ಭೂಮಿಗೆ ಹಾಕುವ ಬೀಜ ಮೊಳಕೆಯೊಡೆದು ಬೆಳೆ ಬೆಳೆಯುವ ಪರಿ ಮತ್ತು ಮಕ್ಕಳನ್ನು ಹೆರುವ ಹೆಣ್ಣು ಇವರಿಬ್ಬರನ್ನು ಸಮೀಕರಿಸುತ್ತ ಬದುಕು ಕಟ್ಟಿದ ಪರಿಯೊಂದಿಗೆ ಸಂಸ್ಕೃತಿ ವಿಕಾಸದ ವಿಸ್ತಾರವನ್ನು ಅರ್ಥೈಸಲಾಗುತ್ತದೆ.

ಕೃಷಿಯಿಂದ ಬದುಕು ಬದಲಾಗುವುದರ ಜತೆ ಜತೆಗೂ ಯಂತ್ರ ನಾಗರಿಕತೆಯೂ ಹುಟ್ಟಿ ಬೆಳೆದದ್ದು ವಾಸ್ತವ. ಕೃಷಿ ಜಗತ್ತಿನ ಅನಿವಾರ್ಯತೆಗಾಗಿ ಮತ್ತು ಬೆಳೆಯ ಪ್ರಮಾಣವನ್ನು ಹೆಚ್ಚಿಸುವುದಕ್ಕಾಗಿ ಯಂತ್ರಗಳ ಅನ್ವೇಷಣೆಯಾಯಿತೆ ಹೊರತು, ಸ್ಥಿತ್ಯಂತರಗಳಿಗಾಗಿಯೇ ನಡೆವ ನಡೆವ ಹುಡುಕಾಟಗಳು ಇದಲ್ಲ. ಸರಳವಾದ ಗ್ರಹಿಕೆಯೆಂದರೆ ಉತ್ಪಾದನೆಯ ಮೇಲೆ ಹೆಚ್ಚಿನ ಒತ್ತಡ ಮತ್ತು ಮಾನವ ಶ್ರಮವನ್ನು ಕಡಿಮೆ ಮಾಡುವ ನೆಲೆಯಲ್ಲಿ ಬಂಡವಾಳ ಹೂಡಿಕೆಯ ಕೈಗಾರಿಕಾ ಪ್ರವೃತ್ತಿಯಾಗಿ ಕೃಷಿಯಲ್ಲೂ ಅತಿ ವೇಗದ ಸ್ಥಿತ್ಯಂತರಗಳಾದವು. ಅಲ್ಲಿ ಹಸಿವಿನ ಹುಡುಕಾಟವಿರಲಿಲ್ಲ. ಕೇವಲ ದುಡ್ಡಿನ ಹುಡುಕಾಟವಿತ್ತು. ಕೃಷಿ ಜಗತ್ತಿನಲ್ಲೂ ಹೊರಲೋಕದ ಪ್ರತಿಕ್ರಿಯೆಯಲ್ಲೂ ಪಲ್ಲಟಗಳೂ ಹುಟ್ಟಿಕೊಂಡವೇ ಎಂಬ ಪ್ರಶ್ನೆಯನ್ನು ಕೇಳಿಕೊಂಡರೆ ಉತ್ತರ ಸರಳವಲ್ಲ. ಕೃಷಿ ಲೋಕದ ಒಳಗಿನ ಪ್ರವೃತ್ತಿಗಳಿಂದ ಬದಲಾಯಿತೇ ಎಂಬ ಪ್ರಶ್ನೆಯ ಜಿಜ್ಞಾಸೆಯೂ ಹುಟ್ಟಿಕೊಳ್ಳದೆ ಇರದು. ಈ ತರ್ಕಗಳ ನಡುವೆ ಭಾರತಕ್ಕೆ ವ್ಯಾಪಾರಕ್ಕಾಗಿ ಆಗಮಿಸಿದ ವಿದೇಶಿಯರು ಸಂಪದ್ಭರಿತವಾದ ಭೂಮಿಯನ್ನು ತಮ್ಮ ಅಧೀನಕ್ಕೆ ಒಳಪಡಿಸಿಕೊಂಡು ದಾಸ್ಯದಿಂದ ಬಾಳುವಂತೆ ಮಾಡಿದುದು ಅಪಹಾಸ್ಯವೇನಲ್ಲ. ಬ್ರಿಟಿಷರು ತಾವು ವಶಪಡಿಸಿಕೊಂಡ ವಸಾಹತುಗಳನ್ನು ತಮ್ಮ ಅಧೀನಕ್ಕೊಳಪಡಿಸುವಾಗ ಒಂದೆಡೆ ಸುಧಾರಣೆಯ ಮನೋಧರ್ಮ, ಇನ್ನೊಂದೆಡೆ ತಮ್ಮ ಬದುಕಿನ ಕ್ರಮಗಳೇ ಶ್ರೇಷ್ಠವೆಂಬ ಮೇಲರಿಮೆ ಹಲವು ಬದಲಾವಣೆಗಳನ್ನು ತಂದಿತು. ಬಹಳ ಮುಖ್ಯವಾಗಿ ಬ್ರಿಟಿಷರು ಪರಿಚಯಿಸಿದ ಶಿಕ್ಷಣ ಕ್ರಮ ಜನರ ಜನಜೀವನವನ್ನು, ಸಾಮಾಜಿಕ ವ್ಯವಸ್ಥೆಯನ್ನು ಬದಲಾಯಿಸಿತು. ಜೀವನಕ್ರಮದಲ್ಲಿ ಇರುವ ವ್ಯವಸ್ಥೆಯನ್ನು ನಿರಚನೆಗೊಳಿಸಿ ಹೊಸ ರೀತಿಯ ಆಲೋಚನಾ ಕ್ರಮದ ಬದುಕನ್ನು ಕಟ್ಟುವಾಗಲೂ ಅದು ಒಮ್ಮೆಲೇ ಬದಲಾಗಿಲ್ಲ. ಉತ್ಪಾದನೆಯ ಹೆಚ್ಚಳ, ಆರ್ಥಿಕತೆಯ ಮಾನದಂಡಗಳು, ಲಭ್ಯವಾಗುವ ಸವಲತ್ತುಗಳು, ಐಷಾರಾಮದ ಬದುಕಿನ ಗ್ರಹಿಕೆಗಳು ಸ್ಥಿತ್ಯಂತರಗಳಿಗೆ ಕಾರಣವಾದುದು. ಉತ್ಪಾದನೆ, ಸಂಗ್ರಹಣೆಯ ಪರಿಭಾಷೆಗಳು ಹೊಸ ಅರ್ಥವನ್ನು ಪಡೆದುಕೊಂಡವು. ವಿಸ್ತಾರವಾದ ಭೂಮಿಯ ಒಡೆತನವನ್ನು ಒಂದು ಕಾಲದ ಸಾಮಾಜಿಕ ಆದರ್ಶ ಮತ್ತು ವೈಯುಕ್ತಿಕ ಪ್ರತಿಷ್ಠೆ ಮತ್ತು ಘನತೆಯ ಬದುಕೆಂದು ನಿರೂಪಿಸಲ್ಪಟ್ಟಿತ್ತು. ಇದನ್ನು ದಾಟಿ ಕೈ ತುಂಬಾ ಸಂಬಳ ಬರಬೇಕು, ಬಟ್ಟೆ ಕೊಳೆಯಾಗಬಾರದು ಬೆನ್ನು ಬಾಗಬಾರದು, ಸವಲತ್ತುಗಳೆಲ್ಲವು ಬೆರಳ ತುದಿಯ ಕರೆಗಂಟೆಯಂತೆ ಓಡೋಡಿ ಸೇವೆಗೆ ಸನ್ನದ್ಧವಾಗಬೇಕು ಎಂಬ ಧೋರಣೆ ಪ್ರಾಮುಖ್ಯ ಪಡೆಯಿತು. ಶ್ರಮವಹಿಸಿ ದುಡಿಯುವುದು ಒಂದು ಕಾಲದ ಮೌಲ್ಯವಾಗಿದ್ದರೆ, ಈಗ ಹಾಗೆ ದುಡಿಯುವುದೇ ಅವಮಾನವಾಯಿತು. ಸಾಮಾಜಿಕ ವಿಕಾಸ ಮತ್ತು ಸಾಮಾಜಿಕ ಬದಲಾವಣೆ ಹಲವಾರು ರೀತಿಯ ಸ್ಥಿತ್ಯಂತರಗಳನ್ನು ತಂದವು. ಬದುಕಿನ ಗ್ರಹಿಕೆಯಲ್ಲಿ, ಜೀವನದ ಮೌಲ್ಯಗಳಲ್ಲಿ ಜೀವನಕ್ರಮದ ರೀತಿ ನೀತಿಗಳಲ್ಲಿ ಒಟ್ಟಾರೆಯಾಗಿ ಕೌಟುಂಬಿಕ ಮತ್ತು ಸಾಮಾಜಿಕ ಬದುಕಿನಲ್ಲೂ ಮುಂಚಲನೆಗಳು ಕಾಣಿಸಿಕೊಂಡವು. ಕೃಷಿಯ ಉತ್ಪನ್ನಗಳು ಮನೆಯಂಗಳದಿಂದ ಮಾರುಕಟ್ಟೆಗೆ, ಸೂಪರ್

ಬಜಾರ್‌ಗೆ, ಮಾಲ್‌ಗಳಿಗೆ ಸ್ಥಳಾಂತರಗೊಂಡದು ಮಾತ್ರವಲ್ಲ, ಅದರ ಹೊರ ಆವರಣವೂ ಬದಲಾಯಿತು. ಪೋಷಾಕು ತೊಟ್ಟು ಮಾರುಕಟ್ಟೆಗೆ ಬಂದ ಕೃಷಿಯ ಉತ್ಪನ್ನಗಳ ಒಳ ಮರ್ಮವೂ ಸುಭಿಕ್ಷವಾಗಿರಲಿಲ್ಲ. ಇದು ಅರ್ಥವಾಗುವ ವೇಳೆಗೆ ಆಧುನಿಕತೆಯ ಭರಾಟೆಯಲ್ಲಿ ಬಹಳ ಮುಂದೆ ಸಾಗಿ ಬಂದಾಗಿತ್ತು.

ಭಾರತೀಯ ಸಂಸ್ಕೃತಿ ಎಂಬ ಮಿಥ್ಯೆಯನ್ನು ಮತ್ತೆ ಮತ್ತೆ ರುಜುವಾತು ಪಡಿಸಲು ಕೂಗು ಮಾರಿಗಳ ಮೊರೆ ಹೋಗುತ್ತಿರುವಾಗಲೇ ಒಂದೊಂದು ಸಮುದಾಯವೂ ತನ್ನ ಅನನ್ಯತೆಯನ್ನು ಕಾಯ್ದುಕೊಂಡಿತು. ತನ್ನ ಭಾಷೆ ಆಚಾರ –ವಿಚಾರಗಳು ಮಹತ್ವದ್ದೆಂದು ಅರಿವಾಗುವ ಕ್ಷಣಕ್ಕೆ ಬಹಳ ಮೌಲಿಕವಾದ ಸಂಗತಿಗಳು ಜನ ಮಾನಸದಿಂದ ಮರೆಯಾಗಿದೆ. ಅದಕ್ಕಾಗಿ ಹಳಹಳಿಸದೆ ಬದಲಾದ ಬದುಕಿನ ಕ್ರಮವನ್ನು ದಾಖಲಿಸುವ ಕೆಲಸಗಳೂ ನಿರಂತರವಾಗಿ ನಡೆದವು. ಭಾರತದೇಶದ ಬೆನ್ನೆಲುಬಾಗಿರುವ ಕೃಷಿ, ಮತ್ತು ಕೃಷಿಕಾರ್ಯವನ್ನು ನಡೆಸುವ, ರೈತ ಅಸಹಾಯಕನಾಗುತ್ತ ಆತ್ಮಹತ್ಯೆಯ ಹಾದಿ ಹಿಡಿಯುತ್ತಿರುವ ಹೊತ್ತಿನಲ್ಲೂ ಆಹಾರದ ಬೆಳೆ ವಾಣಿಜ್ಯ ಬೆಳೆಯಾಗುವುದರ ಜತೆಗೆ ಜನರ ಆಹಾರ ಕ್ರಮದಲ್ಲೂ, ಮುಖ್ಯ ಆಹಾರದಲ್ಲೂ ಬದಲಾವಣೆಗಳೂ ಗೋಚರಿಸಿದವು. ಸಂಸ್ಕೃತಿಯ ಕುರಿತಾದ ಕ್ಲೀಷೆಗಳು ಮತ್ತೆ ಮತ್ತೆ ಚರ್ಚೆಗೆ ಬರುವುದರಿಂದ ಸಮಾಜ ಮತ್ತು ಸಂಸ್ಕೃತಿ ಪರ್ಯಾಯ ಪದಗಳಾಗಿ ಬಳಕೆಯಾಗಿದೆ. ಸಮಾಜ ಬದಲಾದಂತೆ ಸಂಸ್ಕೃತಿಯೂ ಬದಲಾಗುತ್ತಿದೆ ಎನ್ನುವಾಗ ಚಲನಶೀಲವಾದ ಕಾಲದ ಬದುಕಿನ ಸಮಾಜದ ಪರಿಕಲ್ಪನೆಯ ಚಿಂತನೆಯನ್ನು ಅರ್ಥೈಸಬೇಕಾಗುತ್ತದೆ.

ಸಾಮಾಜಿಕವಾಗಿ ಗಮನಿಸಿದಾಗ ಸಂಸ್ಕೃತಿ ಚಿಂತಕರು ನಡೆಸಿದ ವಿಶ್ಲೇಷಣೆಯನ್ನು ಗುರುತಿಸಬಹುದು. ಶಂಬಾರವರು ಕಲಾಕೇಂದ್ರಿತ ಸಂಸ್ಕೃತಿ ವ್ಯಾಖ್ಯೆಯನ್ನು ಒಪ್ಪುವುದಿಲ್ಲ. ಅವರ ಪ್ರಕಾರ "ಸಂಸ್ಕೃತಿಯು ಸಾಹಿತ್ಯ ಸಂಗೀತ ಕಲೆಗಳ ಮಟ್ಟಿಗೆ ಸೀಮಿತವಲ್ಲ. ಆಚಾರ–ವಿಚಾರ ಅನುಸಂಧಾನದಲ್ಲಿ ಆ ಜಗದ ಸಂಸ್ಕಾರ ಸಂಸ್ಕೃತಿಯ ಸ್ವರೂಪವು ತಿಳಿಯುತ್ತದೆ. ಭಾಷೆ ಮೈ ಪಡೆದುದು ಜನರ ನಡವಳಿ ಮತ್ತು ನುಡಿವಳಿಗಳ ಹಿನ್ನೆಲೆಯಲ್ಲಿಯೇ ಭಾಷೆಯ ಮೂಲಕ, ಅ ಭಾಷಿಕರ ಸಂಸ್ಕೃತಿಯ ಇತಿಹಾಸ ಮತ್ತು ಆ ಸಂಸ್ಕೃತಿಯ ಸ್ವರೂಪ ಬೆಳೆದು ಬರುವುದು ಇದೇ ಕಾರಣದಿಂದ" (ಶಂ. ಬಾ ಜೋಶಿ; ಸಂಪುಟ ೪, ೧೯೯೧; ಪು ೫೮೩) ಎಂದು ಮಾರ್ಮಿಕವಾಗಿ ನುಡಿಯುತ್ತಾರೆ.

ಕರಾವಳಿಯಲ್ಲಿ ಜನ ಜೀವನ ಬದಲಾದ ಕ್ರಮವನ್ನು ಗಮನಿಸಿದರೆ ಕಾಡಿನಿಂದ ನಾಡಿಗೆ ಬಂದು ಕೃಷಿ ಭೂಮಿ ವಿಸ್ತರಿಸಿದುದು ಮೊದಲ ಹಂತ. ಎರಡನೆಯ ಹಂತಕ್ಕಾಗುವಾಗ ವಿಸ್ತಾರವಾದ ಭೂಮಿ ಓರ್ವ ರೈತನ ಆಡಳಿತಕ್ಕೆ ಒಳಪಟ್ಟು ಪಾಳೇಗಾರನಾಗಿ ಪ್ರಭುತ್ವಕ್ಕೆ ಅಧೀನವಾಗಿ ಬಾಳಿದ ಕಾಲವದು. ವಸಾಹತುಶಾಹಿ ಆಡಳಿತದ ಆರಂಭ ಮತ್ತು ಭೂಮಿಯ ಒಡೆತನದಲ್ಲಿ ಮತ್ತು ನೋಡುವ ಕ್ರಮದಲ್ಲಿ ಆದ ಬದಲಾವಣೆಗಳು ಸಾಮಾಜಿಕ ಬದುಕಿನಲ್ಲು ಸ್ಥಿತ್ಯಂತರ ತಂದಿತು. ವಸಾಹತುಶಾಹಿ ಆಡಳಿತ ಕೊನೆಗೊಂಡು ಸ್ವತಂತ್ರ ಭಾರತ ದೇಶದ ಆಡಳಿತ, ಸಾಂವಿಧಾನಿಕತೆ, ಜಾಗತೀಕರಣ ಕೃಷಿ ಕ್ಷೇತ್ರದಲ್ಲಷ್ಟೇ ಅಲ್ಲದೆ ಸಾಮಾಜಿಕ ಬದುಕಿನಲ್ಲು ಬದಲಾವಣೆಯನ್ನು ತಂದಿತು. ಹಂತ ಹಂತವಾಗಿ ಕೃಷಿಯೊಂದಿಗೆ ವೈಯಕ್ತಿಕ ಬದುಕು, ಸಾಮೂಹಿಕ

ಬದುಕಿನೊಂದಿಗೆ ಸಮಾಜವು ಚಲನಶೀಲವಾಗುತ್ತ ಸಾಗಿತ್ತು. ಈ ಸೂಕ್ಷ್ಮಗಳನ್ನು ತುಳುವಿನ ಲೇಖಕರು ಬೇರೆ ಬೇರೆ ನೆಲೆಯಲ್ಲಿ ಗುರುತಿಸಿದ್ದಾರೆ.

ವಸಾಹತುಶಾಹಿ ಆಡಳಿತ ಕರಾವಳಿಯಲ್ಲಿ ತಂದ ಪಲ್ಲಟಗಳು ಹಲವು. ಮೊದಲ ಬಾರಿಗೆ ಇರುವ ವ್ಯವಸ್ಥೆಯನ್ನು ರಚನಾನಿರಚನಗೊಳಿಸಿ ಹೊಸ ರೀತಿಯಲ್ಲಿ ನಿರೂಪಿಸುವ ಕೆಲಸಗಳು ನಡೆದವು. ಸಾಮಾಜಿಕ ಸಂರಚನೆ ಬದಲಾಗಿ ಕಂಡ ಮೊದಲ ಹಂತದ ಸ್ಥಿತ್ಯಂತರಗಳೊಂದಿಗೆ ವೈಯಕ್ತಿಕ ಬದುಕಿನಲ್ಲೂ ಬದಲಾವಣೆಗಳಾದವು. 'ಒಂಜಿ ಗುತ್ತುದ ಕತೆ ಮಿತ್ತ ಬೈಲ್ ಯಮುನಕ್ಕೆ'ಎಂಬ ಆನಂದಕೃಷ್ಣರ ಕಾದಂಬರಿ ಗುತ್ತಿನ ಕತೆಯೊಂದಿಗೆ ಸುತ್ತಲಿನ ಸಮಾಜದ ಸ್ಥಿತ್ಯಂತರಗಳನ್ನು ನಿರೂಪಿಸುತ್ತದೆ. ಚರಿತ್ರೆಯ ಸಂಗತಿಗಳನ್ನು ಕಾದಂಬರಿಯಾಗಿ ಕಟ್ಟಿಕೊಡುವಾಗ ಐತಿಹಾಸಿಕ ಸಂಗತಿಗಳನ್ನು ಪ್ರಸ್ತಾಪಿಸುತ್ತ, ವಾಸ್ತವಿಕ ವಿಚಾರಗಳನ್ನು ಕಟ್ಟಿಕೊಡುತ್ತಾರೆ.

ಬ್ರಿಟಿಷರ ಆಡಳಿತದ ವಿರುದ್ಧ ದಂಗೆ ಎದ್ದ ಪುಟ್ಟ ಬಸವ ಎಂಬ ರೈತ ಮಡಿಕೇರಿಯ ರಾಜ ಕಲ್ಯಾಣಪ್ಪನ ಹೆಸರಿನಲ್ಲಿ ಪ್ರತಿಭಟಿಸುತ್ತಾನೆ. ಈ ಘಟನೆ ತುಳುವಿನಲ್ಲಿ ಕಲ್ಯಾಣಪ್ಪನ 'ಕಾಟ್ ಕಾಯಿ' ಎಂದೇ ಪ್ರಸಿದ್ಧವಾಗಿದೆ. ಕಾಟ್‌ಕಾಯಿ ಎಂದರೆ ದರೋಡೆ, ದಂಗೆ, ದೋಚು ಎಂಬ ಅರ್ಥವಿದೆ. ಸ್ವಾಭಿಮಾನಕ್ಕಾಗಿ ನಡೆಸಿದ ಹೋರಾಟ ದಂಗೆ, ದರೋಡೆ ಎಂದು ಬ್ರಿಟಿಷರಿಂದಲೇ ಕರೆಸಿಕೊಂಡಿದೆ. ಆಳುವ ವರ್ಗವನ್ನು ವಿರೋಧಿಸಿದ್ದರಿಂದ ಪ್ರಶಂಸೆಗಿಂತಲೂ ದೂಷಣೆಯಾಗಿ ಚಾರಿತ್ರಿಕ ಸತ್ಯ ಬೇರೆಯೇ ಇತ್ತು. ಚರಿತ್ರೆಯಲ್ಲಿ ಮರೆಯಾದ 'ಅಮರ ಸುಳ್ಯ ದಂಗೆ'ಯಲ್ಲಿ ಹೋರಾಡಿದ ಪುಟ್ಟ ಬಸವನೆಂಬ ರೈತ ತನ್ನ ವೇಷ ಮರೆಸಿ ಕಲ್ಯಾಣಪ್ಪನಾಗಿ ಬ್ರಿಟೀಷರನ್ನು ವಿರೋಧಿಸಿದ್ದು ಮಾತ್ರವಲ್ಲ ಯಾಕೆ ವಿರೋಧಿಸಿದ ಎಂಬ ಕಾರಣವನ್ನು ಹುಡುಕುತ್ತಾರೆ. ಕಾದಂಬರಿಯ ಮಧ್ಯದಲ್ಲಿ ಕತೆಯ ಓಘದೊಂದಿಗೆ ಇದನ್ನು ನಿರೂಪಿಸಲಾಗಿದೆ. "ಈ ಸಮಯಡೊಂಜಿ ಬ್ಯಾರ ಆಂಡ್. ಕಲೆಕ್ಟ್ ಮುನ್ರೊ ಸಾಯಿಬೆರ್ ಅರಿಬಾರ್‌ದ ತೀರ್ವೆಸ್ ಕ್ಯದ್ ಮಂತ್‌ದ್ ತೀರ್ವೆನ್ ಪಣವುಡೇ ಕೊರೊಡುಂದು ನಿಗಂಟ್ ಮಂತೆರ್ ಅರಿಬಾರ್‌ದ ಬೇರ ಫರಂಗಿದಕ್ಲೆ ಕೈಟಿತ್ತಿಂಡ್, ಬುಳೆಕ್ ಅಕ್ಲ್ ಪಂಡಿನೆನೇ ಕ್ರಮ ದೆತೊನುನಕ್ಲ್ ದಾಂತೆ ಅರಿಬಾರ್ ತಾರಾಯಿನ ಕ್ರಯ ಬೂರ್ದು ಮಣ್ಣ್ ತಿಂದ್‌ಂಡ್, ಜನೊಕುಲೆಗ್ ಮುನ್ರೋ ಸಾಯಿಬೆರೆನ ಪಣವು, ತೀರ್ವೆ, ಸುಂಕ ಕೊರ್ಯೆರೆ ಆಯಿಜಿ. ಪರಂಗಿಲೆನ ಪೀಡೆ ಎಚ್ಚಾಂಡ್. ಜನೊಕುಲೆನ ಅಸಮಾಧಾನ ಎಚ್ಚಾಂಡ್. ಅಮರ ಸುಳ್ಯೊಲೆಡ್ ಊರುಗು ಊರೋ ದಂಗೆ ಲಕ್ಯೆರೆ ಸುರುಮಂತೆರ್. ಆ ದಂಗೆ ಕಲ್ಯಾಣಪ್ಪನ ಕಾಟ್‌ಕಾಯಿಗ್ ತಿಕ್ ಬೂರುಂಡು (ಆನಂದ ಕೃಷ್ಣ ೨೦೦೫ ಪು ೧೨೧) ಕೊನೆ ಟಿಪ್ಪಣಿ ೫೫.

ಸ್ವಾತಂತ್ರ್ಯ ಚಳುವಳಿಯ ಪೂರ್ವದಲ್ಲಿ ಕಾಣಿಸಿಕೊಂಡ ರೈತ ದಂಗೆ ಇದು. ವ್ಯವಸ್ಥೆಯನ್ನು ನಾಶಮಾಡುತ್ತ ತನ್ನ ಅಧೀನಕ್ಕೆ ಒಳಪಡಿಸಿಕೊಳ್ಳಲು ಪ್ರಭುತ್ವ ತೀರಾ ಒರಟಾದಾಗ ಜನ ಸಾಮಾನ್ಯರು ದಂಗೆ ಏಳುವುದು ಅನಿವಾರ್ಯವಾಗಿತ್ತು. ಹಸಿವಿನ ನಿವಾರಣೆಗೆ ಆಹಾರದ ಉತ್ಪಾದನೆಯಾಗಿದ್ದ ಕೃಷಿ ವ್ಯವಹಾರವಾಗಿ ಬದಲಾಗುತ್ತಿದ್ದು ಮಾತ್ರವಲ್ಲ ದುಡಿದವರಿಗೆ ಹಿಡಿ ಅನ್ನ ಸಿಗುವುದೇ ಕಷ್ಟವೆನಿಸಿದಾಗ ದುಡಿಮೆ ಯಾಕೆ ಎಂಬ

ಪ್ರಶ್ನೆ ಹುಟ್ಟುವುದೇ ಸಹಜ. ಬೆವರು ಸುರಿಸಿ ದುಡಿವ ದುಡಿಮೆ ಹೊಟ್ಟೆಯ ಹಸಿವು ನೀಗಿಸದೆ ಇದ್ದರೆ, ಅಸಮಾನತೆಯೊಂದಿಗೆ ಅಸಹನೆಯೂ ಹೆಚ್ಚುತ್ತ ಹೋಗುತ್ತದೆ.

ಕೃಷಿಗೆ ಪರ್ಯಾಯವಾಗಿ ವ್ಯಾಪಾರ ಬಂತೇ ಎಂದು ಪ್ರಶ್ನಿಸಿಕೊಂಡರೆ ಕರಾವಳಿ ಹಿಂದಿನಿಂದಲೂ ವಿದೇಶಿ ವ್ಯಾಪಾರಕ್ಕೆ ತನ್ನನ್ನು ತೆರೆದುಕೊಂಡಿರುವಂತಹುದು. ಹಣಕಾಸಿನ ವ್ಯವಹಾರ ಮತ್ತು ಅಗಾಧ ಸಿರಿತನ, ಸಂಪತ್ತಿನ ಸಂಗ್ರಹ ಇದು ಕರಾವಳಿಯಲ್ಲಿ ಇದ್ದ ಮನೋಧರ್ಮವೂ ಅಗಿತ್ತು. ವ್ಯಾಪಾರೀ ಮನೋಭೂಮಿಕೆ ಹೇಗೆ ಬೆಳೆಯಿತು ಎನ್ನುವುದನ್ನ ಸೂಕ್ಷ್ಮವಾಗಿ ಲೇಖಕರು ಗುರುತಿಸಿದ್ದಾರೆ. "ಅರಬೆರೆ ಬುಕ ಪೋರ್ಚುಗೀಸೆರ್ ಈ ಊರುಗು ಬರ್ಪುನೆ ಸಾಂಬಾರ್ ಜೀನಸ್‌ದ ಬೇರೊಗು, ಅಕ್ಲು ನಮ್ಮ ಊರುದ ಕಾಡ್‌ದ ಉತ್ಪತ್ತಿನ್ ಗೆತೊಂದು ಬೇರ ವುನ್ಪಯೆರೆ ಬರ್ಪುನೆಂದೇ ಪನ್ನಗ ಮಂಜಣದ ತರೆಕ್ ಬೇತೆ ಬೇರದ ವಿಷಯ ಪೊಗ್ಗ್ಂಡ್.

ಮಂಜಣೆ ಮೆಗಿಯಾಲ್ಲೆನ್ ಲೆತ್ತ್‌ದ್ ರಾಯಪ್ಪ ನಾಯ್ಕೆ ಪನ್ಪುನೆನ್ ಕೇಣ್ಯೆರೆ ಪಂಡೆ. ....... ರಾಯಪ್ಪೆ ನಾಯ್ಕೆ ಅಕ್ಲೆಡ ಇಡೀ ಊರುಡು ಕಾಯಿನ್ ಕೊಣತ್‌ದ್ ಮಾರುನ ಕಾಡ್ ಉತ್ಪತ್ತಿ, ಎಡ್ಡೆ ಮುಂಚಿ, ಏಲಕ್ಕಿ, ಲವಂಗ, ದಾಲಚೀನಿ, ಮಾತಾ ನುಂಗಾದ್ ತನ್ನ ಭಂಡಸಾಲೆಗ್ ಪಾಡ್‌ಂಡ ಎಡ್ಡೆಕ್ರಯ ಕೊರ್ಪೆ ಪನ್ನಗ ಮಂಜಣ್ಣಾಳ್ವೆ ಒಪ್ಪೊಂಡೆ. ಐಯಿತ ಮಿತ್ತ್ ರಾಯಪ್ಪ ನಾಯ್ಕೆ ತಾರಾಯಿದ ಕೊಪ್ಪರದ ಬೇರಲ ತೆರಿಪಾದ್ ಕೊರ್ಯೆ..... ಇಂಚ ರಾಯಪ್ಪ ನಾಯ್ಕಡ ಒಂಜಿ ಪೊಸ ಬೇರ ಸುರುವಾಂಡ್, ಮಂಜಣ್ಣಾಳ್ವಗ್ ತನ ಉತ್ಪತ್ತಿಲೆಗೊಂಜಿ ಪೊಸ ತಾದಿ ಆಯಿನ ತೂದು ಕುಸಿಯಾಂಡ್. ಮಂಜಣ್ಣಾಳ್ವೆರ್ ಮಸ್ಕತ್‌ದರಿ ಆದಿಸೆಟ್ಟಿಗತ್ತಂದೆ ಬೇತೆ ಏರೆಗ್ಲ ಕೊರ್ಪುಜಿಂದ್ ರಾಯಪ್ಪ ನಾಯ್ಕಲೆಕತಿ ಸಾವ್ಕಾರಗ್ ಪಂಡೆರ್ ಪನ್ಪಿ ಪಾತೆರ ಆದಿಸೆಟ್ಟಿನ ಕೆಬಿಕ್‌ಲ ಬೂರ್‌ಂಡ್ (ಅದೇ, ಪು.೧೨೧) (ಕೊನೆ ಟಿಪ್ಪಣಿ ೫೬) ಕೃಷಿಯೊಂದಿಗೆ ವ್ಯಾಪಾರವನ್ನು ಬೆಳೆಸಿ ಅದಾಯವನ್ನು ಹೆಚ್ಚಿಸಿಕೊಂಡ ತುಳುವರು ಸಂಪತ್ತಿನ ಪರಿಭಾಷೆಯನ್ನು ಬದಲಾಯಿಸಿಕೊಂಡರು.

ರಾಷ್ಟ್ರೀಯ ಚಳುವಳಿ, ಸ್ವಾತಂತ್ರದ ಚಳುವಳಿಯೊಂದಿಗೆ ಗಾಂಧಿ ಮಂಗಳೂರಿಗೆ ಬಂದಾಗ ಗುತ್ತಿನ ಮನೆಯವರು ಚಳುವಳಿಯ ಭಾಗವಾಗಿದ್ದು, ಗಾಂಧಿವಾದಿಗಳಾಗಿ ಸಕ್ರಿಯರಾಗಿದ್ದರು. ಮಿತ್ತಬೈಲಿನ ಸುಬ್ಬಯಣ್ಣ ಗಾಂಧಿಯ ಚಿಂತನೆಗಳಿಂದ ಪ್ರಭಾವಿತರಾಗಿ ಗಾಂಧಿವಾದಿಯಾಗಿ, ಉಪ್ಪಿನ ಸತ್ಯಾಗ್ರಹಗಳಲ್ಲೆಲ್ಲ ಭಾಗವಹಿಸಲು ಉತ್ತರ ಭಾರತಕ್ಕೆ ತೆರಳಿ ದೇಶ ಸುತ್ತಿ ಮರಳಿ ಬರುವಾಗ ಗುತ್ತಿನ ಮನೆಯಂಗಳದ ಸ್ಥಿತಿ ತೀರಾ ಹದಗೆಟ್ಟಿರುತ್ತದೆ. "ಮಿತ್ತ ಬೈಲ್‌ಡ್ ಬತ್ತ್‌ದ್ ಉಂತಿನ ಸುಬ್ಬಯಣ್ಣಗ್ ಆಚಿರದ ಮಿತ್ತ್ ಆಚಿರ ಕಾತೊಂದಿತ್ತ್‌ಂಡ್, ಆತ್ ಮಲ್ಲ ಪಚ್ಚೆ ಪಜಿರ್‌ದ ಭೂಮಿ ಪಡಿಲ್ ಬೂರ್ದಿತ್ತ್‌ಂಡ್. ಇಲ್ಲದ ಸುತ್ತಮುತ್ತ ಬಾರ್, ಬೋರಿ, ಕಂಡ, ಕಿದೆ ಬೋಳು ಬೋಳು ತೋಜೊಂದಿತ್ತ್‌ಂಡ್. ಗುತ್ತು ಗುರ್ಕಾರ್ಮೆದ ಇಲ್ಲ್ ಪಿಲಿ ತಿಂದ್ ಒರಿನ ಕೈಕಂಜಿನ್ ಎಂಚ ಕತ್ತೆ ಪಿಲಿ ಕುದಿಕೆರ್ಲು ಒಯಿತೊಂದು ಉಪ್ಪುವನ ಅಂಚೆನೆ ತೋಜೆಂಡ್. ಪರಿದ್ ಚೆಲ್ಲಾಪಿಲ್ಲಿ ಆಯಿನ ಇಲ್ಲ್ ಮಾಡ್ ಬೇವಂದೆ ಬೂರ್ಯೆರೆ ತಯಾರ್ ಅಯಿಲೆಕ ತೋಜೊಂದಿತ್ತ್‌ಂಡ್. ಇಲ್ಲದ ಜವಣೆರೆ ಜೋಕ್ಲು ಕೇಣುನಕ್ಲ್‌ದಾಂತೆ ಬೂರೊಂದಿತ್ತೆರ್. ತಂಕ್‌ಲ್ ಇಲ್ಲ್ ತಂಕಲೆ ಭೂಮಿಂದ್ ಬೆನ್ಪುನಾಯೆ ಒರಿಲಾ ಇಜ್ಜಾಂಡ್. ತಿಕ್ಕಿನ ಅರಿಬಾರ್ ಬಜ್ಜೆಯಿಲೆನ್ ಕಂಡ್‌ದ್ ಮಾರುನವೆ ಜವಣೆರೆ ಕಸುಬಾದಿತ್ತ್‌ಂಡ್. ಬೊಕ್ಕ ಕೆಲವೆರ್ ಊರುದ ಬೀಸತ್ತಿ ಗುರಿಕಾರ್ಲೆಲೆಕ ತಿರ್ಗೊಂದಿತ್ತೆರ್. ಇಲ್ಲಲ್ ಮದಿಮಾಲಾದ್ ಪತ್ತ್ ಪದಿನೈನ್

ವರ್ಸೊಂಡ್ದಿಂಚ ಮದಿಮೆದಾಂತೆ ಬೂರೊಂದಿತ್ತಿ ಪೊಣ್ಣು ಜೋಕುಲೆಗ್ ಒರ್ಯೊರ್ಯೊಡ ಕಂಟ್ಯೊನುನವೇ ಕಸಬು. ಇಲ್ಲಲ್ ಪೊರ್ಲುಡು ಮಿರೆವೊಂದಿತ್ತ್ಂಡ್ ಅವು ಗುತ್ತಿನಾರೆ ಬೊಡೆದಿ ಬಾಲ್ಲು ಮಾತ್ರ, ಅಕ್ಲ್ ಪೊಸ ಪೊಸ ಸೀರೆ ಬಂಗಾರ್‍ಡ್ ನೇಮ ಆಯನೊಗು ಆಟ ಕೂಟೊಗು ಪೋವೊಂದಿತ್ತೆರ್. ಇಲ್ಲದ ಮರ್ಮಲಲ್ಲೆಗ್ ಸರಿಟ್ ತುತ್ತುನ ಕುಂಟು ಇದ್ಯಂಡ್. ಮಾಮಣ್ಣೆ ಕೇಂಡ್‌ಂಡ ಊರುಡು ದಾಂತಿನ ನೆರ್ಪಣೆ ಮಾಮಿಣ ಕುಚ್ಚಣ (ಅದೇ, ಪು ೨೨೦)ಕೊನೆ ಟಿಪ್ಪಣಿ ೫೭ ಅವಿಭಕ್ತವಾಗಿದ್ದ ಕುಟುಂಬ ವ್ಯವಸ್ಥೆ ಈ ಕಾರಣಕ್ಕಾಗಿಯೇ ವಿಭಕ್ತವಾಗುತ್ತ ಹೋಯಿತು. ನೂರು–ಇನ್ನೂರು ಸಾವಿರ ಮುಡಿ ವಿಸ್ತಾರದ ಗದ್ದೆಗಳಲ್ಲಿ ಜೊತೆಯಾಗಿ ದುಡಿದು, ಜೊತೆಯಾಗಿ ಉಂಡವರು ನಾನು–ನೀನು ಎಂಬ ವ್ಯತ್ಯಾಸಗಳನ್ನು ಹುಟ್ಟು ಹಾಕಿ ತಮ್ಮ ಒಗ್ಗಟ್ಟುಗಳನ್ನು ಮುರಿದು ಭೂಮಿ ಬಂಜರಾಗಲು ಕಾರಣವಾಯಿತು. ನಾವು ನಮ್ಮದು ಎಂಬ ಪ್ರಯೋಗಗಳು ನಿಂತು 'ನಾನು''ನನ್ನದು' ಎಂಬುದೇ ಮೇಲ್ಮೆಗೆ ಬಂತು. ಹೊರಗಿನ ಸಮಾಜದಲ್ಲಿ ಆದ ಬದಲಾವಣೆ ಕುಟುಂಬದ ಒಳಗಿನ ವಿನ್ಯಾಸವನ್ನು ಸ್ಥಿತ್ಯಂತರಗೊಳಿಸಲು ಕಾರಣವಾಯಿತು. ಸಾಮೂಹಿಕ ಶ್ರಮವನ್ನು ಬಯಸುವ ಕೃಷಿ ಜಗತ್ತು ಕುಂಠಿತಗೊಳ್ಳಲು ನಿಧಾನವಾಗಿ ಮರೆಯಾಗುತ್ತ ಸಾಗಲು ಇದು ಸಾಧ್ಯವಾಯಿತು.

ಹೊಟ್ಟೆಯ ಹಸಿವನ್ನು ನೀಗಿಸಿಕೊಳ್ಳಲು ಅಗತ್ಯವಾಗಿದ್ದ ಕೃಷಿ ಲೋಕದಲ್ಲಿ ಅಹಾರ ಲಭಿಸದೆ ಇದ್ದಾಗ ಹೊರ ಊರಿನ ವಲಸೆ ಅನಿವಾರ್ಯವಾಗಿತ್ತು. ಹಸಿವು ತಾಳಲಾರದೆ ಕದ್ದು ಮುಚ್ಚಿ ಊರು ಬಿಟ್ಟವರು ಒಂದು ತಲೆಮಾರಿನವರಾದರೆ ಇರುವ ತುಂಡು ಭೂಮಿಯಲ್ಲಿ ಸಾಗುವಳಿ ಮಾಡಿದರೂ ಹೊಟ್ಟೆ ತುಂಬಲಾಗದೆ ಊರು ಬಿಟ್ಟವರು ಇನ್ನೊಂದು ತಲೆಮಾರಿನ ದುಡಿಯುವ ವರ್ಗದ ರೈತಾಪಿ ಜನರು. ಒಕ್ಕಲು ಮಸೂದೆ ಕಾನೂನು ಭೂಮಿಯ ಒಡೆತನದ ಹಕ್ಕನ್ನು ಶ್ರಮಿಕ ವರ್ಗಕ್ಕೆ ನೀಡಿತು. ಮೊದಲ ತಲೆಮಾರಿನ ಸಂಭ್ರಮ ಭೂಮಿಯ ಒಡೆತನದ ಬಗೆಗೆ ಎರಡನೆ ತಲೆಮಾರಿಗೆ ಇರಲಿಲ್ಲ. ಅಕ್ಷರ ಜಗತ್ತಿಗೆ ದಾಖಲಾದ ಇವರಲ್ಲಿ ಲಭಿಸಿದ ಭೂಮಿ ಮತ್ತೆ ವಿಭಾಗಗೊಂಡು ತುಂಡು ತುಂಡಾಗಿದ್ದರಿಂದ ಹೊಟ್ಟೆ ಪಾಡು ಇದರಿಂದ ಸಾಧ್ಯವಾಗಲಿಲ್ಲ. ರಾಷ್ಟ್ರೀಯ ಚಳುವಳಿಯ ನಂತರ ಲಭಿಸಿದ ಸ್ವಾತಂತ್ರ್ಯ, ಸ್ವಾತಂತ್ರ್ಯೋತ್ತರ ಕಾಲದಲ್ಲಿ ಬಂದ ಹಲವು ಬದಲಾವಣೆಗಳು ಆರ್ಥಿಕ, ನೀತಿ ನಿರೂಪಣೆಗಳು ಇನ್ನಷ್ಟು ವ್ಯತ್ಯಾಸವನ್ನು ತರಲು ಸಾಧ್ಯವಾಯಿತು.

ಸಾಮಾಜಿಕ ಮುಂಚಲನೆಗಳಲ್ಲಿ ಕೇವಲ ಕೃಷಿ ಕುಟುಂಬಗಳಲ್ಲದೆ ಕೃಷಿ ಕೂಲಿ ಕಾರ್ಮಿಕರ ಕುಟುಂಬಗಳು, ಕೃಷಿಯೇತರ ಕುಟುಂಬಗಳಲ್ಲೂ ಬದಲಾವಣೆಗಳು ಗೋಚರಿಸಿದವು. ಆಧುನಿಕತೆ ತಂದ ಸ್ಥಿತ್ಯಂತರಗಳು, ಪರಿಚಯಿಸಲ್ಪಟ್ಟ ಇಂಗ್ಲೀಷ್ ಶಿಕ್ಷಣ ಕ್ರಮ ಸಾಂಪ್ರದಾಯಿಕ ಬದುಕಿನ ರೀತಿ ನೀತಿಗಳನ್ನು ಬದಲಿಸಿತು. ಕರಾವಳಿಯ ಕೃಷಿ ಬದುಕಿನ ಬೇರುಗಳು ಕಳಚಿಕೊಂಡು ಬಹಳ ಬೇಗದಲ್ಲಿ ಆಧುನಿಕತೆ ನಿಧಾನವಾಗಿ ಹೆಜ್ಜೆ ಊರುತ್ತ ಬಂತು.

ಸ್ವಾತಂತ್ರ್ಯ ಸಿಕ್ಕ ಕೂಡಲೇ ದೇಶ ಸುಭಿಕ್ಷವಾಗುತ್ತದೆ ಜನ ಸುಖದಿಂದ ಇರುತ್ತಾರೆ ಎಂಬ ನಿರೀಕ್ಷೆಗಳು ಹುಸಿಯಾದವು. ಸಂವಿಧಾನದ ಜಾರಿಯಾಗಿ ಬಂದ ಸಮಾನತೆಯ ತತ್ತ್ವ ಪ್ರಭುಗಳು, ಪಾಳೇಗಾರರೆಲ್ಲ, ಜನಸಾಮಾನ್ಯರಾಗಿ ಬದುಕಬೇಕಾಯಿತು.ಆದರೂ ಸಾಮಾಜಿಕ ಅಸಮಾನತೆ ನಿವಾರಣೆಯಾಗಲಿಲ್ಲ.

ಸ್ವಾತಂತ್ರೋತ್ತರ ಕಾಲ ಕೃಷಿಗೆ ಪ್ರಾಮುಖ್ಯವನ್ನು ನೀಡಿ ಮೊದಲ ಪಂಚವಾರ್ಷಿಕ ಯೋಜನೆಗಳಲ್ಲಿ ಹಸಿರುಕ್ರಾಂತಿಯ ಹೆಸರಲ್ಲಿ ಉತ್ತೇಜನವನ್ನು ನೀಡಿ ಕೃಷಿ ಉತ್ಪನಗಳನ್ನು ಹೆಚ್ಚಿಸುವ ಕೆಲಸಗಳು ನಡೆದವು. ಸಮಾಜದಲ್ಲಿ ಸಾಮಾಜಿಕ ಅಸಮಾನತೆ ನಿವಾರಣೆಯಾಗಲಿಲ್ಲ. ಪರಿಣಾಮ ಒಕ್ಕಲು ಮಸೂದೆ ಕಾನೂನು ಜಾರಿಗೆ ಬಂದರೂ ಭೂಮಿಯ ಹಂಚಿಕೆ ನಡೆಸಲು ಪ್ರಯತ್ನಿಸಲಾಯಿತು. ಭೂ ರಹಿತರು ಭೂಮಿಯ ಯಜಮಾನ್ಯವನ್ನು ಹೊಂದಲು ಸಾಧ್ಯವಾದ ಕ್ಷಣವಿದು. ಬಹಳ ಸಂಕೀರ್ಣವಾದ ಸಾಮಾಜಿಕ ವ್ಯವಸ್ಥೆಯೊಳಗಡೆ ಭೂಮಿಯ ಒಡೆತನ, ಉತ್ಪಾದನೆ, ಅಧಿಕಾರ ಇವೆಲ್ಲವೂ ಬಹಳ ಮುಖ್ಯವಾಗಿ ಗತಿಗಳಾಗಿ ಗೋಚರಿಸಿವೆ. ಅತ್ಯಂತ ಶೋಚನೀಯ ಸ್ಥಿತಿಯಲ್ಲಿದ್ದ ಜನರನ್ನು ಊಳಿಗಮಾನ್ಯದಿಂದ ಬಿಡುಗಡೆಗೊಳ್ಳುವಂತೆ ದಾಸ್ಯದಿಂದ ಮುಕ್ತವಾಗುವಂತೆ ಮಾಡಲು ಪ್ರಯತ್ನಿಸಲಾಯಿತು. ಈ ಬಂಧನಗಳಿಂದ ಬಿಡುಗಡೆಗೊಳ್ಳಲು ಕೆಲವರಾದರೂ ಯಶಸ್ವಿಯಾದರು. ಸಾಮಾಜಿಕ ಚಲನೆಯಲ್ಲಿ ಇದು ಮಹತ್ವದ ಹೆಜ್ಜೆಯಾಯಿತು.

ಈ ಸ್ಥಿತ್ಯಂತರದಲ್ಲಿ ಇನ್ನೊಂದು ರೀತಿಯ ಚಲನೆಯೂ ನಡೆಯಿತು. ಉಳ್ಳವರು ಇಲ್ಲದವರಾಗುವಂತಾದುದು ಅದಕ್ಕೆ ಪರ್ಯಾಯಗಳನ್ನು ಕಟ್ಟಿಕೊಳ್ಳಲು ಪ್ರಯತ್ನಿಸಿದುದು ಬಹಳ ಮುಖ್ಯ ಅಂಶವಾಗಿದೆ. ಪರಸ್ಪರ ವೈರುಧ್ಯದ ಎರಡೂ ರೀತಿಯ ಚಲನೆಗಳೆಂದರೆ ಮೇಲ್ಮುಖ ಚಲನೆ ಮತ್ತು ಕೆಳಮುಖ ಚಲನೆಗಳೂ ನಡೆದವು. ಇಲ್ಲದವರು ಉಳ್ಳವರಾಗಲು ಯತ್ನಿಸಿದರೆ, ಉಳ್ಳವರು ಇಲ್ಲದವರಾಗುತ್ತ ಸಾಗಿದ ಪ್ರಸಂಗಗಳು ನಡೆದವು. ಬದುಕಬೇಕಾದರೆ ದುಡಿಯಬೇಕು ದುಡಿಮೆ ಅನಿವಾರ್ಯ ಎಂದು ಸಾರಿದರೂ ಬಂಡವಾಳ ಹೂಡಿಕೆಯ ಮೂಲಕ ಸ್ಥಾಪಿಸಲ್ಪಟ್ಟ ಕೈಗಾರಿಕೆಗಳಲ್ಲಿ ಬಂಡವಾಳಶಾಹಿಗಳು, ದುಡಿಮೆಗಾರರು ಎಂಬ ವರ್ಗ ವ್ಯತ್ಯಾಸ ಗೋಚರಿಸಿತು.

ಬಡವರು ಶ್ರೀಮಂತರ ಕಂದಕ ವಿಸ್ತರಿಸಿದ್ದು ಆಧುನಿಕತೆಯ ಕೊಡುಗೆಯೂ ಆಗಿದೆ. ಇದೆಲ್ಲವನ್ನು ಸೂಕ್ಷ್ಮವಾಗಿ ಗ್ರಹಿಸಿದ ಬರಹಗಾರರು ತಮ್ಮ ಕೃತಿಗಳಲ್ಲಿ ಇದನ್ನು ದಾಖಲಿಸಿದ್ದಾರೆ.

ಜಾನಕಿ ಬ್ರಹ್ಮಾವರ ಅವರ 'ಕಪ್ಪು ಗಿಡಿ' ಕಾದಂಬರಿಯಲ್ಲಿ ತುಳುನಾಡಿನ ಊರು ಬೊಂಬಯಿ ಪೇಟೆಯ ಮಧ್ಯದ ಸಂಬಂಧಗಳನ್ನು ಹೇಳುತ್ತಾ ಬದಲಾಗುತ್ತ ಬರುತ್ತಿರುವ ತುಳುನಾಡನ್ನು, ತುಳು ಸಂಸ್ಕೃತಿಯ ಒಳ ಮರ್ಮಗಳನ್ನು ತೆರೆದು ತೋರುತ್ತಾರೆ. ಕರಾವಳಿಯಲ್ಲಿ ಕರ್ನಾಟಕ ಜಾರಿಗೆ ತಂದ ಭೂ ಸುಧಾರಣೆಯ ಕಾನೂನಿನಿಂದ ತುಳುನಾಡಿನ ದನಿ, ಒಕ್ಕಲಿನ ಸಂಬಂಧಗಳು ಸಡಿಲವಾಗಿ, ಛಿದ್ರವಾಗಿ, ಹೆಚ್ಚಾಗಿ ಹೊಡೆದಾಡುವ ಅಪರೂಪಕ್ಕೊಮ್ಮೆ ಒಮ್ಮೊಮ್ಮೆ ಒಟ್ಟಾಗುವ ಕಾನೂನಿನಿಂದಾಗಿ ತಮ್ಮ ಮೂಲ ನೆಲೆಯನ್ನು ಕಳಕೊಂಡ ದನಿಗಳ ಅಸಹಾಯಕತೆಯೊಂದಿಗೆ ಸಾಮಾಜಿಕ ಮುಂಚಲನೆಗಾಗಿ ಹೊಸ ಕಾಲದ ಸ್ಥಿತಿಗತಿಗಾಗಿ ಹೋರಾಡಿದ ಬಗೆಯಿದೆ. ಕೃಷಿಲೋಕ ವಿಸ್ತಾರವಾದ ಭೂಮಿಯ ಒಡೆತನದಿಂದ ಪಾಳೇಗಾರಿಕೆಯನ್ನು ಪಡೆದ ಹಾಗೆ, ಅದಕ್ಕೆ ಪರ್ಯಾಯವಾಗಿ ಬಂದ ಕಾನೂನಿನಿಂದ ಹುಟ್ಟಿಕೊಂಡ ಸ್ಥಿತ್ಯಂತರಕ್ಕಾಗಿ ನಡೆದ ಹೋರಾಟ, ಚಳುವಳಿ, ಜನರಿಗೆ ಮಾಡುವ ಕಾರ್ಯ ಮನವರಿಕೆ, ಸರಳವಾದದ್ದಾಗಿರಲಿಲ್ಲ. ಅದನ್ನು ಜನರಿಗೆ ತಿಳಿಸಿ ಹೇಳುವ ಕ್ರಮಗಳು ನಡೆದವು.

ಕಮ್ಯುನಿಸ್ಟ್ ಚಳುವಳಿಯ ನೇತಾರ ಗಿಬ್ಬ ಸೋಜರ ಮಗ ಚಾರ್ಲಿ ಸೋಜರ ಊರ ಪಂಚಾಯತಿಯ ಮುಂದೆ ತಮ್ಮ ವಿಚಾರಗಳನ್ನು ಮಂಡಿಸಿದರು. 'ಬೆನ್ನಿದ ಬಂಧುಲೇ ನಮ್ಮ ಸರ್ಕಾರ ಕೊಣತುನ ಈ ಭೂ ಮಸೂದೆ, ಈ ಭೂಮಿದ ಕಾನೂನು, ಬಡವೆರೆಗೊಂಜಿ ಬಾಗ್ಯೊದ ಬಂಡಾರೊ, ಪಿರಾಕ್‌ರ್ದಿಂಚ ನಮ ಹಿರಿಯೆರ್ ಬೂಮಿಡ್ ಬೆಂದಿಯೆರ್, ಬೆಗರ್ ಅರ್ಪಯೆರ್, ಬರ್ಸೊ, ಗಾಳಿ, ದೊಂಬು ಗೆಣ್ಪಾಂದೆನೆ ಸೊಂದಿಯೆರ್. ಪಣವುದ ಬಲ ಬಾಯಿದ ಬಲ ದಾಂತೆ ಬದ್‌ಕ್ಯೆರ್, ಕೆಸರ್ ಮಣ್ಣ್ ಮಜಕಾದ್ ಬುಳೆ ದೆತ್ತೆರ್. ಆಂಡ ಬೆಂಜನ ತಿನಂದೆನೇ ಒರಿಯೆರ್. ಸೀಕ್ ಸಂಕಡೊಗ್ ಮರ್ದ್ ದಾಂತೆನೆ ನರಕ್ಯೆರ್. ಏತ್ ಬೆಂದ್‌ಂಡಲಾ ಗೇಣುದ್ದೊದ ಬಂಜಿ ದಿಂಜೆರೆಗ್ ಬಂಗ, ಮೆಯಿ ನಿಲಿಕೆ ಕುಂಟು ಅಕ್ಲೆಗ್ ಕನ್ನಡಿದ ಗಂಟೇ" (ಎಂ,ಜಾನಕಿ ಬ್ರಹ್ಮಾವರ ೧೯೯೮, ಪು ೬೬) ಕೊನೆ ಟಿಪ್ಪಣಿ ೫೮

ಕೃಷಿಕರು, ಕೃಷಿ ಕೂಲಿ ಕಾರ್ಮಿಕರು ತೀರಾ ಬಡವರಾಗಿ ಅಸಹನೀಯವಾದ ಹಸಿವಿನಿಂದ ಕಂಗಲಾಗಿ ಬಾಳುವೆ ನಡೆಸುತ್ತಿದ್ದಾರೆ. ಈ ಭೂಮಿಯ ಒಡೆತನ ಯಾರದ್ದು ಎಂದು ಪ್ರಶ್ನಿಸುತ್ತ ಎಲ್ಲರ ಮನದಲ್ಲೂ ಸಮಾನತೆಯ ಆಶಯವನ್ನು ವ್ಯಕ್ತಪಡಿಸುತ್ತಿದ್ದರು.

"ಜೂವೊ ಜಂತುಲು ಮಾತ ಬದುಕೊಡಾಯಿನ ಈ ಭೂಮಿ ಏರೆನವು? ಮಾತೆರೆಗ್ಲಾ ಸೇರೊಡಾಯಿನವು. ಉಂದೆಟ್ ಮಾತೆರ್ಲಾ ಬೆನೋಡು, ಬುಳೆಯಿನೆನ್ ಮಾತೆರ್ಲಾ ಪಟ್ಟೊಂದು ತಿನೋಡು. ಆಂಡ ಇಂಚ ನಡತೊಂದು ಬೈದಿಜಿ ಬೂಮಿ ಏರೆನವೋ? ಬೆನ್ಪಿನಿ ಏರೋ? ಬೆಂದಿನಕ್ಲೆಗ್ ಅರೆ ಬಂಜಿ, ಬೆನಂದಿನಾಕ್ಲೆಗ್ ಬಂಜರ ಉಂದು ಬಿರ್ಕುನಾತ್ "(ಅದೇ, ಪುಟ ೬೭) (ಜೀವ ಜಂತುಗಳು ಎಲ್ಲ ಬದುಕುವ ಈ ಭೂಮಿ ಯಾರದ್ದು ಎಲ್ಲರಿಗೂ ಸೇರಿದ್ದು, ಎಲ್ಲರೂ ದುಡಿಯಬೇಕು, ಬೆಳೆದದ್ದನ್ನು ಎಲ್ಲರೂ ಹಂಚಿ ತಿನ್ನಬೇಕು, ಆದರೆ ಹೀಗೆ ನಡೆದು ಬಂದಿಲ್ಲ, ಭೂಮಿ ಯಾರದ್ದೋ? ದುಡಿಯುವುದು ಯಾರೋ? ದುಡಿದವರಿಗೆ ಅರೆ ಹೊಟ್ಟೆ, ದುಡಿಯದವರಿಗೆ ಹೊಟ್ಟೆ ತುಂಬಾ ಉಂಡು ಬಿಸಾಡುವಷ್ಟು) ಆಹಾರದ ಅಸಮಾನ ಹಂಚಿಕೆ ಮತ್ತು ಬಡತನದ ಕಾರಣಗಳನ್ನು ವಿಶ್ಲೇಷಿಸುತ್ತಾ ಇದಕ್ಕೆ ಪರಿಹಾರಾರ್ಥವಾಗಿ ಸಾಮಾಜಿಕ ನ್ಯಾಯಕ್ಕಾಗಿ ತಂದ ಕಾನೂನನ್ನು ವಿವರಿಸುತ್ತಾರೆ. "ಒಕ್ಕಲು ಮಸೂದೆ ಭೂ ಸುದಾರ್ನೆ ಕಾನೂನು ಪಂಡ ಇತೇ, ಬೆನ್ಪಿನಾಯಗೇ ಬೂಮಿ, ಪಿರಕ್‌ಡ್ದಿಂಚ ಒವು ಬೂಮಿಡ್ ಏರ್ ಎರು ಕಟ್ಟ್‌ದ್ ದಪ್ಪು ಮಲ್ತೆನಾ ಆಯಗೇ ಅವು ಭೂಮಿ, ಅವ್ವೆತ್ತ ಉಲ್ಲಾಯೆ ಆಯೆ. ಬೆಂದಿನವು ಪೂರ ಆಯಗೆ! ಇಂಚ ಅವೊಡಾಂಡ ಬೆನ್ಪಿನಾಯೆಲಾ ಒಂತೆ ಬಂಗ ಬರೋಡು. ಸರಿಯಾಯಿನ ತಾದಿಡೇ ಪೋವೊಡು. ತಾದಿ ಸರ್ಕಾರನೇ ತೋಜಾದ್ ಕೊರ್ಪುಂಡು. ಲಡಾಯಿ ಬಡಾಯಿ ಪೆಟ್ಟ್ ಪುಡೆತ ಲಪ್‌ಡಾ ಇಜ್ಜಿ. ಪಿರ ಆಂಡುನ ಅಗತ್ಯೊಲಾ ಇಜ್ಜಿ. ಪೋಡಿಗೆಲಾ ಬೊಡ್ಚಿ (ಅದೇ, ಪು ೬೭) (ಕೊನೆ ಟಿಪ್ಪಣಿ ೫೯)

ಹಾಗೆ ಆಗಬೇಕಾದರೆ ಜನರ ಪ್ರಯತ್ನವೂ ಬೇಕು. ಒಗ್ಗಟ್ಟಾಗಿ ಸಂಘಟನೆ ಕಟ್ಟಿ ಹೇಗೆ ತಮ್ಮ ಬದುಕಿನ ಚಲನೆಯನ್ನು ಮುಂದಕ್ಕೊಯ್ಯಬೇಕು ಎಂದೂ ಸಲಹೆ ನೀಡುತ್ತಾರೆ. "ಮುಲ್ಪ ಸೇರ್ದಿನ ಊರ್ದ ಜವನೆರೇ ... ಒಂತೆ ಕೆಬಿ ಕೊರ್ಪು ಕೇಣ್ಲೆ. ಉಂದೊಂಜಿ ಮುಖ್ಯವಾಯಿನ ಕಾಲಗಟ್ಟೊ ಬರವುದಾಂತಿನ ಬಡ ಜನೊಕ್ಲೆಗ್ ನಿಕ್ಲೆನ ಸೇವೆ. ಸಾಯೊದ ಅಗತ್ಯೊ ಉಂಡು. ನಿಕುಲು ಒಂಜಿ ಕೂಟೊ ಮಲ್ತೊನ್ಲೆ ದೃಢಪತ್ರ ಬರೆವೆರೆಗ್

ಜನತಾ ಪಂಚಾಯಿತಿಗ್ ಲೆತೊಂದು ಪೋವೆರೆಗ್ ನಿಕ್ಲೆನ ಸಾಯ ತಿಕ್ಕ್ಂಡ ಏರೆನ ಉಳಕಂತ್ರಿ ನಡಪಂದ್. ದನಿಕುಲು ತಂಕ್ಲೆನ ನಿಲೆ ಪೋಲ್ತೊಂಬಿನ ಈ ಪೊರ್ತುಡು ನಮುನ ನಮುನೆದ ಉಲಕಯಿಗೊಬ್ಬು ಗೊಬ್ಬುವೆರ್. ಅಂಚಾದ್ ಜಾಗರ್ತೆಡ್, ದೈರ್ಯೊಡು ಉಪ್ಪೊಡಾಪುಂಡು. ಇತ್ತೆ ಏರ್ಲಾ ಎರೆನ, ಎಂಚಿನ ಒತ್ತಾಯಗ್ಲಾ ಕೆಬಿ ಕೊರಡೆ. ದನಿಕುಲೆಡ ರಾಜಿಗ್ ಪೋವಡೆ. ಬಲಾತ್ಕಾರೊಗು ಬಗ್ಗಡೆ. ಮಂಗಾಟೊಗು ಮರ್ಲ್ ಆದ್ ಎಬ್ಬೆಟ್ಟ್ ಒತ್ತಡೆ" ( ಅದೇ ಪು ೬೮) (ಕೊನೆ ಟಿಪ್ಪಣಿ ೬೦)

ಜನರಿಗೆ ಧೈರ್ಯ ತುಂಬುವ ತಿಳಿ ಹೇಳುವ ಕಾರ್ಯ ನಿರಂತರವಾಗಿ ನಡೆಯಿತು. "ಇತ್ತೆ ಬೂಮಿ ಪೂರ ಸರ್ಕಾರದವೇ ಮಾತೆರೆಗ್ಲಾ ಬದ್‌ಕೊಡುಣ್ಪಿಣ ಆಶಯ ಸರ್ಕಾರೊಗು ಅಂಚಾದ್ ಎಚ್ಚಿಗೆ ಬೂಮಿನ್ ಇಲ್ಲಡಿದಾಂತಿನಕ್ಲೆಗ್ ಪಟ್ಟ್‌ದ್ ಕೊರ್ಪುಂಡು. ಸರ್ಕಾರದ ಈ ಕಾನೂನು ಪಂಡ ಲಕ್ಕೆರೆ ಕೂಡಂದಿನಕ್ಲೆಗ್ ಊರುನದಂಟೆ" ಒಂಜಿ ದೃಢ ಪತ್ರೊಲಾ ಪತೊಂದೇ ಬೈದಿನ ಸೋಜೆರ್ ಅವ್ವೆನ್ ದಿಂಜದ್ ಬರೆಪಿನೆನ್ಲಾ ಪಂಡ್‌ದ್ ಕೊರಿಯೆರ್. (ಅದೇ ಪು ೬೯).

(ಈಗ ಭೂಮಿ ಎಲ್ಲಾ ಸರ್ಕಾರದ್ದು, ಎಲ್ಲರಿಗೂ ನಿಲ್ಲಲು ಮನೆ ಬೇಕಲ್ಲ ಬೇರೆಯವರ ಹಂಗು ಇಲ್ಲದೆ ಎಲ್ಲರೂ ಬದುಕಬೇಕೆಂಬ ಆಶಯ ಸರ್ಕಾರದ್ದು ಹಾಗಾಗಿ ಹೆಚ್ಚಿಗಿದ್ದ ಭೂಮಿಯನ್ನು ಮನೆಯಿಲ್ಲದವರಿಗೆ ಹಂಚಿ ಕೊಡುತ್ತಾರೆ. ಸರ್ಕಾರದ ಈ ಕಾನೂನೆಂದರೆ ಏಳಲಾಗದವರಿಗೆ ಊರುವ ಊರುಗೋಲು. ಒಂದು ದೃಢ ಪತ್ರವನ್ನು ಹಿಡಿದುಕೊಂಡೇ ಬಂದ ಸೋಜರು ಅದನ್ನು ತುಂಬಿಸಿ ಬರೆಯುವುದನ್ನು ಹೇಳಿ ಕೊಟ್ಟರು.) ಒಕ್ಕಲು ಮಸೂದೆ ಕಾನೂನಿನ ಒಂದು ಮುಖವನ್ನು ಮಾತ್ರ ಹೇಳುವುದಿಲ್ಲ. ಈ ಕಾನೂನಿನ ಪರಿಣಾಮದಿಂದ ಭೂಮಿಯ ಒಡೆತನ ಇಲ್ಲದವರು ಭೂಮಾಲೀಕರಾದರು. ಪರ್ಯಾಯವಾಗಿ ವಿಸ್ತಾರವಾದ ಭೂಮಿಯ ಒಡೆತನವಿದ್ದ ಪಾಳೇಗಾರರು ರಾತ್ರಿ ಬೆಳಗಾಗುವುದರ ಒಳಗಾಗಿ ಭೂರಹಿತರಾಗಿ ಆದಾಯದ ಮೂಲ ಕಳಕೊಂಡು ನಿರ್ಗತಿಕರಾದರು. ಕಾನೂನು ಭಾರತದಾದ್ಯಂತ ಜಾರಿಯಾಗಿದ್ದರು ಅನುಷ್ಠಾನಕ್ಕೆ ಬಂದುದು ಕೆಲವೇ ಸೀಮಿತ ಪ್ರದೇಶಗಳಲ್ಲಿ. ಅಂತಹ ಸೀಮಿತ ಸ್ಥಳಗಳಲ್ಲಿ ಕರಾವಳಿ ಕರ್ನಾಟಕವು ಒಂದು. ಹೆಚ್ಚಾಗಿ ಮಂಗಳೂರಿನ ಹೃದಯ ಭಾಗದ ಸುತ್ತಮುತ್ತದ ಹಳ್ಳಿಗಳಲ್ಲಿ ಪರಿಣಾಮಕಾರಿಯಾಗಿ ಆದ ಈ ಸ್ಥಿತ್ಯಂತರ ಉಡುಪಿ ಕುಂದಾಪುರ ಕಡೆಗಳಲ್ಲಿ ನಡೆಯಲಿಲ್ಲ. ಜಮೀನ್ದಾರರು ಅಷ್ಟು ಸುಲಭವಾಗಿ ಭೂಮಿಯ ಒಡೆತನ ಕಳೆದುಕೊಳ್ಳಲು ಸಿದ್ದರಿರಲಿಲ್ಲ.

ಭೂಮಾಲೀಕರ ನೋವು ಅವರ ಅಸಹಾಯಕತೆ ಕಂಗಾಲುತನ ಸುಲಭದ್ದಾಗಿರಲಿಲ್ಲ. ಒಕ್ಕಲು ಗೇಣಿದಾರರ ಸಂಬಂಧ ಆಪ್ತವಾಗಿದ್ದುದು ಒಮ್ಮಿಂದೊಮ್ಮೆಲೆ ಬಿಗಡಾಯಿಸಿದ್ದಲ್ಲದೆ ಒಬ್ಬರು ಇನ್ನೊಬ್ಬರ ಬಗೆಗೆ ಅಪನಂಬಿಕೆಯೂ ಸೃಷ್ಟಿಯಾಯಿತು. ಎರಡು ರೀತಿಯ ಸಾಮಾಜಿಕ ಮುಂಚಲನೆಗಳಾಯಿತು. ಭೂಹೀನರಾದವರು ಭೂಮಾಲೀಕರಾಗಿ, ಭೂಮಾಲೀಕರು ಭೂ ಹೀನರಾದರು. ಸಾಮಾಜಿಕ ವಿಪ್ಲವಕ್ಕೆ ಕಾರಣವಾಗಿ, ಹಿಂಸೆ, ಕೊಲೆಗಳೂ ನಡೆದವು. ಒತ್ತಾಯದ ಒಕ್ಕಲೆಬ್ಬಿಸುವಿಕೆಯೊಂದಿಗೆ ದಣಿಗಳಿಗೇ ಮೋಸ ಮಾಡಿದ ಚಳ್ಳೇ ಹಣ್ಣು ತಿನಿಸಿದ ಪ್ರಸಂಗಗಳೂ ನಡೆದವು. ಧಣಿಗಳ ಮನಸ್ಥಿತಿ ಹೇಗಿತ್ತು ಎನ್ನುವುದನ್ನು ನಿರೂಪಿಸುವ ವಿವರಣೆಗಳಿವೆ.

'ಒಕ್ಕೆಲ್ ಮಸೂದೆದ ಬಗ್ಗೆಡ್ ಸೋಜೆರೆ ಪಣ್ಪಿನವ್ವೇ ನಿಜ ಆಂಡ ಎಂಕ್ಲೆಗ್ ದಾದ ಒರಿಯುಂಡ್? ಆಸ್ತಿ ಮಾತ ಗೇಣಿದಕ್ಲೆಡವೇ ಉಂಡು. ಈತ್ ಪಿರಯ ಆಂಡಲಾ ಎಂಕ್ ಬೆನ್ನಿದ ಬೇಲೆದ ರಿತಿ, ರೀತಿ ರಡ್ಡ್‌ಲಾ ತೆರಿಯಂದ್. ಓಪರಿ ಬಾಪರಿ ಬೇಲೆಗೇ ಸೈ ಅಪ್ಪೆನ ಕೊಂಡಡನಾ? ಎನ್ನ ಸೋಂಬೇರಿ ಮರ್ಜಿ ಬುಡ್ದು ರಡ್ಡೆಕ್ರೆ ಬೂಮಿಡಾಂಡಲಾ ಸೊಂತ ಸಾಗೋಳಿ ಮಲ್ಪಾದೆಡ ಇತ್ತೈ ಪೋಡಿಗೆ ಇತ್ತ್‌ಜಿ. ಬರವುದ ಬಲ ಆಂಡಲಾ ಇದ್ದ್‌ಂಡ ಓಲಾಂಡಲ ಬೇಲೆಗ್ ಪೋತುವೊಲಿ. (ಅದೇ ಪುಟ ೭೦)(ಕೊನೆ ಟಿಪ್ಪಣಿ ೬೧)

ಒಕ್ಕಲಿನವರಿಗೆ ಗೇಣಿಗೆ ಗದ್ದೆಗಳನ್ನೆಲ್ಲಾ ಕೊಟ್ಟು ಅತಂತ್ರವಾದ ಪರಿಸ್ಥಿತಿಯನ್ನು ವಿವರಿಸುತ್ತಾರೆ. "ಈ ಚಂದಪ್ಪೆ ಇಂಚಿಪಾದ ಗೇಣಿದೊಕ್ಕೆಲ್ ಪೊಸ ಇಲ್ಲ ಬೆತ್ತಡಿದ ಲಚ್ಚಿಲ್ ಎದುರ್ದ ಮಲ್ಲ ಕಂಡೊ ಮಾತ ಆಯಡನೇ ಉಂಡು. ಆಯೆ ಅವ್ವೆಕ್ ಮಾತ ಡಿಕ್ಲರೇಶನ್ ಕೊರಿಯೆಡ ಎಂಕ್ಲೆಗ್ ಒರಿಯುನು ಇಲ್ಲಡಿ ಮಾತ್ರ. ಅವ್ವೆಟ್ ಉದ್ಪತ್ತಿ ಇಜ್ಜಿ. ಎಂಕ್ಲೆಗ್ ಬದ್‌ಕೆರೆ ತಾದಿಯೇ ಇಜ್ಜಾಪುಂಡಾ? ಪೋಡಿಗೆ ಎಚ್ಚೊಂದು ಪೋಂಡು. (ಅದೇ ಪು ೭೩) (ಈ ಚಂದಪ್ಪ ಈಚೆಯ ಗೇಣಿ ಒಕ್ಕಲು ಹೊಸ ಮನೆಯ ಹಿಂಭಾಗದ ಲಚ್ಚಿಲ್, ಎದುರಿನ ದೊಡ್ಡ ಗದ್ದೆ ಎಲ್ಲವೂ ಅವನಲ್ಲಿಯೇ ಇದೆ. ಅವನು ಅವೆಲ್ಲಕ್ಕೂ ಡಿಕ್ಲರೇಶನ್ ಕೊಟ್ಟರೆ ನಮಗೆ ಬದುಕಲು ದಾರಿಯೇ ಇಲ್ಲವಾಗುತ್ತದಾ? ಹೆದರಿಕೆ ಹೆಚ್ಚುತ್ತಾ ಹೋಯಿತು.) ಭೂಮಿಯ ಒಡೆಯರ ಈ ಅತಂತ್ರ ಸ್ಥಿತಿಯ ಬಗ್ಗೆ ಭಯ ಪಡುತ್ತಲೇ ಯಜಮಾನರ ಮನಸ್ಥಿತಿಯನ್ನು ಹೇಳುತ್ತಾರೆ. ಒಕ್ಕಲು ಧಣಿಯ ಸಂಬಂಧ ಅನ್ಯೋನ್ಯವಾಗಿದ್ದರೂ ಕಾನೂನು ಬಂದಾಗ ಅವರೆಲ್ಲ ಪ್ರತಿಕ್ರಿಯಿಸಿದ ಕ್ರಮ ಏಕರೂಪವಲ್ಲ. ಕೆಲವರು ಧಣಿಗಳ ಮಾತನ್ನು ಕೇಳಿದರೆ, ಇನ್ನು ಕೆಲವರು ಏನನ್ನು ಉಳಿಸದೆ ಭೂಮಿಯೆಲ್ಲವನ್ನು ತಮ್ಮದಾಗಿಸಿಕೊಂಡು ಒಳ್ಳೆಯ ರೀತಿಯ ಬಾಂದವ್ಯವನ್ನು ಉಳಿಸಿಕೊಂಡಿದ್ದ ಧಣಿಗಳೂ ಭೂಮಿ ಕಳಕೊಂಡು ದಯನೀಯ ಸ್ಥಿತಿಗೆ ಬಂದರು. "ಎಂಕ್ಲೆನ ಬೂಮಿ ಮಾತ ಗೇಣಿದಕ್ಲೆಗ್ ಉಂಡು ಗೇಣಿ ಹುಟ್ಟೋಳಿನೇ ನಂಬುದು ಬದ್ಕೊಂದಿತ್ತಿನ ಎಂಕುಲು ಗೇಣಿದಕ್ಲೆಗ್ ಕಷ್ಟ ಕೊರ್ದು ಪಿಣಯ. ಅಕುಲು ಎಡ್ಡೆಡಿತ್ತೆರ್ಡ ಎಂಕ್ಲೆಗೆ ಎಡ್ಡೆ. ಅಕ್ಲೆಗುಂಡುಡ ಎಂಕ್ಲೆಗ್ ಕೊರುವೆರ್ ಪಂಡ್‌ದೇ ಪಣೊಂದಿತ್ತ. ಅಕುಲಕುಲು ಲಡಾಯಿ ಬಡಾಯಿ ಮಲ್ತೊಂಡ ಎಂಕುಲೇ ರಾಜಿ ಮಲ್ತ್‌ದ. ನಂಬೊಲ್ಗೆಡೇ ಈತ್ ನೆಟ್ಟ ಎಡ್ಡೆಡ್ ನಡತೊಂದು ಬೈದ್‌ಂಡ್. ಗೇಣಿ ಚೀಟಿ ಅಕುಲು ಬೊಡ್ಚಿ ಪಂಡಲಾ ಕೊರೊಂದೇ ಬೈದ. ಅಂಚಾದ್ ಅಕ್ಲೆಗ್ ದೃಢಪತ್ರ ಕೊರಿಯೆರೆ ಸುಲಭ ಆಂಡ್. ಎಂಕ್ಲೆಗ್ ಈ ಕಾನೂನುಡಾತ್ರ ಹೆರಿಯೆರ್ನ ಬೂಮಿ ಮಾತಲಾ ಕಯಿಬುಡ್ದು ಪೋಪುಂಡತ್ತಾ ಪಣ್ಪಿನ ಅಕ್ಲಾಸ. ಆತೇ ಅತ್ತ್ ಉಣುಗ್ಲಾ ಬಂಗ. ಈ ಪಿರಯೊಡು ಬೇಲೆ ನಾಡೊಂದು ಗಟ್ಟೊದ ತಾದಿ ಪತ್ತೊಡಾಪುಂಡು. ಯಾನ್ ಕಲ್ದಿನಿ ಏತ್‌ಂದ್ ಈರೆಗ್ಲಾ ಗೊತ್ತುಂಡು. ಇತ್ತೈ ಬದ್ಕುನ ತಾದಿ ಎಂಚಿನ ಪಣ್ಲೆ ಉಂದೇ ಎತೆಟ್ ಎನ್ನ ಅಪ್ಪೆಲಾ ತೀರ್‌ರ್. ಇಲ್ಲಡ್ ಬೂತೊಗು ವರ್ಸೊದ ಕಟ್ಟ್ ಕಟ್ಲೆದ ಕೋಲ ಬಲಿ ನಡಪೊಡು. ಕುಲನಾಗಗ್ ತಂಬಿಲ ಆವೊಡು. ಬೂಮಿ ಬುಡ್ದು ಪೋಂಡ ಹಿರಿಯೆರ್ ನಂಬುದಿನ ಬೂತೊ ನಾಗೆ ಬುಡ್ದು ಪೋಪೆರಾ. ಆಪಿನವು ಆವೊಡೆ, ಪೂರಾ ಕರ್ಚಿದ ತಾದಿಲೆ. ಉಂದೆಕ್ ಮಾತ ದಾದ ಮಲ್ಪುನು ಈತ್ ಪನ್ಪಿನ ಈತ್ ಎಡ್ಡೆನ ಕಾನೂನುಡ್ ಎಂಕ್ಲೆಗೆಂಚಿನ ಪರಿಯಾರ ಬರೆತ್‌ಂಡ್' (ಅದೇ ಪು ೮೩)(ಕೊನೆ ಟಿಪ್ಪಣಿ ೬೨)

ಒಕ್ಕಲು ಮಸೂದೆ ಕಾನೂನು ಬಡವರಿಗೆ ದಾರಿ ದೀಪವಾದ ಹಾಗೆ ಭೂಮಾಲೀಕರಿಗೆ ದಿಕ್ಕೆಡುವಂತೆ ಮಾಡಿತು. ಒಳಿತು–ಕೆಡುಕುಗಳೂ ಎರಡೂ ವರ್ಗದ ಜನರಲ್ಲೂ ನಡೆದಿದೆ. ಸಾಮಾಜಿಕವಾಗಿ ಹಿನ್ನಡೆ ಮುನ್ನಡೆಗಳಿಂದ ಒಟ್ಟು ಸಾಮಾಜಿಕ ವ್ಯವಸ್ಥೆ ಬದಲಾಗುತ್ತಾ ಬಂತು. ಹಾಗಾಗಿ ಭೂಮಿ ಕಳಕೊಂಡು ಯಜಮಾನನ ಒಡಲುರಿ ಸುಡದೆಯೇ ಸುಟ್ಟುಕೊಳ್ಳುವಂತೆ ಮಾಡಿತು.

"ಸಮಾಜದ ಸುದರ್ನೆನ್ ಬಯಕುನ ಸೋಜೆರೆಗ್ ಅಂಚ ಪಣಿಯೆರೆ ಸೋಲಬಾಂಡ್. ಆಂಡ ಹುಟ್ಟೋಳಿದಿಲ್ಲದ ಕಡೆಕಂಜಿ ಎಂಕ್ ಕೇಣಿಯರೆ ಬಂಗ ಆಂಡ್. ನೂದು ಕೊಯಿಲ್ ಬಯ್ಲು ಕಂಡೊ ಐವತ್ತೈನ್ ಕೊಯ್ಲಿ ಬೊಟ್ಟು ಕಂಡೊ ಬೋಡಿತ್ತಿನಾತ್ ಲಚ್ಚಿಲ್, ಪಾಡಿ, ಗುಡ್ಡೆ ಏತ್‌ಂದ್ ಸರಿಕಟ್ಟ್ ಲೆಕ್ಕಲಾ ಇಜ್ಜಾಂದಿನ ಉಲ್ಲಾಯೆ ಯಾನ್ ಸರ್ಕಾರೊಡು ಜಾಗೆ ನಟ್ಟೊಡು. ಉಂದು ಏಸಿಗೆ ಬೇರ. ಬೊಡ್ಚಿ ಪಂಡ್‌ದೇ ಆಂಡ್, ಸೋಜೆರೆಡ ಉಪ್ಪುನ ಪರಿಯಾರ ಎಂಕ್ ಏಪೊಗ್ಲಾ ಆಪಿನವತ್ತ್. ನಾಚಿಗೆದಾಂತೆ ನಟ್ಟುನವೆಡ್ದ್ ಪೊಟ್ಟು ಗುವೆಲುಂಡ ತೂಪಿನನೇ ಎಡ್ಡೆ. (ಅದೇ, ಪು ೮೪) (ಕೊನೆ ಟಿಪ್ಪಣಿ ೬೩)

ಇಂತಹ ದೈನ್ಯ ದಯನಿಯ ಸ್ಥಿತಿಯಲ್ಲಿ ಉಳ್ಳವರು ಭೂರಹಿತರಾಗಿ ಊಟಕ್ಕೂ ಗತಿಯಿಲ್ಲದೆ ಬಳಲುವಂತೆ ಆದುದು ಒಂದು ಸ್ಥಿತಿಯಾಗಿದೆ. ಊರಿನ ಜನರ ಕಣ್ಣಿಂದ ಕುಟುಂಬದಿಂದ ಹೊಟ್ಟೆಯ ಹಸಿವನ್ನು ಮರೆಮಾಚುವುದು ಮತ್ತು ದೈನೇಸಿ ಬದುಕನ್ನು ನಿರೂಪಿಸುವುದು ಸುಲಭದಾಗಿರಲಿಲ್ಲ.

ಕೃಷಿಯ ಮೂಲ ಉದ್ದೇಶ ಆಹಾರವೇ ಆದರೂ ಸಾಮಾಜಿಕವಾಗಿ ನಡೆದ ಚಲನೆಗಳಿಂದ ಹೊಟ್ಟೆಯ ಹಸಿವನ್ನು ಮೀರಿದ ಉತ್ಪಾದನೆ, ಆರ್ಥಿಕತೆ, ಅಧಿಕಾರ, ಸಾಮಾಜಿಕ ಸ್ಥಾನಮಾನಗಳು ಪಡೆಯಲು ಸಾಧನವಾಗಿದೆ. ಬೆಳೆಯುವ ಬೆಳೆ ಬದಲಾದಂತೆ, ಆರ್ಥಿಕತೆಯ ಮೂಲ ಸ್ಥಿತ್ಯಂತರಗೊಂಡು ಏರಿಳಿತಗಳು ಸಹಜವಾಗಿತ್ತು. ಭೂಮಿಯ ಹಂಚಿಕೆಯಲ್ಲಿದ್ದ ವ್ಯತ್ಯಾಸವನ್ನು ಸರಿಪಡಿಸಲೆಂದೇ ಬಂದ ಕಾನೂನು ತಿರುವು ಮುರುವುವಾಗಿಯೂ ಪರಿಣಾಮ ಬೀರಿ ಗುತ್ತು ಮನೆಗಳು, ಪಾಳೇಗಾರರ ಕುಟುಂಬಗಳು ತೀರಾ ಬಡತನಕ್ಕಿಳಿದು ವಲಸೆ ಅನಿವಾರ್ಯವಾಯಿತು. ಉದ್ದಿಮೆಯ ಕಡೆಗೆ ಗಮನ ಹರಿಸಲೂ ಇದು ಕಾರಣವಾಯಿತು. ಮೊದಲಿಗೆ ನಡೆದ ಮುಂಬೈ ವಲಸೆ, ಹೇಳದೆ ಕೇಳದೆ ಬಸ್ಸೋ, ಹಡಗೋ ಹತ್ತಿದ ಮೊದಲ ತಲೆಮಾರು ಎರಡನೆಯ ತಲೆಮಾರಿಗಾಗುವಾಗ ವಿದೇಶಗಳಿಗೆ ತೆರಳುವುದು ಅನಿವಾರ್ಯವಾಗಿತ್ತು. ಶಿಕ್ಷಣವನ್ನು ನೆಚ್ಚಿಕೊಂಡು ಉನ್ನತ ವಿದ್ಯಾಭ್ಯಾಸಕ್ಕಾಗಿ ಒಂದು ವರ್ಗದ ಜನ ತೆರಳಿದರೆ ಇನ್ನೊಂದು ವರ್ಗದ ಮಂದಿ ವ್ಯಾಪಾರವನ್ನು ಮಾಡುತ್ತ ಹೊರ ತೆರಳಿದುದು ಬಹು ಮುಖ್ಯ ಅಂಶವಾಗಿದೆ. ಹೀಗೆ ತೆರಳಿದ ಜನ ಸಮುದಾಯಗಳು ಸಾಮಾಜಿಕ ವಲಸೆಯೊಂದಿಗೆ ಸಾಂಸ್ಕೃತಿಕ ವಲಸೆಯೂ ಆಗಿದೆ. ಬದುಕಿನ ಗತಿಶೀಲತೆಗೆ ಚಲನೆಯನ್ನು ಒದಗಿಸಿದಂತೆ ಭಾಸವಾಗುತ್ತದೆ. ಕೃಷಿಯೊಂದಿಗೆ ಬದುಕನ್ನು ಕಟ್ಟಿಕೊಂಡವರು ಬದಲಾದ ಸಾಮಾಜಿಕ ಪರಿಸ್ಥಿತಿಯಲ್ಲಿ ಸಾಮಾಜಿಕ ಬದುಕು ಮಾತ್ರವಲ್ಲ ಕನಿಷ್ಠ ಘಟಕವಾದ ಕುಟುಂಬದೊಳಗು ಬದಲಾವಣೆಯನ್ನು ತಂದು ಸಾಮಾಜಿಕ ಸ್ಥಿತ್ಯಂತರಗಳು ಬಂತು. ಬದುಕಿನ ದೃಷ್ಟಿಕೋನ ಜೀವನ ಮೌಲ್ಯಗಳು ಬದಲಾಗುತ್ತ ಬಂದ ಹಾಗೆ ಮಾಡುವ ವೃತ್ತಿ ಪಡೆಯುವ ಶಿಕ್ಷಣ ಲಭಿಸುವ ಆರ್ಥಿಕತೆ ಎಲ್ಲವೂ ಒಂದರೊಳಗೊಂದು ಸಂಬಂಧವನ್ನು ಬೆಸೆದುಕೊಂಡಿದೆ.

ಕೃಷಿ ಸಂಸ್ಕೃತಿ ಪಲ್ಲಟವಾಗುತ್ತ ಬಂದಂತೆ ಕೃಷಿಯ ಸ್ವರೂಪದಲ್ಲಿ ಆದ ಬದಲಾವಣೆಗಳೊಂದಿಗೆ ಕೃಷಿಯನ್ನು ನಡೆಸುವ ಜನರು ಮತ್ತವರ ಬದುಕಿನಲ್ಲೂ ಸ್ಥಿತ್ಯಂತರಗಳಾದವು. ಕೃಷಿಗಾಗಿ ಕಾಡಿನಿಂದ ನಾಡಿಗೆ ನಡೆದ ವಲಸೆಯಿಂದ ತೊಡಗಿ ಹಳ್ಳಿಯಿಂದ ಪೇಟೆಗೂ ವಲಸೆ ನಡೆಯಿತು. ಚಲನಶೀಲವಾದ ಜನರ ಬದುಕಿನಲ್ಲಿ ಈ ರೀತಿಯ ಗತಿಶೀಲತೆ ಹಂತ ಹಂತವಾಗಿ ನಾಗರಿಕರು, ಸುಶಿಕ್ಷಿತರು ಎಂದು ಕರೆಸಿಕೊಂಡರೂ ಕೃಷಿ ಜಗತ್ತಿನಿಂದ ದೂರವಾಗುತ್ತ ಬಂದರು. ಆಹಾರಕ್ಕಾಗಿ ನಡೆದ ಹುಡುಕಾಟ ಸ್ಥಿರ ಕೃಷಿಯನ್ನು ನಡೆಸುತ್ತ ಸ್ಥಿರ ನೆಲೆಗಳಲ್ಲಿ ವಾಸದಿಂದ ಆರಂಭಗೊಂಡು ಇಂದು ಕೃಷಿಯನ್ನು ತ್ಯಜಿಸಿ ನಗರಗಳಿಗೆ ತೆರಳುತ್ತ ಫ್ಲಾಟ್ , ಮಾಲ್ ಸಂಸ್ಕೃತಿಯ ಕೊಳ್ಳುಬಾಕತನದಲ್ಲಿ ಪರ್ಯವಸಾನವಾಗಿದೆ. ಸಂಪತ್ತು ಎಂದರೆ ಬ್ಯಾಂಕ್ ಬ್ಯಾಲೆನ್ಸ್ ದುಡ್ಡಿನ ಸಂಗ್ರಹಣೆಯೇ ಮುಖ್ಯವೆನಿಸಿದಾಗ ಅತಿ ಸಿರಿವಂತರಾದವರು, ವಿದ್ಯಾವಂತರಾದವರು ಮರಳಿ ಕೃಷಿಯ ಕಡೆ ಹೊರಳುವುದು ಒಂದು ಒಳ್ಳೆಯ ಅಂಶವೇ ಆದರೂ ಅದು ತೀರ ಕಡಿಮೆ ಸಂಖ್ಯೆಯಲ್ಲಿದೆ. ಹೊಟ್ಟೆಯ ಹಸಿವನ್ನು ನೀಗಿಸಲು ಆಹಾರವೇ ಮುಖ್ಯವಾಗಿದ್ದು, ಅದನ್ನು ಯಾವ ಯಾಂತ್ರಿಕತೆಯೂ ಒದಗಿಸಲಾರದು. ದುಡ್ಡೂ ಅನ್ನವನ್ನು ನೀಡಲಾರದು ಎಂಬ ಸತ್ಯ ತಿಳಿದಿದ್ದಾಗಲೂ ಕೂಡಾ ಆರ್ಥಿಕವಾಗಿ ಸಬಲರಾಗುವುದೆಂದರೆ ದುಡ್ಡು ಸಂಗ್ರಹಣೆ ಮಾತ್ರವೇ ಆದರೆ ಅಪಾಯಕಾರಿಯಾದ ಸನ್ನಿವೇಶವಾಗುತ್ತದೆ. ಮನೆಯ ಸ್ವರೂಪವೂ ಬದಲಾಗಿ ಹಳ್ಳಿ ಮನೆಗಳೆಲ್ಲಾ ವೃದ್ಧಾಶ್ರಮಗಳಾಗಿ ಯುವಕರೆಲ್ಲಾ ನಗರಕ್ಕೆ ಬಂದು ಮನುಷ್ಯ ಯಂತ್ರ ನಾಗರಿಕತೆಗೆ ಯಂತ್ರ ಸಂಸ್ಕೃತಿಗೆ ಮಾರು ಹೋಗುವುದು ದುರದೃಷ್ಟಕರವಾಗಿದೆ. ಕಂಪ್ಯೂಟರ್, ಮೊಬೈಲ್‌ಗಳಿಲ್ಲದೆ ದಿನವನ್ನು ಬದುಕಲು ಸಾಧ್ಯವಿಲ್ಲ ಎಂಬ ಸ್ಥಿತಿಗೆ ಬಂದು ತಲುಪಿದ್ದೇವೆ.

ಮನುಷ್ಯ ಸಂಬಂಧಗಳಲ್ಲಿ ಆದ ಬದಲಾವಣೆಯೂ ಬಹುಮುಖ್ಯವಾದುದು. ಕೃಷಿ ಜಗತ್ತು ಸಾಮುದಾಯಿಕ ಶ್ರಮವನ್ನು ಬಯಸುತ್ತಿದ್ದು ದಣಿ ಒಕ್ಕಲುಗಳ ಅಂತರವಿದ್ದರೂ ಪರಸ್ಪರರನ್ನು ಅವಲಂಬಿಸುವುದು ಅನಿವಾರ್ಯವಾಗಿತ್ತು. ವಿಸ್ತಾರವಾದ ಗದ್ದೆ ಭೂಮಿಯಲ್ಲಿ ದುಡಿಯುವುದು ಭೂ ರಹಿತರಿಗೆ ಅನಿವಾರ್ಯವಾದಂತೆ ಅವರನ್ನು ಅವಲಂಬಿಸಿ ಬಾಳುವುದು ಧಣಿಗಳಿಗೂ ಅನಿವಾರ್ಯವಾಗಿತ್ತು. ಯಾಜಮಾನ್ಯದ ದರ್ಪ ದಾಷ್ಟ್ಯಗಳಿದ್ದಾಗಲು ಪರಸ್ಪರರಲ್ಲಿ ಅವಲಂಬನೆಯಿತ್ತು. ಕೃಷಿ ಜಗತ್ತು ಕಾಣೆಯಾಗುತ್ತ ಬಂದು ಸ್ಥಾಪನೆಗೊಂಡ ಕಾರ್ಖಾನೆಗಳು, ಸಣ್ಣ ಪುಟ್ಟ ವ್ಯಾಪಾರಗಳಲ್ಲಿ ತೊಡಗಿಸಿಕೊಂಡ ಸಮುದಾಯಗಳಿಗೆ ಸಹಜವಾಗಿಯೇ ಸ್ಪರ್ಧೆ ಏರ್ಪಟ್ಟಿತ್ತು. ಈ ಸ್ಪರ್ಧೆ ಸಾಮಾಜೀಕರಣದ ಸ್ಥಾನಮಾನಗಳೊಂದಿಗೆ ಅಧಿಕಾರ ಪ್ರಾಪ್ತಿಯ ಉದ್ದೇಶವನ್ನು ಹೊಂದಿತ್ತು. ಒಕ್ಕಲು ಮಸೂದೆ ಕಾನೂನು ಸ್ವಾತಂತ್ರ್ಯ ನಂತರದ ದಿನಗಳಲ್ಲಿ ತಂದ ಸ್ವಾತಂತ್ರ್ಯ ಮತ್ತು ಸ್ವಾಯತ್ತತೆಯ ಆಶಯವನ್ನು ಹೊಂದಿತ್ತು. ಪಾಳೇಗಾರಿಕೆಯ ಮನಸ್ಥಿತಿ ಅದನ್ನು ಅಷ್ಟು ಸರಳವಾಗಿ ಒಪ್ಪಿಕೊಳ್ಳುವಂತಹುದು ಆಗಿರಲಿಲ್ಲ. ಮಿತ್ತಬೈಲ್ ಯಮುನಕ್ಕೆ ಕಾದಂಬರಿ ಮಿತ್ತಬೈಲಿಗೆ ಬಂದ ಬಸ್ಸಿನ ಪ್ರಕರಣ, ಬಸ್ಸಿನ ಪ್ರಯಾಣ ಅದನ್ನು ಕಾದಂಬರಿಕಾರ ನಿರ್ವಹಿಸಿದ ರೀತಿ ಅದ್ಭುತವಾಗಿದೆ.

"ಇಂದಂಬೆ ಉಂದು ಕಂಪೆನಿ ಬಸ್ಸ್, ಉಂದು ದಾಲ ಗುತ್ತು ದಕ್ಲೆನ ಸಾರೊಟು ಬಂಡಿ ಅತ್ತ್. ಬೋರಿದ ಗಾಡಿ ಮಿನಿ ಅತ್ತ್. ಉಂದು ಸರ್ಕಾರದ ಪರ್ಮಿಟ್ ಗೆತೊಂದು ಜನೊಕ್ಲೆಗ ಬೋಡದ್ ನಡಪಾವುನ ಬಸ್ಸ್ . ಸಮಯೊಗು ಸರಿಯಾದ್ ಪೋವೊಡಾಯಿನವು ನಮ ಬಸ್‌ದಕ್ಲೆನ ಡೂಟಿ. ಈ

ತಾದಿಡೇ ಇಡೀ ಉಪ್ಪುನ ಮಲ್ಲಾಕ್ಲೆಗ್ ಗುತ್ತುದಕ್ಲೆಗ್ ಕಾತೊಂದು ಉಂತ್‌ಂಡ ಬಸ್ ಪುತ್ತುರುಗೆತ್ತುನಗ ರಡ್ಡ್ ದಿನ ಕರಿಯು. ಮೂಲು ಗುರಿಕಾರ್ಡಿಗೆ ಕಾತೊಂದೆ ಉಂತ್ಯೆರೆ ಅತ್ತ್ ನಮಕ್ ಸಂಬಳ ಕೊರ್ಪುನೆ. ನಮ ಸಮಯೊಡು ಜನೊಕ್ಲೆನ್ ಅಕ್ಲೆನ ಊರುಗು ಎತ್ತಾವೊಡುಂದು ನಂಕ್ ಸಂಬಳ ಕೊರ್ದು ದೀತ್‌ನೆ"(ಆನಂದ ಕೃಷ್ಣ, ೨೦೦೫, ಪು ೨೬೮) (ಕೊನೆ ಟಿಪ್ಪಣಿ ೬೪)

ಸ್ವಾತಂತ್ರ್ಯದ ಪರಿಕಲ್ಪನೆ ಸ್ವಂತಿಕೆಯ ಚಿಂತನೆಯೊಂದಿಗೆ ಪಾಳೇಗಾರಿಕೆಯ ಊಳಿಗಮಾನ್ಯತೆಯನ್ನು ಪ್ರಶ್ನಿಸುವ ಪ್ರಜ್ಞೆಯೊಂದು ಹುಟ್ಟಿಕೊಂಡಿರುವುದು ಬಹಳ ಮುಖ್ಯವಾದುದು. ದಮನಿಸುವ ಪ್ರವೃತ್ತಿಗಳೇ ವಿಜೃಂಭಿಸುವುದರ ನಡುವೆ ಪ್ರತಿರೋಧದ ದನಿಯೊಂದು ಎತ್ತಲ್ಪಡುವುದು ಬಹಳ ಮುಖ್ಯವಾದ ಅಂಶವಾಗಿದೆ. ವೈಯಕ್ತಿಕತೆಗಿಂತ ಸಮಷ್ಟಿಯ ಕಡೆಗೆ ಸಾಗುವ ಪ್ರಜ್ಞೆಯಿದು. ಹೀಗೆ ಪ್ರಶ್ನಿಸಿದವರನ್ನು ಬಾಯಿ ಮುಚ್ಚಿಸುವ ಕೆಲಸಗಳೂ ಸಾಗಿದ್ದರೂ ಪ್ರಶ್ನೆಯೊಂದು ಗಂಭೀರವಾಗಿ ಕಾಡದೆ ಬಿಡದು. ಸಾಮಾಜಿಕ ಸಂರಚನೆಯಲ್ಲಿ ಆದ ಪಲ್ಲಟಗಳಿಂದಾಗಿಯೇ ಎಲ್ಲವನ್ನು ಒಪ್ಪಿಕೊಳ್ಳುತ್ತಿದ್ದ ಮನೋಧರ್ಮದ ಮಂದಿ ಪ್ರಶ್ನಿಸುವುದನ್ನು ರೂಢಿಸಿಕೊಂಡರು.

ಸ್ವಲ್ಪ ಬಲಹೀನರಾದ ದಣಿಗಳ ಮೇಲೆ ಒಕ್ಕಲು ಮಕ್ಕಳೇ ದಬ್ಬಾಳಿಕೆ ನಡೆಸಿದ ಪ್ರಸಂಗಗಳೂ ಇದ್ದವು. "ಇತ್ತೆ ಒವುಲಾ ನೆಂಪುಜ್ಜಿ ನಿಕ್ಲೆಗ್ ಎನ್ನ ನುಪ್ಪು ಕಲೆವೆರೆಗ್ಲಾ ದುಂಬಾಪರ್. ಒರಿಯಗೊರಿ ಸಾಕ್ಷಿ ಪನ್ಪರ್. ದರ್ಮೊಗು ತಿಕ್ಕ್‌ನಗ ಏರೆಗ್ ಕಯ್ಪೆ ಆಪುಂಡು? ಪೂರ ಆಸ್ತಿ ನಿಕ್ಲೆಗ್ ಆವಡ್ ಯಾನ್ ದೇಸಾಂತ್ರ ಪೋಪೆ, ಇಜ್ಜಾಂಡ ಪೊಟ್ಟು ಗುವೆಲ್ ನಾಡೊಂಬೆ. (ಜಾನಕಿ ಎಂ ಬ್ರಹ್ಮಾವರ; ೧೯೯೮, ಪು ೯೨). (ಈಗ ಯಾವುದು ನೆನಪಿಲ್ಲ ನಿಮಗೆ? ನನ್ನ ಅನ್ನ ಕಸಿಯಲೂ ಮುಂದಾಗುತ್ತೀರಿ, ಒಬ್ಬರಿಗೊಬ್ಬರು ಸಾಕ್ಷಿ ಹೇಳುತ್ತೀರಿ. ಧರ್ಮಕ್ಕೆ ಸಿಗುವಾಗ ಯಾರಿಗೆ ಕಹಿ ಆಗುತ್ತದೆ. ಎಲ್ಲಾ ಆಸ್ತಿ ನಿಮಗೆ ಆಗಲಿ ನಾನು ದೇಶಾಂತರ ಹೋಗುವೆ. ಇಲ್ಲದಿದ್ದರೆ ನೀರಿಲ್ಲದ ಬಾವಿ ಹುಡುಕುತ್ತೇನೆ). ಒಂದು ತುಂಡು ಭೂಮಿಯ ಒಡೆತನವೂ ಮರಳಿ ಪಡೆಯಲಾಗದ ಅಸಹಾಯಕ ಸ್ಥಿತಿಗೆ ಬಂದು ತಲುಪಿರುತ್ತಾರೆ. ಇದು ಸಮಾಜದಲ್ಲಿ ಒಮ್ಮಿಂದೊಮ್ಮೆಲೆ ಆದ ಬದಲಾವಣೆಯಲ್ಲ ರಾಷ್ಟ್ರೀಯ ಚಳವಳಿ ನಿಧಾನವಾಗಿ ಕರಾವಳಿಯಲ್ಲಿ ಮಾಡಿದ ಬದಲಾವಣೆ ಬಹಳ ದೊಡ್ಡ ಮಟ್ಟದ್ದು. ಒಂದು ತಲೆಮಾರಿನ ಜನರಿಗೆ ಸ್ವಾತಂತ್ರ್ಯ ಹೋರಾಟ ಎನ್ನುವುದೇ ಬದುಕಿನ ಕ್ರಮವಾಗಿತ್ತು. ಬ್ರಿಟಿಷರ ದಬ್ಬಾಳಿಕೆಯನ್ನು ವಿರೋಧಿಸಿ ಗಾಂಧಿವಾದಿಗಳಾಗಿ ಚಳುವಳಿಯಲ್ಲಿ ಬಹಳ ಮಂದಿ ಭಾಗವಹಿಸಿದರು.

"ಉಮೇಶ್ ರಾಯೆರ್, ರಾಘವ ನಂಬಿಯಾರ್, ಮಣಿಯಾಣಿಯೆರ್, ದೇವಪ್ಪಾಳ್ವೆರ್ ಪಂಡ್‌ದ್ ಕಾಸರಗೋಡುದ ಗಾಂಧಿಯೆರ್ ಸ್ವಾತಂತ್ರ್ಯದ ಜನೊಕುಲು ಅರೆಗೆ ತಾಲೂಕುಡು ನಡತಿನ ಸುದಾರಣೆನ್ ವಿವರಿತೆರ್. ಹರಿ ಜನೋದ್ಧಾರ ಸಂಘೊದ ಕೆಲಸೊಲು ವಿಧವಾ ವಿವಾಹದ ಸಂಘ, ಖಾದಿ ಬಂಡಾರದ ಕೆಲಸೊಲೆನ ಕೆಲಸ ನಡತೊಂದಿತ್ತ್‌ಂಡ್. ತಿಲಕ್ ವಿದ್ಯಾಲಯದ ರಾತ್ರೆ ಸಾಲೆದ ಕೆಲಸೊಲೆನ್ ದೇವಪ್ಪಾಳ್ವೆರ್ ಸುಬ್ಬಣ್ಣಗ್ ಪಂಡೆರ್' (ಆನಂದ ಕೃಷ್ಣ ,೨೦೦೫; ಪುಟ ೨೧೩) (ಗಾಂಧಿವಾದಿಗಳಾದ ಹಿರಿಯರು ಸ್ವಾತಂತ್ರ್ಯ ಚಳುವಳಿಯಿಂದ ತಾಲೂಕಿನಲ್ಲಿ ನಡೆದ ಬದಲಾವಣೆಗಳನ್ನು ವಿವರಿಸಿದರು. ಹರಿಜನೋದ್ಧಾರ ಸಂಘದ

ಕೆಲಸಗಳು, ವಿದವಾ ವಿವಾಹದ ಸಂಘ ಖಾದಿ ಭಂಡಾರದ ಕೆಲಸಗಳ ಕೆಲಸ ನಡೆದುಕೊಂಡಿತ್ತು. ತಿಲಕ್ ವಿದ್ಯಾಲಯದ ರಾತ್ರಿ ಶಾಲೆಯ ಕೆಲಸಗಳನ್ನು ದೇವಪ್ಪಾಳ್ವರು ಸುಬ್ಬಣ್ಣನಿಗೆ ಹೇಳಿದರು)

ಸಾಮಾಜಿಕ ಸಂರಚನೆಯಲ್ಲಿ ಆದ ಈ ಬದಲಾವಣೆ ಬಹಳ ಮುಖ್ಯವಾದುದು. ಸ್ವಾತಂತ್ರ್ಯ ಚಳುವಳಿಯಲ್ಲಿ ಭಾಗವಹಿಸಿದವರು ಭೂಮಿಯ ಒಡೆಯರಾದ ಮೇಲ್ವರ್ಗದ ಜನರು. ದುಡಿಯುವ ವರ್ಗದ ಜನರಿಗೆ ಊಳಿಗಮಾನ್ಯತೆಯ ನಡುವೆ ಸ್ವಾತಂತ್ರ್ಯದ ಪರಿಕಲ್ಪನೆ ಹುಟ್ಟಲು ಸಾಧ್ಯವಿರಲಿಲ್ಲ. ಹಸಿವೆಯೇ ಮೂಲಭೂತ ಅವಶ್ಯಕತೆಯಾಗಿದ್ದು ಅದನ್ನು ನಿವಾರಿಸಿಕೊಳ್ಳುವ ಹೋರಾಟವೇ ಮುಖ್ಯವಾಗಿತ್ತು. ಬದಲಾಗುತ್ತಿರುವ ಕಾಲಘಟ್ಟದಲ್ಲಿ ಯಾವ ರೀತಿಯ ಸ್ಥಿತ್ಯಂತರಗಳಾಗುತ್ತಿವೆ ಎನ್ನುವುದನ್ನು ಗ್ರಹಿಸಬಹುದು. ಯುವಕರ ಮನಸ್ಥಿತಿ ಹಿರಿಯರು ಅವರನ್ನು ನಡೆಸಿಕೊಳ್ಳುವ ರೀತಿಯನ್ನು ಸಾಮಾಜಿಕವಾಗಿ ಯಾವ ಪ್ರತಿಕ್ರಿಯೆಗಳು ಲಭ್ಯವಾಗುತ್ತದೆ ಎಂದು ಗ್ರಹಿಸಲು ಸಾಧ್ಯವಾಗುತ್ತದೆ.

"ಮಿತ್ತ ಬೈಲ್‌ಡ್ ಏತೋ ಜವಣೆರ್ ಉಲ್ಲೆರ್ ಅಕ್ಲೆಕ್ ಪೂರಾ ಜವಾಬ್ದಾರಿ ಕೊರ್ದು ಒಂಜಿ ಕೆಲಸ ಕೊರ್ದು ಸರಿ ತಾದಿಗ್ ಕೊಣು ಬಲೆ ಮಾಮ. ಕಾಲ ಬದಲೊಂದುಂಡು. ಇತ್ತೆ ಈರೆ ಅಕ್ಲೆನ್ ಪೊರ್ಲುಡು ತೂವೊನುಜರಾಂಡ ಎಲ್ಲೆ ಈರೆಗೇ ಬಂಜ ಆಯೆರೆ ಉಂಡು. ಯಾನ್ ಗಾಂಧಿವಾದಿ ಈರೆನ ಸರಕಾರೊಗು ಎಂಕ್ಲ ಎದುರು ಅಂಚ ನಮ ಇತ್ತ್‌ಲೆಕನೆ ಉಪ್ಪುಗ ಮಾಮ ಎನ್ನ ಮಿತ್ತಬೈಲ್‌ದ ಛತ್ರದ ಸಾಲೆಗೊಂತೆ ಸಾಯ ಮನ್ಪುಲೆ. ಯಾನ್ ಈರೆಗೆ ಅವುಲು ಅದಗದಗ ತಿಕ್ವೆ (ಅದೇ ಪು ೨೧೩). ಕೊನೆ ಟಿಪ್ಪಣಿ:೬೫. ಸಾಂಪ್ರದಾಯಿಕವಾದ ಕಸುಬುಗಳನ್ನು ಮಾಡುತ್ತಿದ್ದುದ್ದು ಅದನ್ನು ತ್ಯಜಿಸಿದ್ದು ವಸಾಹತ್ತೋತ್ತರ ಕಾಲದ ಸಂದರ್ಭದಲ್ಲಿ ತಮ್ಮ ಕುಲದ ವೃತ್ತಿಗಳನ್ನು ತ್ಯಜಿಸಿ ತಾವು ಪಡೆದ ಶಿಕ್ಷಣದಿಂದಾಗಿ ಸಣ್ಣ-ಪುಟ್ಟ ಉದ್ಯೋಗಗಳಲ್ಲದೆ ಅಭಿವೃದ್ಧಿ ಹೊಂದಿದ ಪರಿಭಾಷೆಯ ದುಡಿಮೆ ಪ್ರತಿಫಲವಾಗಿ ಪಡೆಯುವ ಸಂಬಳ, ವಾರದ ರಜೆ ಇವೆಲ್ಲ ಸವಲತ್ತುಗಳು ಲಭಿಸಿದವು. ಮಣ್ಣಲ್ಲಿ ದುಡಿಯುವುದಕ್ಕಿಂತ ಕೆಸರು ತಾಗಿಸಿಕೊಳ್ಳದೆ ಬಿಳಿ ಬಟ್ಟೆಯುಟ್ಟ ಉದ್ಯೋಗವೂ ಶ್ರೇಷ್ಠವೆನಿಸಿಕೊಂಡಿತು. ಮೇಲು-ಕೀಳಿಗಿಂತ ಉದ್ಯೋಗಸ್ಥರಾಗಿ ಮೇಲ್ ಸ್ತರದ ಸ್ಥಾನ ಪಡೆಯುವುದೂ ಮುಖ್ಯವಾಗಿತ್ತು. ಆರ್ಥಿಕತೆ ಮತ್ತು ಸಾಮಾಜಿಕ ಸ್ಥಾನಮಾನಗಳು ಜಾತಿ ಮತ್ತು ಧರ್ಮವನ್ನು ಮರು ಸ್ಥಾಪಿಸಿಕೊಳ್ಳಲು ಸಹಾಯ ಮಾಡಿದವು. ಊರ ಹೊರಗಿನ ಗುತ್ತಿನ ಮನೆಯ ಸಮೀಪದಲ್ಲಿ ಒಕ್ಕಲುಗಳಾಗಿದ್ದವರು ಸ್ವತಂತ್ರರಾದಾಗ ದೂರವಿರಿಸಿಕೊಂಡವರನ್ನು ಸಮೀಪಕ್ಕೆ ಬೆಸೆಯಲಾಗದಿದ್ದರೂ ಧರ್ಮದ ಹೆಸರಲ್ಲಿ ಒಂದು ಮಾಡುವ ಕೆಲಸಗಳು ನಡೆದವು. ನಮ್ಮ ಧರ್ಮವೇ ಶ್ರೇಷ್ಠ ಉಳಿದವರ ಧರ್ಮ ಕನಿಷ್ಠವೆನ್ನುವ ಈ ಸಂಕುಚಿತ ದೃಷ್ಟಿಯಿಂದ ಪರಸ್ಪರರಲ್ಲಿ ಅಪನಂಬಿಕೆ, ಅವಿಶ್ವಾಸಗಳು ಸೃಷ್ಟಿಯಾಗಿ ಸಂಘರ್ಷಕ್ಕೆ ಕಾರಣವಾಯಿತು. ಕೋಮುವಾದದ ಬೀಜ ಮೊಳಕೆಯೊಡೆಯುವುದಕ್ಕೂ ಕಾರಣವಾಯಿತು. ಇದನ್ನು ಪೋಷಿಸುವ ಕೆಲಸವನ್ನು ಅಧಿಕಾರ ಕೇಂದ್ರದಲ್ಲಿದ್ದವರು ನಡೆಸಿದರು. ಅದಲ್ಲದೆ ಅಧಿಕಾರವನ್ನು ಪಡೆಯಲೂ ಧರ್ಮವೆ ಪ್ರಮುಖ ಅಸ್ತ್ರವಾಯಿತು.

ಕೋಮುವಾದದ ಬೀಜದ ಮೂಲ ಆರ್ಥಿಕತೆಯೇ ಆಗಿದೆ. ಕೃಷಿ ಸಂಸ್ಕೃತಿ ಪಲ್ಲಟವಾಗುತ್ತ ವ್ಯಾಪಾರಿ ಸಂಸ್ಕೃತಿಯಾಗಿ ಪರಿವರ್ತನೆ ಹೊಂದಿ ವ್ಯವಹಾರವೇ ಮುಖ್ಯವಾದಾಗ ದುಡ್ಡಿನ ಮೂಲ ಪ್ರಮುಖವಾಯಿತು. ಕೃಷಿ ಆಹಾರದ ಮೂಲವಾಗಿ ಹೊಟ್ಟೆಯ ಹಸಿವನ್ನು ನೀಗಿಸಲು ಕಾರಣವಾಗಿದ್ದರೆ, ದುಡ್ಡಿನ ಮೂಲವಾಗಿ

ವ್ಯವಹಾರದ ಉದ್ದೇಶವನ್ನು ಇರಿಸಿಕೊಂಡು ಬೆಳೆದ ವಾಣಿಜ್ಯ ಬೆಳೆಗಳು ಆರ್ಥಿಕ ಅಭಿವೃದ್ಧಿಯ ಮಾರುಕಟ್ಟೆ ಸಂಸ್ಕೃತಿಯನ್ನು ಬೆಳೆಸಿತು. ಮಾರುಕಟ್ಟೆಗೆ ಅನುಗುಣವಾಗಿ ಬೆಳೆಯುವ ಬೆಳೆಗಳು ಲಾಭ-ನಷ್ಟವನ್ನು ಹುಟ್ಟು ಹಾಕಿದವು. ಅಡಿಕೆ, ತೆಂಗು, ಕೊಕ್ಕೋ, ರಬ್ಬರ್, ಕಾಳುಮೆಣಸು, ವೀಳ್ಯದೆಲೆ, ಸಾಂಬಾರ ಪದಾರ್ಥಗಳು, ಹೀಗೆ ದುಡ್ಡಿನ ಮೂಲದ ಬೆಳೆಗಳನ್ನೇ ಬೆಳೆದರು. ಅಲ್ಲದೆ ಬೆಳೆದ ಬೆಳೆಗೆ ಮಾರುಕಟ್ಟೆಯೊದಗಿಸುವ ಕ್ರಮದಿಂದ ಸ್ಪರ್ಧೆಯೂ ಹೆಚ್ಚಿತು. ಕೃಷಿಗೆ ಪರ್ಯಾಯ ವ್ಯಾಪಾರ ಎಂದಾದಾಗ ಹೆಚ್ಚು ಸಂಪಾದನೆ ಮಾಡುವ, ಆದಾಯವನ್ನು ಹೆಚ್ಚಿಸುವ ಪ್ರಯತ್ನದಿಂದ ಸ್ಪರ್ಧೆ ತೀವ್ರವಾಗುತ್ತ ಹೋಯಿತು. ಸಣ್ಣ -ಪುಟ್ಟ ವ್ಯಾಪಾರ ಮಾಡುತ್ತಿದ್ದ ಮುಸ್ಲಿಮರು ಕ್ರಮೇಣ ನಗರದ ಕೇಂದ್ರಭಾಗಗಳಲ್ಲಿ ವ್ಯಾಪಾರ ಮಳಿಗೆಗಳನ್ನು ಹೊಂದಿದಾಗ ಇಡಿಯ ಬಂದರು ಪ್ರದೇಶವೇ ಮುಸ್ಲಿಮರ ಅಧೀನಕ್ಕೊಳಪಟ್ಟಿತು. ವ್ಯಾಪಾರಕ್ಕೆ ಪ್ರತಿಸ್ಪರ್ಧಿಗಳಾಗಿದ್ದ ಗೌಡಸಾರಸತ್ವರು ಸಹಜವಾಗಿಯೇ ಅವರೊಂದಿಗೆ ಅಂತರವನ್ನು ಕಾಯ್ದುಕೊಂಡರು, ಎರಡು ಸಮುದಾಯಗಳು ವಲಸಿಗರಾಗಿದ್ದು, ತಮ್ಮ ಅಸ್ಮಿತೆಯನ್ನು ಕಾಯ್ದುಕೊಳ್ಳುವ ಇರಾದೆಯು ಮುಖ್ಯವಾಗಿತ್ತು. ವ್ಯಾಪಾರದ ಉದ್ದೇಶಕ್ಕಾಗಿ ಹುಟ್ಟಿಕೊಂಡ ಈ ಸ್ಪರ್ಧೆ ಸಾಮಾಜಿಕ ಅಂತರವನ್ನು ಹುಟ್ಟು ಹಾಕಿತು. ಕೋಮುವಾದದ ಮೂಲ ಬೇರು ಇಲ್ಲೇ ಆರ್ಥಿಕತೆಯ ಮೂಲವೇ ಆಗಿತ್ತು.

ಕರಾವಳಿಯಲ್ಲಿ ಮಿಶನರಿಗಳು ಹುಟ್ಟು ಹಾಕಿದ ಆಧುನಿಕ ಶಿಕ್ಷಣ ಕ್ರಮವೂ ಸಾಮಾಜಿಕವಾಗಿ ಬದಲಾವಣೆಗಳನ್ನು ತಂದಿತು. ಎತ್ತರದ ಗುಡ್ಡ ಪ್ರದೇಶಗಳಲ್ಲಿ ಕಟ್ಟಿದ ಶಿಕ್ಷಣ ಸಂಸ್ಥೆಗಳು ಜನರನ್ನು ಸುಶಿಕ್ಷಿತರಾಗಿಸುವುದರೊಂದಿಗೆ ಆರ್ಥಿಕವಾಗಿ ಸಮುದಾಯಗಳು ಇಂಗ್ಲಿಷ್ ಶಿಕ್ಷಣ ಪಡೆದು ಸದೃಢರಾಗುವುದಕ್ಕೆ ಕಾರಣವಾಯಿತು. ಸೇವೆಯ ಹಂತದಲ್ಲಿದ್ದ ಶಿಕ್ಷಣ ಸಂಸ್ಥೆಗಳೂ ವ್ಯಾಪಾರದ ಹಂತಕ್ಕೆ ಇಳಿದಾಗ ಚರ್ಚ್‌ಗಳು ನಡೆಸಲ್ಪಡುವ ಕಾನ್ವೆಂಟ್ ಶಿಕ್ಷಣಕ್ಕೆ ಪರ್ಯಾಯವಾಗಿ ದೇವಸ್ಥಾನ, ಮಸೀದಿಗಳಿಂದಲೂ ಶಿಕ್ಷಣ ಸಂಸ್ಥೆಗಳು ಸ್ಥಾಪನೆಗೊಂಡವು. ಎಲ್ಲರೊಡನೆ ಬೆರೆತು ಬಾಳುವ ಸರಕಾರಿ ಶಿಕ್ಷಣ ಸಂಸ್ಥೆಗಳಿಗಿಂತ ಎಲ್ಲ ಮೂಲಭೂತ ಸೌಕರ್ಯಗಳಿರುವ ಎತ್ತರದ ಕಂಪೌಂಡ್ ಗೋಡೆಗಳನ್ನು ಕಟ್ಟಿಕೊಂಡು ಎಳೆಯ ಮಕ್ಕಳು ದ್ವೀಪ ಜೀವಿಗಳಾಗಿ ಬೆಳೆದಾಗ ಸಾಮರಸ್ಯದ ಬದುಕು ಕ್ಷೀಣಿಸುತ್ತ ಬಂತು. ಅಧುನಿಕ ಜೀವನಕ್ರಮ, ಪಡೆಯುತ್ತಿರುವ ಶಿಕ್ಷಣ, ಕ್ಷೀಣಿಸದ ಕೃಷಿ ಜಗತ್ತು, ಕರಾವಳಿಯ ಉದ್ದಗಲಕ್ಕೂ ಸಾವಿರಾರು ಎಕರೆ ಪ್ರದೇಶದಲ್ಲಿ ಸ್ಥಾಪಿಸಲ್ಪಟ್ಟ ಕೈಗಾರಿಕೆಗಳು, ಅಲ್ಲಿ ಸೃಷ್ಟಿಯಾದ ಕಾರ್ಪೊರೇಟ್ ಸಂಸ್ಕೃತಿ ನೆಲದ ಪಿಸು ಮಾತುಗಳನ್ನು ಮರೆತು ದುಡ್ಡು ಕಾಸಿನ ವ್ಯವಹಾರವಷ್ಟೇ ಮುಖ್ಯವೆನಿಸಿದಾಗ ಮಾನವೀಯ ಸಂಬಂಧಗಳೇ ಅಮುಖ್ಯವೆನಿಸಿತು. ಕಾರ್ಪೊರೇಟ್ ಸಂಸ್ಕೃತಿಯು ಮಾರುಕಟ್ಟೆ ಕೇಂದ್ರಿತ ಬದುಕನ್ನು ಪೋಷಿಸುತ್ತ ತನ್ನ ಹಿಡಿತವನ್ನು ಸ್ಥಾಪಿಸಿಕೊಳ್ಳಲು ಅಧಿಕಾರ ಕೇಂದ್ರಗಳಲ್ಲೂ ತನ್ನ ಕಪಿಮುಷ್ಟಿಯನ್ನು ಬಿಗಿಗೊಳಿಸಲು ಪ್ರಯತ್ನಿಸುತ್ತಿದೆ. ಅನೇಕತೆಯಲ್ಲಿ ಏಕತೆಯನ್ನು ಹೊಂದಿರುವ ನಾಡೊಳಗೆ ಬಹುತ್ವದ ಮೌಲ್ಯವೇ ಪ್ರಶ್ನಾರ್ಹವಾಗಲು ಕಾರಣವಾಯಿತು. ಎಲ್ಲರನ್ನು ಎಲ್ಲವನ್ನು ತನ್ನ ಒಡಲೊಳಗೆ ಸ್ವೀಕರಿಸುತ್ತ ಬಂದ ಕರಾವಳಿಯಲ್ಲಿ 'ತುಪ್ಪ ಆಶನ ಉಂಬಲೆ ತುಳುನಾಡಿಗೋಯಿಕ್ಕು' (ತುಪ್ಪ ಅನ್ನ ಉಣ್ಣ ಬೇಕಾದರೆ ತುಳುನಾಡಿಗೆ ಹೋಗಬೇಕು) ಎಂಬ ಹವ್ಯಕರ ರೂಢಿಯ ಮಾತು ಹುಸಿಯಾಗುವಂತೆ ಆಯಿತು. ಪರಸ್ಪರರಲ್ಲಿ ಸಂಘರ್ಷ ಮತ್ತು ಸಾಮಾಜಿಕ ಮೇಲ್‌ಚಲನೆಯ ಮೇಲಾಟಗಳ ಆರ್ಥಿಕವಾಗಿ ಪ್ರಬಲರಾಗಬೇಕು

ಎನ್ನುವ ತತ್ವವನ್ನು ಪ್ರತಿಪಾದಿಸುತ್ತಲೇ ಎಲ್ಲವನ್ನು ವ್ಯಾಪಾರಿ ದೃಷ್ಟಿಕೋನದಿಂದ ನೋಡಲಾಯಿತು. ಕೃಷಿಯನ್ನು ಲಾಭ ನಷ್ಟಗಳ ಲೆಕ್ಕಾಚಾರದಿಂದ ಅಳೆಯಲಾರಂಭಿಸಿದಾಗ ಮಾಡುವ ಖರ್ಚಿಗೂ ಬರುವ ಉತ್ಪಾದನೆಯನ್ನು ಲೆಕ್ಕ ಹಾಕಿದಾಗ ಬದುಕಿನ ಧರ್ಮವಾಗಿದ್ದ ಕೃಷಿ ಕಾಣೆಯಾಗುತ್ತ ಹಿನ್ನೆಲೆಗೆ ಸರಿಯಿತು. ಆರ್ಥಿಕವಾಗಿ ಅಭಿವೃದ್ಧಿ ಹೊಂದಿದ್ದೇವೆ ಎಂಬ ಅಂಕಿ ಅಂಶಗಳ ನಡುವೆಯೇ ಸಾಮಾಜೀಕರಣದ ಬದುಕು ಸಂಕೀರ್ಣವಾಗುತ್ತ ಹೋಯಿತು. ಕೃಷಿಯಿಂದ ದೂರವಾದಂತೆಲ್ಲ ಸಾಂಸ್ಕೃತಿಕ ಬದುಕಿನ ಶ್ರೀಮಂತಿಕೆಯಿಂದಲೂ ಹಿಂದೆ ಸರಿದವು. ತಾನು ಉಣ್ಣುವುದಲ್ಲದೆ ಜಗತ್ತಿನ ಜೀವ ಜಾಲದ ಆಹಾರದ ಮೂಲವಾಗಿದ್ದು ಕೃಷಿಲೋಕದಲ್ಲಿ ತಾನು ಬದುಕುವುದಲ್ಲದೆ ಎಲ್ಲರೂ ಬದುಕಬೇಕೆಂಬ ಮೌಲ್ಯ ಹಿನ್ನೆಲೆಗೆ ಸರಿಯಿತು. ನಾನು ಬದುಕುಳಿಯಬೇಕು, ನಾನೋರ್ವನೇ ಶ್ರಿಮಂತನಾಗಬೇಕುಎಂಬ ಮನೋಧರ್ಮವೂ ಹುಟ್ಟಿ, ಲೋಕದಲ್ಲಿ ಮತ್ತಷ್ಟು ಹಿಂಸೆ ಕ್ರೌರ್ಯಗಳಿಗೂ ಕಾರಣವಾಯಿತು. ಹಸಿವು, ಇಂದಿಗೂ ನೀಗಿಸಿಕೊಳ್ಳಲಾರದ ಪ್ರಶ್ನೆಯಾಗಿಯೇ ಉಳಿದಿದೆ. ದುಡಿಯುವುದು ಉಣ್ಣುವುದಕ್ಕಾಗಿಯಾದರೂ, ದುಡಿಮೆ ಅನ್ನವನ್ನು ಪೂರ್ಣ ಪ್ರಮಾಣದಲ್ಲಿ ನೀಡಲು ಸಾಧ್ಯವಾಗುತ್ತಿಲ್ಲ, ಕಾರ್ಪೊರೇಟ್ ಜಗತ್ತು, ಜನಸಾಮಾನ್ಯರ ಬೆವರಿನ ಬೆಲೆಯನ್ನು ನಗದೀಕರಿಸುತ್ತ ಸಾಗುವುದರೊಂದಿಗೆ ಬಡವ ಶ್ರೀಮಂತರ ನಡುವಿನ ಸಾಮಾಜಿಕ ಅಸಮಾನತೆ ಹೆಚ್ಚುತ್ತ ಹೋಗುತ್ತಿದೆ.

ಕೃಷಿಯೊಂದಿಗೆ ಬೆಸೆದ ಲೋಕದೃಷ್ಟಿ ಮರೆಯಾಗುತ್ತಿದ್ದು ಆಧುನೀಕರಣಗೊಂಡು ಸಾಗುತ್ತಿರುವ ಬದುಕು, ಹೊಸ ಹೊಸ ವೈಜ್ಞಾನಿಕ ಅನ್ವೇಷಣೆಗಳಿಂದ ಸುಭಿಕ್ಷವಾಗುತ್ತದೆ ಎಂಬ ಭ್ರಮೆಯೊಳಗೆ ಸಾಗುತ್ತಿದೆ. ತೀರಾ ಸಂಕೀರ್ಣವಾಗುತ್ತಿರುವ ಬದುಕಲ್ಲಿ ಹಂಚುವ ಪೊರೆಯುವ ಮೌಲ್ಯಗಳು ಹಿನ್ನೆಲೆಗೆ ಸರಿಯುತ್ತಿದೆ. ವಾರ್ಷಿಕ ಅವರ್ತನದಲ್ಲಿ ಬೆಳೆಯುವ ಬೆಳೆ ಮತ್ತು ಜೀವನ ಆವರ್ತನದಲ್ಲಿ ಸಾಗುತ್ತಿರುವ ಮನುಷ್ಯ ಬದುಕು ಪರಸ್ಪರ ಸಂಬಂಧವಿರಿಸಿಕೊಂಡು ನಡೆಸುವ ಬಾಳುವೆ ವರ್ತಮಾನದಲ್ಲಿ ಮತ್ತೆ ಮೌಲ್ಯಮಾಪನಕ್ಕೆ ಒಳಗಾಗುತ್ತಿದೆ. ಚಲನಶೀಲವಾದ ಬದುಕು ನಿರಂತರ ಮುಂಚಲನೆ ಪಡೆಯುತ್ತ ಕೃಷಿ ಪಲ್ಲಟದಿಂದ ಬದಲಾದ ಸಾಮಾಜೀಕರಣದ ಚಿಂತನೆಗಳನ್ನು ಬೇರೆ ಬೇರೆ ನೆಲೆಯಲ್ಲಿ ಅಧ್ಯಯನ ನಡೆಸಲು ಸಾಕಷ್ಟು ವಿಚಾರಗಳನ್ನು ಇನ್ನು ತನ್ನ ತೆಕ್ಕೆಯೊಳಗೆ ಇರಿಸಿಕೊಂಡಿದೆ. ಬೇರೆ ಬೇರೆ ಕ್ಷೇತ್ರಗಳಲ್ಲಿ ಅಧ್ಯಯನದ ನಿರಂತರತೆಯನ್ನು ಕುತೂಹಲವನ್ನು ಮತ್ತಷ್ಟು ಹುದುಗಿಸಿಕೊಂಡಿದೆ. ಈ ಎಲ್ಲ ಸೂಕ್ಷ್ಮಗಳನ್ನು ತುಳುವಿನ ಸಾಹಿತ್ಯದ ಪಠ್ಯಗಳು ಹಿಂಚಲನೆ ಮುಂಚಲನೆಯ ಮೂಲಕ ಎಲ್ಲ ಪ್ರಕ್ರಿಯೆಗಳನ್ನು ದಾಖಲಾಗಿಸಿವೆ.

**ಕೊನೆ ಟಿಪ್ಪಣಿ :೧** ನಿನ್ನೆ ಮೊನ್ನೆಯ ಬುರು ಬರು ಎಂದು ನೊರೆ ಬರುವ ಹಳಸಿದ ಪದಾರ್ಥ, ಮಿಜಿ, ಮಿಜಿ ಎಂದು ಹುಳು ಆದ ಉಪ್ಪಿನಕಾಯಿ ಕೊಡುತ್ತಿದ್ದರು. ಅವರ ಲೆಕ್ಕದಲ್ಲಿ ದಲಿತರು ಮನುಷ್ಯರೇ ಅಲ್ಲ

**ಕೊನೆ ಟಿಪ್ಪಣಿ :೨** ನಡು ಮಧ್ಯಾನ ಆಗುತ್ತ ಬರುವಾಗ ಸೂರಪ್ಪ ಗೌಡರ ಮನೆಯಿಂದ ಊಟ ತರುವುದು ಮಾಚುವಿನ ಮಾಮೂಲಿ ಕೆಲಸ. ಮಣ್ಣಿನ ಎರಡು ಪಾತ್ರೆಗಳನ್ನು ಸಣ್ಣ ಅರಿಯದ ಮೇಲೆ ಒಂದರ ಮೇಲೆ ಒಂದನ್ನಿಟ್ಟು ಸಣ್ಣ ತಟ್ಟೆಯನ್ನು ಇಟ್ಟು..... ಇಷ್ಟು ಸಿದ್ಧತೆಯಲ್ಲಿ ಹೊರಟಳೆಂದರೆ ಅದು ಗಂಜಿ ತರಲೆಂದೇ ಸಣ್ಣವರು ಇವಳು ಯಾವಾಗ ಗಂಜಿ ತರುತ್ತಾಳೆ ಎಂದು ಕಾದುಕೊಂಡು ಇರುತ್ತಾರೆ.

**ಕೊನೆ ಟಿಪ್ಪಣಿ : ೩** ಗಂಜಿ ತೆಗೆದುಕೊಂಡು ಬರುವಾಗ ಮಕ್ಕಳು ಗಂಜಿಗಾಗಿ ಕಾದುಕೊಂಡು ದಾರಿ ನೋಡುತ್ತ ಇರುತ್ತಾರೆ. ಬಾಗಿಲಲ್ಲೆ ನಿಂತ ಆಬ ಅವಳ ತಲೆಯಿಂದ ಬಿಸಲೆ ತೆಗೆದು ಊಟ ಮಾಡುವುದಕ್ಕಿಂತ ಮೊದಲೆ ಪಾತ್ರೆಗೆ ಎರಡು ಬಿಸಲೆ ಗಂಜಿಯನ್ನು ಹಾಕುತ್ತಾಳೆ. ನಂತರ ಅದರ ಸುತ್ತ ಇದ್ದ ಏಳು ಗದ್ದವಿಗೆ ಗೆರಟೆಯ ಸೌಟಿನಿಂದ ಬಡಿಸುತ್ತಾಳೆ. ಕಳಲನಿಗೆ ಮುರು ಸೌಟು, ಮಾಯ್ಲುವಿಗೆ ಎರಡು ಉಳಿದ ಎಲ್ಲರಿಗೂ ಒಂದೊಂದೇ ಸೌಟು. ಉಳಿದ ಗಂಜಿ ತೆಳಿಗೆ ಬೇರೆ ನೀರು ಸೇರಿಸಿ ಬೇಕಾದವರಿಗೆ ಬಡಿಸುತ್ತಾಳೆ. ಒಂದೊಂದು ಸೌಟು ಬಡಿಸುವ ಅಗಲದ ಗದ್ದವಿಗೂ ಸ್ವಲ್ಪ ಹೆಚ್ಚು ಇದ್ದದ್ದು ನಾರುಗೆ ಕಡಿಮೆ ಆಬ ತೆಗೆದುಕೊಳ್ಳುತ್ತಾಳೆ. ಕಳಲ ಅವನ ಪಾಲಿನಿಂದ ಒಂದು ಹಿಡಿ ಅನ್ನ ತೆಗೆದು ನಾಯಿಗೆ ತೆಗೆದಿಡುವ ಕ್ರಮ

**ಕೊನೆ ಟಿಪ್ಪಣಿ : ೪** ಹೊಟ್ಟೆಗೆ ಗಂಜಿ ಇಲ್ಲದ ಕಾಲ ಹಾಗಾಗಿ ಬದುಕಲು ಬೇರೆ ಬೇರೆ ದಾರಿ ಹುಡುಕುತ್ತ ಇದ್ದರು ಅದರಲ್ಲಿ ಒಂದು ಕುಮೆರಿ ಬೆಳೆಯಿಸುವುದು ಸುಳ್ಯದಾಚೆ ಊರು ಊರಿಗೆ ತಾಗಿಕೊಂಡು ಪೂಮಾಲೆ, ಬಂಟಮಲೆ, ಕೀಲಾರ್ ಮಲೆ, ನಿಡ್ಯ ಮಲೆ, ನೀರ್ಮಲೆ ಎಂದು ದೊಡ್ಡ ದೊಡ್ಡ ಕಾಡಿನ ಮಲೆಗಳು ಹೆಸರು ಇಲ್ಲದ ಸಣ್ಣ ಸಣ್ಣ ಕಾಡುಗಳಿಗೆ ಲೆಕ್ಕವೇ ಇಲ್ಲ. ಇಂತ ಕಾಡುಗಳ ನಡು ನಡುವೆ ಒಂದೊಂದು ಕಡೆಯಲ್ಲಿ ದೊಡ್ಡ ದೊಡ್ಡ ಮರಗಳಿಲ್ಲದ ಖಾಲಿ ಸ್ಥಳಗಳಿರುತ್ತದೆ. ಅಲ್ಲಿಯ ಕೆಳಗಿನ ಪೊದರು ಕಡಿದು ಒಣಗಿಸಿ, ಬೆಂಕಿಕೊಟ್ಟು, ಸಮತಟ್ಟುಗೊಳಿಸಿ ಅಲ್ಲಿ ಕುಮೆರಿ ಬೆಳೆ ಬೆಳೆಯುತ್ತ ಇದ್ದರು.

**ಕೊನೆ ಟಿಪ್ಪಣಿ :೫** ಆಗೆ ಕಳಲ ಮತ್ತು ಐದಾರು ಗುಡಿಸಲಿನವರು ಒಟ್ಟು ಸೇರಿ ವರ್ಷ ವರ್ಷ ಕುಮೆರಿ ಮಾಡಿಕೊಂಡಿದ್ದರು. ಸ್ವಚ್ಛವಾದ ಒಂದು ಬದಿಯಲ್ಲಿ ಇವರಿದ್ದರೆ ಇನ್ನೊಂದು ಬದಿ ಸರಕಾರಿ ಜಾಗ. ಅಲ್ಲಿ ಇವರು ತಮ್ಮ ಸಾಮರ್ಥ್ಯಕ್ಕನುಗುಣವಾಗಿ ಒಂದು ಮುಡಿ, ಎರಡು ಮುಡಿ ಅರ್ಧ ಮುಡಿ ಎಂದು ಎಷ್ಟು ಆಗುತ್ತದೋ ಅಷ್ಟು ಜಾಗದ ಕಾಡು ಕಡಿದು ಒಣಗಲು ಬಿಡುತ್ತಿದ್ದರು. ಆಮೇಲೆ ಬೆಂಕಿಕೊಟ್ಟು ಸಮತಟ್ಟುಮಾಡಿ ಹದಗೊಳಿಸುತ್ತ ಬೇಷ ತಿಂಗಳ ಹತ್ತು ಹದಿನೈದರ ಒಳಗಾಗಿ ಬೀಜ ಬಿತ್ತುತ್ತಿದ್ದರು. ಅಷ್ಟು ಹೊತ್ತಿಗೆ ಎರಡು ಮೂರು ಮಳೆಯೂ ಬರುತ್ತಿತ್ತು. ಬಿತ್ತುವುದೆಲ್ಲ ಸರಿಯೆ ಬಿತ್ತನೆ ಬೀಜ ಎಲ್ಲಿದೆ? ಇವರ ಕೆಲಸಗಳ ಅಂದಾಜು ಮಾಡುತ್ತ ಇದ್ದ ಆ ಊರಿನ ಸಾಹುಕಾರ, ಅಂಗಡಿ ವ್ಯಾಪಾರದ ಬ್ಯಾರಿ ಇವರಿಗೆ ಸಂತೆ ಸಾಮಾನು ಕೊಡುವ ಅಂಗಡಿಯವನು ಬಹಳ ಸಹಾಯ ಮಾಡುವವನಂತೆ. "ಬೀಜವನ್ನು ಬೇಕಾದರೆ ನಾನು ಕೇರಳದಿಂದ ತಂದುಕೊಡುತ್ತೇನೆ. ಆದರೆ ಕುಮೆರಿಯ ಭತ್ತವನ್ನೆಲ್ಲ ನನಗೇ ಕೊಡಬೇಕೆಂದು ಹೇಳುತ್ತಿದ್ದ. ಇವರಿಗೆ ಗತಿ ಇಲ್ಲ. ಅವನಿಗೆ ಮತಿ ಇಲ್ಲ ಎಂಬ ಗಾದೆಯ ಹಾಗೆ ಅವರು "ನಮ್ಮ ದೈವ ದೇವರಿಗೆ ಐದೈದು ಮುಡಿ ಭತ್ತ ಬಿಟ್ಟು ಉಳಿದದ್ದನ್ನು ಕೊಂಡು ಹೋಗಬಹುದು ಎಂದು ಒಪ್ಪಿಕೊಂಡಿದ್ದರು,

**ಕೊನೆ ಟಿಪ್ಪಣಿ ೬.** ಕುಮೆರಿ ಮಾಡುವವರು ಬರೀ ಭತ್ತ ಬಿತ್ತಿದರೆ ಅದು ಬ್ಯಾರಿಗೆ ಸಮ, ಅದಕ್ಕಾಗಿ ಅದರ ಒಟ್ಟಿಗೆ ರಾಗಿ, ಸಾಮೆ, ಜೋಳ ಮತ್ತು ಸುತ್ತ ಇರುವ ಎಲ್ಲಾ ಮರಗಳಿಗೆ ಬಳ್ಳಿಯಾಗುವ ಎಲ್ಲ ಬಗೆಯ ಬೀಜ ಬಿತ್ತಲು ಉಂಟು. ಸಮತಟ್ಟು ಮಾಡುವಾಗಲೇ ಕಾಡು ಕಡಿದು, ತರಗೆಲೆ ಉರಿಸಿ ಮಾಡಿದ ಸುಟ್ಟ ಮಣ್ಣು ಹೇಗೋ ಅಲ್ಲೇ ಉಂಟಲ್ಲ. ಹಾಕಿದ ಬೀಜ ಮೊಳೆತು ಮೇಲೆ ಮರ ಏರಿ ಗೊಂಚಲು ಗೊಂಚಲಾಗಿ ಮರವೇ ಬಳ್ಳಿಯನ್ನು ಹೊದೆದುಕೊಂಡಿದೆ ಎಂಬ ಹಾಗೆ ಲಕಲಕ ಹೊಳೆಯುವ ಬಳ್ಳಿಗಳ ಚೆಲುವು ನೋಡಬೇಕು. ಎಲೆ ಎಲೆಗೂ ಹೂ ಮುಡಿ ಕಾಯಿಯಾಗಿ ಬೆಳೆದುದರ ಹೊಟ್ಟೆ ತುಂಬಿದ ಹಾಗೆ ನೇತಾಡುತ್ತ, ಗಾಳಿಗೆ ತೂಗಾಡುತ್ತ ಇರುವುದನ್ನು ನೋಡುವುದೆ ಕಣ್ಣಿಗೆ ತುಂಬ ಚಂದದ ನೋಟ! ಯಾರಾದರೂ ಕಣ್ಣು ಮುಟ್ಟಿಸಬಹುದು ಎಂದು ಮಣ್ಣಿನ ಪಾತ್ರೆಗೆ ಸುಣ್ಣದ ಬೊಟ್ಟು ಇಟ್ಟು ಮರಕ್ಕೆ ನೇತು ಹಾಕುತ್ತಾರೆ.

ಕುಮೇರಿ ಬಿತ್ತುವುದಕ್ಕೂ ಒಂದು ಕ್ರಮ ಇದೆ. ಭತ್ತದ ಜತೆಗೆ ರಾಗಿ, ಜೋಳ ಸಾಮೆಯನ್ನು ಭತ್ತದ ಅರ್ಧದಷ್ಟು ಸೇರಿಸಿಕೊಳ್ಳಬೇಕು ಅಂದರೆ ಭತ್ತ ಒಂದು ಸೇರಾದರೆ ಉಳಿದದ್ದು ಮೂರು ಸೇರಿ ಅರ್ಧ ಸೇರು. ಈ ಲೆಕ್ಕದಲ್ಲಿ ಬೇಕಾದ ಬೀಜವನ್ನು ಮೊದಲೇ ಕಲಸಿ ಇಟ್ಟುಕೊಳ್ಳಬೇಕು. ಬಿತ್ತುವವನು ಅವನ ಹೊಟ್ಟೆಗೆ ಸುತ್ತಿಕೊಂಡ ಮಡಿಲಿನ ಬಟ್ಟೆಯಲ್ಲಿ ಕಲಸಿ ಇಟ್ಟ ಬೀಜಗಳನ್ನು ತುಂಬಿಕೊಂಡು ಕುಮೇರಿ ಗದ್ದೆಯಲ್ಲಿ ಕೈ ಬೀಸಿ ಬಿತ್ತಬೇಕು. ಬಿತ್ತುವವನಿಗೆ ಕೈ ಚಳಕ ಇದ್ದರೆ ಅದು ಒಂದೇ ಹದದಲ್ಲಿ ಹಂಚಿ ಬೀಳುತ್ತದೆ. ಅವನ ಹಿಂದೆಯೇ ಮೂರು ನಾಲ್ಕು ಜನ ಕೆಲಸದವರು ಪೈರು ಕೊಯ್ಯುವ ಕತ್ತಿಯಲ್ಲಿ ಮಣ್ಣನ್ನು ಪದರಗೊಳಿಸುತ್ತ ಹೋಗುತ್ತಾರೆ. ಬೀಜ ಮೊಳೆತು ಸಸಿಯಾಗುವಾಗ ಮಂದ ಸಸಿ ಇರುವಲ್ಲಿಂದ ತೆಗೆದು ತೆಳು ಇರುವಲ್ಲಿಗೆ ನೆಡುತ್ತಾರೆ

**ಕೊನೆ ಟಿಪ್ಪಣಿ : ೭** ಬೀಜ ಮೊಳೆಯಲು ಪುರುಸೊತ್ತು ಇಲ್ಲ. ಕಾಡುಹಂದಿ, ಮಂಗಗಳ, ಕಾಡು ಇಲಿ, ಕಾಡು ಹೆಗ್ಗಣ ಕಾಡೆಲ್ಲವೂ ನಮ್ಮದೇ ನೀವೇನು ಬಂದಿರಿ ಎಂದು ಕೇಳುವಂತೆ ಸಾಲು ಸಾಲುಗಟ್ಟಿ ಇರುಳು ಹಗಲೆನ್ನದೆ ಬರಲು ಸುರು ಮಾಡಿದವು. ಬೆಳೆದದ್ದು ಉಳಿಯಬೇಕಾದರೆ ನಾವು ಇಲ್ಲೇ ಇರಬೇಕೆಂದು ಅಟ್ಟಣಿಗೆ ಮಾಡಿ ಕುಮೇರಿ ಮಾಡಿದವರು ಅಲ್ಲಿಯೇ ಇರಲು ಶುರು ಮಾಡಿ ಇರುಳು ಹಗಲು ಎನ್ನದೆ ಕಾಯುತ್ತ ಇರುತ್ತಾರೆ.

**ಕೊನೆ ಟಿಪ್ಪಣಿ : ೮** ಕುಮೇರಿಯಲ್ಲಿ ಮೊದಲು ಭತ್ತದ ಬೆಳೆ ಕೊಯಿಲಾಗುತ್ತದೆ. ಉಳಿದದ್ದು ಬಳಿಕ ಭತ್ತ ಬೆಳೆ ಬಲಿತು ಅಡ್ಡ ಬೀಳುತ್ತದೆ ರಾಗಿ ಜೋಳ ಸಾಮೆಯ ದಂಟು ಗಟ್ಟಿ ಅದು ಅಡ್ಡ ಬೀಳುವುದು ಕಡಿಮೆ. ಹಾಗಾಗಿ ಭತ್ತದ ಬೆಳೆ ಒಕ್ಕಣೆ ಆದ ಬಳಿಕ ಉಳಿದದ್ದನ್ನು ಕೊಯ್ಯಲು ಶುರು ಮಾಡುತ್ತಾರೆ. ಅದನ್ನು ಕಟಾವು ಮಾಡಿ ಹಾಗೆಯೇ ಗೋಣಿ ಚೀಲಕ್ಕೆ ತುಂಬಿ ಗುಡಿಸಲಿಗೆ ತಂದು, ಅಲ್ಲಿ ದಂಟಿನಿಂದ ಬಿಡಿಸಿ ಒಣಗಿಸಿ ಹದಗೊಳಿಸುತ್ತಾರೆ. ಮರಕ್ಕೆ ಹಬ್ಬಿಸಿದ ಕುಂಬಳ, ಚೀನಿಕಾಯಿ, ಸೋರೆಕಾಯಿ, ದೊಡ್ಡ ಸೌತೆ, ಗರ್ಬಿಜ, ಎಲ್ಲಾ ಬೆಳೆದ ಹಾಗೆ ಕೊಯ್ದು ತಂದು ತೆಗೆದಿಡುತ್ತಾರೆ. ಕೊನೆಗೆ ಕುಮೇರಿ ಬಿಟ್ಟು ಹೋಗುವಾಗ ಪೊದರುಗಳಲ್ಲಿ ಇದ್ದ ಎಳೆಯ ಚಿಕ್ಕ ಚಿಕ್ಕ ಹೀಚು ಕಾಯಿಗಳನ್ನು ಕೊಯ್ದು ಹಿಡಕೊಂಡು ಹೋಗುತ್ತಾರೆ.

**ಕೊನೆ ಟಿಪ್ಪಣಿ :೯** ಮಾಚುವಿನ ಮನೆಯಲ್ಲಿ ಮಾಡುತ್ತಿದ್ದಂತೆ ಇಲ್ಲಿಯೂ ಕುಮೇರಿ ಬೆಳೆಯುತ್ತಾರೆ. ಇಲ್ಲಿ ರಾಗಿ, ಸಾಮೆ, ಜೋಳದೊಂದಿಗೆ ಮೂರು ವಿಧದ ಭತ್ತ ಬೆಳೆಸುತ್ತ ಇದ್ದರು. ಊಟಕ್ಕೆ ಅವಲಕ್ಕಿಗೆ ಮತ್ತು ಅರಳಿಗೆಂದು ಬೇರೆ ಬೇರೆಯೇ ಬಿತ್ತನೆ ಮಾಡುತ್ತಿದ್ದರು. ಅವಲಕ್ಕಿ ಮತ್ತು ಅರಳಿಗೆ ಸ್ವಲ್ಪ ಸ್ವಲ್ಪ ಬಿತ್ತಿ ಎಲುಂಬನವರಲ್ಲಿ ಭೂತದ ಚಾಕಿರಿಗೆ ಮನೆಯ ಭತ್ತದ ಅವಲಕ್ಕಿಯೇ ಆಗಬೇಕು. ಭೂತಗಳಿಗೆ ಬಡಿಸುವ ಹಿಂದಿನ ದಿನದಂದು ಎರಡು ಸೇರು ಎಣೆಲಿನ ಭತ್ತವನ್ನು ಒಲೆಯಲ್ಲಿಟ್ಟು ಬಿಸಿ ನೀರಿಗೆ ಹಾಕಿ, ಅದರ ಸಿಪ್ಪೆಯ ಬಣ್ಣ ಬದಲಾಗುವ ಹಾಗೆ ಹನ್ನೆರಡು ಗಂಟೆ ನೆನೆ ಹಾಕುತ್ತಾರೆ. ಮತ್ತೆ ಅದಕ್ಕೆ ತಣ್ಣೀರು ಹಾಕುತ್ತಾರೆ. ಆಗ ಭತ್ತ ಕೆಂಪಾಗಿ ಉರುಟು ಆಗುತ್ತದೆ. ಅದನ್ನು ಬಿಸಿ ಬಿಸಿ ಇರುವಾಗಲೇ ಮರದ ಬುಟ್ಟಿಗೆ ಸುರಿದು ಒನಕೆಯಿಂದ ಎರಡು ಜನ ಕುಟ್ಟುತ್ತಾರೆ. ಮೊದಲು ಒಂದು ಕಲ್ಲಿನ ಹೊಂಡಕ್ಕೆ ಹಾಕಿ ಇಬ್ಬರು ಕುಟ್ಟಬೇಕು ಒಮ್ಮೆಯ ಭತ್ತದ ಸಿಪ್ಪೆ ಹೋದ ಮೇಲೆ ಇನ್ನೊಂದು ಕಲ್ಲಿನ ಹೊಂಡಕ್ಕೆ ಹಾಕಿ ಕುಟ್ಟಬೇಕು. ಭೂತಕ್ಕೆ ಬಳಸುವ ಭತ್ತವನ್ನು ಸೂತಕದ ಹೆಣ್ಣು ಮಕ್ಕಳು ಕುಟ್ಟುವುದು ಬಿಡಿ, ಮುಟ್ಟುವುದು ಇಲ್ಲ.

**ಕೊನೆ ಟಿಪ್ಪಣಿ : ೧೦** ಹಾಗಾದರೆ ನಮ್ಮ ಜಾತಿ ಕಟ್ಟಿನಂತ ಲೆಕ್ಕದ ಭತ್ತ ತರುವುದು ಎಂದಿದೆಯಲ್ಲ... ಯಾವಾಗ ಲೆಕ್ಕದ ಭತ್ತ ತರುವುದು.

**ಕೊನೆ ಟಿಪ್ಪಣಿ : ೧೧** ಕುಳಿತು ಮಾತನಾಡಿ ಅವರವರಿಗೆ ಹೆಣ್ಣು ಗಂಡು ಸಂಬಂಧ ಆಗಬಹುದು ಎಂದಾದರೆ ಗಂಡಿನ ಕಡೆಯವರು ಭತ್ತ ಅಳೆಯಲು ಎಂದರೆ ನಿಶ್ಚಿತಾರ್ಥಕ್ಕೆ ಬರುವ ಕ್ರಮ, ಹಾಗೆ ಬರುವಾಗ ಭತ್ತವಾದರೆ ಐದು ಮುಡಿ, ಅಕ್ಕಿ ಆದರೆ ಎರಡುವರೆ ಮುಡಿ ತರಬೇಕು. ಒಂದು ಮುಡಿ ಆದರೂ ಮದುಮಗ ಹುಡುಗನೇ ಹೊತ್ತುಕೊಂಡು ಬರಬೇಕು. ಹೆಣ್ಣಿನ ಮನೆಯಲ್ಲಿ ಮೂರು ಸೇರಾದರೂ ಅಳೆಯಬೇಕು.

**ಕೊನೆ ಟಿಪ್ಪಣಿ ೧೨** ತುಂಬು ಗದ್ದೆ ಇರುವವರಿಗೆ ಕೊಯಿಲು ಎಂದರೆ ಕೊಯ್ಯುವವರಿಗೆ ಒಂದು ಹಬ್ಬವೇ. ಮಾತನಾಡುತ್ತ, ನಗುತ್ತ, ಪಾಡ್ದನ ಹಾಡುತ್ತ ಕೊಯ್ಯುವ, ಒಂದು ಎರಡು ಎಂದು ಪೊಲಿ ಕೂಗುವ – ಅವು ಒಂದು ದೇವರಪೂಜೆಯೇ. ಕೆಲಸವೇ ಆದರೂ ಅದರಲ್ಲೊಂದು ಗಮ್ಮತ್ತು ಇರುತ್ತಿತ್ತು. ಪಡಿಮಂಚಕ್ಕೆ ಹೊಡೆದು ಪಡಿಮಣೆಗೆ ಮುಟ್ಟುವಷ್ಟು ಭತ್ತ ಆದಾಗ, ಪಡಿಮಂಚದ ಜಾಗ ಬದಲಾಯಿಸಬೇಕು. ಎಷ್ಟು ಬಾರಿ ಬದಲಿಸಿದರೋ ಕೊಯ್ಯುವವರಿಗೆ ಅಷ್ಟು ಖುಶಿ, ಅವರಿಗೂ ಕೂಲಿಯ ಪಾಲು ಜಾಸ್ತಿ ಆಗುತ್ತದೆಂದು.

ಪಡಿಮಂಚಕ್ಕೆ ಹೊಡೆದು ಒಳ್ಳೆಯ ಭತ್ತ ಮತ್ತು ಜಳ್ಳನ್ನು ಬೇರೆ ಮಾಡಿ ರಾಶಿ ಮಾಡಿದ ಮೇಲೆ ಅಳೆಯುತ್ತಾರೆ. ಹತ್ತು ಕಳಸೆ ಅಳೆದು ಆದ ಮೇಲೆ ಒಂದು ಕಳಸೆಯನ್ನು ಬೇರೆ ಹಾಕುತ್ತಾರೆ. ಅದು ಕೆಲಸದವರ ಪಾಲು. ಕೊಯ್ಲಿಗೆ ಸಿಗುವ ಈ ಭತ್ತವನ್ನು ಕೊಯ್ಲು ಭತ್ತ ಎಂದು ಕರೆಯುತ್ತಾರೆ. ಹತ್ತು ಹತ್ತಾಗಿ ಅಳತೆ ಮಾಡಿ ಉಳಿದ ಭತ್ತವನ್ನು ಅಳೆಯುವವರು ರಾಶಿ ಮಾಡಿ ತನ್ನ ಎರಡು ಮೊಣಕಾಲಿನಿಂದ ಹಿಡಿದು ಬೆರಳ ತನಕ ಕೈಗಳನ್ನು ರಾಶಿಯ ಒಳಗೆ ಹಾಕಿ ಅದರಲ್ಲಿ ಎಷ್ಟು ತೆಗೆಯಲು ಆಗುತ್ತದೋ ಅದನ್ನು ಅಲ್ಲಿಂದ ಒಮ್ಮೆಲೆ ಹಾರಿಸುತ್ತಾರೆ. ಅದು ಒಂದು ಗೆರಸೆಗೆ ಬೀಳುತ್ತದೆ. ಮತ್ತೆ ಅದನ್ನು ಕೆಲಸದವರಿಗೆ ಹಂಚುತ್ತಾರೆ. ಇದನ್ನು ಅಡಿಮಣೆ ಪೊಲಿ ಅಲ್ಲದಿದ್ದರೆ 'ರಕ್ತದ ಕೂಲಿ'ಎಂದು ಹೇಳುತ್ತಾರೆ.

**ಕೊನೆ ಟಿಪ್ಪಣಿ : ೧೩** ಈ ದೆಯ್ಯು ಮಿತ್ತ ಬೈಲಿನ ಮೂಲದವರಲ್ಲಿ ಬದುಕಿ ಉಳಿದ ಹಳೆ ತಲೆಗಳಲ್ಲಿ ಒಬ್ಬ...ಸಾಗುವಳಿಯ ಕೆಲಸದ ಜವಾಬ್ದಾರಿಯೂ ದೆಯ್ಯುವಿನದೇ ಅವನಲ್ಲೊ ಕೇಳದೆ ಹೇಳದೆ ಕೃಷಿಯ ಯಾವ ಕೆಲಸವೂ ನಡೆಯದು. ಮಿತ್ತಬೈಲಿಗೆ ಎರಡನೇ ಗುರಿಕಾರ ಎಂದು ಯಾರಾದರೂ ಇದ್ದಾರೆ ಅದು ದೆಯ್ಯುವೆಂದೇ ಹೇಳಬಹುದು... ಗಿಡ್ಡ ಆಗಿ ದುಡಿದು ಕಲ್ಲಾದ ದೇಹ ಗಟ್ಟಿ ಮುಟ್ಟಿನದು. ಕೋಳ್ಯೂರು ಪೈವಳಿಕೆ ಸೀಮೆಯಲ್ಲಿ ಮಿತ್ತ ಬೈಲಿನ ಈ ಮೂಲದ (ಆದಿ) ಮುಗೇರರು ಹೆಸರು ಹೋದವರು. ಮಿತ್ತ ಬೈಲು ಗುತ್ತಿನ ಮಾನ ಮರ್ಯಾದೆ ಎಂದು ಹೇಳಿದರೆ ಅವರೇ

**ಕೊನೆ ಟಿಪ್ಪಣಿ : ೧೪** ಸಾಗುವಳಿ ಕಳೆದು ಗುಡ್ಡ ಅಗೆದು ಹೊಸ ಗದ್ದೆ ಮಾಡಿದರು. ಬೈಲಿನ ಮೂಲೆಯಲ್ಲಿ ಹರಿದು ಹೋಗುವ ಸಣ್ಣ ಕಾಲುವೆಗೆ ಅಡ್ಡ ಅಡ್ಡ ಕಟ್ಟಿ ಬೆಟ್ಟು ಗದ್ದೆಗಳಿಗೆ ನೀರು ಹಾಯಿಸಿ ಸುಗ್ಗಿಯ ಸಾಗುವಳಿ ಮಾಡಿದರು. ಎದುರಿನ ಭಟ್ರ ಹಾಳೆ ಬೈಲಿನ ಗದ್ದೆಯನ್ನು ಅಗೆದು ದೊಡ್ಡದು ಮಾಡಿದರು. ಅದನ್ನು ಪೂಕರೆಯ ಗದ್ದೆ ಎಂದು ಹೇಳಿಕೊಂಡರು. ಪೂಕರೆಯ ಗದ್ದೆ ಬಾಕಿ ಮಾರ ಗದ್ದೆ ಆಯಿತು. ಬಾಕಿಮಾರ ಗದ್ದೆ ಮುಂದೆ ಕಂಬಳದ ಗದ್ದೆ ಆಯಿತು. ಕೆಲವು ವರ್ಷ ಕಳೆದಾಗ ಅದೇ ಗದ್ದೆ ಮೂರು ಮುಡಿ ಅತಿಕಾರ ಭತ್ತ ಬಿತ್ತುವ ಗದ್ದೆ ಆಯಿತು.

**ಕೊನೆ ಟಿಪ್ಪಣಿ : ೧೫** ಕಾಡು ಕಡಿದು ತೋಟ ಮಾಡುವ, ಗುಡ್ಡ ಅಗೆದು ಬೆಟ್ಟು ಗದ್ದೆ, ಅಡ್ಕ ಅಗೆದು ಸುಗ್ಗಿಯ ಭೂಮಿ ಮಾಡುವ, ಬೆಟ್ಟು ಗದ್ದೆಯನ್ನು ಬೈಲುಗದ್ದೆ ಮಾಡುವ ಕೆಲಸವೆಲ್ಲ ಕಿನ್ಯನದು. ಮಾಡಿದ ಭೂಮಿಯಲ್ಲಿ ಮೂರು ಬೆಳೆ ಎರಡು ಬೆಳೆ, ಬೆಟ್ಟಿನ ಬೆಳೆ ತೆಗೆಯುವ ಕೆಲಸ ತನ್ನದೆಂದು ಹೇಳಿದನು.

**ಕೊನೆ ಟಿಪ್ಪಣಿ : ೧೬**

ಉತ್ತರ ದಿಕ್ಕಿನಲ್ಲಿ ಊರು ಉಂಟೊಂದಲ್ಲಿ
ಗದ್ದೆಗಿಂತ ಕಾಡು ಹೆಚ್ಚು ಕುಡಿಯರ ಪಡೆ ಹೆಚ್ಚು
ಒಂದು ಕಾಡಿನ ಬದಿಯಲ್ಲಿ ಪುಂಡಿಕೇನೆ (ಸುವರ್ಣ ಗಡ್ಡೆ) ಯ ಬುಡಗಳು
ಅಡ್ಕ ಬಾರೆಯ ಪೊದರುಗಳು ಗೋ ಮಾಳದ ಹರಹು
ತನ್ನೆ ತೋಡು(ಸಪೂರ ಕಾಲುವೆ) ವಿನ ದಂಡೆಯಲ್ಲಿ ಕೆಂಪುಕಲ್ಲಿನ ಚಿಕ್ಕ ಕಲ್ಲು
ಮೊಣಕಾಲಿನೆತ್ತರಕೆ ಕಟ್ಟಿದ ತಡೆಗೋಡೆಗೆ ಕಟ್ಟಿದ ತಡಮೆ (ದಾಟು ಹಾದಿ)
ಗೆ ಕಾಡಿನ ಬಳ್ಳಿಗಳಿಂದ ಹೆಣೆದ ಪಡಿಯನ್ನು ಸಿಕ್ಕಿಸಿ
ಮನೆಯೊಳಗಿನ ಅಂಗಳದ ಒಂದು ಮೂಲೆಯಲ್ಲಿ ಕಾಟು
ಹೀರೆಕಾಯಿ, ಕಾರೋಳುಕಾಯಿ, ಬಸಳೆಯ ಚಪ್ಪರ ಈ ಬದಿಯಲ್ಲಿ
ಹರಿವೆಯ ಕಳ, ರಚ್ಚೆವಿನ ಗೆಡ್ಡೆ ಪಕಳದ ಹಚ್ಚ
ಹಸುರಿನ ಹೂಜಿಗಳನ್ನು ನೇರ ನಿಲ್ಲಿಸಿದ ಹಾಗೆ
ಹಣ್ಣು ಕಾಯಿಗಳು ಗೆಜ್ಜೆ ಕಟ್ಟಿದ ಹಾಗೆ ತುಂಬಿದ
ಜೀರಿಗೆ ಮೆಣಸಿನ ಗಿಡಗಳು.....

**ಕೊನೆ ಟಿಪ್ಪಣಿ : ೧೭**

ಮೂಲೆ ಜಗಲಿಯಲ್ಲಿ ಹಿಂದಿನ ದಿನ ತಂದ ಕೊಡ
ಕನಿತ (ಉರಿ ಹಚ್ಚಿ ಮಾಡಿ) ಕವಚಿ ಹಾಕಿ ಇಟ್ಟುದ್ದನ್ನು ತೆಗೆದು
ತನ್ನೆ (ಸಣ್ಣ) ತೋಡುವಿಗೆ ಇಳಿದು ತೆಗೆದು ಹಳ್ಳದಲ್ಲಿ ಮುಳುಗಿ
ತುಂಬಿದ ನೀರಲ್ಲಿ ತೇಲುತ್ತಿರುವ ಕಸ ತೆಗೆಯಲು ಕೊಡ
ಅಚೀಚೆ ಅಲುಗಾಡಿಸಿ ಬದಿಗೆ ಸರಿಸಿ ಮುಳುಗಿಸಿ
ತುಂಬಿದ ಕೊಡವನ್ನು ಹೆಗಲಿಗೇರಿಸಿ ತಂದು
ಸೊಂಟ ಮಟ್ಟಕ್ಕೆ ಇಳಿಸಿ ಚಪ್ಪರ ತುಂಬಿದ  ಬಸಳೆ
ಗೊಮ್ಮೆ ಸುರಿದು, ಇನ್ನೊಮ್ಮೆ ತಂದು ಹರಿವೆ ಕಳಕ್ಕೆ ಹೊಯ್ಯುವಾಗ
ಕೊಡದ ಬಾಯಿ ಅಗಲಿಸಿ ಕೈ ತಟ್ಟು ಬೆರಳುಗಳನ್ನು
ಚರಿಸಿ ನೀರು ಚಿಮುಕಿಸಿ ಇನ್ನೊಮ್ಮೆ ತಂದನು)

**ಕೊನೆ ಟಿಪ್ಪಣಿ : ೧೮**

ತಲೆಗೆ ಮುಟ್ಟಳೆ ಇಟ್ಟು ತುಂಡು ಬಟ್ಟೆ ಸೊಂಟಕ್ಕೆ
ಎಳೆದು ಕಟ್ಟಿ ಕಟ್ಟದಲ್ಲಿ ತುಂಬಿದ ನೀರನ್ನು
ಅಲ್ಲಲ್ಲಿ ಹಾಕಿದ ಪಣೆ, ಕೈದಂಬೆಗಳಲ್ಲಿ ಮಗುಚಿ
ಹಾರಿಸುವ ಜನರು, ಮಣ್ಣಳ್ಳಿ ಮುಳುಗಿ ದುಡಿಯುವ
ರೈತರು, ಕೆಲವರು ರಾಶಿ ಹಾಕಿದ ತರಗೆಲೆಯನ್ನು
ಕುಕ್ಕಿಲಲ್ಲಿ ತುಂಬ ತುಂಬಿಸಿ ತರುವವರು, ಆಚೆಯಿಂದ
ದನ ಕರು ಮೇಯಿಸುವ ಮಕ್ಕಳು ಹೀಗೆ
ಯಾರಾದರೂ ಒಂದೊಂದು ಕೆಲಸದಲ್ಲಿರುವವರಲ್ಲದೆ
ಕೆಲಸವಿಲ್ಲದವರಾರು ಇಲ್ಲ

**ಕೊನೆ ಟಿಪ್ಪಣಿ : ೧೯** ತುಳುನಾಡಿನಲ್ಲಿ ವರ್ಷಾವದಿ ನೇಮ, ಕೋಲ, ಅಗೆಲು, ಪಸರ್ನೆ, ಬಂಡಿ ಜಾಲಾಟ, ನಾಗಮಂಡಲ..... ನಡೆಯುತ್ತಾ ಹೇಳಿದ ಹರಕೆಗಳು ಸಂದಾಯವಾಗುತ್ತಿವೆ. ನಾಲ್ಕು ದಿಕ್ಕಿನಿಂದಲೂ ತೆಂಬಡೆ, ತೆಂಬರೆ, ದೋಲು, ದಕ್ಕೆ, ವಾದ್ಯ, ಬ್ಯಾಂಡ್, ಗರ್ನಾಲಿದ್ದೇ ಗದ್ದಲ. ಭೂತ ದೈವಗಳು ಭಯಂಕರ ಚುರುಕಿನಿಂದ ಭಕ್ತರು ಕರೆದಲ್ಲಿ ಕರೆದಾಗ ಒಸಯೊ ಆಗಿ ಕುಟುಂಬವನ್ನು ಸರಿಯಾಗಿ ಊರನ್ನು ಮದುಮಗಳಂತೆ ಕಾಯುತ್ತೇವೆ ಎಂದು ಅಬಯ ಕೊಡುತ್ತಾರೆ. ಭಕ್ತಿಯಿಂದ ಕೊಡುವ ಕುರಿ, ಕೋಳಿ, ಆಡುಗಳು ರಕ್ತದ ಒಕುಳಿಯಲ್ಲಿ ಮುಳುಗುತ್ತವೆ.  ಅರೆ ಬೇಷದಲ್ಲೇ ಆಕಾಶದಲ್ಲಿ ಮೋಡ ಕವಿದಿದೆ.

**ಕೊನೆ ಟಿಪ್ಪಣಿ :೨೦** ಮಾಯವನ್ನು ತಿಳಿದುಕೊಳ್ಳುವುದರಲ್ಲಿ ಕಲಿತವರಿಗಿಂತ ಕಲಿಯದವರು ಭಯ ಭಕ್ತಿ ಆಗಬಹುದು ಒಂದು ಹೇಳುತ್ತೇನೆ ದೂಪ ದೀಪದ ಅಬ್ಬರದಿಂದ ನಮಸ್ಕರಿಸುವುದು ಮನೆಯಲ್ಲಿ ಮಂಟಪದಲ್ಲಿ ಕೂರಿಸಿದ ದೇವರಿಗೆ, ಮಾಯದ ಭೂತ ಒಸಯೊ ಆಗಬೇಕಾದರೆ ಕಟ್ಟು ಕಟ್ಟಳೆ ತಪ್ಪಬಾರದು. ಪನಿಯಾರಕ್ಕೆ ಭೂತ ಆಸೆ ಬಿಡುವುದಿಲ್ಲ. ಆರಾಧನೆ ಕೊಟ್ಟರೆ ಅಭಯ ಕೊಡುತ್ತದೆ. ನಿಮಗೆ ಪೂಜೆಗೀಜೆಯ ಕಷ್ಟ ಯಾಕೆ? ಮರದಡಿಯಲ್ಲಿ ಬೆಳೆದ ಮುಳ್ಳು ಪೊದರು ಹಾಗೆಯೇ ಬೆಳೆಯಲಿ... ಆದರೆ ನಾನೊಂದು ಯತಾರ್ಥ ಹೇಳುತ್ತೇನೆ. ಮರದಡಿಯ ಲೆಕ್ಕೆಸಿರಿ ಬಹಳ ಬಿಗುವಿನದ್ದು, ಹೆಚ್ಚು ಕಡಿಮೆಯಾದರೆ ನಾನೇನೂ ತಿಳಿಯೆ. ನಿಮ್ಮ ಜಾಗದಲ್ಲಿ ನಾಗ ನಡೆಯೂ ಇದೆ. ನಾಗನಿಗೆ ನಡೆದುಕೊಳ್ಳಗಿದ್ದರೆ ಕಣ್ಣು ಕಾಲಿಗೆ ಕೇಡು ನಾನು ಹೇಳಿದರೆ ಸುಲಭದಲ್ಲೇ  ತೆಗೆಯುತ್ತೀರಿ. ನಿಮ್ಮ ಹತ್ತಿರದ ತಂತ್ರಿಯವರಲ್ಲಿ ಕೇಳಿ ಅವರ ಮಾತಾದರೂ ನಿಮ್ಮ ಕಿವಿಗೆ ಬೀಳಲಿ

**ಕೊನೆ ಟಿಪ್ಪಣಿ ; ೨೧** ಪಟೇಲರ ಮನೆಯಲ್ಲು ಅಜ್ಜರ ಕಾಲದಿಂದ ಸಂಪತ್ತಿನ ಭಂಡಾರವೇ ಬರುವ ಉಷ್ಣುವಳಿಗೆ ಲೆಕ್ಕ ಇಲ್ಲ. ತಂದೆಯ ಕಾಲದಿಂದಲೂ ಅದು ಕಡಿಮೆಯಾದರೂ ತಿಳಿಯಲಿಲ್ಲ. ಅವರು ತೀರಿ ಹೋದ ಬಳಿಕ ತಾಯಿಗೆ ಕಣ್ಣು ಕಾಣದೆ ಮೂಲೆಗೆ ಸೇರಿದ ಬಳಿಕ ಒಕ್ಕಲಿನವರು ಕೊಟ್ಟದ್ದನ್ನು ತೆಗೆದುಕೊಳ್ಳುವುದು ಹೆದರಿಸಿ ಯಾರನ್ನಾದರೂ ವಸೂಲಿ ಮಾಡುವ ಕಾರ್ಯ ಮೊಮ್ಮಗನಲ್ಲಿ ಇಲ್ಲವಾಯಿತು. ಬಾಯಿಯಲ್ಲಿ ಹೇಳಿದ್ದನ್ನು ಒಪ್ಪಿಕೊಳ್ಳುವುದಲ್ಲದೆ ನಿಜವನ್ನು ಅರಿಯಲು ಹೋಗುವುದಿಲ್ಲ. ಹಾಗೆ ಒಕ್ಕಲಿನವರ ಬಾಯಿಯಲ್ಲಿ ಯಾವಾಗಲೂ ನೇಜಿಗೆ ರೋಗ ಧಾನ್ಯಕ್ಕೆ ರೋಗ, ಇಲಿಗಳ ಕಾಟ, ಮಂಗನ ತೊಂದರೆ ಇಂತವುಗಳೇ

**ಕೊನೆ ಟಿಪ್ಪಣಿ : ೨೨** ಈ ಕಷ್ಟ ನಷ್ಟದ ಮಾತುಗಳು ವರುಷದಿಂದ ವರುಷಕ್ಕೆ ಒಂದು ಹೋಗಿ ಎರಡಾಯಿತು... ಒಟ್ಟಾರೆಯಲ್ಲಿ ಪಟೇಲರಿಗೆ ಒಳಗಿಂದೊಳಗೆ ಆಯಾಸವಾಗಿತ್ತು. ಅದರೆ ಊರಲ್ಲಿ ಪಟೆಲರ ಮೊಮ್ಮಗ ಒಳ್ಳೆಯ ಮನುಷ್ಯ ಎನ್ನುವ ಹೊಗಳಿಕೆ ಹರಡಿತು.

**ಕೊನೆ ಟಿಪ್ಪಣಿ : ೨೩** ಮಕ್ಕಳು ನೆಂಟರು ಎಲ್ಲ ಬೇಗ ಬೇಗ ಸ್ನಾನ ಮಾಡಿ ಚಾವಡಿಯ ಹೊರಗೆ ಹಾಕಿದ ಚಪ್ಪರದಲ್ಲಿ ತಯಾರದರು. ಗುತ್ತಿನಾರು ಗದ್ದೆಯಿಂದ ಬಂದು ಗುಂಡದ ಮಂಚದಲ್ಲಿದ್ದ , ದೈವದ ಮುಗ ಮಣಿ ಕಡ್ತಲೆಗಳಿಗೆ ಕೇಪುಳ ಹಿಂಗಾರದ ಸಿಂಗಾರ ಮಾಡಿ ಗಂಧದ ದೂಪ ಎತ್ತಿದರು. ಅಲ್ಲಿಂದ ಬಂದು ಚಾವಡಿಯಲ್ಲಿ ಕಣಿ ಇಡಲು ತಯಾರಾಗುವಾಗ ಬಿಸುವಿನ ಬೋಣಿಗೆ ಎರಡು ಸಾಲು ಉಳಲು ಹೋದ ಶೃಂಗಾರ ಮಾಡಿದ ಕೋಣಗಳು ಬಂದವು. ಸಣ್ಣ ಮಾವ ಮುಂಡಾಸು ಕಟ್ಟಿ ಎರಡು ಕೋಣಗಳಿಗೆ ಹಣ್ಣು ಅವಲಕ್ಕಿ ಬೆರೆಸಿದ ಆಹಾರವನ್ನು ಅಂಗಳದಲ್ಲಿ ಕೊಟ್ಟರು. ಚಾವಡಿಯಲ್ಲಿ ಕಣಿ ತಯಾರಾಯಿತು.

**ಕೊನೆ ಟಿಪ್ಪಣಿ : ೨೪** ಅಂಗಳದ ಭೂತದ ಕೊಟ್ಯದ ಮುಂದೆ ಎಲ್ಲಾ ತರಕಾರಿಗಳನ್ನು ಇಟ್ಟು ಬಂಗಾರದ ಹಣದ ಪಾತ್ರೆಗಳನ್ನು ಇಟ್ಟರು. ತಂಬಿಗೆಯ ನೀರು, ಅ ನೀರಿಗೆ ತಂಬಿಗೆಯ ಮೇಲೊಂದು ಹೊಸ ಬಟ್ಟೆ ತುದಿ ಎಲೆಯಲ್ಲಿ ಸ್ವಲ್ಪ ಬೆಳ್ತಿಗೆ ಅಕ್ಕಿ, ಪಕ್ಕದಲ್ಲಿ ತೆಂಗಿನಕಾಯಿ, ಅಡಿಕೆ, ಸುತ್ತ ಪರಿಮಳದ ಮಲ್ಲಿಗೆಯ ಮಾಲೆಯಿಟ್ಟು, ಒಂದು ಕಳಶ ಕನ್ನಡಿ ಇಟ್ಟು ಗುತ್ತಿನಾರು ಕಣಿಗೆ ಅಡ್ಡ ಬಿದ್ದರು. ಆ ಹೊಸ ದಿನದಂದು ಮನೆಯ ಧನ ಧಾನ್ಯದ ಸಂಪತ್ತನ್ನು ಪೂಜೆ ಮಾಡುವುದೇ ಬಿಸುವಿನ ಕಣಿಯ ಪೂಜೆ. ಒಕ್ಕಲಿನವರಿಗೆ ಧಣಿಗಳ ಮನೆಯ ಕಣಿಯ ಸಂಪತ್ತು ಸೌಭಾಗ್ಯಕ್ಕೆ ಅಡ್ಡ ಬಿದ್ದು ಅವರ ಭಾಗ್ಯ ಹೆಚ್ಚಿಗೆ ಅಗಲಿ ಎಂದು ಕೈ ಮುಗಿದು ಅಡ್ಡ ಬೀಳುವುದೇ ಸೌಭಾಗ್ಯ.

ಮನೆಯ ಸಣ್ಣವರು ಎಲ್ಲರು ಭೂತದ ಗುಂಡಕ್ಕೆ ಕೈ ಮುಗಿದ್ ಚಾವಡಿಗೆ ಬಂದು ಗುತ್ತಿನಾರ ಕಾಲು ಮುಟ್ಟಿ ನಮಸ್ಕರಿಸಿದರು. ಗುತ್ತಿನಾರು ಎಲ್ಲರಿಗೂ ತುಂಬಾ ವರ್ಷ ಬದುಕಿ ಸುಖದಲ್ಲಿ ಬಾಳಿ ಎಂದು ಆಶೀರ್ವಾದ ಕೊಟ್ಟರು ಒಟ್ಟಿಗೆ ದೊಡ್ಡವರಿಗೆ ಒಂದು ವರಹ, ಮಕ್ಕಳಿಗೆ ಅರ್ಧ ವರಹ, ಒಕ್ಕಲು ಮಕ್ಕಲಿಗೆ ಒಂದೊಂದು ಬೆಳ್ಳಿ ರೂಪಾಯಿ ಕೊಟ್ಟು ಕಳುಹಿಸಿದರು.

ಒಕ್ಕಲಿನವರು ಚಪ್ಪರದಲ್ಲಿ ಬುಳೆ ಕಾಣಿಕೆಯನ್ನು ಇಟ್ಟು ಅವರ ಸಂಸಾರ ಸಮೇತ ಮಲರಾಯನಿಗೆ ಅಡ್ಡ ಬಿದ್ದು ಕಣಿಗೆ ಕೈ ಮುಗಿದು ಗುತ್ತಿನಾರಿಗೆ ಕಾಲು ಮುಟ್ಟಿ ನಮಸ್ಕರಿಸಿದರು. ಗುತ್ತಿನಾರ್ ಅವರ ಸುಖ ದುಃಖ ವಿಚಾರಿಸಿ ಮನೆಯ ಕೊಟ್ಟಾರಿಯ ಬಳಿ ಕಳುಹಿಸುತ್ತಾರೆ. ಗೇಣಿಯಲ್ಲಿ ಗದ್ದೆ ತಪ್ಪಿಸುವವರಿಗೆ ಒಕ್ಕಲು ಎಬ್ಬಿಸುವ , ಬಡವರಿಗೆ ಗೇಣಿ ಮನ್ನಾ ಮಾಡುವ ಎಲ್ಲಾ ಮುಗಿಸಿ ಗುತ್ತಿನಾರು ಚಾವಡಿಯಿಂದ ಚಪ್ಪರಕ್ಕೆ ಬಂದರು. ಚಪ್ಪರದಲ್ಲಿ ರಾಶಿ ಬಿದ್ದ ಬೆಳೆ ಕಾಣಿಕೆಗಳನ್ನು ನೋಡಿ ಅವತ್ತು ಬಂದ ಅಂಕದ ಕೋಳಿಯ ರೆಕ್ಕೆಗಳನ್ನು ಸವರಿ ಒಬ್ಬೊಬ್ಬರನ್ನೇ ಮಾತಾಡಿಸಿ ಅವರೆಲ್ಲರನ್ನು ಊಟಕ್ಕೆ ಎಬ್ಬಿಸಿದರು

**ಕೊನೆ ಟಿಪ್ಪಣಿ : ೨೫** ಚೀನೀ ಕಾಯಿ ಕುಂಬಳಕಾಯಿ, ಅಕ್ಕಿ ಮುಡಿಗಳ ರಾಶಿ, ಓಲೆ ಬೆಲ್ಲ ಕಟ್ಟಗಳು, ಮಣ್ಣಿನ ಕಡ್ಯ ತುಂಬ ಗಾಣದೆಣ್ಣೆ, ಅವಲಕ್ಕಿ ಗೋಣಿ, ಕತ್ತಿ ಹಾರೆ ಹೀಗೆ ಒಕ್ಕಲಿನವರ ಬೆಳೆ ಕಾಣಿಕೆ ಆಯಾಯ ಕಸುಬಿನ ಕಾಣಿಕೆಯೂ ಆಗಿತ್ತು. ಶ್ಯಾನುಭೋಗರ ಕೆಲಸ ನಡೆದುಕೊಂಡೇ ಇತ್ತು. ಹಳೆ ಗೇಣಿಯ ಲೆಕ್ಕ ಆಗಿ ಹೊಸ ವರುಷದ ಗೇಣಿ ನಿಗದಿಯಾಗಿ ಒಕ್ಕಲಿನವರು ಹೋಗಬೇಕಿತ್ತು. ಅದು ಮುಗಿಯುವಾಗ ಸಂಜೆಯಾಯಿತು.

**ಕೊನೆ ಟಿಪ್ಪಣಿ : ೨೬** ಮಂಜೇಶ್ವರದ ಜೈನ ಶೆಟ್ಟಿಗಳು ಕೊಂಕಣಿಗರಾದ ಬಂಡಾರಿ ಮಠದ ಬಂಡಾರಿಗಳು ಶಾನುಭೋಗರು ಭಕ್ತರ ಮಠದ ಭಕ್ತರು, ಮಣಿಯಾಣಿ ಸಮಾಜ, ಬೋವಿ ಸಮುದಾಯ, ಪೂಜಾರಿಗಳು, ಬ್ಯಾರಿಗಳ ಮುಕ್ರಿ, ಮೈಲಾರರು ವ್ಯಾಪಾರದ ಬ್ಯಾರಿಗಳ ಹಂಜದವರು, ಮಲಯಾಳಿ ಬಿಲ್ಲವರ ಅಚ್ಚಮ್ಮರು ಹೀಗೆ ಎಲ್ಲ ಸಮುದಾಯದ ಗುರಿಕಾರರು, ಬಾಕುಡರು ಮುಗೇರರು ಹಿರಿಯರು, ನಲಿಕೆಯವರು, ಕೊರಗರು, ದೊಂಬರು, ಪಾಣಾರರು ಎನ್ನುವ ದಲಿತ ಸಮುದಾಯದ ಹಿರಿಯರೆಲ್ಲರೂ ಅಲ್ಲಿ ಸೇರಿದ್ದರು. ಪಾರ್ಥ ಸಾರಥಿ ದೇವಸ್ಥಾನದ ಪೂಜೆ ಮಾಡಿಸಿ ಗಂಧ ಪ್ರಸಾದ ತೆಗೆದುಕೊಂಡು ರಾಮಂತರಸರು ಪಟ್ಟದಲ್ಲಿ ಕುಳಿತುಕೊಂಡು ಸಭೆಯನ್ನು ಸುರು ಮಾಡಿದರು.

**ಕೊನೆ ಟಿಪ್ಪಣಿ : ೨೭** ಈ ದೈಯ್ಯು ಮಿತ್ತ ಬೈಲಿನ ಮೂಲದವರಲ್ಲಿ ಬದುಕಿ ಉಳಿದ ಹಳೆ ತಲೆಗಳಲ್ಲಿ ಒಬ್ಬ. ಪ್ರಾಯದಲ್ಲಿ ಯಮುನಕ್ಕ ಮಾಂಕರಾಲೆಗಿಂತ ಚಿಕ್ಕವ. ದಲಿತರಿಗೆ ಈಗ ಅವನೆ ಗುರಿಕಾರ , ಕೃಷಿಯ ಕೆಲಸದ ಜವಾಬ್ದಾರಿ ಎಲ್ಲಾ ದೆಯ್ಯುವಿನದು. ಅವನಲ್ಲಿ ಕೇಳದೆ ಹೇಳದೆ ಸಾಗುವಳಿಯ ಯಾವ ಕೆಲಸವೂ ನಡೆಯದು. ಮಿತ್ತಬೈಲಿಗೆ ಎರಡನೆಯ ಗುರಿಕಾರನೆಂದು ಯಾರಾದರು ಇದ್ದರೆ ಅದು ದೆಯ್ಯುವೆಂದೇ ಹೇಳಬಹುದು. ಕುಟುಂಬದವರಿಗೆ ಅವನು ಕುಟುಂಬದವ, ಬೀಗರಿಗೆ ಬೀಗ, ಹಾಗೆಂದು 'ದಡಿಕೆ'ಯ ಎಲ್ಲ ಮೂಲದವರು ಮಿತ್ತಬೈಲಿಗೆ ಕುಟುಂಬದವರೆ. ಈ ಮೂಲದ ಮುಗೇರ 'ದಡಿಕೆ'ಗು(ಗುಡಿಸಲು) ಗುತ್ತಿನ ಹಾಗೆ ಗಡಿ ಹಿಡಿದ ಗುರಿಕಾರ ಆಗಬೇಕು. ಮಾವ ಸತ್ತ ಬಳಿಕ ಕಳೆದ ಹತ್ತು ವರ್ಷಕ್ಕೂ ಮುಂದು ಮಾಂಕರಾಲರ ಅಪ್ಪಣೆ ಪಡೆದು ದೆಯ್ಯು ಗುರಿಕಾರ ಪಟ್ಟವನ್ನು ಅಲಂಕರಿಸಿದ್ದು.

**ಕೊನೆ ಟಿಪ್ಪಣಿ : ೨೮** ಮಿತ್ತಬೈಲಿನ ಗುಡ್ಡೆಯ ನಡುವೆ ಇರುವ ಬಟ್ಟಲಿನಂತ ಜಾಗದಲ್ಲಿ ಮುಗೇರರ ಗುಡಿಸಲುಗಳು ಅದರಲ್ಲಿ ಹತ್ತು ಹನ್ನೆರಡು ಗುಡಿಸಲುಗಳು ಅದರಲ್ಲಿ ಗಂಡು ಹೆಣ್ಣೆಂದು ಮೂವತ್ತು ನಲ್ವತ್ತು ಜನ ಹತ್ತೈವತ್ತು ಮಕ್ಕಳು ಇದ್ದರು. ಅಷ್ಟು ಜನರ ಹೊಟ್ಟೆ ಬಟ್ಟೆ ಬದುಕಿಗೆ ಗುತ್ತೆ ಆಧಾರ. ಗುತ್ತನ್ನಲ್ಲದೆ ಬೇರೆ ಮನೆಗೆ ಅವರು ಗುತ್ತಿನವರ ಒಪ್ಪಿಗೆಯಿಲ್ಲದೆ ಕೆಲಸಕ್ಕೆ ಹೋಗಬಾರದು. ಏನು ಮಾಡುವುದಿದ್ದರೂ ಗುತ್ತಿನ ಒಪ್ಪಿಗೆ ಬೇಕು. ಎಲ್ಲ ಬಿಟ್ಟು ಮದುವೆ ಮುಂಜಿ ಗುತ್ತಿನ ಒಪ್ಪಿಗೆಯಿಂದಲೇ ಆಗಬೇಕು. ಮದುವೆಯಿಂದ ಸಾವಿನವರೆಗೆ ಎಲ್ಲ ಸಮಾರಂಭಗಳೂ ಗುತ್ತಿನ ಖರ್ಚಿನಲ್ಲೇ ನಡೆಯುತ್ತಿತ್ತು. ಮದುವೆಯಾಗಿ ಯಾರಾದರೂ ಬೇರೆ ಮನೆ ಮಾಡುತ್ತೇನೆಂದಾದರೆ ಅವರಿಗೊಂದು ಗುಡಿಸಲು ಕಟ್ಟಿಕೊಟ್ಟು, ಒಂದು ತೆಂಗು, ಒಂದು ಹಲಸು, ಒಂದು ಮಾವು, ಒಂದು ಹುಳಿಯ ಮರ ಬಿಟ್ಟುಕೊಡುವುದು ಗುತ್ತಿನ ಹೊಣೆ. ಬಂದ ಹೆಣ್ಣಿಗೂ ಗುತ್ತಿನಲ್ಲೆ ಕೆಲಸ. ಅರ್ಧ ಸೇರು ಭತ್ತ ಕೆಲವರಿಗಾದರೆ ಅರ್ಧ ಸೇರು ಅಕ್ಕಿಯ ಕೂಲಿ ಕೆಲವರಿಗೆ. ಗುತ್ತಿನ ಮನೆಯಲ್ಲಿ ಯಾರಾದರೂ ಸತ್ತರೆ ಅವರಿಗೂ ಸೂತಕ. ಗುಡಿಸಲುಗಳಲ್ಲಿ ಸತ್ತರೆ ಗುತ್ತಿನವರಿಗೆ ಸೂತಕ. ಸೂತಕದಲ್ಲಿ ದೈವ ದೇವರ ಗುಡಿಗೆ ಹೋಗಲು ಇಲ್ಲ. ಗುಡಿಸಲಿನವರು ಗಡಿ ಹಿಡಿದವರು ತೀರಿಕೊಂಡರೆ ಸ್ನಾನ ಮಾಡಿ ಊಟ ಮಾಡುವುದಲ್ಲದೆ ಮೀನು ಮಾಂಸ ಬಿಡಬೇಕು. ಗುಡಿಸಲಿನಲ್ಲಿ ಯಾರಾದರೂ ಸತ್ತರೆ ಗುತ್ತಿನವರು ಹೆಣ ತೆಗೆಯದೆ ಉಣ್ಣುವುದಿಲ್ಲ. ಹಾಗಾಗಿ ಈ ಜೀವಕ್ಕೆ ಜೀವ ಕೊಡುವ ಮೂಲದವರು ಮಿತ್ತ ಬೈಲಿನವರ ಕುಟುಂಬದವರಂತೆ. ದೆಯ್ಯು ಯಮುನಕ್ಕನಿಗೆ ಯಾವ ತಮ್ಮಲೆಗೂ ಕಡಿಮೆ ಇಲ್ಲದ ಬಲಗೈ ಬಂಟ. ಅವನನ್ನು ಎದುರು ಹಾಕಿಕೊಳ್ಳುವ ಧೈರ್ಯ ಗುತ್ತಿನಲ್ಲಿ ಕೂಡಾ ಯಾರಿಗೂ ಇರಲಿಲ್ಲ.)

**ಕೊನೆ ಟಿಪ್ಪಣಿ : ೨೯** ಮಿತ್ತ ಬೈಲು ಗುತ್ತಿನ ಕತೆ ಎಲ್ಲ ಒಕ್ಕಲು ಮಕ್ಕಳ ಗುತ್ತಿನ ಕತೆಯ ಆಗಿವೆ. ಒಂದಲ್ಲ ಒಂದು ನಮೂನೆಯಲ್ಲಿ ಅದು ಎಲ್ಲ ಗುತ್ತುಗಳ ಇತಿಹಾಸ ಹೇಳುತ್ತದೆ. ಜಾಗ ಬೇರೆ ಇರಬಹುದು, ಕಾಲ ಬೇರೆ ಇರಬಹುದು, ಜನರು ದೈವ ದೇವರು ಬೇರೆ ಇರಬಹುದು ಆದರೆ ಕತೆ– ವ್ಯಥೆಗಳು ಅವೇ. ಕೃಷಿ ಮಾಡುವುದು, ಜಗಳ, ಕಂಬಲದ ಕೋಣ, ಅಂಕದ ಕೋಳಿ ಎಲ್ಲ ಅದೇ. ಯಮುನಕ್ಕನಿಗೆ ಅಜ್ಜಿ ಹೇಳಿದ ಕತೆಗಳು, ಮಿತ್ತಬೈಲಿನ ಗುತ್ತಿನಆದಿ ಮೂಲದ ಕತೆಗಳು ಕಣ್ಣ ಮುಂದೆ ಸುಳಿದು ಹೋಯಿತು. ಭೂಮಿಯನ್ನು ಕೈಯಾಡಿಸುತ್ತಲೇ ಅಗೆದು ನೀರು ಬಿಟ್ಟು ಬೆಳೆಸಿದ ಹಿರಿಯರ ಕತೆಗಳು ಒಕ್ಕಲಿನವರ, ಬಂಟರ, ಬಾರಗರ ಇತಿಹಾಸ.

**ಕೊನೆ ಟಿಪ್ಪಣಿ : ೩೦** ಕುಡಿಯರು ಮತ್ತು ಮುಗೇರರ ಯುವಕರು ಪನೆಯಿಂದ ನೀರು ತೆಗೆಯುವುದಕ್ಕಾಗಿ ಕಾಯುತ್ತಿದ್ದರು) ಪನೆಯನ್ನು ಸಿದ್ದಪಡಿಸಲು ಬೇಕಾದ ಸಾಧನಗಳು ಆ ಸಲಕರಣೆಗಳ ಹೆಸರುಗಳನ್ನು ಉಲ್ಲೇಖಿಸುತ್ತ ಮಂಜಣಾಳ್ವನ ನೇತೃತ್ವದಲ್ಲಿ ಪನೆ ಹಾಕುತ್ತಾರೆ. ಅದಕ್ಕೆ ಬೆರಿಮರ, ಮುಟ್ಟು ಮರ, ಕುಬೆ ಮರಗಳೊಂದಿಗೆ ಬೈ ಹುಲ್ಲಿನ ಹಗ್ಗವನ್ನು ಹೊಸೆದು ಕಾಯಿಯನ್ನು ಒಡೆದು, ಬೆರಿಮರವನ್ನು ಮುದಲೆಯಲ್ಲಿ

ಕೂರಿಸುತ್ತಾರೆ. ಬೆರಿಮರ ಮೇಲೆ ಕೆಳಗೆ ಹೋಗುವಾಗ ಆಳದ ಬಾವಿಯಿಂದ ಮರಯಿಯಲ್ಲಿ ನೀರು ಮೇಲಕ್ಕೆ ಬರುತ್ತದೆ. ಅಡ್ಡ ಮರಕ್ಕೆ ಕಟ್ಟಿದ ಬೈಹುಲ್ಲಿನ ಹಗ್ಗ ಕಟ್ಟಿ ಗಟ್ಟಿ ಮುಟ್ಟು ಯುವಕನಾದ ಮಂಜಣ್ಣಾಳ್ವ ಮುಟ್ಟು ಮರವನ್ನು ಕಾಲಗಲಿಸಿ ನಿಂತು ಮರಯಿಯನ್ನು ನೀರಲ್ಲಿ ಮುಳುಗಿಸಿ ಮೇಲೆತ್ತುವ ಜವಾಬ್ದಾರಿ ಹಾಗೂ ಶ್ರಮದ ಕೆಲಸವನ್ನು ವಹಿಸಿಕೊಳ್ಳುತ್ತಾನೆ. 'ಪನೆ'ಯ ಹಗ್ಗದಲ್ಲಿ ನೇತಾಡುತ್ತಾ ನೀರೆಳೆಯಲು ಯುವಕರು ಕಾತರರಾಗಿದ್ದರು. ನೀರನ್ನು ಹೇಗೆ ಎಳೆಯಬೇಕು ಪ್ರಾಯೋಗಿಕವಾಗಿ ಕಿನ್ಯಸ ಮತ್ತು ಮಲೆ ಕುಡಿಯರು ಪ್ರಯತ್ನಿಸಿ ಹತ್ತು ಮರಿಗೆ ನೀರು ಎಳೆದರು.

ಪನೆಯ ಹಗ್ಗದಲ್ಲಿ ನೇತಾಡುವವರು ಹಿಂದೆ ಪನೆಯ ಗುರಿಗೆ ಹಾರುವಾಗ ಮೇಲೆ ಬಂದ ಮರಯಿಯನ್ನು ಎತ್ತಿ ಎಚ್ಚರದಿಂದ ನೀರು ಹರಿಸುವ ದಂಬೆಗೆ ಹಾಯಿಸಿದರು. ಮೊದಲ ಮರಿಗೆಯ ನೀರು ಮೇಲೆ ಬರುವಾಗ ಏನೆಂದು ಅರ್ಥವಾಗದವರು ಎರಡನೇ ಮರಯಿಯ ನೀರು ದಂಡೆಗೆ ಬರುವಾಗ ಸಂತಸದಿಂದ ಹೋ ಎಂದು ಅರಚಿದರು.

**ಕೊನೆ ಟಿಪ್ಪಣಿ : ೩೧** ಯುದ್ಧ ಭೂಮಿಯಿಂದ ಬಂದ ಮಂಜಣ್ಣನಿಗೆ ಭೂಮಿ ತಿರುಗದೆ ಸಮಾಧಾನವಿಲ್ಲ... ಬೈಲು ನೋಡುವಾಗ ಹೊಸತು ಮಾಡಿದ ಎರಡು ಗದ್ದೆಗಳಿಗೆ ಹುರುಳಿ ಹೆಸರು ಬಿತ್ತಿದ್ದು ಕಾಣಿಸಿತು. ತಮ್ಮ ರಾಮ ವಿವರಿಸಿದ ಅಗೆದು ಮಾಡಿದ ಹೊಸ ಗದ್ದೆಗಳ ಮಣ್ಣಲ್ಲಿ ಏನೂ ಸತ್ವ ಇಲ್ಲ ಹಾಗಾಗಿ ಪೈರು ಬೆಳೆಯಲು ಅದು ಒಳ್ಳೆಯದಲ್ಲ ಎಂದು ಹುರುಳಿ ಹೆಸರು ಬಿತ್ತಿದ್ದು, ಎರಡು ವರ್ಷ ಧಾನ್ಯ ಬಂದರೆ ಮೂರನೇ ವರ್ಷ ಒಳ್ಳೆಯ ಪೈರು ಆಗಬಹುದು ಎಂದು ಅಂದಾಜು. ಅದರ ಮೇಲೆ ಬೇಸಿಗೆಯಲ್ಲಿ ನಾಲ್ಕು ತೂಟಾನು ಇಟ್ಟು ಅದನ್ನು ಸಿಂಪಡಿಸಿ ನೂರು ಬುಟ್ಟಿ ಗೊಬ್ಬರ ಹಾಕಿ ಸೊಪ್ಪು ಹಾಕಿದರೆ ಬಂಗಾರ ಬೆಳೆ ತೆಗೆಯಬಹುದು ಎಂದು ರಾಮಣ್ಣ ವಿವರಿಸುವಾಗ ಮಂಜಣ್ಣ ತಮ್ಮನ ಬೆನ್ನು ತಟ್ಟಿದ. ಪಡ್ಪುಗಳನ್ನು ಬರಿ ಕಡಿದು ಉತ್ತು ಗದ್ದೆ ಮಾಡಿದ್ದು ನೋಡಿ ಬರುವ ವರ್ಷ ಹತ್ತೈವತ್ತು ಮುಡಿ ಭತ್ತ ತೆಗೆಯಬಹುದು ಎಂದು ಮಂಜಣ್ಣ ನೆನೆಸಿದ ದೂರದ ಊರಲ್ಲಿರುವ ತನ್ನ ಅಳಿಯನನ್ನು ಕರೆಸಿದ ಮರಾಠಿಯ ಯುವಕ

**ಕೊನೆ ಟಿಪ್ಪಣಿ ೩೨**

ಪೊಲಿ....... ಹೆಚ್ಚಾಗಲಿ
ಪಂಚ ಪಾಂಡವರ ಪೊಲಿ ನಿತ್ಯ ದೇವರುಗಳ ಪೊಲಿ ಕಣಜ
ಹಾಕಬೇಕು ಸಂಪತ್ತು ನೋಡಬೇಕು ಆ ಅಂಗಳದ ಪೊಲಿ ಅಂಗಳದಲ್ಲಿ
ಅರುವತ್ತಾರು ಅಂಗಳದ ಪೊಲಿ, ಎಪ್ಪತ್ತೇಳು ಕೋಟಿಯ ಪೊಲಿ
ನನ್ನ ಒಡೆಯನ ಅಂಗಳಕ್ಕೆ ಬರಲಿ ಪೊಲಿ
ತಾಯಿಯ ಬೆನ್ನಿನ ಹಿಂದೆ ಮಕ್ಕಳು ಬಂದ ಹಾಗೆ ಬರಲಿ
ದನಗಳ ಹಿಂದೆ ಕರು ಬಂದಂತೆ ಬರಲಿ
ಹೇಂಟೆಯ ಬೆನ್ನ ಹಿಂದೆ ಕೋಳಿ ಪಿಳ್ಳೆಗಳು ಬಂದಂತೆ ಬರಬೇಕು
ಮದುಮಗಳು ಹೆಣ್ಣಿಗೆ ತಲೆ ಕೂದಲು ಬಂದಂತೆ ಬರಬೇಕು
ಯುವತಿ ಹೆಣ್ಣಿಗೆ ಮೊಲೆ ಬಂದಂತೆ ಬರಬೇಕು
ಇರುವೆಯ ಸಾಲು ಬಂದಂತೆ ಬರಬೇಕು
ಸೂಜಿಯ ಹಿಂದಿನಿಂದ ನೂಲು ಬಂದಂತೆ ಬರಬೇಕು
ಹಕ್ಕಿಗಳ ಬಾಯಿಯಲ್ಲಿ ಬರಬೇಕು, ಹುಲಿಯ ನಾಲಿಗೆಯಲ್ಲಿ ಬರಬೇಕು
ನರಿಯ ಬಾಯಿಯಲ್ಲಿ ಬರಬೇಕು
ಹಾಲು ಉಕ್ಕಿದಂತೆ ಉಕ್ಕಬೇಕು
ಕಡಲಿನ ತೆರೆ ಮಗುಚಿದಂತೆ ಮಗುಚಬೇಕು
ನೀರು ಹೆಚ್ಚಿದಂತೆ ಹೆಚ್ಚಬೇಕು
ಪೊಲಿ ಪೊಲಿಯೇ ಆ ಅಂಗಳದ ಪೊಲಿ ಈ ಅಂಗಳದ ಪೊಲಿ

ಎಲ್ಲಾ ಈ ಅಂಗಳಕ್ಕೇ ಬರಬೇಕು.

**ಕೊನೆ ಟಿಪ್ಪಣಿ ೩೩ :** ವಾದ್ಯದ ರಾಮು, ಬೊಲ್ಗೊಡೆಯ ಪಕೀರ, ಬಸವನನ್ನು ಹಿಡಿದುಕೊಂಡು ಬಂದ ನರ್ಸಪ್ಪ , ಮುಗ ಹಿಡಿಯುವ ಪಕ್ರು, ಕರ್ಜನದ ಪೆಟ್ಟಿಗೆ ಹಿಡಿದು ಬಂದ ಐತಪ್ಪ, ಎಲ್ಲರೂ ಗುರುಕಾರ್ತಿಯ ಕಾಲು ಹಿಡಿದು ಗುಂಡದ ಬದಿಯಲ್ಲಿ ನಿಲ್ಲುವಾಗ ತಂತ್ರಿಯವರು ಬಂದರು.

**ಕೊನೆ ಟಿಪ್ಪಣಿ ೩೪ :** ಮಿತ್ತಬೈಲಲ್ಲಿ ಮನೆಕಟ್ಟಿ ಒಕ್ಕಲಾಗುವಾಗ ಬಾಕಿ ಇದ್ದ ಕೆಲಸಗಳೆಲ್ಲ ಮುಗಿಯಿತು. ಬಚ್ಚಲು ಕೋಣೆ, ಹಟ್ಟಿ, ಕೋಳಿಯ ಗೂಡು , ಕಂಬಳದ ಕೋಣಗಳ ಹಟ್ಟಿ, ಅಕ್ಕಿ ತೆಂಗಿನಕಾಯಿಯ ಉಗ್ರಾಣ ಎಲ್ಲ ಸಿದ್ಧವಾಗಿ ಪಡಿಪ್ಪಿರೆಯ ಕೆಲಸ ಶುರುವಾಗುವಾಗ ಮಾವ ಮತ್ತು ಅಜ್ಜಿ ಮಿತ್ತಬೈಲಿನ ಹಿರಿಯರು, ಕಿರಿಯರು ಮಿತ್ತಬೈಲಿನ ಪಟೇಲರ ಸಂಭ್ರಮಕ್ಕೆ ಸೇರಿಕೊಳ್ಳಲು ಬಂದರು

**ಕೊನೆ ಟಿಪ್ಪಣಿ ೩೫ :** ಕಾಡಿನಿಂದ ಕವಲುಗಳಿರುವ ಕಡಿದು ಬಿದಿರ ಬಂಬುಗಳನ್ನು ಕತ್ತರಿಸಿ ತಂದು ಸೋಗೆಯ ಚಪ್ಪರ ತಿಂಗಳೊಂದರಲ್ಲಿ ತಯಾರಾಯಿತು. ಊಟದ ಚಪ್ಪರ ಅಡಿಗೆಯ ಚಪ್ಪರ ಎದುರಿನ ಬಾಕಿ ಮಾರಿನ ಗದ್ದೆಯಲ್ಲಿ ತಯಾರಾಯಿತು. ಅಡಿಗೆಯ ಸಮಾರಂಭಕ್ಕೆ ಕೊಪ್ಪರಿಗೆ , ಕಳಂಗ, ಕೋಳ್ಯೂರ ದೇವಸ್ಥಾನದ ಬಡಾಜೆ ತಂತ್ರಿಗಳ ಮನೆಯಿಂದ ಬಂದು ಬಿತ್ತು. ನೀರಿನ ಮರಯಿ, ಮಣ್ಣಿನ ಪಾತ್ರೆ ಹಿತ್ತಾಳೆಯ ಪಾತ್ರೆಗಳನ್ನು ಗದ್ದೆ ಇಡೀ ಹೂಳಿದರು.

**ಕೊನೆ ಟಿಪ್ಪಣಿ ೩೬:** ಮದುಮಗಳ ಬಂಗಾರ ವಿಟ್ಲ ಕಾರ್ಕಳದ ಆಚಾರಿಗಳನ್ನು ತರಿಸಿ, ಮನೆಯಲ್ಲಿ ಕೂರಿಸಿ, ಮಾಡಿಸುವ ಜವಾಬ್ದಾರಿ ಭಂಡಾರಿಗಳ ಹೆಂಡತಿ, ದುಗ್ಗಮ್ಮ ಆದಿ ಶೆಟ್ಟಿಯ ತಂಗಿ ಮಾಚಬ್ಬೆಯು ವಹಿಸಿಕೊಂಡರು. ದುಗ್ಗಮ್ಮ ಅವರ ಮುಂದೆಯೇ ಆಚಾರಿಗಳನ್ನು ತರಿಸಿ ಒಡ್ಡಿ, ಒಂಕಿ, ಬೆಂಡೋಲೆ, ನತ್ತು, ಕುಕ್ಕು ಮುಡಿಸರ ಅವಲಕ್ಕಿಸರ ಚಕ್ರಸರ, ಸೊಂಟದ ಪಟ್ಟಿ, ತೋಳಬಂದಿ, ಸೊಂಟದ ನೂಲು, ಕೈಬಳೆ, ಕಾಲಗೆಜ್ಜೆ ಎಂದು ನಮೂನೆ ನಮೂನೆಯ ಬಂಗಾರವನ್ನು ಮಾಡಿಸಲು ಹಾಕಿದರು.

**ಕೊನೆ ಟಿಪ್ಪಣಿ ೩೭ :** ಮದುವೆಯ ದಿನದಂದು ಬೆಳಗ್ಗೆ ಮಜಲೋಡಿಯಿಂದ ಬಂದ ಸುಬ್ಬಳ್ವಾರು ಮುಹೂರ್ತದ ಕಂಬ ನೆಡಿಸಿದರು. ಹಾಲು ಸುರಿದು ಬಂಗಾರದ ಚೂರು ಹಾಕಿ, ನೆಟ್ಟ ಹಾಳೆಯ ಮರದ ಕಂಬ ನಿಲ್ಲುವಾಗ ಕೊಂಬುವಾದ್ಯ ಆಯಿತು. ಮಡಿವಾಳ ಮುಹೂರ್ತದ ಕಂಬಕ್ಕೆ ಬಟ್ಟೆ ಸುತ್ತಿ ಕವುಚಿದಾಗ ಮದುವೆಯ ದಿಬ್ಬಣ ಬಂದ ಸುದ್ದಿ ಮುಟ್ಟಿತು. ಮೂರು ನಾಲ್ಕು ಸೇರಿಗಾರರ ತಂಡ ಊದುವಾಗ ಮಂಗಳೂರಿನ ಬೇಂಡು ಬಂದಿತು. ಬ್ಯಾಂಡು ಆವಾಗ ಊರಿಗೇ ಹೊಸತು. ಜನರು ಅದನ್ನು ನೋಡಲೆಂದೇ ಎಲ್ಲೆಲ್ಲಿಂದಲೋ ಬಂದರು... ಮದುಮಗ ಮದುಮಗಳನ್ನು ಚಪ್ಪರಕ್ಕೆ ಮಾಗಣೆಯ ಹಿರಿಯರು ಕರೆತಂದರು. ಮಡಿವಾಳ ಹಾಕಿದ ಪಾವಡೆಯ ಮಧ್ಯದಲ್ಲಿ ನಿಲ್ಲಿಸಿದರು. ಮಜಲೋಡಿಯ ಯಜಮಾನರು ಸಭೆಗೆ ಕೈ ಮುಗಿದು ದೈವ ದೇವರನ್ನು ಸ್ಮರಿಸಿ ದಾರೆ ಎರೆಯಲು ಅಪ್ಪಣೆ ಕೇಳಿದರು. ಮಾವಂದಿರು ಧಾರೆ ಎರೆದು ಕೊಟ್ಟರು. ಮಾವಂದಿರು ಧಾರೆ ಎರೆದು ಸ್ವೀಕರಿಸಿದರು.

**ಕೊನೆ ಟಿಪ್ಪಣಿ ೩೮ :** ಈಚಲು ಮರದ ಬುಡವೊಂದನ್ನು ಎಬ್ಬಿಸಿ ಅಗಲದ 'ಮರಯಿ' ಮಾಡಿಸಿದರು. ನೇರವಾಗಿರುವ ಸಾಗುವನಿ ಮರ ಕಡಿದು 'ಬೆರಿಮರ', ಒಳ್ಳೆ ಗಟ್ಟಿಯ ಬಿದಿರಿನ ಒಂದು ಕರೆ, ಬೆತ್ತದ ಕೊಡಂಗೆ, ಬೆರಿಮರದ ತಿರುಗಣೆಗೆ ಎರಡು ಕಿವಿ, ದಂಬೆ ನೀರ್ ಕುತ್ತಿ, ಅಡ್ಡ ಮರ ತಯಾರಾಗುವಾಗ ಹತ್ತು ದಿನ ಆಯಿತು. ಒಂದು ದಿನ ತಾಯಿಯ ಕಾಲು ಹಿಡಿದು ಅಣ್ಣ– ತಮ್ಮ ಮುಗೇರರ ನಾಲ್ಕು ಕುಡಿಯರನ್ನು ಸೇರಿಸಿ ಸಾಮಾನು ಹೊತ್ತುಕೊಂಡು ಮಜಲೋಡಿಗೆ ಹೊರಟರು. ಬೆಳಗ್ಗಿನ ತಂಗಳು ಮೊಸರು ಉಂಡು ಹೊರಟವರು ಮಜಲೋಡಿಯ ಬೈಲು ತಲುಪುವಾಗ ಮಧ್ಯಾಹ್ನ ಕಳೆದಿತ್ತು.

**ಕೊನೆ ಟಿಪ್ಪಣಿ ೩೯ ;** ಪಣೆಗೆ ಬಳಸುವ ಸಲಕರಣೆಗಳನ್ನು ವಿವರಿಸುತ್ತ ಅದನ್ನು ಜೋಡಿಸುವ ಬಳಸುವ ಸೂಕ್ಷ್ಮವನ್ನು ಹೇಳುತ್ತಾರೆ. ಅಡ್ಡ ಮರಕ್ಕೆ ಬೈ ಹುಲ್ಲಿನ ಹಗ್ಗ ಕಟ್ಟಿ ಇಬ್ಬರು ಯುವಕರು ಕೆಳಕ್ಕೆ ಹಾರುವಾಗ ಮುಟ್ಟುದ ಮರದಲ್ಲಿ ನಿಂತವರು ಮರಯಿಯನ್ನು ಮೇಲೆ ಎತ್ತಿ ದಂಬೆಯಲ್ಲಿ ನೀರು ಹಾಯಿಸುತ್ತಾರೆ. ತಾವು ನಂಬಿದ ದೈವ ದೇವರು ಪ್ರಾರ್ಥಿಸುವ ಕೆಲಸವೂ ನಡೆಯುತ್ತದೆ. ಕೃಷಿ ಕೆಲಸದ ಸಣ್ಣ ಸಣ್ಣ ವಿವರಗಳನ್ನು ವಿವರಿಸುತ್ತಾರೆ.

**ಕೊನೆ ಟಿಪ್ಪಣಿ ೪೦:** ಹೀಗೆ ನೀರೆಳೆಯುವ ನೀರಿಗೂ ಒಂದು ಲೆಕ್ಕ ಇದೆ. ಎರಡು ಹೊಂಡಗಳಲ್ಲಿ ಐವತ್ತು ಕಲ್ಲು ಹಾಕಿ ಒಂದರಿಂದ ಇನ್ನೊಂದಕ್ಕೆ ಹಾಕಿದಾಗ ಒಂದು ಗುರಿ ನೀರಾಯಿತೆಂದು ಹೀಗೆ ನಾಲ್ಕು ಗುರಿ ನೀರೆಳೆದರೂ ಅದಕ್ಕಿದ್ದ ಸಂಬಳ ಅರ್ಧ ಸೇರು ಭತ್ತ.

**ಕೊನೆ ಟಿಪ್ಪಣಿ ೪೧ :** ಅವನಿಗೆ ಸುತ್ತ ಮುತ್ತ ವರ್ಕಾಡಿ ವಿಟ್ಲ ಸೀಮೆಯಲ್ಲಿ ದೊಡ್ಡ ಆಸ್ತಿಯನ್ನು ತನ್ನದಾಗಿಸಬೇಕು, ಒಂದು ಸಾವಿರ ಮುಡಿ ಆಸ್ತಿಯ ಭೂಮಿ ದುಡಿಯಬೇಕು, ಒಂದು ಸಾವಿರ ಮುಡಿ ಗೇಣಿ ಬರಬೇಕು, ಬಾಕಿಮಾರ ಗದ್ದೆಯಲ್ಲಿ ಇಪ್ಪತ್ತೈದು ಜೋಡಿ ಕೋಣ ಕಟ್ಟಿ ಉಳಬೇಕು. ಸೀಮೆಯ ಜನ ಅದನ್ನು ನೋಡಲು ಬರಬೇಕು, ಹೀಗೆ ದೊಡ್ಡ ದೊಡ್ಡ ಕನಸು ಬಿತ್ತು.

**ಕೊನೆ ಟಿಪ್ಪಣಿ ೪೨** : ಸಾಗುವಳಿ ಮುಗಿಸಿ ಗುಡ್ಡ ಅಗೆದು ಗದ್ದೆ ಮಾಡಿದರು. ಬೈಲಿನ ಮೂಲೆಯಲ್ಲಿ ಹರಿದು ಹೋಗುವ ತೋಡಿಗೆ ಅಡ್ಡ ಕಟ್ಟಿ ಬೆಟ್ಟು ಗದ್ದೆಗಳಿಗೆ ನೀರು ಹಾಯಿಸಿ ಸುಗ್ಗಿಯ ಸಾಗುವಳಿ ಮಾಡಿದರು. ಎದುರಿನ ಭಟ್ಟರ ಹಳೆಯ ಬೈಲು ಗದ್ದೆ ಅಗೆದು ದೊಡ್ಡದು ಮಾಡಿದರು. ಆ ಗದ್ದೆಯನ್ನು ಪೂಕರೆ ಗದ್ದೆ ಎಂದರು. ಅದೇ ಬಾಕಿಮಾರು ಗದ್ದೆ ಆಯಿತು. ಬಾಕಿಮಾರು ಗದ್ದೆ ಮುಂದಕ್ಕೆ ಕಂಬಳದ ಗದ್ದೆ ಆಯಿತು. ಹಲವು ವರ್ಷ ಕಳೆದು ಅದುವೆ ಗದ್ದೆ ಮೂರು ಮುಡಿ ಅತಿಕಾರ ಭತ್ತ ಬೆಳೆಯುವ ಗದ್ದೆ ಆಯಿತು.

**ಕೊನೆ ಟಿಪ್ಪಣಿ ೪೩ :**

ಒಂದು ದಿನ ಈ ಯುವಕರನ್ನು ಬೆನ್ನ ಹಿಂದಿರಿಸಿಕೊಂಡು
ಕಾಡು ತೊರೆಗಳ ಚೆಲುವ ತೋರಿಸುತ್ತ ಹೋಗು
ವಾಗ ದಾರಿಯಲ್ಲಿದ್ದ ಮನೆಯವರು ಅಂಗಳಕ್ಕಿಳಿದು ಋಷಿಗೆ ಕೈ ಮುಗಿದು
ಜತೆಯಲ್ಲಿರುವವರು ಯಾರೆಂದು ಬಾಯಾರಿಕೆಗೆ
ಎಳನೀರು ಕತ್ತರಿಸಿ ಕೊಟ್ಟು ಕಳುಹಿಸುವವರು
ತಲೆಗೆ ಮುಟ್ಟಾಲೆ ಇಟ್ಟು ತುಂಡು ಬಟ್ಟೆಯನ್ನು ಸೊಂಟ
ಕ್ಕೆ ಎಳೆದು ಕಟ್ಟಿ ಹರಿವ ನೀರಿಗೆ ಕಟ್ಟ ಹಾಕಿದ
ಸ್ಥಳಗಳಲ್ಲಿ ಅಲ್ಲಲ್ಲಿ ಹಾಕಿದ ಪಣೆ ದಂಬೆಗಳಲ್ಲಿ
ಮಗುಚುವ ಹಾಯಿಸುವ ಜನರು ಮಣ್ಣಲ್ಲಲ್ಲಿ ಬೆರೆತು
ಸಾಗುವಳಿ ಮಾಡುತ್ತಿರುವ ಹಲವರು, ಗುಡಿಸಿದ ತರಗೆಲೆಯನ್ನು
ಕುರ್ಕಿಲಿಗೆ ತುಂಬಿಸಿ ತರುತ್ತಿರುವವರು
ದನ–ಕರುಗಳನ್ನು ಮೇಯಿಸುವ ಮಕ್ಕಳು ಹೀಗೆ
ಯಾರಾದರೂ ಒಂದೊಂದು ಕೆಲಸವಿಲ್ಲದೆ
ಸುಮ್ಮನಿದ್ದವರಲ್ಲ. ಹತ್ತು ಬೆರಳನ್ನು ಸವೆಸುತ್ತ
ಐದು ಬೆರಳನ್ನು ಬೆರೆಸು ಎಂಬ ಮಾತು ಇವರಿಗೆ
ಯಾವಾಗಲೂ ಸರಿನೆನಪು ಮಣ್ಣು ಹಿಚುಕಿ ಬೆವರು
ಹರಿಸುವ ಜನರ ಕೈ ಗುಣದಿಂದ ಬಂಗಾರ ಬೆಳೆಯುವ
ಮಣ್ಣ ಗುಣವನ್ನು ನೋಡಿ
...................... ಈ ಕಿರು ಗದ್ದೆಗಳಲ್ಲಿ ಕೋಣ ಕಟ್ಟಿ
ಎಡಗೈಯ್ಯಲ್ಲಿ 'ಉರು ಬಡು' ವನ್ನು ಬಲದ ಕೈಯ್ಯಲ್ಲಿ ಹಿಡಿದು
'ಉರಲ್' ಹಾಕುತ್ತ ಉಳುವವನ ಮೈಗೆ
ಎರಚಿದ ಕೆಸರಿನ ಲೇಪ ನೋಡಿದರೆ ಇವರು
ಈ ಮಣ್ಣ ಮಕ್ಕಳೆನ್ನುವುದು ಸತ್ಯ.

**ಕೊನೆ ಟಿಪ್ಪಣಿ ೪೪ :**

ಪತ್ತನಾಜೆ ಕಳೆದು ಕೃತಿಕೆಯೂ ಕಾದು ಹಾಕಿದ ಪೊಡಿ
ನೇಜಿ ಬುಡದಿಂದ ಎಲ್ಲವೂ ಕರಟಿತು
ತೋಟಗಳೆಲ್ಲಾ ಕೆಂಪಾಯಿತು ಊರು ಒಟ್ಟಾಗಿ
ಗ್ರಾಮ ದೇವತೆಗೊಂದು ಸೀಯಾಳಭಿಷೇಕ

ವಾಯಿತು.ಕೈ ಮುಗಿದು ಮಳೆಗೆ ಕೇಳಿಕೊಂಡರು.
ಸೋನೆ ಮಳೆ ಸುರಿಯಿತು ಮಳೆಯುಬ್ಬರ
ಎಲ್ಲೆಲ್ಲೂ ಹರಡಿ ಸುರುವಾಯಿತು ಮಳೆಯಬ್ಬರ
ಸ್ವರ್ಗ ಲೋಕದಲ್ಲಿ "ತೂಟೆದಾರ" ಎನ್ನುವ ಹಾಗೆ
ನಾಲ್ಕು ದಿಕ್ಕಿನಿಂದಲೂ ಆಗಸದಲ್ಲಿ ಮಿಂಚು
ಎಸೆಯುವುದನ್ನು ಕಣ್ಣು ಬಿಟ್ಟು ನೋಡಲಾಗದು.
......................... ಬಾರಿ ಜೋರಲ್ಲಿ ಬಿದ್ದ ಮಳೆಗೆ
ಕಾಡಿನ ನೀರಿಗೆ ಅಡ್ಡ ಹಾಯಿದ ಕಾಡು ಹಂದಿಗಳು
ಹೊರಳಿಕೊಂಡು ಹೋಯಿತು ನೀರಿಗೆ ಕಾಲುವೆ ಸಾಲದೆ
ಕಟ್ಟಹುಣಿಗೆ ತಲುಪಿತು. ನೀರಾಯಿತು ಹರಿವ ತೊರೆ
ಗಳಲ್ಲಿ ಒರತೆ ಹುಟ್ಟಿತು ಎಲ್ಲೆಲ್ಲೂ ನೀರಾಯಿತು.

ಗದ್ದೆಗಿಳಿದ ಜನರು 'ಉರಲ್'ಹಾಕಿದರು
ನೇಜಿ ಗಂಟಾಗುತ್ತದೆ ಎಂಬ ವ್ಯಥೆ ಕಳೆದು ಉಳುಮೆ
ಯಾಗಿ ಬದು ಸವರಿ, ಹಲಗ ಹಾಕಿ ಹೆಂಗಸರು
ಪಾಡ್ದನ ಹೇಳುತ್ತ ನೇಜಿ ತೆಗೆಯುತ್ತಾರೆ
ನೆಡುತ್ತಾರೆ ಹೀಗೆ ಸಾಗುವಳಿ ಮುಗಿಸಿದರು ಹಳ್ಳಿ
ಯಲ್ಲಿದ್ದ ಜನರು ರೈತರು

**ಕೊನೆ ಟಿಪ್ಪಣಿ ೪೫ ;**

......... ನೆಟ್ಟದೆಲ್ಲ
ಜೀವ ಹಿಡಿಯುವಾಗ ನದಿ ಬದಿಯ ತಗ್ಗು ಸಾ
ಲಿನ ಗದ್ದೆಗಳಿಗೆ ನೆರೆ ನೀರು ನುಗ್ಗಿ ಏಳೆಂಟು ದಿನ
ದಾಗ ನೆರೆ ಇಳಿದು ತಿಂಗಳಾಗಿ ಹೇರಿ ಕುಳಿತ
ಕೆಂಪು ಮಣ್ಣಿಂದ ನೆಟ್ಟ ನೇಜಿ ದೊಡ್ಡ
ಬಿದಿರಿನ ಪೊದರಿನಂತೆ ಎದ್ದಿತು, ಬೇಶ ತಿಂಗಳಲ್ಲಿ
ಹೇಗಿದ್ದೂ ಬೂತಗಳಿಗೆ ಮಾಡಿಯಾಗಿದೆ , ಆಟಿ
ಕಳೆಯಲು ಹೊಸ ಮದುಮಗಳು ತಾಯಿ
ಮನೆ ತಲುಪಿದಳು. ಆಟಿಯಲ್ಲಿ ಸತ್ತ ಹಿರಿಯರಿಗೆ
ಅನ್ನ ಪದಾರ್ಥ ಬಾಯಾರಿಕೆ ತಟ್ಟೆಯಲ್ಲಿ ಇಟ್ಟು
ಹೊಸ ಬಟ್ಟೆ ಇಟ್ಟು ಕೈಮುಗಿದು ಬರುವ
ವರ್ಷದವರೆಗೆ ಸಣ್ಣ ಪುಟ್ಟ ಮಕ್ಕಳಿಗೆ ಮದುಮಕ್ಕಳು ಹೆಣ್ಮಕ್ಕಳಿಗೆ
ದನಕರುಗಳಿಗೆ ತೊಂದರೆಯಾಗದ ಹಾಗೆ ಬಿ–
ನ್ನವಿಸಿಯಾಯ್ತು. ಆಟಿ ಅಮವಾಸ್ಯೆಯ ದಿನ ಮೂಡಣ
ಕೆಂಪೇರುವ ಮುನ್ನ ಕಬ್ಬಿಣ ತಾಗಿಸದೆ ಕೆತ್ತೆ
ಕಲ್ಲು ಕೊದಂಟಿಯಲ್ಲಿ ಗುದ್ದಿ ತೆಗೆದು ಹಾಳೆ
ಕೆತ್ತೆ ಕುಡಿದು ಕಾಯಿಯ ಗಂಜಿಯನ್ನುಣ್ಣದವರಿಲ್ಲ
ಕೇಪಳ ಹೂ ತೆಂಗಿನ ತಿರಿಗೆ ಸಿಕ್ಕಿಸಿ
ಕೂರಂಬಲೊಟ್ಟಿಗೆ ಕಟ್ಟಿ ಕಳ್ಳಗಿಡದ ತುಂಡು ಸಿಕ್ಕಿಸಿದ ಕಾಸರಕದ

ಕೋಲನ್ನು ಬೆಳಗಾಗುವಾಗ ಎಲ್ಲರೂ ಗದ್ದೆಯಲ್ಲಿ ನೆಟ್ಟರು
ಮತ್ತೆ ಕಡಲು ಸ್ನಾನ ಮಾಡಿ, ನಡೆದು ಹೋಗಿ
ಬರಲು ಸಾಧ್ಯವಾಗುವವರು ಎಲ್ಲರೂ.

**ಕೊನೆ ಟಿಪ್ಪಣಿ : ೪೬**

ಹಸಿರು ಕಳೆದು ಹಳದಿ ರಂಗು ಆವರಿಸಿ
ಗದ್ದೆಗಳಲ್ಲಿ ಹಿಂಡು ಹಿಂಡಾಗಿ ಗಿಳಿಗಳು ತೆನೆಗಳು
ಕೀಳುತ್ತ ಹಾರುತ್ತ ಹೊತ್ತೊಯ್ಯುತ್ತಿದ್ದವು ಸಾಲು ಸಾಲಾಗಿ
'ಪರ್ದತ್ತಿ' ಗದ್ದೆಗಳಿಗೆ ಇಳಿಯಿತು
ಪೈರು ಕೊಯ್ದು ಹೊತ್ತು ಬಡಿದು ಭತ್ತ ಒಣಗಿ ಒಳಗಾಯಿತು
'ದಡೆ' ಇಟ್ಟು ಬೈಹುಲ್ಲು ಜೋಡಿಸಿ ತುದಿ ಕಟ್ಟಿಯಾಯಿತು.
'ತುಪ್ಪೆ' ಸಿರಿತುಪ್ಪೆ ಪತ್ತಾಯಗಳಲ್ಲಿ ಭತ್ತ ತುಂಬಿಸಿ
ಮಜಲು ಬೈಲುಗಳನ್ನು ಉಳುತ್ತ ಬದು ಸವರುತ್ತ
ಗದ್ದೆ ಬದುವಿಗೆ ಮಣ್ಣು ಲೇಪಿಸುತ್ತಾ ಬೆಟ್ಟು ಗದ್ದೆಗಳಲ್ಲಿ
ಓಟಿಯಲ್ಲಿ ಹಾಕಿದ ನೇಜಿ ತೆಗೆದು ಹೊತ್ತು
ಉಳುಮೆಯಾದ ಗದ್ದೆಯಲ್ಲಿ ನೆಟ್ಟು ಸುಗ್ಗಿಯ ಸಾಗುವಳಿ
ಸುರುವಾಯಿತು. ಸಾಗುವಳಿಯ ಬಿರುಸೆಂದರೆ ನಿಧಾನದಲ್ಲಿ
ಕುಳಿತು ಎಲೆ ಅಡಿಕೆ ತಿನ್ನಲೂ ಬಿಡುವು ಇಲ್ಲ

**ಕೊನೆ ಟಿಪ್ಪಣಿ: ೪೭** ಮಾಯ್ಲು ಬಂದಳು ನೆರೆಹೊರೆಯ ಐದು ಬಳಿಯ ಐದು ಮುತ್ತೈದೆಯರನ್ನು ಕರೆಸಿ , ಯಜಮಾಂತಿ ಅತಿಕಾರ ಭತ್ತ (ಸುಗ್ಗಿ ಭತ್ತ) ಸಣ್ಣ ಕುರುಂಟು (ಮುಡಿ) ಮಾಡಿ ಐದು ತೆಂಗಿನಕಾಯಿ ಸೇರಿಸಿ ಇಟ್ಟು ಅವಳನ್ನು ಅದರ ಮೇಲೆ ಕುಳ್ಳಿರಿಸಿದರು. ಆ ಕುರುಂಟುವಿನ ಮೇಲೆ ಅವಳ ಬಲಕಾಲನ್ನು ಇರಿಸುತ್ತಾರೆ. ಅವಳು ಕುಳಿತಲ್ಲಿಯೇ ಒಂದು ತಟ್ಟೆಯಲ್ಲಿ ಎಣ್ಣೆ ಇಟ್ಟರು. ಈ ಐದು ಮುತ್ತೈದೆಯರು ನೀರು ತುಂಬಿಸಿ, ಎಲೆ ಅಡಿಕೆ ಇಟ್ಟು ಐದು ತಂಬಿಗೆ ಮತ್ತು ತಂಬಿಗೆಯಲ್ಲಿರುವ ಎಲೆ ಅಡಿಕೆ ಹಿಡಿದುಕೊಂಡು ಮೊದಲಿಗೆ ಎಣ್ಣೆ ಆಮೇಲೆ ನೀರನ್ನು ಚಿಮುಕಿಸಿದರು. ಆ ನಂತರ ಅವಳನ್ನು ತಲೆ ಮೈ ಸ್ನಾನ ಮಾಡಿಸಿ ಬೇರೆ ಬಟ್ಟೆ ಹಾಕಿ ಅಗಲ ಮಾಡಿ ಕಟ್ಟಿದ ಕದಿಕೆಯ ಒಳಗೆ ಕುಳ್ಳಿರಿಸಿದರು. ಅವಳು ಕುಳಿತುಕೊಂಡಿದ್ದ ತೆಂಗಿನಕಾಯಿ ಮತ್ತೆ ಅವಳಿಗೇ ತಿನ್ನಲು ಕೊಡುತ್ತಾರೆ.

**ಕೊನೆ ಟಿಪ್ಪಣಿ ೪೮** : ಕಳಲ "ನಾವು ಹಾಗೆಯೇ ಯೋಚಿಸಿದ್ದೇವೆ ಹಾಗಾದರೆ ನಮ್ಮ ಜಾತಿ ಕಟ್ಟಿನಂತೆ ಲೆಕ್ಕದ ಭತ್ತ ತರುವುದು ಉಂಟಲ್ಲ" ಎಂದಂದು ಕಾಪಾಡಿಯ ಮುಖ ನೋಡಿದ್ದ, ಹೌದೌದು ಎಂದು ಹೇಳಿದ ಕಾಪ. ಯಾವಾಗ ಲೆಕ್ಕದ ಭತ್ತ ತರುವುದೆಂದು ಕೇಳಿದ........ ಕುಳಿತು ಮಾತನಾಡಿ ಅವರವರಿಗೆ ಹೆಣ್ಣು ಗಂಡು ಸಂಬಂಧ ಆಗುವುದಾದರೆ ಗಂಡಿನ ಕಡೆಯವರು ಭತ್ತ ಅಳೆಯುವ ಎಂದರೆ ನಿಶ್ಚಯಕ್ಕೆ ಬರುವ ಕ್ರಮವಿದೆ. ಹಾಗೆ ಬರುವಾಗ ಭತ್ತವಾದರೆ ಐದು ಮುಡಿ, ಅಕ್ಕಿ ಆದರೆ ಎರಡುವರೆ ಮುಡಿ ಕೊಡಬೇಕು. ಒಂದು ಮುಡಿ ಆದರೂ ಮದುಮಗ ಹುಡುಗನೇ ಹೊತ್ತುಕೊಂಡು ತರಬೇಕು. ಹೆಣ್ಣಿನ ಮನೆಯಲ್ಲಿ ಮೂರು ಸೇರಾದರೂ ಅಳೆಯಬೇಕು.

**ಕೊನೆ ಟಿಪ್ಪಣಿ ೪೯ :**

ಹೆಚ್ಚಲಿ ಹೆಚ್ಚಲಿ ಹೆಚ್ಚಲಿ ಮದುವೆ
ನೆಂಟರು ಹೋಗಿ ಕುಳಿತರು
ಕೊಡುವ ಹೆಣ್ಣು ಉಂಟಾ? ಮಾರುವ ಕೋಣ ಉಂಟಾ?
ಕೊಡುವ ಹೆಣ್ಣನ್ನು ಕೊಟ್ಟು ಆಗಿದೆ.
ಮಾರುವ ಕೋಣವನ್ನು ಮಾರಿ ಆಗಿದೆ
ಈಗ ಒಂದು ಹೆಣ್ಣುಂಟು

ಮೂಲೆಯ ಕಸ ಗುಡಿಸಲು ಗೊತ್ತಿಲ್ಲದವಳು

ಕಸ ಗುಡಿಸಲು ತಿಳಿಯದಿದ್ದರೆ

ನಾವು ತಿಳಿಸಿ ಹೇಳುತ್ತೇವೆ

ಹೆಣ್ಣು ಆಯಿತೆಂದು ನಿಶ್ಚಯ ಮಾಡುತ್ತಾರೆ

ನಿಶ್ಚಯ ಮಾಡಿ ಹಸುರು ಕಡಿಯಬೇಕು

ವಿಸ್ತಾರ ಚಪ್ಪರ ಹಾಕಬೇಕು

ಓ... ಹೆಚ್ಚಲಿ ಹೆಚ್ಚಲಿ ಹೆಚ್ಚಲಿ ಮದುವೆ

ಹಾಳೆ ಕಡಿಯಬೇಕು ಪೊಲಿ ಕರೆಯಬೇಕು

ಹಸಿ ಕಡಿಯಬೇಕು ಒಡೆಯಾ

ವಿಸ್ತಾರ ಚಪ್ಪರ ಹಾಕಬೇಕು

ನಾಣ ಎಲ್ಲಿಗೆ ಹೋಗಿದ್ದಿಯಾ

ಪಂಬತ್ತೆ ಒಬ್ಬನೇ ಮಗಾ

ಹಾಳೆ ನೆಡಲು ಸಾಲು ತೆಗೆ

ಸಾಲು ತೆಗೆದು ಬಿತ್ತು ಹಾಕು

ಪಂಬತ್ತೆ ಒಬ್ಬನೇ ಮಗಾ

ಎರಡು ಕೊಡ ನೀರು ಹಾಕಿದ

ಎರಡು ಎಲೆ ಬಿಟ್ಟಿತು ಒಡೆಯಾ

**ಕೊನೆ ಟಿಪ್ಪಣಿ ೫೦** ; ನಾವೇನು ಇವರ ವಂಶದ ಒಕ್ಕಲಲ್ಲ, ಪೋಣಿ ನದಿ ಬದಿಯ ಜಾಗದಲ್ಲಿ ನಾನು ಕುಳಿತೆ, ಬ್ರಾಹ್ಮಣನೂ ಕುಳಿತ. ಯಾರು ಮೊದಲು ಬಂದು ಕುಳಿತದ್ದು ನಮಗೆ ಇಬ್ಬರಿಗೇ ತಿಳಿದಿರುವುದು. ಬ್ರಾಹ್ಮಣ ಗದ್ದೆ ಕಡಿದ– ನಾನು ಗದ್ದೆಯಲ್ಲಿ ದುಡಿದೆ. ಯಾವ ಊರಲ್ಲೂ ಅನ್ನ ದುಡಿಯಲಾಗದೆ ಬೆರಿಪದವಿನ ನೆರಳಿನಲ್ಲಿ ಬ್ರಾಹ್ಮಣ ಉಸಿರು ಹಿಡಿದ. ನಾನು ಬರೀ ಓಡಾರಿ! ಗದ್ದೆಯಲ್ಲಿ ಭತ್ತ ತೆಗೆಯಲು ತಿಳಿಯದೆ ಒಕ್ಕಲಾಗಬೇಕಾಯಿತು.

**ಕೊನೆ ಟಿಪ್ಪಣಿ ೫೧:** (ಪಕೀರ ಹೇಳುತ್ತಲೇ ಇದ್ದ... ಒಂದೊಂದೆ ಗುಡ್ಡ ಕಡಿದರು, ಗದ್ದೆ ಮಾಡಿದರು. ಶಿರಂಕಲ್ಲಿನ ಕಾಡಿನವರದ್ದೇ ದೊಡ್ಡ ಕಾರುಬಾರು. ಗುಡ್ಡ ಹಾಗೆ ಬಯಲಾಗಬಹುದೆಂದು ಪಕೀರನು ಗ್ರಹಿಸಲಿಲ್ಲ. ನೆಲ್ಲಿ ಗುಡ್ಡೆಯ ರೀತಿಯ ಎರಡು ಗುಡ್ಡಗಳ ಬದು ಸವರಿ, ಕಾಡು ತೆಗೆದು ಮುಡಿ ಗದ್ದೆಗಳು ಆದವೆ'ಂದು ಪಕೀರ ಹೇಳುತ್ತಲೇ ಇದ್ದ)

**ಕೊನೆ ಟಿಪ್ಪಣಿ ೫೨** ; ನೋಡಿ–ಅದುವೇ ನದಿ– ಗುಡ್ಡದ ಈಚೆಯ ಬದಿಯಿಂದ –ಇಲ್ಲೇಹಾಕಿದ್ದೇವೆ. ಎಷ್ಟು ಜಾಗನದಿ ದಾರಿ ತಪ್ಪಿಹೋಗಿದ್ದರಿಂದ ಹಾಳಾಗಿದೆ ನೋಡಿ. ನದಿಗೆ ಸರಿಯಾದ ದಾರಿ ಮಾಡಿಕೊಡಬೇಕು. ದಾರಿ ತಪ್ಪಿದ ನದಿಯನ್ನು ದಾರಿಗೆ ತರಬೇಕೆಂಬ ಗ್ರಹಿಸಿದ ನೀವು ಇದನ್ನೆಲ್ಲವನ್ನು ಸರಿಯಾಗಿ ನೋಡಬೇಕು). ಇಂತಹ ಪ್ರಯತ್ನವನ್ನು ಮಾಡುವ ಪೂರ್ವದಲ್ಲಿ ಅಬ್ಬಿಯ ನೀರನ್ನು ತಾನು ಬಳಸಿಕೊಂಡ ರೀತಿಯನ್ನು ತೋರಿಸುತ್ತಾರೆ. ನಾಗರಿಕತೆ ಸವಲತ್ತು ಮತ್ತು ಸೌಲಭ್ಯಗಳನ್ನು ಕೊಡುವುದಾದರೆ ಅದನ್ನು ಆಗು ಮಾಡುವ ಜಾಣ್ಮೆಯೂ ಅವಶ್ಯವಾಗಿ ತಿಳಿದಿರಬೇಕು.

**ಕೊನೆ ಟಿಪ್ಪಣಿ ೫೩ :** ಅಬ್ಬಿಗೆ ಬೀಳುವ ನೀರನ್ನು ಕಟ್ಟ ಕಟ್ಟಿ ಇಲ್ಲಿಂದ ಮನೆಯ ಬಚ್ಚಲಿನ ತನಕ ದಂಬೆ ಇಡಿಸಿದ್ದೇನೆ. ಅಬ್ಬಿಯಲ್ಲಿ ಹಾಳಾಗುವ ನೀರು ಮನೆಯ ಕೆಲಸಕ್ಕೆ ಆಗುತ್ತದೆ. ಇಲ್ಲಿಂದ ಮುಕ್ಕಾಲು ಮೈಲು ಇಳಿಜಾರು ದಂಬೆ ಹರಿಯಿಸಿ ಇನ್ನಷ್ಟು ವಿಸ್ತಾರದ ಭೂಮಿಯನ್ನು ಫಲವತ್ತನ್ನಾಗಿ ಮಾಡುತ್ತೇನೆ ಎನ್ನುವ ಭರವಸೆ ಆಶಾವಾದ ಹಿರಿದಾದುದು.

**ಕೊನೆ ಟಿಪ್ಪಣಿ ೫೪** : ನೀರಿನೊಂದಿಗೆ ಸೆಣಸಲಾಗದೆ ಕಟ್ಟ ಕಡಿದಿತ್ತು ಹೊಸ ನದಿಯ ಬಾಯಿಗೇ ಗುಡ್ಡ ಜರಿದು ಕುಳಿತಿತು. ಸ್ವಲ್ಪ ಸ್ವಲ್ಪವೇ ಮಣ್ಣು ಗುಡ್ಡದಿಂದ ಜಾರಿ ಹೊಸ ದಾರಿಯ ಬಾಯಿ ಪೂರ ಮುಚ್ಚಿಕೊಂಡಿತ್ತು. ದೊಡ್ಡ ದೊಡ್ಡ ಕಲ್ಲುಗಳು ಜಾರಿ ಕುಳಿತಲ್ಲೇ ಪೋಣಿಯನ್ನು ನೋಡಿ ನಕ್ಕಿತು. ಮಣ್ಣು

ಮಣ್ಣು! ಪೂರ ಜಾರಿದ ಮಣ್ಣು–ಕೆಸರು ! ಅಡ್ಡ ಬಿದ್ದ ಗಿಡ ಮರಗಳು– ಬೇರುಗಳು ! ನೀರು ಅದರಷ್ಟಕ್ಕೇ ಹಳೆ ದಾರಿಯಲ್ಲಿ 'ಏನು ತಿಳಿಯದ ಸಣ್ಣ ಮಗುವಿನ ಹಾಗೆ ತನ್ನ ಪಾಡಿಗೆ ತಾನು ಹರಿಯುತ್ತಿತ್ತು ನದಿ.

**ಕೊನೆ ಟಿಪ್ಪಣಿ ೫೫ :** ಈ ಸಮಯದಲ್ಲೊಂದು ಕೆಲಸವಾಯಿತು. ಕಲೆಕ್ಟ್ ಮನ್ರೊ ಸಾಹೇಬರು ಅಕ್ಕಿ ಭತ್ತದ ತೆರಿಗೆಯನ್ನು ರದ್ದು ಮಾಡಿ ತೆರಿಗೆಯನ್ನು ಹಣದ ಸ್ವರೂಪದಲ್ಲೇ ಕೊಡಬೇಕೆಂದು ನಿರ್ಧರಿಸಿದರು. ಅಕ್ಕಿ ಭತ್ತದ ವ್ಯಾಪಾರ ಫರಂಗಿಯವರ ಕೈಯ್ಯಲ್ಲಿ ಇತ್ತು. ಬೆಳೆಗೆ ಅವರು ಹೇಳಿದ್ದೆ ಕ್ರಯ. ಕೊಳ್ಳುವವರಿಲ್ಲದೆ ಅಕ್ಕಿ ಭತ್ತ ತೆಂಗಿನಕಾಯಿಯ ಕ್ರಯ ಬಿದ್ದು ಮಣ್ಣು ತಿಂದಿತು. ಜನರಿಗೆ ಮನ್ರೊ ಸಾಹೇಬರ ಹಣ, ತೆರಿಗೆ , ಸುಂಕ ಕೊಡಲು ಅಗಲಿಲ್ಲ. ಫರಂಗಿಗಳ ಪೀಡೆ ಹೆಚ್ಚಾಯಿತು. ಜನರ ಅಸಮಾಧಾನವು ಹೆಚ್ಚಿತು. ಅಮರ ಸುಳ್ಯಗಳಲ್ಲಿ ಊರಿಗೆ ಊರೇ ದಂಗೆ ಏಳಲು ಶುರುಮಾಡಿದರು. ಆ ದಂಗೆ ಕಲ್ಯಾಣಪ್ಪನ ಪ್ರತಿರೋಧಕ್ಕೆ ಸಿಕ್ಕ ಸದವಕಾಶವಾಗಿತ್ತು.

**ಕೊನೆ ಟಿಪ್ಪಣಿ ೫೬ :** ಅರಬ್ಬರು ಮತ್ತು ಪೋರ್ಚುಗೀಸರು ಈ ಊರಿಗೆ ಬರುವುದು ಸಾಂಬಾರು ಜಿನಸಿನ ವ್ಯಾಪಾರಕ್ಕೆ . ಅವರು ನಮ್ಮ ಊರಿನ ಕಾಡಿನ ಉತ್ಪತ್ತಿಗಳನ್ನು ಪಡೆದು ವ್ಯಾಪಾರ ಮಾಡಲು ಬರುವುದೆಂದು ಹೇಳಿದಾಗ ಮಂಜಣನ ತಲೆಗೆ ವ್ಯಾಪಾರದ ವಿಷಯ ಹೊಕ್ಕಿತು. ಮಂಜಣ್ಣ ತಮ್ಮಂದಿರನ್ನು ಕರೆದು ರಾಯಪ್ಪ ನಾಯ್ಕ ಹೇಳುವುದನ್ನು ಕೇಳಲು ಹೇಳಿದ. ... ರಾಯಪ್ಪ ನಾಯ್ಕ ಅವರಲ್ಲಿ ಇಡೀ ಊರಲ್ಲಿ ಕಾಯಿಯನ್ನು ತಂದು ಮಾರುವ ಕಾಡು ಉತ್ಪತ್ತಿಗಳಾದ ಒಳ್ಳೆ ಮೆಣಸು, ಏಲಕ್ಕಿ, ಲವಂಗ, ದಾಲಚೀನಿ ಎಲ್ಲ ಒಣಗಿಸಿ ಬಂಡಸಾಲೆಗೆ ಹಾಕಿದರೆ ಒಳ್ಳೆಯ ಕ್ರಯ ಕೊಡುತ್ತೇನೆ ಎಂದಾಗ ಮಂಜಣ್ಣಾಳ್ವ ಒಪ್ಪಿಕೊಂಡ. ಅದರ ಮೇಲೆ ರಾಯಪ್ಪ ನಾಯ್ಕ ತೆಂಗಿನಕಾಯಿಯ ಒಣಕೊಬ್ಬರಿಯ ವ್ಯಾಪಾರವೂ ತಿಳಿಸಿಕೊಟ್ಟ..... ಹೀಗೆ ರಾಯಪ್ಪ ನಾಯ್ಕನಲ್ಲಿ ಒಂದು ಹೊಸ ವ್ಯಾಪಾರ ಶುರುವಾಯಿತು. ಮಂಜಣ್ಣಾಳ್ವ ಮಸ್ಕತಿನ ಅಕ್ಕಿ ಆದಿಸೆಟ್ಟಿಗಲ್ಲದೆ ಬೇರೆ ಯಾರಿಗೂ ಕೊಡುವುದಿಲ್ಲವೆಂದು , ರಾಯಪ್ಪ ನಾಯ್ಕ ನಂತಹ ಸಾಹುಕಾರನಿಗೂ ಹೇಳಿದರು ಎನ್ನುವ ಮಾತು ಆದಿಶೆಟ್ಟಿಯ ಕಿವಿಗೂ ಬಿತ್ತು.

**ಕೊನೆ ಟಿಪ್ಪಣಿ ೫೭ :** ಮಿತ್ತಬೈಲಲ್ಲಿ ಬಂದು ನಿಂತ ಸುಬ್ಬಯ್ಯಣ್ಣನಿಗೆ ಆಶ್ಚರ್ಯದ ಮೇಲೆ ಆಶ್ಚರ್ಯ ಇದ್ದಿತು. ಅಷ್ಟು ದೊಡ್ಡ ಹಚ್ಚ ಹಸುರಿನ ಭೂಮಿ ಪಾಳು ಬಿದ್ದಿತ್ತು. ಮನೆಯ ಸುತ್ತಮುತ್ತ ಭತ್ತ, ಎತ್ತು, ಗದ್ದೆ , ಹಟ್ಟಿ ಬೋಳು ಬೋಳಾಗಿ ಕಾಣುತ್ತಿತ್ತು. ಗುತ್ತು ಮನೆತನದ ಮನೆ ಹುಲಿ ತಿಂದು ಉಳಿದ ಹಸುವನ್ನು ಹೇಗೆ ಕತ್ತೆ ಕಿರುಬ ಎಳೆದಾಡುತ್ತಿದ್ದವೋ ಹಾಗೆಯೇ ತೋರುತ್ತಿತ್ತು. ಹರಿದು ಚೆಲ್ಲಾಪಿಲ್ಲಿಯಾದ ಮನೆ ಮಾಡುಗಳನ್ನು ಮರು ಜೋಡಿಸದೆ (ಬೇವದೆ) ಬೀಳಲು ತಯಾರು ಆದ ಹಾಗೆ ಕಾಣಿಸುತ್ತಿತ್ತು. ಮನೆಯ ಯುವಕರು ಮಕ್ಕಳು ಕೇಳುವವರಿಲ್ಲದೆ ಬಿದ್ದುಕೊಂಡಿದ್ದರು. ತಮ್ಮ ಮನೆ ತಮ್ಮ ಭೂಮಿ ಎಂದು ದುಡಿಯುವವರು ಒಬ್ಬರೂ ಇರಲಿಲ್ಲ. ಸಿಕ್ಕಿದ ಭತ್ತ, ಅಕ್ಕಿ, ಅಡಿಕೆ , ತೆಂಗಿನಕಾಯಿಗಳನ್ನು ಕದ್ದು ಮಾರುವುದೇ ಯುವಕರ ಕೆಲಸವಾಗಿತ್ತು. ಮತ್ತೆ ಕೆಲವರು ಊರಿನ ದೊಣ್ಣೆ ನಾಯಕರಂತೆ ತಿರುಗಾಡುತ್ತಿದ್ದರು. ಮನೆಯಲ್ಲಿ ಬೆಳೆದು ನಿಂತ ಹೆಣ್ಣು ಮಕ್ಕಳು, ಮದುವೆಯಿಲ್ಲದೆ ಒಬ್ಬರಿಗೊಬ್ಬರು ಜಗಳವಾಡಿಕೊಳ್ಳುವುದೇ ಕಸುಬಾಗಿತ್ತು. ಮನೆಯಲ್ಲಿ ಮೆರೆಯುತ್ತಿದ್ದವರೆಂದರೆ ಗುತ್ತಿನಾರರ ಹೆಂಡತಿ ಮಕ್ಕಳು ಮಾತ್ರ. ಅವರು ಹೊಸ ಹೊಸ ಸೀರೆ ಬಂಗಾರ ತೊಟ್ಟು ನೇಮ ಜಾತ್ರೆಗೆ ಆಟ ಕೂಟಕ್ಕೆ ತೆರಳುತ್ತಿದ್ದರು. ಮನೆಯ ಸೊಸೆಯಂದಿರಿಗೆ ಸರಿಯಾಗಿ ಉಡಲು ಬಟ್ಟೆಯೂ ಇರಲಿಲ್ಲ. ಮಾವನಲ್ಲಿ ಕೇಳಿದರೆ ಊರಲಲ್ಲಿದ ಬೈಗುಳ, ಅತ್ತೆಯ ಹಂಗಿನ ಮಾತುಗಳು ನಿರಂತರವಾಗಿತ್ತು.

**ಕೊನೆ ಟಿಪ್ಪಣಿ ೫೮ :** ರೈತಾಪಿ ವರ್ಗದ ಜನರಿಗೆ ನಮ್ಮ ಸರಕಾರ ತರುವ ಈ ಭೂ ಮಸೂದೆ ಈ ಭೂಮಿಯ ಬಡವರಿಗೊಂದು ಭಾಗ್ಯದ ಭಂಡಾರ, ಹಿಂದಿನಿಂದಲೂ ನಮ್ಮ ಹಿರಿಯರು ಭೂಮಿಯಲ್ಲಿ ದುಡಿದು, ಬೆವರು ಸುರಿಸಿ ಮಳೆ ಗಾಳಿ ಬಿಸಿಲು ಲೆಕ್ಕಿಸದೇ ದುಡಿದರು. ಹಣದ ಬಲ ಭೂಮಿಯ ಬಲ ಇಲ್ಲದೆ ಬದುಕಿದರು. ಕೆಸರು ಮಣ್ಣು ತುಳಿದು ಬೆಳೆ ತೆಗೆದರು. ಬಾಯಿಗೆ ಮೊಸರಿಲ್ಲದೆ ರೋಗರುಜಿನಗಳಿಗೆ ಮದ್ದಿಲ್ಲದೆ ನರಳಿದರು. ಎಷ್ಟು ದುಡಿದರೂ ಗೇಣುದ್ದದ ಹೊಟ್ಟೆ ತುಂಬಲು ಕಷ್ಟ, ಮೈತುಂಬಾ ಬಟ್ಟೆ ಅವರಿಗೆ ಕನ್ನಡಿಯ ಗಂಟು.

**ಕೊನೆ ಟಿಪ್ಪಣಿ ೫೯:** ಒಕ್ಕಲು ಮಸೂದೆ ಕಾನೂನಿನ ವಿವರಣೆಯನ್ನು ಕೊಡುತ್ತ ಉಳುವವನೇ ಹೊಲದೊಡೆಯ, ಯಾವ ಭೂಮಿಯಲ್ಲಿ ಯಾರು ಬೆವರು ಸುರಿಸಿ ಉಳುಮೆ ಮಾಡುತ್ತಾನೋ ಅವನಿಗೇ ಆ ಭೂಮಿಯ ಒಡೆತನವೆಂದು ಸರಕಾರ ದಾರಿ ತೋರಿಸಿ ಕೊಟ್ಟಿದೆ. ಅದಕ್ಕಾಗಿ ಜಗಳ ಹೊಡೆತ ಬಡಿತದ ಅಗತ್ಯವಿಲ್ಲ. ಹೆದರುವುದೂ ಬೇಡ.

**ಕೊನೆ ಟಿಪ್ಪಣಿ ೬೦ :** ಎಲ್ಲರನ್ನು ಉದ್ದೇಶಿಸಿ ಮಾತನಾಡುತ್ತ ಅಕ್ಷರ ಜ್ಞಾನವಿಲ್ಲದ ಬಡವರಿಗೆ ನಿಮ್ಮ ಸೇವೆಯ ಅಗತ್ಯವಿದ್ದು, ದೃಢ ಪತ್ರ ಬರೆಯಲು ಜನತಾ ನ್ಯಾಯಾಲಯಕ್ಕೆ ಕರೆದೊಯ್ಯಲು ಸಹಾಯ ಸಿಕ್ಕಿದರೆ ಯಾರ ತಾಂತ್ರಿಕ ಕೆಲಸಗಳು ನಡೆಯದು. ದಣಿಗಳು ತಮ್ಮನ್ನು ತಾವು ಉಳಿಸಿಕೊಳ್ಳಲು ಬೇರೆ ಬೇರೆ ತಂತ್ರಗಾರಿಕೆ ನಡೆಸಿದಾಗ ಜಾಗ್ರತೆಯಲ್ಲಿ ಇರಬೇಕು. ಕಲಿತ ಯುವಕರ ಬೆಂಬಲವಿದ್ದರೆ ಎಲ್ಲರೂ ಸದೃಢರಾಗಬಹುದು. ಯಾರೂ ಯಾರ ಎಂತಹ ಒತ್ತಾಯಕ್ಕೂ ಕಿವಿ ಕೊಡದೆ ದನಿಗಳಲ್ಲಿ ರಾಜಿಗೆ ಹೋಗದೆ ಬಲತ್ಕಾರಕ್ಕೆ ಬಗ್ಗದೆ ಮಂಗಾಟಕ್ಕೆ ಹುಚ್ಚರಾಗದೆ ಹೆಬ್ಬೆಟ್ಟು ಒತ್ತಬೇಡಿ.

**ಕೊನೆ ಟಿಪ್ಪಣಿ ೬೧ :** ಒಕ್ಕಲು ಮಸೂದೆಯ ಬಗೆಗೆ ಸೋಜರು ಹೇಳುವುದರಲ್ಲಿ ನಿಜವಾದರೆ ನಮಗೆ ಏನು ಉಳಿಯುತ್ತದೆ. ಆಸ್ತಿಯೆಲ್ಲ ಗೇಣಿಯವರ ಬಳಿ ಉಂಟು. ಇಷ್ಟು ವಯಸ್ಸಾಗಿಯೂ ಸಾಗುವಳಿ ಕೆಲಸದ ರುಚಿ, ಕ್ರಮ ಎರಡೂ ತಿಳಿಯದು ಏನಿದ್ದರೂ ಲಘುವಾದ ಕೆಲಸಕ್ಕೆ ಸರಿ. ತಾಯಿಯ ಕೊಂಡಾಟವೇ? ನನ್ನ ಸೋಮಾರಿ ಮರ್ಜಿ ಬಿಟ್ಟು ಎರಡು ಎಕರೆ ಭೂಮಿಯಲ್ಲಿ ಸ್ವಂತ ಸಾಗುವಳಿ ಮಾಡುತ್ತಿದ್ದರೆ ಇವತ್ತು ಹೆದರಿಕೆ ಇರಲಿಲ್ಲ ಅಕ್ಷರದ ಬಲವಾದರೂ ಇರುತ್ತಿದ್ದರೆ ಎಲ್ಲಾದರೂ ಕೆಲಸಕ್ಕೆ ಹೋಗಬಹುದಿತ್ತು.

**ಕೊನೆ ಟಿಪ್ಪಣಿ ೬೨ :** ನಮ್ಮ ಭೂಮಿ ಎಲ್ಲ ಗೇಣಿಯವರ ಬಳಿಯೇ ಇದೆ. ಗೇಣಿಯಿಂದಲೇ ಬದುಕುತ್ತಿದ್ದ ನಮಗೆ ಗೇಣಿದಾರರಿಗೆ ಕಷ್ಟ ಕೊಟ್ಟು ತಿಳಿಯದು. ಅವರೊಂದಿಗೆ ಒಳ್ಳೆಯ ಸಂಬಂಧವಿರಿಸಿಕೊಂಡು, ಅವರಲ್ಲಿದ್ದರೆ ನಮ್ಮಲ್ಲಿದೆ ಎಂದೇ ನಂಬಿದ್ದೆವು. ಅವರವರ ಮಧ್ಯದ ಸಣ್ಣಪುಟ್ಟ ಜಗಳಗಳನ್ನು ಪರಿಹರಿಸಿ ನಂಬಿಕೆಯಿಂದಲೇ ನಡೆಸಿಕೊಂಡು ಬಂದಿದ್ದೇನೆ. ಗೇಣಿ ಚೀಟು ಅವರು ಬೇಡವೆಂದರು ಕೊಡುತ್ತಾ ಬಂದಿದ್ದೇನೆ. ಹಾಗಾಗಿ ಅವರಿಗೆ ದೃಢಪತ್ರ ಕೊಡಲು ಸುಲಭ ಆಯಿತು. ನಮಗೆ ಈ ಕಾನೂನಿನಿಂದ ಹಿರಿಯರ ಭೂಮಿಯೆಲ್ಲಾ ಕೈ ಬಿಟ್ಟು ಹೋಗುತ್ತಿದೆ, ಎಂಬ ಆತಂಕ. ಊಟಕ್ಕೂ ಕಷ್ಟವಾಗಿ ಈ ಪ್ರಾಯದಲ್ಲಿ ಕೆಲಸ ಹುಡುಕಿಕೊಂಡು ಗಟ್ಟದ ದಾರಿ ಹಿಡಿಯಬೇಕಾಗಿದೆ. ನಾನು ಓದಿದ್ದು ಎಷ್ಟೆಂದು ನಿಮಗೂ ಗೊತ್ತಿದೆ. ಈಗ ಬದುಕುವ ದಾರಿ ಏನು ಹೇಳಿ ಇದೇ ವ್ಯಥೆಯಲ್ಲಿ ನನ್ನ ತಾಯಿ ಸತ್ತಳು. ಮನೆಯ ಭೂತಗಳಿಗೆ ವರ್ಷದ ಕಟ್ಟು ಕಟ್ಟಳೆಯ ಕೋಲ ಬಲಿ ನಡೆಯಬೇಕು. ಕುಲನಾಗನಿಗೆ ತಂಬಿಲ ಆಗಬೇಕು. ಭೂಮಿ ಬಿಟ್ಟು ಹೋದರೆ ಹಿರಿಯರು ನಂಬಿದ ಬೂತ ನಾಗ ಬಿಟ್ಟು ಹೊಗುತ್ತದಾ? ಅಗುವುದು ಆಗಬೇಕು. ಎಲ್ಲಾ ಖರ್ಚಿನ ದಾರಿ ಇವಕ್ಕೆಲ್ಲ ಏನು ಮಾಡುವುದು? ನೀವು ಹೇಳುವ ಇಷ್ಟು ಒಳ್ಳೆಯ ಕಾನೂನಿಂದ ನಮಗೆಂತಹ ಪರಿಹಾರ ಬರೆದಿದೆ.

**ಕೊನೆ ಟಿಪ್ಪಣಿ ೬೩ :** ಸಮಾಜದ ಸುಧಾರಣೆಯನ್ನು ಬಯಸುವ ಸೋಜರಿಗೆ ಹಾಗೆ ಹೇಳುವುದು ಸುಲಭ ಆದರೆ ವಿಸ್ತಾರ ಭೂಮಿಯ ಮನೆಯ ಕೊನೆ ಕುಡಿಯಾದ ನನಗೆ ಕೇಳಲು ಕಷ್ಟವಾಯಿತು. ನೂರು ಕೊಯಿಲು ಬೈಲುಗದ್ದೆ ಐವತ್ತೈದು ಕ್ಯೊಲಿನ ಬೆಟ್ಟು ಗದ್ದೆ, ಬೇಕಾದಷ್ಟು ಲಚ್ಚಿಲ್, ಗುಡ್ಡ, ಬೆಟ್ಟ ಎಷ್ಟೊಂದು ಸರಿಯಾಗಿ ಲೆಕ್ಕವೇ ಇಲ್ಲದ ಯಜಮಾನನಾದ ನಾನು ಸರ್ಕಾರದಲ್ಲಿ ಇರಲು ಭೂಮಿ ಬೇಡಬೇಕು. ಇದು ಹೇಸಿಗೆ ವ್ಯವಹಾರ ಬೇಡವೆಂದೇ ಆಯಿತು. ಸೋಜರಲ್ಲಿ ಇರುವ ಪರಿಹಾರ ಯಾವಾಗಕ್ಕೂ ಆಗುವಂತದಲ್ಲ. ನಾಚಿಕೆಯಿಲ್ಲದೆ ಬೇಡುವುದಕ್ಕಿಂತ ನೀರಿಲ್ಲದ ಬಾವಿಗೆ ಬೀಳುವುದೇ ಲೇಸು.

**ಕೊನೆ ಟಿಪ್ಪಣಿ ೬೪** ; ನೋಡು ಇದು ಕಂಪೆನಿ ಬಸ್ಸು, ಇದೇನು ಗುತ್ತಿನವರ ಸಾರೋಟು ಬಂಡಿಯಲ್ಲ. ಎತ್ತಿನ ಗಾಡಿಯೂ ಅಲ್ಲ. ಇದು ಸರಕಾರದ ಪರ್ಮಿಟ್ಟು ಪಡೆದು ಜನರಿಗೆ ಬೇಕಾಗಿ ನಡೆಸುವ ಬಸ್ಸು. ಸಮಯಕ್ಕೆ ಸರಿಯಾಗಿ ಹೋಗುವುದು ನಮ್ಮ ಬಸ್ಸಿನವರ ಕೆಲಸ. ಈ ದಾರಿಯುದ್ದಕ್ಕೂ ಶ್ರೀಮಂತರಿಗೆ, ಗುತ್ತಿನವರಿಗೆ ಕಾದು ಕುಳಿತರೆ ಬಸ್ಸು ಪುತ್ತೂರಿಗೆ ಮುಟ್ಟುವಾಗ ಎರಡು ದಿನ ಕಳೆಯಬಹುದು. ಇಲ್ಲಿ ಯಜಮಾನ್ತಿಗೆ ಕಾದು ನಿಲ್ಲಲು ಅಲ್ಲ ನಮಗೆ ಸಂಬಳ ಕೊಡುವುದು. ನಾವು ಸಮಯಕ್ಕೆ ಸರಿಯಾಗಿ ಜನರನ್ನು ಅವರವರ ಊರುಗಳಿಗೆ ತಲುಪಿಸಬೇಕೆಂದು ನಮಗೆ ಸಂಬಳ ಕೊಟ್ಟು ನೇಮಿಸುವುದು

**ಕೊನೆ ಟಿಪ್ಪಣಿ ೬೫:** ಮಿತ್ತ ಬೈಲಲ್ಲಿ ಎಷ್ಟೋ ಯುವಕರು ಇದ್ದಾರೆ ಅವರಿಗೆಲ್ಲಾ ಜವಾಬ್ದಾರಿ ಕೊಟ್ಟು, ಒಂದು ಕೆಲಸ ಕೊಟ್ಟು ಸರಿ ದಾರಿಗೆ ಕರಕೊಂಡು ಬನ್ನಿ ಮಾಮ. ಕಾಲ ಬದಲಾಗುತ್ತಿದೆ. ಈಗ ಅವರನ್ನು ನೀವು ಸರಿಯಾಗಿ ನೋಡಿಕೊಳ್ಳದಿದ್ದರೆ ನಾಳೆ ನಿಮಗೇ ಕಷ್ಟ ಆಗಲಿಕ್ಕಿದೆ. ನಾನು ಗಾಂಧಿವಾದಿ ನಿಮ್ಮ ಸರಕಾರಕ್ಕೆ ನಾನು ಪ್ರತಿಸ್ಪರ್ಧಿ. ನಾವು ಇದ್ದ ಹಾಗೇ ಇರುವ ಮಾವ ನನ್ನ ಮಿತ್ತ ಬೈಲಿನ ಛತ್ರದ ಶಾಲೆಗೆ ಸ್ವಲ್ಪ ಸಹಾಯ ಮಾಡಿ. ನಾನು ನಿಮಗೆಲ್ಲ ಆಗಾಗ ಸಿಗುತ್ತೇನೆ.

ಕೃಷಿ ಸಂಸ್ಕೃತಿ ಪಲ್ಲಟದ ನಿರ್ವಚನವನ್ನು ಗಮನಿಸಲು ಚರಿತ್ರೆಯನ್ನು ಗಮನಿಸುವುದು ಬಹಳ ಮುಖ್ಯ. ಶಿಲಾಯುಗದ ಮನುಷ್ಯನಿಂದ ಆರಂಭಿಸಿ ಇಂದಿನ ನಾಗರಿಕ ಜಗತ್ತಿನ ಜನರನ್ನು ಗಮನಿಸಿದರೆ ಹಲವಾರು ಸ್ಥಿತ್ಯಂತರಗಳು ಗೋಚರಿಸುತ್ತವೆ. ಗುಂಪು ಗುಂಪಾಗಿ ಅಲೆಮಾರಿಗಳಾಗಿ ಜೀವಿಸುತ್ತಿದ್ದ ಮನುಷ್ಯ ಬೇಟೆಯಾಡಲು ಆರಂಭಿಸಿದ್ದು ಮುಂದಿನ ಹಂತ. ಬೆಂಕಿಯ ಅನ್ವೇಷಣೆಯೊಂದಿಗೆ ಬೀಜವನ್ನು ಬಿತ್ತಿ ಕೃಷಿಯನ್ನು ಅನ್ವೇಷಣೆ ನಡೆಸಿದ್ದು ನಾಗರಿಕತೆ ಮುಂದುವರಿಯಲು ಕಾರಣವಾಯಿತು. ಸಮಾಜಶಾಸ್ತ್ರಜ್ಞರ ಚಿಂತನೆಯಂತೆ ಒಂದು ಸ್ವರೂಪದಲ್ಲಿ ಆದ ಬದಲಾವಣೆಯ ಪ್ರತಿಫಲನ ಇನ್ನೊಂದು ಸ್ವರೂಪದಲ್ಲೂ ಆಗುವುದಕ್ಕೆ ಸಾಧ್ಯವಾಯಿತು. ಕೃಷಿ ಸಂಸ್ಕೃತಿಯ ಪಲ್ಲಟ ಮತ್ತು ಸಂಸ್ಕೃತಿಯ ನಿರ್ವಚನಕ್ಕೂ ಪರಸ್ಪರ ಸಂಬಂಧವಿದೆ. ಕೃಷಿ ಹುಟ್ಟಿಕೊಂಡದ್ದರಿಂದ ಸಮಾಜದಲ್ಲಿ ಆದ ಬದಲಾವಣೆ ಸ್ಥಿತ್ಯಂತರಗಳೆಲ್ಲವೂ ಕೃಷಿ ಸಂಸ್ಕೃತಿ ಪಲ್ಲಟವೆಂದು ಅರ್ಥೈಸಬಹುದು. ಅದರ ಭಾಗವಾಗಿ ಜನರ ಜೀವನಧರ್ಮ, ಜೀವನಧೋರಣೆ, ಮೌಲ್ಯಗಳು ಹೇಗೆ ಪಲ್ಲಟಗೊಂಡವು ಎನ್ನುವುದು ಸಂಸ್ಕೃತಿಯ ನಿರ್ವಚನೆ ಎನಿಸಿಕೊಳುತ್ತದೆ. ಪರಸ್ಪರ ಕೊಳು ಕೊಡುಗೆಗಳು ಆಗಿರುವ ಈ ನಿರ್ವಚನವನ್ನು ವಿಶ್ಲೇಷಿಸುವುದರೊಂದಿಗೆ ಕೃಷಿ ಜಗತ್ತನ್ನು ಅರ್ಥೈಸುವ ಪ್ರಯತ್ನ ಮಾಡುವುದು ಒಂದರ ಬಿಂಬ ಇನ್ನೊಂದರ ಪ್ರತಿಬಿಂಬ ಎಂದು ಸರಳೀಕರಿಸದೆ ಸ್ಥಿತ್ಯಂತರಗಳು ಒಂದರ ನಂತರ ಇನ್ನೊಂದು ಕಾಲಾನುಕ್ರಮವಾಗಿ ನಡೆದಿದೆ ಎಂದು ಅರ್ಥೈಸದೆ ಪರಸ್ಪರ ಸಂಬಂಧಗಳು ಕೊಳು ಕೊಡುಗೆಯ ಸಂಕೀರ್ಣತೆಯನ್ನು ಹೊಂದಿವೆ. ಈ ಸೂಕ್ಷ್ಮವನ್ನು ಗಮನಿಸುತ್ತಲೇ ಈ ಅಧ್ಯಯನವನ್ನು ನಡೆಸಲಾಗಿದೆ.

ಕೃಷಿ ಸಂಸ್ಕೃತಿ ಪಲ್ಲಟದ ಸ್ಥಿತ್ಯಂತರಗಳನ್ನು ಈ ಕೆಳಗಿನ ಹಂತದಲ್ಲಿ ಗುರುತಿಸಲಾಗಿದೆ.

೧.ಕೃಷಿಯ ಅನ್ವೇಷಣೆ.

೨.ಕೃಷಿಯ ವಿಸ್ತರಣೆ.

೩.ಕೃಷಿಯ ನಿರ್ವಹಣೆ.

೪.ಕೃಷಿಯ ಬದಲಾವಣೆ.

೫.ಕೃಷಿಯ ಕಾಣೆ.

**ಕೃಷಿಯ ಅನ್ವೇಷಣೆ:**ಮನುಷ್ಯ ಬೇಟೆಯಾಡುತ್ತ, ಕಂದ ಮೂಲಗಳನ್ನು ಸಂಗ್ರಹಿಸುತ್ತ ನಡೆಸುತ್ತಿದ್ದ ಆಹಾರ ಸಂಗ್ರಹಣೆಯಿಂದ ಆಹಾರ ಉತ್ಪಾದನೆಯ ಕಡೆಗೆ ಸಾಗಿದುದು ಬಹಳ ಮಹತ್ವದ ಘಟ್ಟ. ತನ್ನ ಕುಟುಂಬದ ಹೊಟ್ಟೆ ಮತ್ತು ನೆತ್ತಿಯನ್ನು ತಂಪಾಗಿರಿಸಲು ಸ್ತ್ರೀಯೊಬ್ಬಳು ತನ್ನ ದೇಹದ ಸೃಜನಶೀಲತೆಯನ್ನು ಗಮನಿಸುತ್ತಲೇ ಮಣ್ಣಿನ ಸೃಜನಶೀಲತೆಯನ್ನು ಅನ್ವೇಷಿಸಿದಳು. ಹೊಟ್ಟೆಯ ಹಸಿವಿಗಾಗಿ ಸಂಗ್ರಹಿಸಿ ತಿಂದು ಎಸೆದ ಹಣ್ಣು ಹಂಪಲುಗಳು ಬೀಜದಿಂದ ಮೊಳಕೆಯೊಡೆದು ವಿಸ್ಮಯವನ್ನು ಕುತೂಹಲವಾಗಿ ಗಮನಿಸಿದಳು. ಸಂಸ್ಕೃತಿಯನ್ನು ಕಟ್ಟಿದವಳೇ ಸ್ತ್ರೀಯಾಗಿದ್ದಾಳೆ. ಪ್ರಕೃತಿ–ಸಂಸ್ಕೃತಿ–ಸ್ತ್ರೀಯ ಈ ನಿಷ್ಪನ್ನ ಹಲವಾರು ಬದಲಾವಣೆಗಳಿಗೆ ಮೈಲುಗಲ್ಲಾಯಿತು. ಪರಿಣಾಮವಾಗಿ ಬದುಕು ಸ್ತ್ರೀ ಕೇಂದ್ರಿವಾಗಿತ್ತು. ಹೆಣ್ಣು ಹುಟ್ಟಿಗೆ

ಕಾರಣಳು ಎಂಬ ಆಲೋಚನೆಯೇ ಆಕೆಗೆ ಮಾನ್ಯತೆಯ ಸ್ಥಾನವನ್ನು ಒದಗಿಸಿದವು. ಭೂಮಿ, ಹೆಣ್ಣು, ಮಣ್ಣುಗಳನ್ನು ಮಾತೃತ್ವದಿಂದ ದೈವತ್ವಕ್ಕೆ ಏರಿಸಿ ಒಂದೇ ಎಂದು ಬೆಸೆಯಲಾಯಿತು. ಗುಂಪು ಗುಂಪಾಗಿ ವಾಸಿಸುತ್ತಿದ್ದ ಜನರು ಪ್ರಕೃತಿಯ ನಿಗೂಢತೆಯನ್ನು ಬೆರಗು ಕಣ್ಣಿನಿಂದ ನೋಡಿದಂತೆ ಹೊಸ ಜೀವ ಸೃಷ್ಟಿಗೆ ಕಾರಣವಾಗುವ ಹೆಣ್ಣನ್ನು ಅಚ್ಚರಿಯಿಂದ ಗಮನಿಸುತ್ತಿದ್ದರು. ಹೆಣ್ಣಿನ ಪ್ರಾಧಾನ್ಯತೆಯಿದ್ದು ಸಮಾಜದಲ್ಲಿ ಗಂಡಸನ್ನು ಸ್ತ್ರಿಮೂಲದಿಂದಲೇ ಗುರುತಿಸಲಾಗುತ್ತಿತ್ತು. ತಾವು ವಾಸಿಸುವ ಸ್ಥಳದ ಸುತ್ತಮುತ್ತ ಪ್ರಾಕೃತಿಕವಾಗಿ ಲಭ್ಯವಾಗಿರುವ ನೀರು ಮತ್ತು ಮಣ್ಣನ್ನು ಗಮನಿಸಿ ಕಾಡಿನಕಾಡುತಳಿಗಳ ಪ್ರಾದೇಶಿಕ ಬೆಳವಣಿಗೆಯನ್ನು ಗಮನಿಸಿದರು. ಕಬ್ಬಿಣದ ಬಳಕೆಯ ಪೂರ್ವದ ಕಾಲಘಟ್ಟವಿದು.

ಕರಾವಳಿಯಲ್ಲಿ ಲಭ್ಯವಿರುವ ಮಾಹಿತಿಗಳಂತೆ ಕೃಷಿಯ ಚರಿತ್ರೆ ಕ್ರಿ.ಪೂ.ದ ಕಾಲಕ್ಕೆ ಸೇರುತ್ತದೆ. ಕಾಡುಗಳಲ್ಲಿ ಗುಂಪು ಗುಂಪಾಗಿ ವಾಸಿಸುತ್ತಿದ್ದ ಸಮುದಾಯಗಳು ನಿಧಾನವಾಗಿ ಕೃಷಿಯನ್ನು ನಿರ್ವಹಿಸಿದವು. ಕೆಲವು ಸಮುದಾಯಗಳು ಕೃಷಿಗೆ ಮನಸ್ಸು ಮಾಡದೆ ಬೇಟೆಯಲ್ಲಿ ಮತ್ತೆ ಕೆಲವು ಸಮುದಾಯಗಳು ಪಶುಪಾಲನೆಯಲ್ಲಷ್ಟೇ ತೊಡಗಿಕೊಂಡವು. ಗುಡ್ಡ ಕಾಡುಗಳಲ್ಲಿ ಬೆಳೆಯುವ ಕುಮೆರಿ ಕೃಷಿಯನ್ನು ಮೊದಲು ಬೆಳಸಿಕೊಂಡರು. ಈ ಪಂಗಡಗಳು ಈ ಪ್ರದೇಶದಲ್ಲಿ ಇದ್ದವರೇ ಇಲ್ಲಿಯ ಮೂಲನಿವಾಸಿಗಳೇ ಎನ್ನುವುದು ಚರ್ಚೆಯ ವಿಷಯ ಈ ವಾಗ್ವಾದ ಆರ್ಯ ಮತ್ತು ದ್ರಾವಿಡರ ಚರ್ಚೆಯಷ್ಟೇ ಪ್ರಾಚೀನವಾದುದು ಇಂದಿಗೂ ಕಾಡುಗಳಲ್ಲಿ ಇರುವ ಬುಡಕಟ್ಟು ಮತ್ತು ಗಿರಿಜನ ಸಮುದಾಯಗಳು ಕಾಡುತ್ಪತ್ತಿ ಮತ್ತು ಪಶುಪಾಲನೆಯಲ್ಲಿ ಜೀವನ ನಿರ್ವಹಣೆ ಮಾಡುತ್ತ ಬದುಕುತ್ತಿರುವುದು ಕಾಣಬಹುದು.

ತುಳು ಜಾನಪದ ಸಾಹಿತ್ಯದಲ್ಲಿರುವ ತುಳು ಪಾಡ್ದನಗಳು ತುಳು ನಾಡಿನಲ್ಲಿ ಆರಾಧನೆಗೊಳ್ಳುವ ಭೂತಗಳ ಪ್ರಸರಣದ ಕತೆಯನ್ನು ಹೇಳುತ್ತವೆ. ಹೆಚ್ಚಿನ ಎಲ್ಲಾ ಭೂತಗಳು ಘಟ್ಟ ಇಳಿದು ಬಂದವುಗಳೇ ಆಗಿವೆ. ಪರಶುರಾಮ ಸೃಷ್ಟಿಯ ಪುರಾಣ ಮತ್ತು ಐತಿಹ್ಯವನ್ನು ಸರಳೀಕರಿಸದೆ ಗ್ರಹಿಸುವುದಾದರೂ ಅದು ಈ ಯುಗದ ಪುರಾಣವಾಗಿ ಗೋಚರಿಸುವುದಿಲ್ಲ. ದಕ್ಷಿಣದಲ್ಲಿ ಜನವಸತಿ ಪಸರಿಸುತ್ತ ಪ್ರಕೃತಿಯ ಗಮನವನ್ನು ವಿಶ್ಲೇಷಿಸಿದುದರ ಪರಿಣಾಮವಾಗಿ ನಾಗಬೇದಿಗಳನ್ನು ಉಲ್ಲೇಖಿಸುತ್ತಾರೆ. ತಂಪಾಗಿರುವ ಪ್ರದೇಶ ನಾಗಬೇದಿಯಾಗಿ ಗುರುತಿಸಿಕೊಂಡು ಪ್ರಮುಖವೆನಿಸುತ್ತದೆ. ಪ್ರಕೃತಿಯ ಆರಾಧನೆಯನ್ನು ನಿರೂಪಿಸುವುದರೊಂದಿಗೆ ಪ್ರಕೃತಿಮೂಲದ ಈ ನೆಲೆ ನಾಗಮೂಲವೂ ಆಗಿದೆ ಸಂತಾನ ಪ್ರಾಪ್ತಿ ಮತ್ತು ಭೂಮಿಯ ಫಲವಂತಿಕೆಯನ್ನು ಹೆಣ್ಣಿನ ಫಲವಂತಿಕೆಯೊಂದಿಗೆ ಸಮೀಕರಿಸಲಾಗಿದೆ.

ಕರಾವಳಿಯಲ್ಲಿ ಸ್ತ್ರೀ ಕೇಂದ್ರಿತವಾಗಿ ನಡೆಯುವ ಕೃಷಿ ಚಟುವಟಿಕೆಗಳನ್ನು ಗಮನಿಸಿದರೆ ಹೆಣ್ಣಿನ ಪ್ರಾಧಾನ್ಯತೆಯನ್ನು ಕೃಷಿ ಸಂಸ್ಕೃತಿಯಲ್ಲಿ ಗುರುತಿಸಬಹುದು. ಭೂಮಿಯ ಒಡೆತನದ ಭೂಮಿ ಪ್ರಶ್ನೆ ಬರುವ ಪೂರ್ವದಲ್ಲಿಯೇ ಕರಾವಳಿಯ ಕೃಷಿ ಅನ್ವೇಷಣೆಯಾಗಿರುವ ಸಾಧ್ಯತೆಗಳಿವೆ. ಇದು ಕೇವಲ ಊಹಾತ್ಮಕ ಪರಿಕಲ್ಪನೆ ಅಲ್ಲ. ಇಂದಿಗೂ ಕೃಷಿ ಕಾರ್ಯದ ಒಳಗೆ ಹೆಣ್ಣಿನ ಶ್ರಮ ಮಹತ್ವವಾದುದನ್ನು ಇಲ್ಲಿ ಸ್ಪಷ್ಟವಾಗಿ ಗುರುತಿಸಬಹುದು.

**ಕೃಷಿಯ ವಿಸ್ತರಣೆ**: ಕೃಷಿಯ ವಿಸ್ತರಣೆಯ ಸ್ವರೂಪ ದೀರ್ಘ ಕಾಲೀನತೆಯೊಂದಿಗೆ ನಿರಂತರ ಚಟುವಟಿಕೆಯು ಆಗಿದೆ. ಇದರ ಸ್ಥಿತ್ಯಂತರಗಳು ಹಲವು ಮುಖಗಳನ್ನು ಹೊಂದಿವೆ. ಕಾಡನ್ನು ಕಡಿದು ನಾಡಾಗಿಸುತ್ತಾ ಹೊಲ ಗದ್ದೆಗಳನ್ನು ನಿರ್ಮಿಸಲಾಯಿತು. ಕಾಡಿನಲ್ಲಿ ವಾಸವಾಗಿದ್ದ ಬುಡಕಟ್ಟು ಅರಣ್ಯಕರು ಗಣಗಳನ್ನು ಗ್ರಾಮಗಳನ್ನಾಗಿ ಪರಿವರ್ತಿಸಲಾಯಿತು. ಅಲೆಮಾರಿಗಳಾಗಿ ಸುತ್ತಾಡುತ್ತಿದ್ದ ಸಮುದಾಯಗಳನ್ನು ಸ್ಥಿರಗ್ರಾಮಗಳಾಗಿ ಪರಿವರ್ತನೆ ಹೊಂದಿದವು. ಲೋಹಯುಗದ ಉಗಮದಿಂದ ಕಬ್ಬಿಣದ ಉಪಕರಣಗಳ ಬಳಕೆಯನ್ನು ಕೃಷಿಯಲ್ಲಿ ಅಳವಡಿಸಿದರು. ನೇಗಿಲನ ಬಳಕೆಯನ್ನು ಮಾಡುವುದರೊಂದಿಗೆ ಕೃಷಿಯನ್ನು ವಿಸ್ತರಿಸುತ್ತ ಆಹಾರದ ಉತ್ಪಾದನೆಯನ್ನು ಹೆಚ್ಚಿಸುತ್ತ ಬಂದರು. ಕೃಷಿ ವಿಸ್ತರಣೆಯಾಗುತ್ತ ಬಂದಂತೆ, ಸಂಪತ್ತಿನ ಅಧಿಪತ್ಯ ಹೆಚ್ಚಾಗಿ ಭೂಮಿಯ ಮೇಲಿನ ಒಡೆತನವನ್ನು ಖಾಸಗಿಯಾಗಿ ನಿರ್ಧರಿಸಿದರು.

ಅರಣ್ಯಕರು, ಬುಡಕಟ್ಟುಗಳು, ಗಣಗಳಾಗಿದ್ದವರು ಕೃಷಿಕಾರ್ಯದಲ್ಲಿ ತೊಡಗಿಸಿಕೊಂಡು ಗಣಧಾರಿಗಳಾಗಿ ಗಾವುಂಡರಾದರು. ಹೀಗೆ ಗಾವುಂಡರಾದವರಿಗೆ ಸೀತಾಭೂಮಿಗಳನ್ನು ನೀಡಲಾಗುತ್ತಿತ್ತು. ಈ ಸೀತಾಭೂಮಿಗಳೆಂದರೆ ಕೃಷಿಯೋಗ್ಯರಹಿತವಾದ ಭೂಮಿಗಳನ್ನು ಕೃಷಿ ಮಾಡಿದರೂ ತೆರಿಗೆ ರಹಿತವಾಗಿರುವುದು. ಖಾಸಗಿ ಭೂಮಿಯ ಒಡೆತನ ಮತ್ತು ಭೂಮಿ ಎನ್ನುವುದು ಸಂಪತ್ತಿನ ಅಧಿಪತ್ಯವಾಗಿ ಬಳಕೆಯಾಗುವುದು ಈ ಹಂತದಲ್ಲಿ ಬಳಕೆಗೆ ಬಂತು. ಭೂಮಿಯ ಒಡೆಯ ಪ್ರಭುವಾಗಿ ಗುರುತಿಸಿಕೊಂಡದ್ದು ಈ ಹಂತದಲ್ಲಿಯೇ.

ಈ ಭೂಮಿಗಳೆಲ್ಲ ಕೃಷಿ ವಿಸ್ತರಣೆ ಆದಂತೆಲ್ಲ ಕೃಷಿಗೆ ಪೂರಕವಾದ ಆಯಾಗಾರಿಕೆಯ ವೃತ್ತಿಗಳು ಹುಟ್ಟಿಕೊಂಡವು. ಪ್ರತಿಯೊಂದು ಗ್ರಾಮವು ಸ್ವಾವಲಂಬಿಯಾಗಿ ತನಗೆ ಬೇಕಾದ ಎಲ್ಲವನ್ನು ಗ್ರಾಮಗಳಲ್ಲೇ ಉತ್ಪಾದಿಸುತ್ತಿತ್ತು. ಹೊರಗಿನಿಂದ ತರುವುದಿದ್ದರೆ ಕಬ್ಬಿಣ ಮತ್ತು ಉಪ್ಪು ಮಾತ್ರ. ಕೃಷಿ ವಿಸ್ತರಣೆಯಾದಂತೆಲ್ಲಾ ಸಂಪತ್ತಿನ ಕ್ರೋಢೀಕರಣವು ಹೆಚ್ಚಾಗಿ ಆಯಗಾರಿಕೆ ಮಾಡುತ್ತಿದ ವೃತ್ತಿಗಳೆಲ್ಲ, ಜಾತಿಗಳಾಗಿ ಜಾತಿ ಮತ್ತು ವೃತ್ತಿಯೊಂದಿಗೆ ವ್ಯವಸ್ಥೆಯನ್ನು ನಾಜೂಕಾಗಿ ನಿರ್ವಹಿಸಿದ ಜಾಣ್ಮೆಯು ಮುಖ್ಯವಾಗಿದೆ.

ಕರಾವಳಿಯಲ್ಲಿಯೂ ಕೃಷಿ ವಿಸ್ತರಣೆಯಾದಂತೆಲ್ಲ ಕೆಲವು ಜನಾಂಗಗಳು ಕೃಷಿಯನ್ನು ಸ್ವೀಕರಿಸಿದವು. ವೃತ್ತಿಗಳು ಕೃಷಿ ಚಟುವಟಿಕೆಗೆ ಪೂರಕವಾಗಿದ್ದುದರಿಂದ ಜಾತಿಯಾಗಿ ಪರಿವರ್ತನೆ ಹೊಂದಿತು. ವರ್ಣಾಶ್ರಮ ಧರ್ಮಗಳನ್ನು ಮೀರಿ ಹುಟ್ಟಕೊಂಡ ಈ ಜಾತಿಗಳು, ಸಮಾಜವನ್ನು ಸುಸಂಬದ್ಧವಾಗಿ ಮುನ್ನಡೆಸಲು ಸಹಾಯವಾಗುತ್ತದೆ ಎಂದು ಬಿಂಬಿಸಲಾಯಿತು. ತುಳುನಾಡನ್ನು ನೇರವಾಗಿ ಯಾವುದೇ ಚಕ್ರವರ್ತಿಗಳು ಆಳದೇ ಇದ್ದರೂ ಸಾಮಂತ ಅರಸರ ಆಡಳಿತ ಪ್ರಭುತ್ವದ ಮುಖವಾಣಿಯಾಗಿತ್ತು. ಶ್ರಮಿಕ ಮತ್ತು ಒಡೆಯ ಎಂಬ ಎರಡು ವರ್ಗಗಳು ಸೃಷ್ಟಿಯಾಗಿದ್ದು, ಜಾತಿಯ ಕಾರಣಕ್ಕೆ ವರ್ಗಗಳು ಹುಟ್ಟಿಕೊಂಡವು. ಬೌದ್ಧ ಧರ್ಮವು ಪಸರಿಸುತ್ತಿದ್ದ ಕಾಲದ ಸಮಕಾಲಿನತೆ ಬೌದ್ಧ ಸಂಘಗಳು ಸ್ಥಾಪನೆಗೊಂಡಂತೆಲ್ಲಾ ಸ್ತೂಪಗಳು ವಿಹಾರಗಳು ಕರಾವಳಿಯಲ್ಲೂ ರಚನೆಯಾದವು.

**ಕೃಷಿಯ ನಿರ್ವಹಣೆ**: ಕೃಷಿ ಚಟುವಟಿಕೆಯ ನಿರ್ವಪಣೆ ಜಾಣ್ಮೆಯಿಂದಲೂ ಕೃಷಿ ವಿಸ್ತರಣೆಗೊಳ್ಳುತ್ತ ಬಂದಿತು. ಗ್ರಾಮಗಳಲ್ಲಿ ಶ್ರಮ ವಿಭಜನೆ ಮೊದಲಾದದ್ದರಿಂದ ಸ್ವಯಂಪೋಷಕ ಸ್ವಭಾವದ ಭೂಸ್ವಾಮ್ಯ ವ್ಯವಸ್ಥೆಗೆ

ಅಡಿಪಾಯ ಬಿದ್ದಿತ್ತು. ಪರಿಣಾಮವಾಗಿ ಭೂಮಿಯ ಒಡೆತನದ ಪರಿಕಲ್ಪನೆ ಹೆಚ್ಚು ಸ್ಪಷ್ಟವಾಯಿತು. ಹೊಲದಲ್ಲಿ ದುಡಿಯಲು ಕೃಷಿ ಕೂಲಿ ಕಾರ್ಮಿಕರು ಅವಶ್ಯವಿದ್ದುದರಿಂದ ಸಹಜವಾಗಿಯೇ ಊಳಿಗ ಮಾನ್ಯ ಪದ್ಧತಿ ಜಾರಿಗೆ ಬಂದಿತು. ಈ ವ್ಯವಸ್ಥೆಯನ್ನು ಮುಂದುವರಿಸಲು ಪಾಳೇಗಾರಿಕೆ ವ್ಯವಸ್ಥೆಯು ಹುಟ್ಟಿಕೊಂಡಿತು. ರಾಜರ ಆಡಳಿತ ವ್ಯವಸ್ಥೆಯಲ್ಲಿ ಭೂಮಿಯನ್ನು ಉಂಬಳಿಯಾಗಿ ದಾನವನ್ನಾಗಿ ನೀಡಲಾಯಿತು. ಈ ಹಂತದಲ್ಲಿ ಭೂಮಿ ಸದ್ದಿಲ್ಲದೆ ಸ್ತ್ರೀಯಿಂದ ಪುರುಷನ ಅಧಿಪತ್ಯಕ್ಕೆ ಒಳಗಾಗುತ್ತಾ ಬಂತು. ಭೂಮಿಯ ಒಡೆತನ ಪುರುಷಾಧಿಪತ್ಯಕ್ಕೆ ಸಾಗಿದಂತೆಲ್ಲಾ, ಸಂಪತ್ತಿನ ಪರಿಕಲ್ಪನೆ, ಲಾಭ–ನಷ್ಟದ ವಿಚಾರಗಳು ಗೋಚರವಾಗಿ ವ್ಯವಹಾರಗಳು ಹುಟ್ಟಿಕೊಂಡವು. ಕೃಷಿ ಮಾಡುವ ಭೂಮಿಗೆ ರಾಜರು ವಿಧಿಸುತ್ತಿದ್ದ ತೆರಿಗೆ, ಕೃಷಿಯೇತರ ಭೂಮಿಯನ್ನು ಸಾಗುವಳಿ ಮಾಡಲು ನೀಡುತ್ತಿದ್ದ ಬೆಂಬಲ, ತೆರಿಗೆ ವಿನಾಯ್ತಿಗಳು ಮುಖ್ಯವೆನಿಸಿದವು. ಭೂಮಿಯ ಒಡೆತನದ ಪ್ರಶ್ನೆ ಪ್ರಮುಖ ಅಂಶವಾಗಿತ್ತು.

ಕರಾವಳಿಯಲ್ಲಿಯೂ ನಡೆದ ಬೆಳವಣಿಗೆಗಳನ್ನು ಗಮನಿಸಿದಾಗ ಸ್ತ್ರೀ ಕೇಂದ್ರಿತ ವ್ಯವಸ್ಥೆಯ ಮುಖವಾಣಿಯಾಗಿ ಪುರುಷ ಕಾಣಿಸಿಕೊಂಡನು. ಭೂಮಿ ಕಾಣಿಗಳ ಯಜಮಾನಿಕೆ ಹೆಣ್ಣಿನದಾದರೂ ನಿರ್ವಹಣೆ ಗಂಡಿನದು ಆ ಮೂಲಕ ಗಂಡಿನ ಅಧಿಪತ್ಯ ಧೃಡಗೊಂಡಿತು. ಕುಟುಂಬದ ಕೇಂದ್ರ ಭಾಗದಲ್ಲಿ ಸ್ತ್ರೀ ಇದ್ದು ಸ್ತ್ರೀ ಸಂತತಿಗೆ ಮಾನ್ಯತೆ ಇತ್ತು. ಪ್ರಭುತ್ವದ ಮುಂಚೂಣಿಯಲ್ಲಿ ಪುರುಷನ ಅಧಿಪತ್ಯವೂ ಇತ್ತು. ಉತ್ಪಾದನಾ ವ್ಯವಸ್ಥೆಯಲ್ಲಿ ಸಂತಾನವನ್ನು ಪಡೆದು ಜನ ಸಮೂಹವನ್ನು ಗದ್ದೆಯಲ್ಲಿ ದುಡಿಸಿಕೊಳ್ಳಲು ಬಳಸುವುದೂ ಮುಖ್ಯವಾಗಿತ್ತು. ಧಾನ್ಯಗಳ ಉತ್ಪಾದನಾ ವ್ಯವಸ್ಥೆಯ ಒಡೆತನವನ್ನು ಹೊಂದುವುದರ ಮೂಲಕ ಸಂಪತ್ತಿನ ಒಡೆತನ ಸಾಧ್ಯವಾಯಿತು. ವೃತ್ತಿ ಶ್ರೇಣಿಗಳು ಜಾತಿಗಳಾಗಿ ಪರಿವರ್ತನೆ ಹೊಂದಿದಂತೆ ಆ ಜಾತಿಗಳು ವೃತ್ತಿಯನ್ನು ತ್ಯಜಿಸಿ ಕೃಷಿಗೆ ಆಸಕ್ತಿ ವಹಿಸಿದ್ದರಿಂದ ಹುಟ್ಟಿಕೊಂಡ ವಿವರಣೆಗಳು ಜಾನಪದದಲ್ಲೂ ಸಿಗುತ್ತದೆ. ಉದಾ:– ಕೋಟಿ ಚೆನ್ನಯನ ಪಾಡ್ದನ, ಬ್ರಹ್ಮ ಬಲಾಂಡಿಯ ಪಾಡ್ದನ, ಕಾಂತಾಬಾರೆ ಬುಬಾಬಾರೆಯ ಪಾಡ್ದನ, ಸಿರಿ ಪಾಡ್ದನಗಳಲ್ಲಿ ಇದಕ್ಕೆ ಸಾಕ್ಷಿಯಾಗಿದೆ. ಮೂರ್ತೆ ಮಾಡುತ್ತಿದ್ದವರು ಗದ್ದೆ ಸಾಗುವಳಿಗೆ ಮನಸ್ಸು ಮಾಡಿದ್ದರಿಂದ ಹುಟ್ಟಿಕೊಂಡ ಸಂಘರ್ಷ, ರಾತ್ರಿ ಹಗಲಾಗುವುದರ ಒಳಗಾಗಿ ಇಡೀ ಗದ್ದೆಯನ್ನು ಸಾಗುವಳಿ ಮಾಡಿ ಕೃಷಿ ಕಾರ್ಮಿಕರು ಮಾಡಿದ ಸ್ವಾಯತ್ತತೆಯ ಹೋರಾಟಗಳು ಮುಖ್ಯವೆನಿಸುತ್ತವೆ. ಭೂಮಿಯ ಒಡೆತನಕ್ಕಾಗಿ ನಡೆದ ಸಂಘರ್ಷಗಳು ಭೂಮಿ ಪ್ರಶ್ನೆಯನ್ನು ಬಹಳ ಗಂಭೀರವಾಗಿ ಎತ್ತುತ್ತವೆ.

**ಕೃಷಿಯ ಬದಲಾವಣೆ:** ಭೂಮಿಯ ಒಡೆತನ ಸ್ಪಷ್ಟ ರೂಪ ಪಡೆಯುತ್ತಿದ್ದರೂ ಒಡೆತನ ಏಕರೂಪದ್ದಾಗಿರಲಿಲ್ಲ. ರಾಜನಿಗೆ ಸೇರಿದ ಭೂಮಿ, ಖಾಸಗಿ ಭೂಮಿ, ಸಾಮುದಾಯಿಕ ಭೂಮಿ, ಹಾಗೂ ಜಂಟಿ ಒಡೆತನದ ಭೂಮಿ, ದಾನದ ರೂಪದಲ್ಲಿ ಪಡೆದು ಭೂಮಿಯೆಂದು ಗುರುತಿಸುತ್ತಾ ಕೃಷಿಯನ್ನು ನಿರ್ವಹಣೆ ಮಾಡುವುದರೊಂದಿಗೆ ಕೃಷಿಯ ವಿಸ್ತರಣೆಯು ನಡೆಯಿತು. ಕೃಷಿಯ ಬದಲಾವಣೆಯನ್ನು ಮುಖ್ಯವಾಗಿ ಎರಡು ಹಂತದಲ್ಲಿ ಗುರುತಿಸಲಾಗುತ್ತದೆ. ವಸಾಹತುಶಾಹಿ ಆಡಳಿತ ಪೂರ್ವದಲ್ಲಿ ರಾಜಪ್ರಭುತ್ವಗಳ ಆಳ್ವಿಕೆಯಲ್ಲಿ ಭೂಮಿಯ ಒಡೆತನದಲ್ಲಿ ಆದ ಬದಲಾವಣೆ ಮತ್ತು ವಸಾಹತು ಆಳ್ವಿಕೆಯ ನಂತರದಲ್ಲಿ ಕೃಷಿ ಭೂಮಿಯ ನಿರ್ವಹಣೆಯಲ್ಲಿ ಆದ ಬದಲಾವಣೆಗಳು. ಬಹಳ ಪ್ರಮುಖವಾದವು.

ವಸಾಹತು ಶಾಹಿ ಆಳ್ವಿಕೆಯ ಪೂರ್ವದಲ್ಲಿ ಅನೇಕ ಧಾರ್ಮಿಕ ಸಂಘಟನೆಗಳು ಮುಖ್ಯವಾಗಿ ಹಿಂದೂ ದೇವಾಲಯಗಳು, ಮಠಗಳು, ಜೈನ ಬಸದಿಗಳು ವ್ಯಕ್ತಿಗತ ಬ್ರಾಹ್ಮಣರು ಹಿನ್ನೆಲೆಯಲ್ಲಿ ಭೂಮಾಲಕತ್ವವನ್ನು ಪಡೆದಿದ್ದು, ಸಹಜವಾಗಿಯೇ ಅವರಿಗೆ ಭೂಮಿಯೊಂದಿಗೆ ಅನೇಕ ಸಮಾಜಿಕ ಹಾಗೂ ಊಳಿಗಮನ್ಯದ ಸವಲತ್ತುಗಳು ದೊರಕಿದ್ದವು. ಬಹುದೊಡ್ಡ ಒಕ್ಕಲುಗಳ ಸೈನ್ಯ, ಕೈ ಕಾಲಿಗೆ ಸೇವಕರು, ಬಿಟ್ಟಿ ಮತ್ತು ಜೀತದಲ್ಲಿ ನಿರಂತರ ದುಡಿಯುವ ಕೂಲಿಯಾಳುಗಳ ಪಡೆ ಅವರ ಹಿಂದೆ ಸದಾ ಇರುತಿತ್ತು. ಇವರು ಸಮಾಜದಲ್ಲಿ ಪ್ರಮುಖ ಸ್ಥಾನವನ್ನು ಹೊಂದಿದ್ದರು. ನಂತರದ ಸ್ಥಾನವನ್ನು ಒಕ್ಕಲುಗಳು ಮತ್ತು ಗೇಣಿದಾರರು ಹಾಗೂ ಮಧ್ಯವರ್ತಿಗಳು ಹೊಂದಿದ್ದರು. ಆ ದಿನಗಳಲ್ಲಿ ಜಿಲ್ಲೆಯ ಸಾಮಾಜಿಕ ಬದುಕು ಪೂರ್ತಿಯಾಗಿ ಕೃಷಿ ಕೇಂದ್ರಿತವಾಗಿದ್ದು ಸಮಾಜರಚನೆಯ ಬಹುತೇಕ ಕೃಷಿ ಮೂಲದಿಂದಾಗಿದೆ. ಟಿಪ್ಪುವು ತನ್ನ ಆಡಳಿತ ಕಾಲದಲ್ಲಿ ಹೊಸ ರೀತಿಯ ತೆರಿಗೆಯನ್ನು ಅಳವಡಿಸಿದ್ದು, ಭೂಮಿಯನ್ನು ಬಂಜರಾಗಿಸಿದವರಿಗೆ ದಂಡ ವಿಧಿಸುತ್ತಿದ್ದನು.

ವಸಾಹತುಶಾಹಿ ಆಡಳಿತದ ಸಂದರ್ಭದಲ್ಲಿ ಮೊತ್ತ ಮೊದಲ ಬಾರಿಗೆ ಭೂಮಿಯನ್ನು ಅಳತೆ ಮಾಡಲಾಯಿತು. ಭೂ ಕಂದಾಯವನ್ನು ಮರು ನಿಗದಿಗೊಳಿಸಿದರು. ಬ್ರಿಟಿಷ್ ನ್ಯಾಯಾಂಗ ವ್ಯವಸ್ಥೆಯಲ್ಲಿ ರೈತರ ಖಾಸಗಿ ಆಸ್ತಿ ಭೂ ಕಂದಾಯಕ್ಕೆ ವಿನಿಮಯಗೊಳ್ಳುತ್ತಿತ್ತು. ಬಡ್ಡಿವ್ಯಾಪಾರ, ಭೂಮಿ ಅಡವು ಮತ್ತು ಏಲಂ ವ್ಯವಸ್ಥೆ ಚಾಲ್ತಿಗೆ ಬಂತು. ಸಾಮಾಜಿಕ ವ್ಯವಸ್ಥೆಯಲ್ಲಿ ಮುಖ್ಯವಾಗಿ ನಾಲ್ಕು ವರ್ಗಗಳು ಇದ್ದವು. ಅತ್ಯಂತ ಉನ್ನತ ಶ್ರೇಣಿಯಲ್ಲಿ ಜಮೀನ್ದಾರ, ನಂತರದಲ್ಲಿ ಶ್ರೀಮಂತ ರೈತ, ನಂತರದ ಹಂತದಲ್ಲಿ ಬಡ ಹಿಡುವಳದಾರ ಮತ್ತು ಅತ್ಯಂತ ಕೊನೆಯಲ್ಲಿ ಭೂರಹಿತ ಕೂಲಿಕಾರರು ಇದ್ದರು. ಕೆಳವರ್ಗ ಮತ್ತು ಕೆಳ ಜಾತಿಯ ದಲಿತ ಮಂದಿ ಭೂಮಿಯ ಒಡೆಯರಾಗಿರಲಿಲ್ಲ. ಬ್ರಿಟಿಷರು ಮತ್ತು ಮಿಶನರಿಗಳು ಭೂರಹಿತರಾದ ಕೃಷಿ ಕೂಲಿಕಾರ್ಮಿಕರನ್ನು ಭೂಮಾಲಿಕರನಿರಂತರ ದಬ್ಬಾಳಿಕೆಯಿಂದ ರಕ್ಷಣೆ ಮಾಡಲು ಮತಾಂತರಗೊಳಿಸಿದರು. ಭೂಮಿಯ ಒಡೆತನವನ್ನು ಅವರಿಗೆ ನೀಡಿ ಮತಾಂತರಗೊಂಡವರಿಗೆ, ಕಂದಾಯವನ್ನು ಮನ್ನಾ ಮಾಡಿದರು. ಕೃಷಿ ಚಟುವಟಿಕೆಗಳಲ್ಲಿ, ಮತಾಂತರಗೊಂಡ ಜನರಿಗೆ ಕೆಲಸವನ್ನು ನೀಡದೇ ಇದ್ದಾಗ ಸಣ್ಣ ಸಣ್ಣ ಉದ್ದಿಮೆಗಳು ಸ್ಥಾಪನೆಗೊಂಡವು. ದುಡಿಮೆಯ ಪರಿಕಲ್ಪನೆಯೇ ಇದರಿಂದ ಬದಲಾಯಿತು. ಐರೋಪ್ಯ ಜೀವನ ಶೈಲಿಯ ಪ್ರಭಾವದಿಂದ ನಗರಗಳಿಗೆ ವಲಸೆ ಹೆಚ್ಚಾಯಿತು. ಸಾಮಾಜಿಕ ವ್ಯವಸ್ಥೆಯ ಒಳಗೆ ವರ್ಗ ವ್ಯತ್ಯಾಸ ಮತ್ತು ಜಾತಿ ವ್ಯತ್ಯಾಸಗಳು ಕಣ್ಣಿಗೆ ರಾಚುವಂತೆ ಗೋಚರಿಸುತ್ತಿತ್ತು. ವಸಾಹತು ಶಾಹಿ ಆಡಳಿತದ ಪ್ರತಿಫಲನವಾಗಿ ಕರವಳಿಯಲ್ಲಿ ಮೊತ್ತ ಮೊದಲ ಬಾರಿ ರೈತರು ಬ್ರಿಟಿಷ್ ಆಡಳಿತದ ವಿರುದ್ಧ ದಂಗೆ ಎದ್ದರು. ಅಮರ ಸುಳ್ಯದ ದಂಗೆ ಅಥವಾ ಕಲ್ಯಾಣಪ್ಪನ ಕಾಟ್ಕಾಯಿ ಎಂದೇ ಪ್ರಸಿದ್ಧವಾದ ರೈತ ಚಳುವಳಿ ಭೂಮಾಲೀಕರ ವಿರುದ್ಧ ಕಂದಾಯ ಮತ್ತು ತೆರಿಗೆ ವ್ಯವಸ್ಥೆಯನ್ನು ವಿರೋಧಿಸುವುದರೊಂದಿಗೆ ಭೂಮಿಯ ಒಡೆತನದ ಪ್ರಶ್ನೆಯೇ ಬಹಳ ಮಹತ್ವವಾಗಿತ್ತು. ಬ್ರಿಟಿಷರು ತಮ್ಮ ಅಧಿಕಾರದ ಬಲದಿಂದ ದಂಗೆ ಎದ್ದವರನ್ನು ಸಾರ್ವಜನಿಕವಾಗಿ ನೇಣುಗಂಬ ಏರಿಸಿ ಹದ್ದು ಕಾಗೆಗಳಿಗೆ ಅವರ ಶವವನ್ನು ಆಹಾರವಾಗಿಸಿ ರೈತಾಪಿ ವರ್ಗದಲ್ಲಿ ಭಯವನ್ನು ಹುಟ್ಟು ಹಾಕಿದರು.

ಭೂಮಿಯ ಒಡೆತನದ ಕಾರಣಕ್ಕಾಗಿ ಆಡಳಿತವನ್ನು ಬಲಪಡಿಸಿದ್ದು ಅಲ್ಲದೆ ಕೃಷಿಯನ್ನು ಸಂಪತ್ತಿನ ಮೂಲವಾಗಿ ಗ್ರಹಿಸಿದರು. ಫಲವತ್ತಾದ ಹಾಗೂ ವಿಸ್ತಾರವಾದ ಕೃಷಿ ಭೂಮಿ ಹೊಂದಿದವರು ಶ್ರೀಮಂತರಾಗುತ್ತಾ ಹೋಗಿ, ಬಡವ ಶ್ರೀಮಂತರ ಅಂತರ ಹೆಚ್ಚುತ್ತಾ ಹೋಯಿತು. ಪರಿಣಾಮ ಪಾಳೇಗಾರಿಕೆ ಮತ್ತು ಊಳಿಗಮಾನ್ಯತೆಯನ್ನ ಕೃಷಿಯ ಕೆಲಸ ಕಾರ್ಯಗಳ ಪೋಷಣೆಗೆ ನಿರಂತರವಾಗಿ ಬೆಂಬಲಿಸುತ್ತಾ ಬರಲಾಯಿತು. ಈ ಎಲ್ಲ ಸ್ಥಿತ್ಯಂತರಗಳಿಗೆ ಕರಾವಳಿ ಒಡ್ಡಿಕೊಳುತ್ತಿರುವಂತೆ ಜನರ ಜೀವನ ಧರ್ಮದಲ್ಲೂ ಪಲ್ಲಟಗಳು ಗೋಚರಿಸಿದವು. ಸಂಪತ್ತು ದುಡ್ಡಿನ ಮೂಲವಾಗುತ್ತಿಂದಂತೆ ಕೃಷಿ ಸಂಸ್ಕೃತಿಯಲ್ಲಿ ಆರಾಧಾನೆಗೊಳ್ಳುತ್ತಿದ್ದ ಗಣಪತಿಗೆ ಅಕ್ಕಿ ತೆಂಗಿನಕಾಯಿ ವೀಳ್ಯದೆಲೆ ಅಡಿಕೆಯನ್ನಿಟ್ಟು ಬಾಳೆಯ ಎಲೆ ತುದಿಗೆ ಐದು ಪನವು(ಒಂದು ಕಾಲು ರೂಪಾಯಿ) ಬಿತ್ತು. ಬಹಳ ಸಾಂಕೇತಿಕವಾಗಿ ಕೃಷಿ ಪಲ್ಲಟದ ಅವಸ್ಥಾಂತರ ಇಲ್ಲಿ ಗೋಚರಿಸುತ್ತದೆ.

**ಕೃಷಿಯೇ ಕಾಣೆ:**'ದುಡಿಮೆ'ಯ ಪರಿಕಲ್ಪನೆ ಬದಲಾದಂತೆಲ್ಲ ಸಂಪತ್ತಿನ ಪರಿಕಲ್ಪನೆಯು ಬದಲಾಯಿತು. ಮನೆಯಂಗಳದಲ್ಲಿ ಜೋಡಿಸಿದ ಜೋಡು ತುಪ್ಪೆ ಸಂಪತ್ತಿನ ನಿಷ್ಪತ್ತಿಯಾಗದೆ ದುಡ್ಡು ಕಾಸು ಮುಖ್ಯವಾಯಿತು. ಮಿಶನರಿಗಳು ನಡೆಸಿದ ಸಮಾಜಮುಖಿ ಕಾರ್ಯಚಟುವಟಿಕೆಗಳ ಜತೆಗೆ ಆದ ಮತಾಂತರ ಒಳಕುದಿಯಲ್ಲಿ ಒಂದು ಭಯ ಆತಂಕವನ್ನು ಹುಟ್ಟುಹಾಕಿತ್ತು. ಬ್ರಿಟಿಷರು ಮತ್ತು ಮಿಶನರಿಗಳು ನಡೆಸಿದ ಕಾರ್ಯಚಟುವಟಿಕೆಯಿಂದ ೨೦ನೇ ಶತಮಾನದ ಆರಂಭದ ಕಾಲದಿಂದಲೇ ಬದಲಾವಣೆಗಳು ಕೃಷಿ ಕ್ಷೇತ್ರ ಮತ್ತು ಜನಜೀವನದಲ್ಲೂ ಉಂಟಾಯಿತು. ಪಾಳೇಗಾರಿಕೆ ವ್ಯವಸ್ಥೆಯ ಮುಂದುವರಿದ ಭಾಗವಾಗಿ ಬ್ರಿಟಿಷರ ನಿರಂಕುಶ ಆಡಳಿತ ಸಾಗುತ್ತಿದ್ದಂತೆ ಕೃಷಿ ಉತ್ಪನಗಳು ಹೊರ ದೇಶಗಳಿಗೆ ರಫ್ತಾಗುವುದು ಹೆಚ್ಚಿತು. ಕರಾವಳಿಯಲ್ಲಿದ್ದ ಎರಡು ಬಂದರುಗಳು, ಹೊರಜಗತ್ತಿನೊಂದಿಗೆ ಬಹಳ ಮುಕ್ತವಾದ ಸಂಬಂಧವನ್ನು ಇರಿಸಿಕೊಂಡಿದ್ದವು. ಕೃಷಿಯ ಉತ್ಪನಗಳನ್ನು ಸಂಗ್ರಹಿಸಿಡುವ ಬಂಡಸಾಲೆಗಳು ಬಂದರು ಪ್ರದೇಶದಲ್ಲಿ ಸ್ಥಾಪನೆಗೊಂಡವು. ಆಹಾರದ ಬೆಳೆಗಳು ವ್ಯಾಪಾರದ ಬೆಳೆಗಳಾಗಿ ಪಲ್ಲಟಗೊಂಡವು. ಅತ್ಯಂತ ಹೆಚ್ಚಾಗಿ ಬೆಳೆಯುತ್ತಿದ್ದ ಭತ್ತ ಮತ್ತು ಕರಿಮೆಣಸು ಪ್ರಮುಖ ರಫ್ತಿನ ಸರಕುಗಳಾಗಿದ್ದವು.

ವಸಹತುಶಾಹಿ ಆಡಳಿತ ಭೂಮಿಯನ್ನು ನಿರ್ವಹಣೆ ಮಾಡಿದ ಜಾಣ್ಮೆ, ವಿಧಿಸಿದ ತೆರಿಗೆಗಳು ಕೃಷಿಯನ್ನು ವಿಸ್ತರಿಸುವಲ್ಲು ಸಹಕಾರಿಯಾದವು. ಇಡೀ ಕರಾವಳಿಯ ಭೂಮಿಯನ್ನು ಅಳತೆ ಮಾಡಿ ಮಣ್ಣು ಮತ್ತು ನೀರಿನ ಲಭ್ಯತೆಯನ್ನು ಗಮನಿಸಿ ತರಿ, ಖುಷ್ಕಿ, ಖದೀಂ ಎಂದು ವಿಂಗಡಿಸಿದರು. ಪಾಳು ಬಿದ್ದ ಭೂಮಿಗೆ ತೆರಿಗೆ ವಿಧಿಸಿ ಭೂರಹಿತರಿಗೆ ನೀಡಿದ್ದರಿಂದ ಹೊಸ ಭೂಮಾಲೀಕ ವರ್ಗವು ಸೃಷ್ಟಿಯಾಯಿತು. ಹತ್ತೊಂಬತ್ತನೇ ಶತಮಾನ ಆದಿಭಾಗದಲ್ಲಿ ಕೃಷಿ ಸಹಕಾರಿ ಸಂಘ ಸ್ಥಳೀಯರಿಂದಲೇ ಸ್ಥಾಪನೆಯಾಯಿತು. ಪರಿಣಾಮವಾಗಿ ಅಡಿಕೆ ತೋಟಗಳ ವಿಸ್ತರಣೆಯಾಯಿತು.

ಇಪ್ಪತ್ತನೆಯ ಶತಮಾನದ ಎರಡು ಚಾರಿತ್ರಿಕ ಸಂಗತಿಗಳೆಂದರೆ ೧೯೭೦ ರ ದಶಕದಲ್ಲಿ 'ಉಳುವವನೇ ಹೊಲದೊಡೆಯ' ನೆಂಬ ಒಕ್ಕಲು ಮಸೂದೆ ಕಾನೂನು ಜಾರಿ ಮತ್ತು ಮುಕ್ತ ಮಾರುಕಟ್ಟೆಯ ಜಾಗತೀಕರಣ. ಸಾಮಾಜಿಕವಾಗಿ ಭೂರಹಿತ ಕೂಲಿಕಾರ್ಮಿಕರಾಗಿ ದುಡಿಯುತ್ತಿದ್ದವರು. ಸಣ್ಣ ಹಿಡುವಳಿದಾರರ, ಸಣ್ಣ ಪುಟ್ಟ

ರೈತರು ಭೂಮಿಯ ಒಡೆತನದಿಂದ ಸ್ವತಂತ್ರರಾದರು. ಶ್ರೀಮಂತ ಭೂಮಾಲಿಕರು ಮತ್ತು ಜಮಿನ್ದಾರರು ಭೂಮಿಯ ಒಡೆತನವನ್ನು ಕಳೆದುಕೊಂಡು ಬೀದಿಗೆ ಬಿದ್ದರು. ಊಳಿಗಮಾನ್ಯದ ಪಾಳೇಗಾರಿಕೆ ವ್ಯವಸ್ಥೆಯು ನಾಶವಾಗುತ್ತ ಬಂತು. ಭೂಮಿಯ ಒಡೆತನದ ಏಕಸ್ವಾಮ್ಯವು ನಾಶವಾಗಿ ತುಂಡು ತುಂಡು ಭೂಮಿಗಳ ಒಡೆತನ ಲಭ್ಯವಾಯಿತು. ಶ್ರೀಮಂತ ಬಡತನದವರ ಮಧ್ಯೆ ಮಧ್ಯಮ ವರ್ಗದ ಉದಯವಾಯಿತು. ಒಂದು ತಲೆಮಾರಿನ ಆಯಗಾರಿಕೆ ವೃತ್ತಿಯನ್ನು ನಿರ್ವಹಿಸುತ್ತದ್ದ ಜನರು ಸ್ವಲ್ಪ ಮಟ್ಟಿಗೆ ಸ್ವತಂತ್ರರಾದರು. ಜಮೀನ್ದಾರರು, ಶ್ರೀಮಂತ ರೈತರು ಭೂಮಿಯನ್ನು ಕಳೆಕೊಂಡುದರಿಂದ ಅನಿವಾರ್ಯವಾಗಿ ನಗರಗಳ ಕಡೆಗೆ ವಲಸೆ ಹೋದರು. ಮೊದಲ ಹಂತದಲ್ಲಿ ಮುಂಬೈ ಮಹಾನಗರಕ್ಕೆ ವಲಸೆ ಹೆಚ್ಚಿತು. ಎರಡನೇ ತಲೆಮಾರಿನಲ್ಲಿ ಅರಬ್‌ದೇಶಗಳಿಗೆ ವಿದೇಶಿವಲಸೆಯು ಹೆಚ್ಚಾಯಿತು. ಉಳುವವರೇ ಹೊಲದೊಡೆಯರಾದ ಮಂದಿ ತಮ್ಮ ಗದ್ದೆಗಳಲ್ಲಿ ತಾವೇ ಕಷ್ಟಪಟ್ಟು ಬೆಳೆ ತೆಗೆದರು. ತುಂಡು ಜಮೀನನಲ್ಲಿ ಬೆಳೆದ ಫಸಲು ಹೊಟ್ಟೆ ಬಟ್ಟೆಗೆ ತತ್ವಾರ ತಂದಿದ್ದರಿಂದ ಅವರ ಮಕ್ಕಳು ಕೃಷಿಯನ್ನು ನೆಚ್ಚಿಕೊಳ್ಳಲಿಲ್ಲ. ಒಂದಿಷ್ಟು ಶಾಲೆ ಕಲಿತು ಕೃಷಿಯೇತರ ದುಡಿಮೆಗೆ ಮನಸ್ಸು ಮಾಡಿದರು. ಕೃಷಿಯು ಬಾಳಿನ ಧರ್ಮವಾಗದೆ ಲಾಭ-ನಷ್ಟಗಳ ಲೆಕ್ಕಚಾರಕ್ಕೆ ಪಲ್ಲಟವಾಯಿತು. ಕೃಷಿಕಾರ್ಯಕ್ಕೆ ಖರ್ಚು ಮಾಡುವ ಹಣ ಮತ್ತು ಅದರಿಂದ ಬರುವ ಫಸಲು ದುಡ್ಡಿನ ಲೆಕ್ಕಚಾರದಲ್ಲಿ ಅಳತೆ ಮಾಡಲಾರಂಭಿಸಿದಾಗ ಕೃಷಿ ಲಾಭದಾಯಕವಾಗಲಿಲ್ಲ. ಇಳುವರಿಗಳ ಕಡಿಮೆ ಶ್ರಮವೂ ವ್ಯರ್ಥವಾಗುತ್ತದೆ. ಎಂದು ಕೃಷಿ ವಿಮುಖತೆ ಹೆಚ್ಚಿತು. ಎರಡು ವರ್ಗದ ಜನರು ಕೃಷಿ ಕಾರ್ಯದಿಂದ ಹೊರಗುಳಿವಾಗ ಕೃಷಿ ಕಾಣೆಯಾಗುತ್ತಾ ಬಂತು. ಕೃಷಿಭೂಮಿ ಫಲವಂತಿಕೆಯಾಗಿ ಉಳಿಯದೆ ಮಣ್ಣು ಹಾಕಿ ಸೈಟು ಮಾಡಿ ರಿಯಲ್ ಎಸ್ಟೇಟ್ ಉದ್ದಿಮೆ ಆರಂಭವಾಯಿತು. ಗದ್ದೆ ಪಕ್ಕದಲ್ಲಿ ಹಾದು ಹೋದ ದಾಂಬರು ರಸ್ತೆ, ಹೆದ್ದಾರಿಗಳು ಹೆಚ್ಚುಬೆಲೆ ಬಾಳುವ ಭೂಮಿಗಳಾಗಿ ಪರಿವರ್ತನೆ ಹೊಂದಿ ಒಂದು ತಲೆಮಾರಿನ ಮಂದಿ ಈ ಗದ್ದೆಗಳನ್ನು ಮಾರಾಟ ಮಾಡಿ ಸಂಸಾರ ತಾಪತ್ರಯಗಳನ್ನು ನೀಗಿಸಿಕೊಂಡರು.

ಕರಾವಳಿಗೆ ಬೃಹತ್ ಕೈಗಾರಿಕೆಗಳು, ಶಿಕ್ಷಣ ಸಂಸ್ಥೆಗಳು, ಆಸ್ಪತ್ರೆಗಳು ಸಾಲು ಸಾಲಾಗಿ ಬರಲಾರಂಭಿಸಿದವು. ಜಾಗತೀಕರಣ ಮತ್ತು ನಂತರದ ಮುಕ್ತ ಮಾರುಕಟ್ಟೆ ವ್ಯವಸ್ಥೆಯಿಂದ ಕೃಷಿ ಕಾಣೆಯಾಗುತ್ತಾ ಬಂತು. ವಿಶೇಷ ಆರ್ಥಿಕ ವಲಯಗಳು ಎಂಬುವುದು ನಿರ್ದಿಷ್ಟವಾಗಿ ಮೀಸಲಿರಿಸಿದ. ಸುಂಕರಹಿತ ವಿಶೇಷ ವಲಯ ಹಾಗೂ ವ್ಯಾಪಾರ ವ್ಯವಹಾರಗಳ ಸುಂಕಗಳ ದೃಷ್ಟಿಯಿಂದ ವಿಶೇಷ ಪ್ರದೇಶ ಎಂದು ಪರಿಗಣಿಸಲ್ಪಡುತ್ತದೆ. ಫಲವತ್ತಾದ ಕೃಷಿ ಭೂಮಿಗಳನ್ನು ಬಂಜರು ಭೂಮಿಗಳೆಂದು ನೋಟಿಫಿಕೇಶನ್ ಮಾಡಿಸಿ ಭೂಮಿಯ ಒತ್ತುವರಿ ನಡೆಯಿತು. ಭೂಮಾಲೀಕರು ಮತ್ತೆ ಭೂರಹಿತರಾಗಿ ನಿರ್ವಸತಿಯ ಸಮಸ್ಯೆ ಸೃಷ್ಟಿಯಾಯಿತು. ನವವಸಾಹತಿಕರಣದ ಪರಿಕಲ್ಪನೆಯಲ್ಲಿ ಹುಟ್ಟಿಕೊಂಡ ಅಭಿವೃದ್ಧಿಯ ಚಿಂತನೆ ಕೃಷಿಕರನ್ನು ಸಂಪೂರ್ಣ ಪರಾವಲಂಬಿಗಳನ್ನಾಗಿ ಮಾಡಿತು. ಸಾರ್ವಜನಿಕ ವ್ಯವಸ್ಥೆ ಮತ್ತು ಕುಟುಂಬದಲ್ಲಿ ವ್ಯತ್ಯಾಸವನ್ನು ತಂದಿತು.ಅವಿಭಕ್ತ ಕುಟುಂಬಗಳೆಲ್ಲ ವಿಭಕ್ತವಾದವು. ಸಾಮಾಜಿಕ ಮೌಲ್ಯಗಳು ಪಲ್ಲಟಗೊಂಡವು. ಶ್ರಮ ಸಂಸ್ಕೃತಿಯು ತನ್ನ ಮಾನ್ಯತೆಯನ್ನು ಕಳೆದುಕೊಂಡು ಹಣ ಸಂಸ್ಕೃತಿಯು ಮುನ್ನೆಲೆಗೆ ಬಂದಿತು. ಕೃಷಿ ಮಾಡುವುದು ಲಾಭ ಮಾಡುವುದಕ್ಕಾಗಿ ಎಂಬ ಮನೋಭಾವ ಬೆಳೆದು, ವ್ಯವಹಾರ ಪ್ರಜ್ಞೆಯಿಂದ ವಾಣಿಜ್ಯ

ಬೆಳೆಗಳನ್ನು ಹೆಚ್ಚಾಗಿ ಬೆಳೆಸಿದರು. ಆಹಾರದ ಮೂಲ ದುಡ್ಡಿನ ಮೂಲವಾಯಿತು. ಸ್ತ್ರೀ ಕೇಂದ್ರಿತವಾಗಿದ್ದ ಕುಟುಂಬವು ನಿಧಾನವಾಗಿ ನವಪಿತೃಪ್ರಧಾನತೆಯತ್ತ ಸಾಗಲಾರಂಭೀಸಿತು. ಪುರುಷಕೇಂದ್ರಿತ ಸಾಮಾಜಿಕ ಚಟುವಟಿಕೆಗಳಲ್ಲಿ ಹೆಣ್ಣಿನ ಜ್ಞಾನ ಕೌಶಲ್ಯಗಳು ಹಿನ್ನೆಲೆಗೆ ಸರಿದವು.

ಅಭಿವೃದ್ಧಿ ಮತ್ತು ಆಧುನಿಕತೆಯ ಹೆಸರಿನಲ್ಲಿ ಬಂದ ಎಲ್ಲ ಸವಲತ್ತುಗಳು ಅವಕಾಶಗಳು ಮನುಷ್ಯನನ್ನು ಮತ್ತಷ್ಟು ನಿರಂಕುಶ ಮತಿಯಾಗಿಸಿದವು. ಮನುಷ್ಯ ಸಂಬಂಧಗಳನ್ನೇ ನಾಶಮಾಡಿದವು ನಗರ ಸಂಸ್ಕೃತಿಯ ಬಳುವಳಿಯಾಗಿ ಮನುಷ್ಯ ಒಂಟಿತನ ಹತಾಶೆಯಿಂದ ಬಳಲುವಂತಾಯಿತು. ಸಂಸ್ಕೃತಿಯ ಆಕರವಾಗಿರುವ ಆಚರಣೆ ಹಬ್ಬಗಳ ಸೋಗಲಾಡಿತನಗಳಾಗಿ ಆಡಂಬರದ ಪ್ರದರ್ಶನಗಳಾದವು. ಕೃಷಿ ಸಂಸ್ಕೃತಿಯಲ್ಲಿ ಬಾಳಿ ಬದುಕಿ ಆಚರಿಸುತ್ತಿದ್ದ ಹಬ್ಬಗಳಾದ ಕೆಡ್ಡಸ, ಆಟಿ ಅಮವಾಸ್ಯೆ, ತುಡರ ಪರ್ಬ, ಕಾವೇರಿ ಸಂಕ್ರಮಣ ಇವೆಲ್ಲಾ ಮೂಲ ಸ್ವರೂಪದ ಅರ್ಥವನ್ನು ಕಳೆದುಕೊಂಡುವು. ಕೆಡ್ಡಸ, ಆಟಿ ವೇದಿಕೆಯ ಕಾರ್ಯಕ್ರಮಗಳಾಗಿ ಮುಂದುವರಿದರೆ ಪರ್ಬ ಪಟಾಕಿ ಸಿಡಿಸುವ ದೀಪಾವಳಿಯಾಯಿತು. ಸಂಕ್ರಮಣ, ಸಿಂಗೋಡೆಗಳಂದು ಉಳುಮೆ ಮಾಡಬಾರದು ಭತ್ತ ಮುಟ್ಟಬಾರದು ಎಂಬ ನಂಬಿಕೆಗಳಿಗೆ ಅರ್ಥ ಉಳಿಯಲಿಲ್ಲ. ವರ್ಷದ ಎಲ್ಲಾ ದಿನಗಳಲ್ಲೂ ಭೂಮಿಯನ್ನು ಅಗೆಯುತ್ತಾ ಕಟ್ಟಡಗಳನ್ನು ಕಟ್ಟುತ್ತಾ ದುಡಿಮೆ ಮತ್ತು ಪಡೆವ ಸಂಬಳದ ಹಣ ಮಾತ್ರ ಮುಖ್ಯವಾಯಿತು. ಭೂಮಿಯಲ್ಲಿ ಒಂದೆಡೆ ಕೈಗಾರಿಕೆಗಳು ಕಟ್ಟಡಗಳನ್ನು ಕಟ್ಟುತ್ತಿದ್ದಂತೆ ಭೂಮಿಯನ್ನು ಮಾರಾಟ ಮಾಡುವ ಮಧ್ಯವರ್ತಿಗಳೇ ಹೆಚ್ಚು ಶ್ರೀಮಂತರಾಗತೊಡಗಿದರು. ನಾಗಬನವಿರಲಿ, ಭೂತಸ್ಥಾನವಿರಲಿ, ಪಟ್ಲ ಗದ್ದೆ ಇರಲಿ ಎಲ್ಲವನ್ನು ಗುಡ್ಡ ಅಗೆದು ಬಯಲು ಮಾಡಿ ಮಣ್ಣು ತುಂಬಿ ಸೈಟುಗಳು, ಲೇಔಟು, ಕಾಲನಿಗಳು ಹುಟ್ಟಿಕೊಂಡವು. ಬಾಕಿಮಾರ್, ಪುನ್ಕೆಮಾರ್, ಸೋರಂದಡಿಗಳಲ್ಲಿ ಅಬ್ಬಕ್ಕ ನಗರ, ವೀರನಗರ, ಶಕ್ತಿನಗರಗಳಾದವು ಭೂಮಿ ತನ್ನ ಮೂಲಸ್ವರೂಪವನ್ನು ಕಳೆದುಕೊಂಡು ನೀರು, ಕಾಡು, ಮಣ್ಣು ಎಲ್ಲವೂ ಮಾರಾಟದ ಸರಕುಗಳೇ ಆದವು. ಮೂಲ ಬಂಡವಾಳವಾಗಿರುವ ಪ್ರಕೃತಿ ದಿನದಿಂದ ದಿನಕ್ಕೆ ದೋಚಲ್ಪಡುತ್ತ ಸಾಗುತ್ತಿದ್ದ ಹಾಗೆ ಪರಿಸರದ ಕುರಿತ ಚಳುವಳಿ ಹೋರಾಟಗಳು ಹುಟ್ಟಿಕೊಂಡವು. ಚಳುವಳಿಗಳ ನೇತೃತ್ವ ವಹಿಸಿದವರು ಅಧಿಕಾರ ಶಾಹಿಯಲ್ಲಿ ಗುರುತಿಸಿಕೊಳ್ಳಲು ಯತ್ನಿಸಿದಾಗ ಚಳುವಳಿಗಳು ಸ್ವಜನಪಕ್ಷಪಾತಗಳಾಗಿ ಅರ್ಥ ಕಳೆದುಕೊಂಡವು. ಹೋರಾಟ, ಪ್ರತಿಭಟನೆಗಳ ಮಧ್ಯೆ ಪ್ರಶಾಂತ ವಾತಾವರಣಗಳು ಪ್ರಕ್ಷುಬ್ಧಗೊಳ್ಳತೊಡಗಿದವು. ಅಧಿಕಾರ ಕೇಂದ್ರದಲ್ಲಿದ್ದ ಪ್ರಭುತ್ವ ಸರಕಾರವು ಜನಪರವಾಗದೆ ಹೋದಾಗ ಜನಸಾಮಾನ್ಯರ ಬದುಕು ತೀರ ಕರಾಳವೆನಿಸಿದವು. ಗ್ರಾಮಗಳಿಂದ ನಗರಕ್ಕೆ ಹೆಚ್ಚಿದ ವಲಸೆ ಹೊಸ ವಸತಿ ಸಂಕೀರ್ಣಗಳಲ್ಲಿ ನೆಲೆನಿಂತು ನಿರ್ವಸಿತರ ಸಮಸ್ಯೆ ಹೀಗೆ ಎಲ್ಲವೂ ಸಂಘರ್ಷಮಯವಾದ ಪಲ್ಲಟಗಳಾದವು.

ಜನರ ವೈಯಕ್ತಿಕ ಬದುಕು ಮತ್ತು ಸಾಮಾಜಿಕ ಬದುಕಿನಲ್ಲೂ ಆದ ಪಲ್ಲಟಗಳು ಬಹಳ ಮಹತ್ವವಾದವು. ಕರಾವಳಿಯಲ್ಲಿ ಹುಟ್ಟಿಕೊಂಡ ಕೋಮುವಾದ ನವವಾಸಾಹತೀಕರಣದ ಅದ್ಭುತ ಕೊಡುಗೆ ಭೂಮಿ ಕಳೆಕೊಂಡ ಶ್ರೀಮಂತರು ಅಧಿಕಾರವನ್ನು ಕಳಕೊಂಡಾಗ ಮತ್ತೆ ತಾವು ಬಲಗೊಳ್ಳುವುದಕ್ಕಾಗಿ ನಡೆಸಿದ ಸಾಮಾಜಿಕ ಧ್ರುವೀಕರಣದ ಪರಿಣಾಮವಾಗಿ ಕೋಮುವಾದ ಸೃಷ್ಟಿಯಾಯಿತು. ಒಂದು ಧರ್ಮದ ಜನರನ್ನು

ಮತ್ತೊಂದು ಧರ್ಮದ ಜನರಿಗೆ ಖಳನಾಯಕರನ್ನಾಗಿ ಚಿತ್ರಿಸಿ, ವ್ಯವಸ್ಥೆಯ ಕುಂದುಕೊರತೆಗಳಿಗೆ ಈ ಖಳನನಾಯಕರೇ ಕಾರಣವೆಂದು ಬಿಂಬಿಸಲಾಯಿತು. ಕೆಳಜಾತಿಯ ಸಮುದಾಯದ ಜನರು ಜಾತಿ ಹೆಸರಿಲ್ಲಿ ಒಗ್ಗೂಡಿ ಪ್ರಬಲರಾಗದಂತೆ ಧರ್ಮದ ಹೆಸರಲ್ಲಿ ಜನರನ್ನು ಒಗ್ಗೂಡಿಸಲಾಯಿತು. ಕರಾವಳಿಯಲ್ಲಿ ಸಾಂಪ್ರಾದಾಯಿಕ ಯಜಮಾನಿಕೆ ವರ್ಗದ ಆಸಕ್ತಿಯನ್ನು ಮುಂದುವರಿಸಲಾಯಿತು. ಭೂರಹಿತರು ಮತ್ತು ಭೂಮಿಯ ಒಡೆತನದಲ್ಲಿ ಹುಟ್ಟಿಕೊಂಡ ಪ್ರಶ್ನೆಯೇ ಈ ವಾದಕ್ಕೆ ಮುಖ್ಯ ಕಾರಣವಾಯಿತು.

ಶಿಕ್ಷಣ, ಬ್ಯಾಕಿಂಗ್, ತಾಂತ್ರಿಕ ಶಿಕ್ಷಣ, ವೈದ್ಯಕೀಯ ಶಿಕ್ಷಣಗಳಲ್ಲಿ ಸಾರ್ವಜನಿಕ ಶಿಕ್ಷಣಕ್ಕೂ ಒತ್ತು ಕೊಟ್ಟು ಕರಾವಳಿ ಬೆಳೆಯತ್ತಿದ್ದಂತೆ ವ್ಯಕ್ತಿಗತ ಮತ್ತು ಸಾಮೂಹಿಕವಾಗಿ ವ್ಯವಸ್ಥೆಯ ಪಲ್ಲಟ ನಡೆಯಿತು. ಕುಟುಂಬದ ಯಜಮಾನ್ಯ ರಾಜಕೀಯದ ಪ್ರಾಬಲ್ಯ ಪರಿಣಾಮ ಯಜಮಾನಿಕೆ ಹಿರಿಯರಿಂದ ಯುವಕರ ಕಡೆಗೆ ವಾಲಿತು. ಕೃಷಿ ಕೂಲಿಕಾರ್ಮಿಕರು ಪಾಳೇಗಾರಿಕೆಯ ದುಡಿಮೆಯನ್ನು ನಿರಾಕರಿಸಲು ಬೀಡಿ ಉದ್ದಿಮೆ ಸಹಾಯಕವಾಗಿತ್ತು. ಸಣ್ಣ ಪುಟ್ಟ ಕೃಷಿ ಕೆಲಸಗಳನ್ನು ನಿರಾಕರಿಸಿ ದುಡಿಮೆಯ ಪ್ರತಿಫಲವನ್ನು ನಿರೀಕ್ಷಿಸಲಾಯಿತು.

ಜಾಗತೀಕರಣದಿಂದ ಹುಟ್ಟಿಕೊಂಡ ಮಾರುಕಟ್ಟೆ ಸಂಸ್ಕೃತಿ, ಸಂಸ್ಕೃತಿಯ ಮೇಲೂ ಪ್ರಭಾವಬೀರಿದವು. ಧರ್ಮ ಪ್ರಧಾನವಾಹಿನಿಯಲ್ಲಿ ಗುರುತಿಸಿಕೊಳ್ಳುತ್ತಲೂ ಒಂದೆಡೆ ಜಾತಿ ಸಂಘಟನೆಗಳು ಹೆಚ್ಚಿದವು. ಧಾರ್ಮಿಕ ಸಂಘಟನೆ, ಮತೀಯವಾದ ಹೆಚ್ಚುತ್ತಾ ಹೋಯಿತು. ಆರಾಧನಾ ಪರಂಪರೆಯು ವಾಣಿಜ್ಯೀಕರಣಗೊಳ್ಳುತ್ತಿದ್ದಂತೆ ಕರಾವಳಿಯಲ್ಲಿ ನಾಗಮಂಡಲ, ಬ್ರಹ್ಮಕಲಶಗಳೂ ವರ್ಷದಿಂದ ವರ್ಷಕ್ಕೆ ಹೆಚ್ಚುತ್ತಾ ಹೋದುದಲ್ಲದೆ ಸಂಸ್ಕೃತೀಕರಣದ ಅಪಾಯಗಳು ಹೆಚ್ಚಿದವು. ಸಾಮುದಾಯಿಕ ಅನನ್ಯತೆಗಳನ್ನು ನಾಶಗೊಳಿಸುವ ಕೆಲಸ ತೀರ ಎಚ್ಚರದಿಂದ ನಿರ್ವಹಣೆ ಮಾಡಲಾಯಿತು. ಎಲ್ಲ ಸಮುದಾಯಗಳು ತಮ್ಮನ್ನು ಪ್ರಧಾನವಾಹಿನಿಯಲ್ಲಿ ಗುರುತಿಸಿಕೊಳ್ಳುವ ತುರಾತುರಿಯಲ್ಲ ಬ್ರಾಹ್ಮಣೀಕರಣಕ್ಕೂ ಸಂಸ್ಕೃತೀಕರಣಕ್ಕೂ ಒಳಗಾದರು. ಶೂದ್ರರು ದಾಖಲುಗೊಳ್ಳದ ದಲಿತರು ಅದೇ ಸ್ಥಿತಿಯಲ್ಲಿ ಉಳಿದುಬಿಟ್ಟರು. ನಗರೀಕರಣದ ಜತೆಗೆ ನಡೆದ ವಲಸೆ ಸಂಸ್ಕೃತಿಯು ಈ ಪಲ್ಲಟಗಳಿಗೆ ಕಾರಣವಾಗಿ ಜನಜೀವನದ ಸ್ವರೂಪಗಳು ಬದಲಾದವು ಅದು ಸಂಸ್ಕೃತಿ ನಿರ್ವಚನದ ಪ್ರತಿಫಲನಗಳಾಗಿ ಗೋಚರವಾದವು. ಕರಾವಳಿ ಜನರ ಜೀವನಧರ್ಮ ಮತ್ತು ಮನೋಧರ್ಮಗಳ ಏಕಸ್ವರೂಪವಾಗಿ ಪ್ರಕಟಗೊಳ್ಳದೆ ಬಹುಸ್ವರೂಪದಲ್ಲಿ ವ್ಯಕ್ತವಾಗಿದೆ.

ಕೃಷಿಮೂಲದಿಂದ ಆಧುನಿಕತೆಯಡೆಗೆ ಸಾಗಿದ ಜನರ ಜೀವನಕ್ರಮಗಳು ಸಂಸ್ಕೃತಿಯನ್ನು ಅನಾವರಣಗೊಳಿಸಲು ನೆರವಾಗುತ್ತದೆ. ಬಹುತ್ವದಿಂದ ಏಕತೆಯಡೆಗೆ ಸಾಗುತ್ತಾ ತನ್ನ ಅನನ್ಯತೆಯ ಬೇರುಗಳನ್ನು ನಿಗೂಢವಾಗಿಸುತ್ತ, ಹೊಸ ಸಾಧ್ಯತೆಗಳಿಗೆ ತೆರೆದುಕೊಳ್ಳುತ್ತ, ಪಲ್ಲಟಗಳಿಗೆ ಮುಖಾಮುಖಿಯಾದ ಕರಾವಳಿ ನಿತ್ಯ ಶೋಧದ ನೆಲೆಯೇ ಆಗಿದೆ.

ಮೌಖಿಕ ಸಾಹಿತ್ಯವೂ ಕೃಷಿ ಸಂಸ್ಕೃತಿಯ ಪಲ್ಲಟದ ಅಂಶಗಳನ್ನು ದಾಖಲೆಯ ನೆಲೆಯಲ್ಲಿ ನೆನಪುಗಳ ಮಾಲೆಯಲ್ಲಿ ಕಟ್ಟಿಕೊಟ್ಟಿವೆ. ಪ್ರಮುಖವಾಗಿ ಆರಾಧನಾ ಪರಂಪರೆಯಲ್ಲಿ ಪ್ರಮುಖ ಭಾಗವಾದ ಪಾಡ್ದನಗಳು, ಮಹಾ ಕಾವ್ಯಗಳೂ ಆಗಿ ಮನುಷ್ಯ ಮತ್ತು ಪ್ರಾಣಿ ಜಗತ್ತಿನೊಂದಿಗಿನ ಸಂಬಂಧವನ್ನು ಹೇಳುವುದರೊಂದಿಗೆ

ಮನುಷ್ಯರ ಬದುಕಿನ ಕ್ರಮ ಬದಲಾದ ರೀತಿಯನ್ನು ವಲಸೆ ಉಂಟುಮಾಡಿದ ಪರಿಣಾಮವನ್ನು ನಿರೂಪಿಸಿವೆ. ಹೆಚ್ಚಿನ ಭೂತಗಳು ಘಟ್ಟ ಇಳಿದೇ ಬಂದವುಗಳಾಗಿದ್ದು ಭೂತಗಳ ಪ್ರಸರಣವೂ ಕೃಷಿ ಬದುಕಿನ ವಿಸ್ತರಣೆಯ ಅಂಶವೇ ಆಗಿದೆ. ಪಂಜುರ್ಲಿ ಪಾಡ್ದನ ಈ ತರ್ಕಕ್ಕೆ ಪ್ರಮುಖ ಉಲ್ಲೇಖವಾಗಿ ಸಿಗುತ್ತದೆ. ಘಟ್ಟದಿಂದ ಹೆಬ್ರಿಯವರೆಗೆ ಹರಡಿರುವ ಪಂಜುರ್ಲಿಯ ಪ್ರಸರಣದ ನಕಾಶೆಯನ್ನು ಗಮನಿಸಿದರೆ ಕೃಷಿಕರಿಗೆ ಸ್ನೇಹಿತರಾಗಿದ್ದ ಹಂದಿಗಳು ಪೂಜನೀಯವಾಗಿ ಮನುಷ್ಯ ಬದುಕಿನ ವಲಸೆಯ ಕ್ರಮವನ್ನು ಹೆಜ್ಜೆ ಹೆಜ್ಜೆಯಾಗಿ ನಿರೂಪಿಸಿದೆ. ಕೃಷಿ ಒಂದೇ ಹಂತದಲ್ಲಿ ಬದಲಾಗುತ್ತ ಹೋಗಿಲ್ಲ. ಕಾಲದಿಂದ ಕಾಲಕ್ಕೆ ಪ್ರದೇಶದಿಂದ ಪ್ರದೇಶಕ್ಕೆ ಸಮುದಾಯದಿಂದ ಸಮುದಾಯಕ್ಕೆ, ಕೃಷಿ ಪರಂಪರೆಯ ಅಂಶಗಳು ಮನುಷ್ಯ ಗ್ರಹಿಕೆಗಳು ಪ್ರಮುಖ ಸ್ಥಾನವನ್ನು ಪಡೆದುಕೊಂಡಿವೆ. ಕೃಷಿಯನ್ನು ನೆಚ್ಚಿಕೊಂಡ ಸಮುದಾಯಗಳಿಗೆ ಅದು ಹೇಗೆ ಆಹಾರದ ಮೂಲವಾಗಿದ್ದು ಸಂಪತ್ತಿನ ಮೂಲವಾಗಿ ಸಾಮಾಜಿಕ ಸ್ಥಾನಮಾನದ ಅಂಶವಾಗಿಯೂ ಗುರುತಿಸಿಕೊಂಡಿದೆ ಎನ್ನುವುದನ್ನು ಮೌಖಿಕ ಪರಂಪರೆ ನಿರೂಪಿಸುತ್ತದೆ.

ಕೃಷಿ ಸಂಸ್ಕೃತಿ ಪಲ್ಲಟದ ಸಾಹಿತ್ಯಿಕ ಅಭಿವ್ಯಕ್ತಿಯು ಬೇರೆ ಬೇರೆ ಸ್ವರೂಪಗಳಲ್ಲಿ ಪ್ರಕಟಗೊಂಡಿದೆ. ಕರಾವಳಿಯ ಪ್ರಮುಖ ಬರಹಗಾರರೆನಿಸಿದ ಕಾರಂತರ ಹೆಚ್ಚಿನ ಕೃತಿಗಳು ಬದಲಾಗುತ್ತಿರುವ ಕೃಷಿ ಜಗತ್ತನ್ನು ಮಾರ್ಮಿಕವಾಗಿ ನಿರೂಪಿಸಿವೆ. ಚಾರಿತ್ರಿಕ ಅಯಾಮವಾಗಿ ದಾಖಲಾದ ಕೃತಿಗಳು ಸಮಾಜದಲ್ಲಿ ಆಗುತ್ತಿರುವ ಬದಲಾವಣೆಯ ಸೂಕ್ಷ್ಮಗಳನ್ನು ದಾಖಲಿಸಿವೆ. ಜಾಗತೀಕರಣದ ನಂತರದ ಸಾಹಿತ್ಯಾಭಿವ್ಯಕ್ತಿಯೂ ಸಮಕಾಲೀನ ಕಾದಂಬರಿಗಳಲ್ಲಿ ಪ್ರಕಟಗೊಂಡಿದೆ ಈ ಬಗೆಗೆ ಪರಿಕಲ್ಪನಾತ್ಮಕ ಚರ್ಚೆಗಳಮೂಲಕ ಕೃಷಿ ಬದಲಾಗುವುದರೊಂದಿಗೆ ಮನುಷ್ಯ ಬದುಕುಬದಲಾದ ಬಗೆಯನ್ನು ಸಮಾಜ ಸಂಸ್ಕೃತಿಗಳ ಅಂತಃ ಸಂಬಂಧವನ್ನು ಸರಳವಾಗಿ ನಿರೂಪಿಸುವುದಂತಾಗಿದೆ.

ತುಳು ಸಾಹಿತ್ಯವು ಅಕ್ಷರ ಪರಂಪರೆಯ ಮೂಲಕ ತೀರಾ ತಡವಾಗಿ ಆದರೂ ರಚನೆಗೊಂಡ ಸಾಹಿತ್ಯಿಕ ಪಠ್ಯಗಳಲ್ಲಿ ತಮ್ಮ ನೆಲದ ಕತೆಯನ್ನು ಪಿಸುಮಾತುಗಳಲ್ಲಿ ನಿರೂಪಿಸುವಂತೆ ಗೋಚರಿಸುತ್ತಿದೆ. ಅತ್ಯಂತ ವೇಗವಾಗಿ ಸಾಗುತ್ತಿರುವ ಅಭಿವೃದ್ಧಿಯ ಹೆದ್ದಾರಿಯಲ್ಲಿ ಮತ್ತೆ ಮತ್ತೆ ಆಧುನಿಕತೆ ಮತ್ತು ಆರ್ಥಿಕತೆಗಳು ಪ್ರಮುಖ ಪಾತ್ರವನ್ನು ಪಡೆಯುತ್ತಿವೆ. ಪರಂಪರೆಯ ಬದುಕಿನ ಬಗೆಗಿನ ನೆನಪುಗಳ ಕೋಶವನ್ನು ತುಳುಲೇಖಕರು ನಿರೂಪಿಸುವುದರೊಂದಿಗೆ ಕೃಷಿಗೂ ಬದುಕಿಗೂ ಇರುವ ಸಂಬಂಧವನ್ನು ವಿಶ್ಲೇಷಿಸಿದ್ದಾರೆ. ಒಟ್ಟಿನಲ್ಲಿ ಅಧ್ಯಯನವು ಸೂಕ್ಷ್ಮ ಎಳೆಗಳ ಸತ್ಯಗಳನ್ನು ಸಾಕ್ಷತ್ಕರಿಸಿಕೊಂಡು ಕಣ್ಣ ಮುಂದೆ ಇರುವ ಸಮಾಜವನ್ನು ಅರ್ಥೈಸುವ ಮತ್ತು ಅದಕ್ಕೆ ಕಾರಣಗಳನ್ನು ಹುಡುಕುವ ಪ್ರಯತ್ನವನ್ನು ಮಾಡಿವೆ. ಸಾಹಿತ್ಯವೂ ಸೃಜನಾತ್ಮಕವಾಗಿ ಜನ ಸಮುದಾಯದ ವಲಸೆ, ಆಹಾರದ ಹುಡುಕಾಟ, ಕೃಷಿಯ ಅನ್ವೇಷಣೆ, ವಿಸ್ತರಣೆಗಳೊಂದಿಗೆ ಹೊಸ ರೀತಿಯ ಮರು ಓದಿಗೆ ಕಾರಣವಾಗಿದೆ. ವರ್ತಮಾನದ ಬಿಕ್ಕಟ್ಟುಗಳಿಗೆ ಉತ್ತರವನ್ನು ಹುಡುಕುವ ಮತ್ತು ವಿಶ್ಲೇಷಿಸುವ ಪ್ರಯತ್ನವೂ ಇಲ್ಲಿದೆ.

**ಅಧ್ಯಯನದ ಫಲಿತಗಳು**

- ಆದಿಮ ಸಂಸ್ಕೃತಿಯ ಪ್ರಮುಖ ಹಂತವಾದ ಕೃಷಿ ಸಂಸ್ಕೃತಿಯು ಕಾಲದಿಂದ ಕಾಲಕ್ಕೆ ಬದಲಾಗುತ್ತ ಬಂದಿದ್ದು ಒಟ್ಟು ಮನುಷ್ಯನ ಬದುಕಿನ ವಿಕಾಸದ ಹೆಜ್ಜೆಗುರುತು ಆಗಿದೆ. ಈ ಸೂಕ್ಷ್ಮವನ್ನು ಚಾರಿತ್ರಿಕವಾಗಿ ಸಾಮಾಜಿಕವಾಗಿ, ಸಾಂಸ್ಕೃತಿಕವಾಗಿ, ಮಾನವಶಾಸ್ತ್ರೀಯ ನೆಲೆಯಲ್ಲು ಗುರುತಿಸಲು ಸಾಧ್ಯವಾಗಿದೆ. ಮನುಷ್ಯರ ಅನ್ವೇಷಣಾ ಗುಣ ಹೊಸ ದಿಕ್ಕಿನೆಡೆಗೆ ಸಾಗಬೇಕೆನ್ನುವ ಹುಡುಕಾಟದ ಮನೋಧರ್ಮವೂ ಒಂದೆಡೆ ನಾಗರಿಕತೆ ಎಂದು ಕರೆಸಿಕೊಂಡರೂ ಮಾನವರ ಬದುಕು ಸಾಗಿ ಬಂದ ಹಂತಕ್ಕೆ ಸಾಕ್ಷಿಯಾಗಿದೆ. ಕರಾವಳಿ ಕರ್ನಾಟಕದಲ್ಲೂ ಇದಕ್ಕೆ ಪೂರಕವಾದ ಮಾಹಿತಿಗಳು ಲಭ್ಯವಿದೆ.

- ಹಸಿವು ಮನುಷ್ಯರ ಸಹಜ ಪ್ರಕ್ರಿಯೆ, ಅದನ್ನೇ ಮೂಲವಾಗಿರಿಸಿಕೊಂಡು ಬಾಳಿದ ಜನರಿಗೆ ಆಹಾರದ ಹುಡುಕಾಟ ಪ್ರಮುಖ ಆದ್ಯತೆಯಾಗಿತ್ತು. ಪ್ರದೇಶದಿಂದ ಪ್ರದೇಶಕ್ಕೆ ಭಿನ್ನವಾಗಿರುವ ಹವಾಮಾನ ಮತ್ತು ಪರಿಸರಕ್ಕೆ ಆದ್ಯತೆ ನೀಡಿ ಬೆಳೆ ಬೆಳೆದುದು ಪ್ರಮುಖ ಹಂತವಾದರೆ ಆಹಾರದ ಬೆಳೆಯಿಂದ ವಾಣಿಜ್ಯ ಬೆಳೆಗೆ, ವಾಣಿಜ್ಯ ಬೆಳೆಯಿಂದ ಕೈಗಾರಿಕೆಗೆ ಬದಲಾಗುತ್ತ ಸಾಗಿದೆ. ವೈಯಕ್ತಿಕ ಮತ್ತು ಒಟ್ಟು ಸಮೂಹದ ಬದುಕಿನಲ್ಲಿ ಇದರಿಂದ ಸ್ಥಿತ್ಯಂತರಗಳು ಆಗಿವೆ.

- ಈ ಸ್ಥಿತ್ಯಂತರವನ್ನು ಒಟ್ಟು ಐದು ಹಂತದಲ್ಲಿ ಗುರುತಿಸಲಾಗಿದೆ.

  ೧. ಕೃಷಿ ಅನ್ವೇಷಣೆ

  ೨. ಕೃಷಿ ವಿಸ್ತರಣೆ

  ೩. ಕೃಷಿ ನಿರ್ವಹಣೆ

  ೪. ಕೃಷಿ ಬದಲಾವಣೆ

  ೫. ಕೃಷಿ ಕಾಣೆ

  ಈ ಐದು ಹಂತಗಳ ಪ್ರತಿಬಿಂಬ ಸಮುದಾಯದ ಬದುಕು, ಸಮಾಜ, ಸಾಹಿತ್ಯದ ಮೂಲಕ ಪ್ರತಿಫಲನಗೊಂಡಿದೆ. ಜೀವನ ಕ್ರಮದ ರೀತಿ ನೀತಿಗಳೊಂದಿಗೆ, ಬದುಕಿನ ಗತಿಯೂ ಬದಲಾಗಿ ಸಂಘರ್ಷ, ಬಿಕ್ಕಟ್ಟಗಳಿಗೂ ಕಾರಣವಾಗಿದೆ. ಕರಾವಳಿ ಕರ್ನಾಕದಲ್ಲಿ ಈ ಎಲ್ಲಾ ಹಂತಗಳು ದಾಖಲಾಗಿವೆ.

- ಸಮುದಾಯಗಳ ಮೇಲ್‌ಚಲನೆ, ಮತ್ತು ಹಿಂಚಲನೆ ಪರಸ್ಪರ ತಾಕಲಾಟಕ್ಕೆ ಕಾರಣವಾಗಿದ್ದು, ತಮ್ಮ ಅಸ್ಮಿತೆಯನ್ನು ಉಳಿಸಿಕೊಳ್ಳುವಲ್ಲಿ ಭೂಮಿಯ ಅಧಿಪತ್ಯದ ಒಡೆತನ, ಭೂಮಿಯ ಒಡೆಯರಾಗದೆ ಹೋದವರ ದೈನ್ಯ ಸಾಮಾಜಿಕವಾಗಿ ಹಿಂದುಳಿಯುವಿಕೆಗೂ ಕಾರಣವಾಗಿದೆ.

- ಸಾಮಾಜಿಕವಾಗಿ ಪಾರಂಪರಿಕ ಕೃಷಿಕ ಸಮುದಾಯಗಳು ಕುಲಕಸುಬಿನಿಂದ ದಾಟಲು ಪ್ರಯತ್ನಿಸುವಾಗ ನಡೆದ ಸಂಘರ್ಷಗಳು ಜಾನಪದದಲ್ಲೂ ದಾಖಲಾಗಿದೆ. ಮೌಖಿಕ ಸಾಹಿತ್ಯವೂ ಬದಲಾದ ಬದುಕಿನ ಗತಿ ಶೀಲತೆಯನ್ನು ಬೇರೆ ಬೇರೆ ಸ್ವರೂಪದಲ್ಲಿ ಕಾಯ್ದುಕೊಂಡಿದೆ. ತುಳುವರ 'ಪರ್ಬ', ಕೋಟಿ ಚೆನ್ನಯರ ಗರಡಿ ಆರಾಧನೆ, ಕಬಿತೆಗಳು ಕಟ್ಟಿಕೊಡುವ ತೆಳು ಹಾಸ್ಯಕ್ಕೂ ಇದು ಮೂಲವಾಗಿದೆ. ಜನಪದರಿಗೆ ಅದರ ಹಿಂದಿರುವ ದಾರುಣತೆಯ ನೋವು ಈ ರೀತಿಯಾಗಿ ಪ್ರತಿಕ್ರಿಯಿಸಿದೆ.

- ಮನುಷ್ಯ ವೃತ್ತಿಯ ಸ್ವರೂಪ ಬದಲಾದಾಗ ಒಟ್ಟು ಸಾಮಾಜಿಕ ವ್ಯವಸ್ಥೆಯಲ್ಲೂ ಬದಲಾವಣೆಗಳಾದವು. ಅವಿಭಕ್ತ ಕುಟುಂಬಗಳು ವಿಭಕ್ತವಾಗಿ, ಕೃಷಿಯು ಪೋಷಿಸಿಕೊಂಡು ಬಂದಿದ್ದ ಪಾಳೇಗಾರಿಕೆ ವ್ಯವಸ್ಥೆಯು ಕುಸಿದು ಬೀಳುವುದಕ್ಕೂ ಕಾರಣವಾಯಿತು. ಕೃಷಿಯ ಸ್ವರೂಪದಲ್ಲಿ ಆದ ಬದಲಾವಣೆ ಮತ್ತು ಕೃಷಿ ಬದುಕಿನಲ್ಲಿ ಆದ ಬದಲಾವಣೆಗೂ ಪರಸ್ಪರ ಸಂಬಂಧವಿದ್ದು, ಆಧುನಿಕತೆ ಕೃಷಿಯನ್ನು ಮಾಡುವ ಕ್ರಮದಿಂದ ತೊಡಗಿ ಬದುಕನ್ನು ಭೂಮಿಯನ್ನು ನೋಡುವ ಕ್ರಮದಲ್ಲೂ ಸ್ಥಿತ್ಯಂತರವನ್ನು ತಂದಿತು. ಅನ್ನದ ಬಟ್ಟಲಾಗಿದ್ದ ಭೂಮಿ, ಬಂಡವಾಳವಾಗಿ ಪರಿವರ್ತನೆ ಹೊಂದಿದಾಗ ಸಾಮಾಜಿಕ, ಸಾಂಸ್ಕೃತಿಕ ಬದುಕಿನಲ್ಲೂ ಬದಲಾವಣೆಗಳು ಆಗಿವೆ. ಜೀವನ ಮೌಲ್ಯಗಳೂ ಪಲ್ಲಟಗೊಂಡಿವೆ.

- ಮಾತೃಮೂಲ ಸಮುದಾಯಗಳು, ಕೃಷಿಕ ಪಿತೃ ಪ್ರಧಾನ ಸಮುದಾಯಗಳಾಗಿ ಪರಿವರ್ತನೆ ಹೊಂದಿ ನವ ಪಿತೃಪ್ರಧಾನತೆಯೇ ಆದರ್ಶವೆನಿಸಿದೆ. ಕೃಷಿಕ ಸಮುದಾಯಗಳು ಮೂಲ ಆಶಯ ಮತ್ತು ಮೌಲ್ಯಗಳು ವ್ಯಕ್ತಿರಿಕ್ತವಾಗಿ ಹೆಣ್ಣಿನ ಕುರಿತಾದ ಎಲ್ಲ ಚಿಂತನೆಗಳೂ ಬದಲಾಗುತ್ತ ಸಾಗಿದೆ. ಆಧುನಿಕತೆ ಮತ್ತು ಬದಲಾವಣೆ ತಮ್ಮನ್ನು ಮುಕ್ತತೆಯಿಂದ ತೆರೆದುಕೊಂಡ ಸಮುದಾಯಗಳು ತಾವು ಪಡೆದ ಶಿಕ್ಷಣ ಮತ್ತು ಚಿಂತನೆಗಳಿಂದ ಕೃಷಿಯನ್ನು ತ್ಯಜಿಸಿ ನಗರಗಳಿಗೆ ವಲಸೆ ಹೋಗುವುದು ಸ್ವಾಭಾವಿಕ ಎಂಬ ಮನೋಧರ್ಮ ರೂಪುಗೊಂಡಿದೆ.

- ಭೂಮಿಯ ಒಡೆತನದಲ್ಲಾದ ಬದಲಾವಣೆ ಮೊದಲ ಹಂತದಲ್ಲಿ ಚಾರಿತ್ರಿಕವಾಗಿ ರಾಜರ ಆಳ್ವಿಕೆಗೆ ಸಂಬಂಧಪಟ್ಟಂತೆ ಬದಲಾಗಿದೆ. ಎರಡನೆ ಹಂತದಲ್ಲಿ ವಸಾಹತುಶಾಹಿ ಆಡಳಿತ ತಂದ ಕಾನೂನು ಮತ್ತು ನಿಯಮಾವಳಿಗಳಿಂದ ಸ್ಥಿತ್ಯಂತರಗೊಂಡಿದೆ. ರಾಷ್ಟ್ರೀಯ ಚಳುವಳಿಯ ನಂತರದಲ್ಲಿ ಸ್ವಾತಂತ್ರ್ಯೋತ್ತರ ಭಾರತದಲ್ಲಿ ಮತ್ತೊಮ್ಮೆ ಬದಲಾವಣೆಗಳಾಗಿವೆ. ಜಾಗತೀಕರಣದ ನಂತರ ಆರ್ಥಿಕ ಬೆಳವಣಿಗೆ ಇನ್ನೊಂದು ರೀತಿಯ ಸಂಕೀರ್ಣ ಸ್ಥಿತಿಯನ್ನು ನಿರ್ಮಾಣ ಮಾಡಿದೆ. ನವ ವಸಾಹತುಶಾಹಿ ಕಾಲಘಟ್ಟದ ಆರ್ಥಿಕ ಸಾಮಾಜಿಕ ಕಾರಣಗಳು ಕೃಷಿಲೋಕದೊಳಗೆ ಬಹಳಷ್ಟು ತಲ್ಲಣಗಳನ್ನು ಹುಟ್ಟು ಹಾಕಿದ್ದಲ್ಲದೆ ಯುವ ಜನತೆ ಕೃಷಿಯಿಂದ ದೂರ ಸರಿಯುತ್ತಿರುವ ವಾಸ್ತವಿಕ

ಸತ್ಯವನ್ನು ಮರೆಮಾಚದೆ ಸಾಹಿತ್ಯ ಕೃತಿಗಳಲ್ಲಿ ದಾಖಲಾಗಿದೆ. ಕೃಷಿಗೆ ಹಳ್ಳಿಯೆಡೆಗೆ ಆಕರ್ಷಿತವಾದ ಯುವಜನತೆಯ ಉಲ್ಲೇಖವೂ ಇದೆ.

- ಬೇರೆ ಬೇರೆ ಕಾಲಘಟ್ಟದಲ್ಲಿ ಕೃತಿ ರಚಿಸಿದ ಲೇಖಕರು ತಮ್ಮ ಬರಹಗಳಲ್ಲಿ ಕೃಷಿ ಜಗತ್ತಿನಲ್ಲಾದ ಬದಲಾವಣೆಗಳನ್ನು ದಾಖಲುಗೊಳಿಸಿದ್ದಾರೆ. ಸಾಮಾಜಿಕ ಸ್ಥಿತಿ ಬದಲಾದುದಕ್ಕೆ ಕಾರಣಗಳನ್ನು ಅನ್ವೇಷಿಸುತ್ತ ಬದಲಾಗಿರುವ ಕೃಷಿಲೋಕವನ್ನು ಉಲ್ಲೇಖಿಸುತ್ತಾರೆ. ಆಹಾರದ ಸ್ವರೂಪವಿದ್ದುದು 'ವ್ಯಾಪಾರ'ವಾಗಿ ಬದಲಾದಾಗ ಬಂದ ಸಂಘರ್ಷ ಮತ್ತು ಸ್ಪರ್ಧೆಗಳು ಸಾಮಾಜಿಕವಾಗಿ ಸಾಂಸ್ಕೃತಿಕವಾಗಿ ಬೇರೆ ಬೇರೆ ಆಯಾಮಗಳನ್ನು ಪಡೆದುಕೊಂಡಿದೆ.

- ಭೂಮಿಯ ಒಡೆತನ ಮತ್ತು ಅಧಿಕಾರ ಕೇಂದ್ರ ಮತ್ತು ಉತ್ಪಾದಕತೆ ಆರ್ಥಿಕತೆ ಇವೆಲ್ಲವೂ ಒಂದರೊಡನೊಂದು ಪರಸ್ಪರ ಸಂಬಂಧವಿದ್ದು ಹುಟ್ಟಿಕೊಂಡ ಸಾಮಾಜಿಕ ಮುಂಚಲನೆ ತೀರಾ ಸಂಕೀರ್ಣವಾಗಿದ್ದು, ಸಮುದಾಯಗಳ ಮೇಲೆ ತಮ್ಮ ಸಾಮೂಹಿಕ ಒಡೆತನವನ್ನು ಸ್ಥಾಪಿಸುವುದಕ್ಕಾಗಿ ಕೋಮುವಾದಿ ಚಟುವಟಿಕೆಗಳು ಪ್ರಾಮುಖ್ಯ ಪಡೆದಿದೆ.

- ಕೃಷಿಯ ಸ್ವರೂಪದಲ್ಲಿ ಆದ ಬದಲಾವಣೆ ಮತ್ತು ಪ್ರಯೋಗಶೀಲತೆಗಳು ಆರ್ಥಿಕವಾಗಿ ಜನರನ್ನು ಸ್ವತಂತ್ರರನ್ನಾಗಿ ಮಾಡಿದರೂ, ಆಹಾರದ ಮೂಲವಾಗಿದ್ದ ಕೃಷಿ ದುಡ್ಡಿನ ಮೂಲವಾದಾಗ ಜೀವನಕ್ರಮ ಮತ್ತು ಜೀವನ ಧರ್ಮ ಮನೋಧರ್ಮಗಳೂ ಬದಲಾದವು. 'ಹಸಿವು' ನಿವಾರಿಸಿಕೊಳ್ಳುವುದಕ್ಕಿಂತ ಲಾಭ ನಷ್ಟಗಳೇ ಮುನ್ನೆಲೆಗೆ ಬಂದವು.

- ೧೯೭೪ರ ಒಕ್ಕಲು ಮಸೂದೆ ಕಾನೂನು ಕರಾವಳಿಯಲ್ಲೂ ಬಹಳಷ್ಟು ಸಾಮಾಜಿಕ ಬದಲಾವಣೆಗಳನ್ನು ಉಂಟು ಮಾಡಿದೆ. ಮೊದಲ ತಲೆಮಾರು ಭೂಮಿಯ ಒಡೆತನ ಅನುಭವಿಸಿದಂತೆ ಎರಡು– ಮೂರನೆಯ ತಲೆಮಾರು ಸ್ವೀಕರಿಸುವ ಮನಸ್ಥಿತಿಯಲ್ಲಿ ಇರಲಿಲ್ಲ. ಭೂಮಿಯ ಒಡೆಯನಾದ ಧಣಿಯ ದಬ್ಬಾಳಿಕೆಗಳಿಂದ ಮುಕ್ತವಾದರೂ ಸಿಕ್ಕಿದ ಸ್ವಾತಂತ್ರ್ಯದೊಂದಿಗೆ ಲಭಿಸಿದ 'ತುಂಡು ಭೂಮಿ' ಅಸ್ತಿತ್ವದ ಹುಡುಕಾಟಕ್ಕಿಂತ ಪ್ರಾಯೋಜನಿಕ ದೃಷ್ಟಿಕೋನವೇ ಮುಖ್ಯವೆನಿಸಿತು.

- ಮೊದಲ ತಲೆಮಾರಿನಲ್ಲಿ ನಡೆದ ಕರಾವಳಿಯ ಮುಂಬೈ ವಲಸೆ, ಸಾಮಾಜಿಕ ಆರ್ಥಿಕ ಸ್ಥಿತ್ಯಂತರಗಳಿಗೆ ಕಾರಣವಾಗಿದೆ. 'ಮನಿಯಾರ್ಡರ್ ಆರ್ಥಿಕತೆ'ಯಿಂದ ಕರಾವಳಿಯ ಬದುಕು ಬದಲಾಗಿ ತಮ್ಮ ವೃತ್ತಿಯನ್ನು ಬದಲಾಯಿಸುವ ಮಹತ್ತ್ವದ ಸ್ಥಿತ್ಯಂತರಗಳಾದವು. ಶಿಕ್ಷಣ ಮತ್ತು ಆಧುನಿಕತೆಯು ಇದಕ್ಕೆ ಕಾರಣವಾಗಿದೆ.

- ಈ ಎಲ್ಲ ಸೂಕ್ಷ್ಮಗ್ರಹಿಕೆಗಳನ್ನು ಕರಾವಳಿಯ ಬರಹಗಾರರು ವರ್ತಮಾನದಲ್ಲಿ ನಿಂತು ಗ್ರಹಿಸಿದ್ದಾರೆ. ಹೀಗೆ ಬರೆದವರಲ್ಲಿ ಮಹತ್ತ್ವದ ಬರಹಗಾರರಲ್ಲದವರು ಪ್ರಮುಖವೆನಿಸಿದ್ದಾರೆ. ಆಧುನಿಕತೆಯ ಸೂಕ್ಷ್ಮ

ಎಳೆಗಳಿಗೆ ಬದಲಾಗುತ್ತಿರುವ ಸಾಮಾಜಿಕ ಸ್ಥಿತಿಗತಿಯನ್ನು ದಾಖಲಿಸಿದ್ದಾರೆ. ಕಳೆದ ಕಾಲದ ಪರಂಪರೆಯನ್ನು ದಾಖಲಿಸುವುದರೊಂದಿಗೆ ಕೃಷಿಲೋಕದ ಶ್ರಮ ಸಂಸ್ಕೃತಿಯ ಅನಾವರಣವಾಗಿದೆ.

- ಕಾರಂತರು ಮಹತ್ತ್ವದ ಲೇಖಕರಾಗಿ ಚಾರಿತ್ರಿಕವಾಗಿಯೂ ಮುಖ್ಯವಾಗುತ್ತಾರೆ. ತಾನು ಬದುಕಿದ ಕಾಲಕ್ಕಿಂತ ನೂರಾರು ವರ್ಷ ಮುಂದಿನ ಆಲೋಚನೆಗಳನ್ನು ತಮ್ಮ ಬರಹಗಳಲ್ಲಿ ದಾಖಲಿಸಿದ್ದಾರೆ. ಕೃಷಿ ಲೋಕದ ಆದಿಮ ಹಂತದಿಂದ ಆಧುನಿಕತೆಯ ಹಂತದವರೆಗಿನ ಎಲ್ಲಾ ಅಯಾಮಗಳು ಕಾರಂತರ ಬರಹಗಳಲ್ಲಿದ್ದು ಆಧುನಿಕ ಚಿಂತಕರಾಗಿ ಮಹತ್ತ್ವ ಪಡೆದುಕೊಳ್ಳುತ್ತಾರೆ.

- ಕೃಷಿ ಲೋಕದ ಆಳ– ವಿಸ್ತಾರಗಳೊಂದಿಗೆ ಅಲ್ಲಿರುವ ಏಳು–ಬೀಳು , ನೋವು ನಲಿವುಗಳು, ಅವಿಭಕ್ತ ಕುಟುಂಬದ ಹತಾಶೆಗಳು, ಪಾಳೇಗಾರಿಕೆಯ ದಾಷ್ಟ್ಯಗಳು ಎಲ್ಲವೂ ಕೃತಿಗಳಲ್ಲಿ ದಾಖಲಾಗಿವೆ. ಈ ವೈರುಧ್ಯಗಳನ್ನು ನಿರೂಪಿಸುವ ಮೂಲಕ ಕೃಷಿಲೋಕ ಬದಲಾಗುವುದು ಸಹಜ ಪ್ರಕ್ರಿಯೆ ಎಂಬ ಅಂಶವೂ ಮುಖ್ಯವಾದುದು, ಆದರೆ ವ್ಯಾಪಾರಿ ಮನೋಧರ್ಮದ ಸ್ಪರ್ಧೆ ಮತ್ತು ಸಂಘರ್ಷ ಎಲ್ಲ ವಿಪ್ಲವಗಳಿಗೂ ಕಾರಣವಾಗಿದೆ ಎಂಬ ಸೂಕ್ಷ್ಮವೂ ಬಹಳ ಮುಖ್ಯ.

- ಕೃಷಿ ಸಂಸ್ಕೃತಿ ಮತ್ತು ಸಮಾಜ ಮತ್ತು ಸಾಹಿತ್ಯ ಪರಸ್ಪರ ಸಂಬಂಧವಿದೆ ಎಂಬ ಸ್ಪಷ್ಟ ಉಲ್ಲೇಖಗಳು ಬರಹಗಳಲ್ಲಿ ಪ್ರತಿಬಿಂಬಿತವಾಗಿದೆ. ಕಾದಂಬರಿಗಳು ಸಾಮಾಜಿಕ ಗತಿಬಿಂಬಗಳು ಎನ್ನುವ ತಥ್ಯಕ್ಕೆ ಪುಷ್ಟಿ ಒದಗಿಸುತ್ತದೆ.

- ಕರಾವಳಿಯ ಭೌಗೋಳಿಕತೆ ಕೃಷಿಯ ಎಲ್ಲ ಹಂತದ ಪ್ರಯೋಗಶೀಲತೆ ಮತ್ತು ಅದನ್ನು ಆಗು ಮಾಡಿದ ಪ್ರಯತ್ನಗಳು ಸಾಕ್ಷಿ ಪ್ರಜ್ಞೆಯಾಗಿ ನಡೆದವು. ಕುಮೆರಿ ಕೃಷಿಯಿಂದ ತೊಡಗಿ ವಾಣಿಜ್ಯ ಬೆಳೆಯವರೆಗೆ ಕರಾವಳಿಯಕೃಷಿ ಚಟುವಟಿಕೆಗಳು ಬದಲಾಗುತ್ತ ಸಾಗಿದೆ. ಇವೆಲ್ಲವನ್ನು ದಾಖಲುಗೊಳಿಸುವುದರೊಂದಿಗೆ ಇಲ್ಲಿನ ಸಂಸ್ಕೃತಿಯ ಬೇರುಗಳ ಹುಡುಕಾಟಕ್ಕೂ ಇದು ಆಧಾರವಾಗಿದೆ.

- ಸಾಹಿತ್ಯ ರಚನೆ ಮಾಡಿರುವ ಹೆಚ್ಚಿನ ಬರಹಗಾರರು ಭೂ ಒಡೆತನವನ್ನು ಹೊಂದಿದ ಭೂ ಮಾಲೀಕರೇ ಆಗಿದ್ದಾರೆ, ಭೂಮಿಯ ಒಡೆಯರಾಗಿಯೂ ಅನುಲೋಮ ವಿಲೋಮದ ಕೃಷಿಯ ಚಲನೆಯನ್ನು ಪಲ್ಲಟವನ್ನು ಸೂಕ್ಷ್ಮವಾಗಿ ದಾಖಲಿಸಿದ್ದಾರೆ. ಒಕ್ಕಲು ಮಸೂದೆ ಕಾನೂನು ತಂದ ಸಾಮಾಜಿಕವಾದ ಸ್ಥಿತ್ಯಂತರದ ಎರಡು ಮುಖಗಳೂ ಸಾಹಿತ್ಯ ಕೃತಿಗಳಲ್ಲಿ ದಾಖಲಾಗಿದೆ. ದೈನ್ಯದಿಂದ ಸ್ವಾಭಿಮಾನದ ಕಡೆಗೆ ಸಾಗಿದ ಒಕ್ಕಲು ಮಕ್ಕಳು ಹಾಗೂ ರಾತ್ರಿ ಹಗಲಾಗುವುದರ ಒಳಗಾಗಿ ಬೀದಿಗೆ ಬಿದ್ದ ಧಣಿಗಳು ಎರಡೂ ಬದಲಾವಣೆಗಳನ್ನು ದಾಖಲಿಸುವುದರ ಮೂಲಕ, ಸಾಮಾಜಿಕ ಅಸ್ತಿತ್ವ ಸ್ಥಾನ ಮಾನಗಳಿಗೆ ಭೂಮಿಯ ಒಡೆತನ ಮಹತ್ತ್ವದ್ದು ಎಂಬ ಅಂಶವನ್ನು ಪುಷ್ಟೀಕರಿಸಿದೆ. ಶ್ರಮಿಕರು ಶ್ರಮಿಕರಾಗಿಯೇ ಉಳಿಯಬಾರದು ಎಂಬ ಚಿಂತನೆಗೆ ರಾಷ್ಟ್ರೀಯ ಚಳುವಳಿ, ಸಮಾಜ ಸುಧಾರಣಾ ಚಳುವಳಿಗಳಲ್ಲದೆ ಗಾಂಧಿ ವಿಚಾರಧಾರೆಯೂ ಪ್ರಮುಖವಾಗಿತ್ತು

ಎಂಬ ಅಂಶವೂ ಮುಖ್ಯವಾಗಿತ್ತು. ಗಾಂಧಿಯಿಂದ ಪ್ರಭಾವಿತರಾದ ಗುತ್ತಿನ ಮನೆಯವರು ತಾವಾಗಿಯೇ ಒಕ್ಕಲಿನವರಿಗೆ ಭೂಮಿಗಳನ್ನು ನೀಡಿದರೆ, ಮತ್ತೆ ಕೆಲವರು ಹಿಂಸಿಸಿ ಅಪಹರಿಸಿ ಕೊಲೆ ನಡೆಸುವ ಹುನ್ನಾರವನ್ನು ನಡೆಸಿದ್ದಾರೆ. ,ರೈತ ಚಳುವಳಿ ಹುಟ್ಟಲು ಕಾರಣವಾದ ಸೂಕ್ಷ್ಮ ಎಳೆಗಳೂ ಇಲ್ಲಿವೆ.

- ತುಳುವಿನಲ್ಲಿ 'ಕಲ್ಯಾಣಪ್ಪನ ಕಾಟ್‌ಕಾಯಿ' ಎಂದು ಪ್ರಚಲಿತ ನುಡಿಕಟ್ಟಿಗಿರುವ ಅಮರ ಸುಳ್ಯದ ದಂಗೆಯು ೧೮೩೭ ರ ರೈತ ಬಂಡಾಯವೆಂದು ದಾಖಲಾಗಿದೆ. ಕೃಷಿ ಉತ್ಪನ್ನದ ಮೇಲೆ ವಿಧಿಸಿದ ತೆರಿಗೆ ಮತ್ತು ಭೂಮಿಯನ್ನು ತಮ್ಮ ವಶಕ್ಕೆ ಅಧೀನ ಪಡಿಸಿಕೊಳ್ಳಬೇಕೆಂಬ ವಸಾಹತುಶಾಹಿ ಆಡಳಿತದ ಹುನ್ನಾರ ಈ ಹಿನ್ನೆಲೆಯಲ್ಲಿ ಮುಖ್ಯ ಕಾರಣವಾಗಿ ಕೃತಿಗಳಲ್ಲಿ ದಾಖಲಾಗಿದೆ.

- ತುಳು ಕನ್ನಡ ಎರಡೂ ಭಾಷೆಗಳಲ್ಲಿ ದುಡಿದವರು ಕೃಷಿ ರಚನೆ ಮಾಡಿದುದು ವಿರಳ. ದುಡಿಸಿಕೊಂಡವರು ಶ್ರಮಿಕರ ಬೆವರಿನ ಬಗೆಗೆ, ಕಾಯಕ ನಿಷ್ಠೆಯ ಬಗೆಗೆ ಉಲ್ಲೇಖಿಸಿದ್ದಾರೆ. ಒಕ್ಕಲಿನವರಾಗಿದ್ದು, ಶಿಕ್ಷಣ ಪಡೆದವರು ಕೃತಿಗಳಲ್ಲಿ ಬೆವರಿನ ದುಡಿಮೆಯ ಜತೆಗೆ ವೃತ್ತಿ ಪಲ್ಲಟದ, ವಲಸೆಯ ಅನಿವಾರ್ಯತೆಯ ಬಗೆಗೂ ಉಲ್ಲೇಖವಿದೆ.

- ಕೃಷಿಯನ್ನು ಆರ್ಥಿಕತೆಯ ಮೂಲವಾಗಿ ಪರಿಭಾವಿಸಿದಾಗ, ಆಹಾರ ಬೆಳೆ ವಾಣಿಜ್ಯ ಬೆಳೆ ಭತ್ತದಿಂದ, ಅಡಿಕೆ, ರಬ್ಬರ್, ವೀಳ್ಯದೆಲೆ, ಕಾಳುಮೆಣಸು, ಶುಂಠಿ, ಕೊಕೋ, ಹೀಗೆ ಪರಿವರ್ತನೆ ಹೊಂದಿದಾಗ ಸಾಮಾಜಿಕ ಬದುಕಿನಲ್ಲೂ ಬದಲಾವಣೆಗಳಾಗಿದೆ. ಇದರೊಂದಿಗೆ ಬದುಕಿನ ಸ್ಥಿತ್ಯಂತರಗಳು ಸಾಂಸ್ಕೃತಿಕ ಜಗತ್ತಿನಲ್ಲೂ ನಡೆದಿರುವುದನ್ನು ದಾಖಲಿಸಬೇಕಿದೆ. ಸಾಮಾಜಿಕವಾಗಿ ಮೌಲ್ಯಗಳ ಪಲ್ಲಟದೊಂದಿಗೆ ಜನಜೀವನದ ಕ್ರಮ ಧೋರಣೆಗಳು ಬದಲಾಗಿದೆ.

- ಕೈಗಾರಿಕೆಯಿಂದ ಅಭಿವೃದ್ಧಿ ಎಂಬ ಸಾಮಾನ್ಯ ಗ್ರಹಿಕೆಯ ಅರ್ಥಶಾಸ್ತ್ರದ ವ್ಯಾಖ್ಯಾನಗಳಿವೆ. ವಾಸ್ತವದಲ್ಲಿ ಕೃಷಿ ಸಂಸ್ಕೃತಿ ಪಲ್ಲಟವು ಸಾಹಿತ್ಯಿಕ, ಸಾಂಸ್ಕೃತಿಕ ಹಿಂಚಲನೆಗೆ ಕಾರಣವಾಗಿದೆ. ಅಗಾಧವಾಗಿದ್ದ ಮೌಖಿಕ ಸಾಹಿತ್ಯ ಮರೆವಿಗೆ ಸಂದಿದೆ. ಸಾಂಸ್ಕೃತಿಕ ಆಚರಣೆಗಳು ಮೂಲ ಆಶಯ ಕಳಕೊಂಡು ವೇದಿಕೆಯ ಕಾರ್ಯಕ್ರಮಗಳಾಗಿವೆ. ಕಂಬಳದಂತಹ ಕೃಷಿ ಆಚರಣೆಯೂ ಸ್ಪರ್ಧೆಯ ಕಾರ್ಯವಾಗಿ, ಅರ್ಥಿಕತೆಯ ಮೂಲವಾಗಿ 'ಹರಾಜಿ'ನ ಬೆಟ್ಟಿಂಗ್‌ಗಳು ಮುಂಚಲನೆಗೊಂಡು 'ಹಣ'ವಷ್ಟೇ ಮುಖ್ಯ ಎನಿಸಿದೆ.

- ಕಂಬಳ ಹರಕೆಯಾಗುಳಿಯದೆ 'ಹರಾಜು'ಆಗಿ ಪರಿವರ್ತನೆ ಆಗಿದೆ. ಕೃಷಿ ವಿಸ್ತರಣೆಯ ಭಾಗವಾಗಿದ್ದ ಕಂಬಳ ಗದ್ದೆಗಳು ಸಾಮೂಹಿಕ ದುಡಿಮೆಯೊಂದಿಗೆ, ಕಂಬಳದ ಸಂತೆ ಕೃಷಿ ಉಪಕರಣ ಮಾರಾಟದ ವಾರ್ಷಿಕ ಜಾತ್ರೆಯಾಗಿಯೂ ಇತ್ತು. ಇಂದು ಆಧುನಿಕ ಸಿದ್ಧ ಅಹಾರ ವೈವಿಧ್ಯಗಳ ಮಳಿಗೆಗಳಾಗಿ ಬದಲಾದ ಆಹಾರ ಕ್ರಮಕ್ಕೂ ಸಾಕ್ಷಿಯಾಗಿದೆ. ಕಂಬಳದ ಗದ್ದೆಗಳು ವಿಧಿಯಾಚರಣೆಯ ನಂತರ ನಾಟಿಯನ್ನು ಪೂರ್ಣಗೊಳಿಸಿ ಫಸಲನ್ನು ಪಡೆಯುವುದಕ್ಕಿಂತ ಕಾಂಕ್ರೀಟಿನ ಅಟ್ಟಳಿಗೆಗಳೇ

ರಾರಾಜಿಸುತ್ತಿದೆ. ಅಧಿಕಾರ ಮತ್ತು ಸಂಪತ್ತಿನ ಅಹಮಿಕೆಯ ಪ್ರತಿಫಲನವಾಗಿ ಹೊಸ ಹೊಸ ಕಂಬಳಗಳು ಹುಟ್ಟುತ್ತ ಕೃಷಿಯನ್ನು ಕಡೆಗಣಿಸಿ ರಾಜಕಾರಣಿಗಳ, ಬಂಡವಾಳಶಾಹಿಗಳ ಸಾಮಾಜೀಕರಣದ ಪ್ರಕ್ರಿಯೆಯಾಗಿ ಪ್ರತಿಷ್ಠೆಯ ಕಣಗಳಾಗುತ್ತಿವೆ. ಅಜಲು ಪದ್ಧತಿ ನಿಷೇಧವಿದ್ದರೂ ದೈವಗಳ ಹೆಸರಲ್ಲಿ ಭಯ ಪಡಿಸುತ್ತ ಅದನ್ನು ಪೋಷಿಸುವ ತಾಣಗಳೂ ಆಗಿವೆ. ವರ್ತಮಾನದ ಸ್ವತಂತ್ರ್ಯ ಭಾರತದ ಪ್ರಜಾಪ್ರಭುತ್ವಕ್ಕೆ ನವ ಪಾಳೇಗಾರಿಕೆಯನ್ನು ಸೃಷ್ಟಿಸಲೂ ಕಾರಣವಾಗಿದೆ. ಕರಾವಳಿ ಕರ್ನಾಟಕದಲ್ಲಿ ಕೃಷಿ ಸಂಸ್ಕೃತಿ ಪಲ್ಲಟ ಮತ್ತು ಅದರ ಸಾಹಿತ್ಯಾಭಿವ್ಯಕ್ತಿ ಎಂಬ ಈ ಅಧ್ಯಯನವು ಕೃಷಿಯೊಂದಿಗೆ ಸಾಗುತ್ತಿರುವ ಸಾಮಾಜಿಕ ಚಲನೆಯನ್ನು, ಸಾಂಸ್ಕೃತಿಕ ಲೋಕದ ಸ್ಥಿತ್ಯಂತರಗಳನ್ನು ಸಾಹಿತ್ಯವು ಪ್ರತಿಬಿಂಬಿಸುತ್ತ ಒಂದು ಇನ್ನೊಂದರ ಮುಖವಾಣಿಯಾಗಿ ಅನಾವರಣಗೊಳ್ಳುತ್ತ ಹೋಗುತ್ತಿದೆ. ಕರಾವಳಿಯಲ್ಲಿ ಬದಲಾದ ಬದುಕಿನ ಗತಿಶೀಲತೆಯ ಸೂಕ್ಷ್ಮ ಎಳೆಗಳ ಹುಡುಕಾಟ ಇದರಿಂದ ಸಾಧ್ಯವಾಗಿದೆ.

# ಅನುಬಂಧ

ಅ) ಪ್ರಧಾನ ಆಕರಗಳು

ಆ) ಅನುಷಂಗಿಕ ಆಕರಗಳು( ಪರಾಮರ್ಶನ ಸಾಹಿತ್ಯ)

ಆ.೧ .ಪ್ರಕಟಿತ ಕೃತಿಗಳು

ಆ.೨ .ಅಪ್ರಕಟಿತ  ಪದವಿ ಅಧ್ಯಯನಗಳು

ಆ.೩ ಆಂಗ್ಲ ಭಾಷಾ ಕೃತಿಗಳು

ಆ.೪  . ಪತ್ರಿಕಾ ಲೇಖನಗಳು

**ಅ) ಪ್ರಧಾನ ಆಕರಗಳು**


೧. ಆನಂದ ಕೃಷ್ಣ; ೨೦೦೫

**ಮಿತ್ತಬೈಲ್ ಯಮುನಕ್ಕೆ ಒಂಜಿ ಗುತ್ತುದ ಕತೆ** ; ಹೇಮಾಂಶು ಪ್ರಕಾಶನ, ಮಂಗಳೂರು.

೨. ಬೋಳ ಚಿತ್ತರಂಜನ್ ದಾಸ ಶೆಟ್ಟಿ ; ೧೯೯೦;

**ಅಳಿದುಳಿದವರು** ; ನಾಗಶಕ್ತಿ ಪ್ರಕಾಶನ, ಮಂಗಳೂರು

೩. ಜಯಮ್ಮ ಚೆಟ್ಟಿಮಾಡ; ೨೦೧೩

**ಪರಬಾಳ್ತ ಪರಿಪಾಳೆಳ್** ;ಸಂಜೀವಿನಿ ಪ್ರಕಾಶನ, ಮೊಗರ್ಪಣೆ ಸುಳ್ಯ.

೪. ಜಾನಕಿ ಬ್ರಹ್ಮಾವರ ಎಂ, ೨೦೦೨

**ಯುಗಮಗ್ರ್ನಗ**; ಹೇಮಾಂಶು ಪ್ರಕಾಶನ, ಮಂಗಳೂರು

೫. ಜಾನಕಿ ಬ್ರಹ್ಮಾವರ ಎಂ; ೧೯೯೮;

**ಕಪ್ಪುಗಿಡಿ**– ಹೇಮಾಂಶು ಪ್ರಕಾಶನ ,ಮಂಗಳೂರು –೬

೬. ಜಾನಕಿ ಬ್ರಹ್ಮಾವರ ಎಂ; ೧೯೯೪

**ಕುದುರುದ ಕೇದಗೆ** ;ಹೇಮಾಂಶು ಪ್ರಕಾಶನ ,ಮಂಗಳೂರು–೬

೭. ಜಾನಕಿ ಬ್ರಹ್ಮಾವರ ಎಂ ; ೨೦೦೫ ;

**ಯುಗಾಂತರದಲ್ಲಿ**; ಹೇಮಾಂಶು ಪ್ರಕಾಶನ, ಮಂಗಳೂರು –೬

೮. ಜಾನಕಿ ಬ್ರಹ್ಮಾವರ ಎಂ; ೨೦೦೮;

**ರುಕ್ಕು;** ಹೇಮಾಂಶು ಪ್ರಕಾಶನ ಮಂಗಳೂರು–೬

೯. **ಬಿಲ್ಲವರು ಮತ್ತು ಕ್ರೈಸ್ತರು** (ಪಾಂಗಾಳ ಗುಡ್ಡೆ ಕ್ರೈಸ್ತ ಸಭೆಯ ಹಿನ್ನೆಲೆಯಲ್ಲಿ); ಬೆನೆಟ್..ಜಿ. ಅಮ್ಮನ್ನ; ೨೦೦೫ ; ಶತಮಾನೋತ್ತರ ದೇವಾಲಯ , ಪಾಂಗಾಳ ಗುಡ್ಡೆ.

೧೦. **ಬೇಥಾನ್ಯ ಸ್ವರ ಶತಮಾನೋತ್ಸವ** (೧೯೦೨–೨೦೦೨) ೨೦೦೬, ಸಿ.ಎಸ್.ಐ ಬೆಥಾನ್ಯ ದೇವಾಲಯ ಬೆಳ್ಮ ಕೊಣಾಜೆ, ವಿ.ಎಸ್. ಕರ್ಕಡ ಪ್ರಕಾಶನ, ಸಿ.ಎಸ್.ಐ ಬೆಥಾನ್ಯ ದೇವಾಲಯ, ಬೆಳ್ಮ ಕೊಣಾಜೆ.

೧೧. ಮಂದಾರ ಕೇಶವ ಭಟ್ಟ; ೧೯೮೭

**ಮಂದಾರ ರಾಮಾಯಣ** ವಜ್ರದೀಪ ಪ್ರಕಾಶನ, ಬೆಳಗಾವಿ

೧೨. ಮಹಾಲಿಂಗ ಭಟ್ ;೧೯೯೪;

**ನಾಣಜ್ಜೆರ್ ಸುದೆ ತಿರ್ಗಾಯೆರ್** ;ನಷ್ಟ ಪ್ರಕಾಶನ, ಮಂಗಳೂರು

೧೩. ನಾಗವೇಣಿ ಎಚ್. ;೧೯೯೯ ;

**ಗಾಂಧಿ ಬಂಧ** ;ಲೋಹಿಯಾ ಪ್ರಕಾಶನ, ಬಳ್ಳಾರಿ

೧೪. ಶಿವರಾಮ ಕಾರಂತ ಕೆ; ೧೯೭೫ ;

**ಚೋಮನ ದುಡಿ** ; ಐ .ಬಿ ಎಚ್ ಪ್ರಕಾಶನ, ಬೆಂಗಳೂರು–೧೯

೧೫. ಶಿವರಾಮ ಕಾರಂತ ; ೧೯೭೫ ;

**ಕುಡಿಯರ ಕೂಸು;** ಐ. ಬಿ. ಎಚ್ ಪ್ರಕಾಶನ, ಬೆಂಗಳೂರು

೧೬. ಶ್ರೀಮತಿ ಎಚ್.ಎಸ್ ;( ಅನು) ೧೯೯೮ ;

ಬಾಲ ಗೋಪಾಲ .ಕೆ. ;ಮೂಲ:

**ಪ್ರಾಚೀನ ಭಾರತದ ಚರಿತ್ರೆ** ; ಡಿ.ಡಿ ಕೊಸಾಂಬಿಯವರ ಚಿಂತನೆಗಳು;

ಪ್ರಗತಿ ಗ್ರಾಫಿಕ್ಸ್ ,ಬೆಂಗಳೂರು

೧೭. ಶೀ.ಏಸ್.ಐ ಕ್ರಿಸ್ತವಂದನ ದೇವಾಲಯ;

ಪಾಂಗಾಳ ಗುಡ್ಡೆ, ಉಡುಪಿ ಜಿಲ್ಲೆ; ೧೮೫೧- ೨೦೦೫ ; ಶತಮಾನೋತ್ಸವ ಸ್ವರ್ಣ ಮಹೋತ್ಸವದ ಸ್ಮರಣ ಸಂಚಿಕೆ- ೨೦೦೫; ಲೆನಿನ್ ಅಮ್ಮನ್ನ; ಪಾಂಗಾಳ ಗುಡ್ಡೆ; ಪಾಂಗಾಳ ಗುಡ್ಡೆ ಸಿ .ಎಸ್.ಐ ಕ್ರಿಸ್ತ ವಂದನ ಸಭೆಯ ಚರಿತ್ರೆ (೧೮೫೧-೨೦೦೫) ; ಬೆನೆಟ್ .ಜಿ.ಅಮ್ಮನ್ನ

೧೮. **ಸಿ.ಎಸ್.ಐ ಯುನಿಟಿ ದೇವಾಲಯ ಮುಲ್ಕಿ ಶತಮಾನೋತ್ಸವ ಸ್ವರ್ಣ ಮಹೋತ್ಸವದ ಸ್ಮರಣ ಸಂಚಿಕೆ,** ಸಂ.ಡಿ ಪ್ರವೀಣ್ ಆನಂದ್, ಸಿ.ಎಸ್.ಐ ಯುನಿಟಿ ಸಭೆ ಮುಲ್ಕಿ ಚರಿತ್ರೆಯ ಪುಟಗಳಲ್ಲಿ- ಬೆನೆಟ್.ಜಿ.ಅಮ್ಮನ್ನ (೧೮೫೬-೨೦೦೬) (೧೫೦) ೨೦೦೬. ಮುಲ್ಕಿ ಸಭೆಯ ೧೬೦ ನೇ ವರ್ಷ (೧೮೪೫-೨೦೦೫) ಯುನಿಟಿ ದೇವಾಲಯ ಕಟ್ಟಡದ ೧೫೦ ನೇ ವರ್ಷ (೧೮೫೬-೨೦೦೬) ಆಚರಣೆಯ ಸಂದರ್ಭದ ಸವಿನೆನಪಿಗಾಗಿ.

೧೯. **ಸಿ.ಎಸ್.ಐ ಬೆಥಾನ್ಯ ದೇವಾಲಯ** ; ಪರ್ಪಲ್ ಗುಡ್ಡದ ಬೊಲ್ಪು; ಸ್ಮರಣ ಸಂಚಿಕೆ; ೨೦೧೮ ಪರ್ಪಲ್ ಕಾರ್ಕಳ. ಸಂಪಾದಕರು; ರೆವರೆಂಡ್.ಎಂ.ಪ್ರಭುರಾಜ್; ಪ್ರಕಾಶನ; ಸಿ.ಎಸ್.ಐ ಬೆಥಾನ್ಯ ಚರ್ಚ್

೨೦. ವಿಶುಕುಮಾರ್ ; ೧೯೭೭;
**ಭೂಮಿ,** ಗೀತಾ ಬುಕ್ ಹೌಸ್ ,ಮೈಸೂರು

೨೧. ವಿವೇಕ್ ರೈ ಬಿ.ಎ ; ೧೯೮೭ ;
**ತುಳು ಜನಪದ ಸಾಹಿತ್ಯ;** ಕನ್ನಡ ಸಾಹಿತ್ಯ ಪರಿಷತ್ತ್

೨೨. **ವ್ಯಾವಸಾಯಿಕ ಪಂಚಾಂಗ** ;೧೯೧೦-೧೯೧೧ ನೇ ಇಸವಿ
ಸಾಧಾರಣ ಸಂವತ್ಸರ ; ದಕ್ಷಿಣ ಕನ್ನಡ ಜಿಲ್ಲೆಯ ವ್ಯವಸಾಯ ಸಂಘ
ಬಾಸೆಲ್ ಮಿಷನ್ ಪ್ರೆಸ್, ೧೯೧೦

**ಆ) ಆನುಷಂಗಿಕ ಆಕರಗಳು (ಪರಾಮರ್ಶನ ಸಾಹಿತ್ಯ )**

**ಆ.೧ ಪ್ರಕಟಿತ ಕೃತಿಗಳು**

೧. ಅಶೋಕ ಟಿ.ಪಿ ;೧೯೯೧ ;
**ಸಾಹಿತ್ಯ ಸಂದರ್ಭ** ;(ಸಾಹಿತ್ಯ ವಿಮರ್ಶೆಯ ಲೇಖನಗಳು) ; ಅಕ್ಷರ ಪ್ರಕಾಶನ, ಹೆಗ್ಗೋಡು

೨. ಇಂದಿರಾ ಹೆಗ್ಗಡೆ ; ೨೦೧೨;
**ತುಳುವರ ಮೂಲ ತಾನ ಆದಿ ಆಲಡೆ ಪರಂಪರೆ ಮತ್ತು ಪರಿವರ್ತನೆ** ; ನವ ಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೇಟ್ ಲಿಮಿಟೆಡ್, ಬೆಂಗಳೂರು-೧

೩. ಇರಾವತಿ ಕರ್ವೆ ; (ಅನು; ಚಂದ್ರಕಾಂತ ಪೋಕಳೆ); ೨೦೧೬;
**ನಮ್ಮ ಸಂಸ್ಕೃತಿ- ಸಂಸ್ಕೃತಿ ಚಿಂತನೆಯ ಬಿಡಿ ಬರಹಗಳು** ; ಪ್ರಕಾಶನ, ನವ ಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೇಟ್ ಲಿಮಿಟೆಡ್, ಬೆಂಗಳೂರು.-೦೧

೪. ಉಮೇಶ್ ಎಚ್.ಎಸ್ ;೨೦೧೬;
**ಅರುಹು ಕುರುಹು -ಸಾಹಿತ್ಯ ಸಂಸ್ಕೃತಿಯ ಶೋಧದಲ್ಲಿ ದೇಸೀ ಕಥನ;** ಸಂಪುಟ ೭, ಸಂ ೨೮, ಜನವರಿ, ಮಾರ್ಚ್-೨೦೦೬

೫. ಉಷಾ ಎಂ. ; ೨೦೦೫ ;
**ಮಹಿಳೆ ಮತ್ತು ಜಾತಿ -ಒಂದು ಸೈದ್ಧಾಂತಿಕ ಗ್ರಹಿಕೆ;** ಕ.ವಿ.ವಿ ಹಂಪಿ

೬. ಎ. ಮೇನರ್ ; ೨೦೦೮;
**ಪಾಡ್ದನೊಳು;** ಕರ್ನಾಟಕ ತುಳು ಸಾಹಿತ್ಯ ಅಕಾಡೆಮಿ, ಮಂಗಳೂರು

